


# ಕರ್ಮವೀರ

ದೀಪಾವಳಿ ಸಂಚಿಕೆ

ಬೆಲೆ:　　　　೧೯೬೦

30★30★30★30★30★30★30★30★30★30★30







ದೀಪಾವಳಿಯ ಈ ಶುಭದಿನದಂದು ನಮ್ಮ ಗಿರಾಕಿಗಳಿಗೂ ನಮ್ಮ ಹಿತೈಷಿಗಳಿಗೂ ಮತ್ತು ನಾಡಿನ ಸಕಲರಿಗೂ ನಮ್ಮ ಹೃತ್ಪೂರ್ವಕ ಶುಭಾಶಯಗಳು

30




30

ನಂಬರ್
ಮುವತ್ತು
ಮಾರ್ಕಿನ ಬೀಡಿಗಳು

30

30




ದಿ ಭಾರತ್ ಬೀಡಿ ವರ್ಕ್ಸ್ (ರಿಜಿಸ್ಟರ್ಡ)

ಫೋನ್ ನಂ.: ೩ ಕಾರ್ಕಳ (ದ. ಕ.) ಗ್ರಾಮ: "ದಾಮೋದರ"

**The Bharath Beedi Works** (Regd.)

Phone No.: 3, KARKALA (S. K.) Grams: DAMODAR




30★30★30★30★30★30★30★30★30★30★3

ಕನ್ನಡನಾಡಿನ ಕನ್ನಡಿಯಂತೆ ಕಂಗೊಳಿಸುವ

**ಮಂಗಳೂರು ಉದ್ಯಾನ ನಗರದಲ್ಲಿ**

ಸಾರ್ವಜನಿಕರಿಗೆ ಸರ್ವೋತ್ಕೃಷ್ಟ ಸೇವೆ ಸಲ್ಲಿಸುವ ಸಲುವಾಗಿ
ಅತ್ಯಂತ ಆಧುನಿಕ ಅನುಕೂಲತೆಗಳನ್ನೊಳಗೊಂಡ
ಪ್ರಶಾಂತ ವಠಾರದಲ್ಲಿ ಹೊಸದಾಗಿ ತೆರೆದ



ನಮ್ಮ ಗ್ರಾಹಕರಿಗೂ,
ಹಿತೈಷಿಗಳಿಗೂ
ದೀಪಾವಳಿಯ ಶುಭಾಶಯಗಳು

# ಕೀರ್ತಿ ಮಹಲ್

## ಫಳ್ನೀರು ಮಂಗಳೂರು—೧

**ಈ ವಸತಿಗೃಹವು ನಗರದ ಅಪ್ರತಿಮ ಸಂಸ್ಥೆಯಾಗಿದೆ**

ಫೋನ : 358 Gram : KIRTIMAHAL

**ನೂತನ ಗೃಹದ ವೈಶಿಷ್ಟ್ಯಗಳು**

ಹವಾಮಾಪಕ ಯಂತ್ರಗಳನ್ನಿರಿಸಿದ ಕೊಠಡಿಗಳು,
ಜೋಡಣೆಯ ವಸತಿ ವ ಸ್ನಾನದ ಕೊಠಡಿಗಳು,
ವಿಹಾರಕ್ಕಾಗಿ ವಿಶಾಲ ಮುಖಮಂಟಪಗಳು,
"ಡನ್ಲಪಿಲ್ಲೊ" ರಬ್ಬರ ಹಾಸಿಗೆಗಳು ಇ., ಇ.

# ತಾಜ ಮಹಲ್ ★

ಮಂಗಳೂರಿನ ಪ್ರಖ್ಯಾತ
ಉಪಹಾರ ಮಂದಿರ

ಇವರ ಹೊಸ ಶಾಖೆ

## ನ್ಯೂ ತಾಜಮಹಲ್ ಕೆಫೆ (ಪ್ರೈವ್ಹೇಟ) ಲಿಮಿಟೆಡ್

*Phone*: 195, 20, 305 *Grams*: NEWTAJ

## ರಥಬೀದಿ ಮಂಗಳೂರು—1

ದೀಪಾವಳಿಯ ಶುಭ ಜ್ಯೋತಿಯು ಸರ್ವರ ಹೃದಯದಲ್ಲಿ ಬೆಳಗಲಿ!

## ದೀಪಾವಳಿಯ ಸಂತಸದ ಹಬ್ಬದಲ್ಲಿ



# ಬಿನ್ನಿಯವರ

ನಯವಾದ ತಾಳಿಕೆಯ

## ಅಂದಚೆಂದದ ಬಟ್ಟೆಗಳನ್ನು

ಮನೆಮಕ್ಕಳಿಗೆಲ್ಲ ಕೊಂಡು

ಆನಂದದಿಂದ ಹಬ್ಬವನ್ನಾಚರಿಸಿರಿ

**ಮಿಲ್ಲಿನ ಅಧಿಕೃತ ಬೆಲೆಯಲ್ಲಿ!**

ಹಂಚಿಕೆಗಾರರು:

# ಮೈಸೂರ ಸ್ಟೋರ್ಸ, ಹುಬ್ಬಳ್ಳಿ



# ದೀಪಾವಳಿ ಶ್ರೇಷ್ಠ ಕಾಣಿಕೆ

**ಅಫಗಾನ್ ಸ್ನೋ** ಸೌಂದರ್ಯ ವರ್ಧಕಗಳು

ದೀಪಾವಳಿಯ ಹಾಗೂ

ಹೊಸ ವರ್ಷದ ಅಭಿನಂದನೆಗಳು

## ಈ. ಎಸ್. ಪಾಟನವಾಲಾ

೬೨, ಕನಾಟ್ ರೋಡ, ಮುಂಬಯಿ ೨೭.

# INDEX TO ADVERTISERS

# ಪರಿವಿಡಿ

ಉದ್ಯಾನಗಳ ಬೀಡೆನಿಸಿದ ಜಿನೇವಾದ ಹೂವಿನ ಗಡಿಯಾರ




ಫೋಟೊ: ಶ್ರೀ ಸಿ. ಎನ್. ಸರೋಜ, ಬೆಂಗಳೂರು.

# ನಮ್ಮ ನುಡಿ

ಭಾರತದ ಸಾಂಸ್ಕೃತಿಕ ಹಬ್ಬಗಳಲ್ಲಿ ಮಹತ್ವದ ಒಂದು ಹಬ್ಬವಾಗಿರುವ ದೀಪಾವಳಿಯ ಈ ಶುಭದಿನದಂದು ನಾವು ನಮ್ಮ ವಾಚಕರಿಗೆ 'ಕರ್ಮವೀರ'ದ ದೀಪಾವಳಿಯ ವಿಶೇಷ ಸಂಚಿಕೆಯನ್ನು ಅರ್ಪಿಸಲು ಸಂತೋಷಿಸುತ್ತೇವೆ. ಇದು ನಮ್ಮ ಹದಿಮೂರನೆಯ ವಾರ್ಷಿಕ ಸಂಚಿಕೆಯು. ಖ್ಯಾತಿವೆತ್ತ ಕರ್ನಾಟಕದ ವಿದ್ವಾಂಸರಿಂದ ವಿದ್ವತ್ಪ್ರಚುರ ಲೇಖ, ಕತೆ, ಕವನ, ಹರಟೆಗಳು, ವಾರ್ಷಿಕ ಭವಿಷ್ಯ ಮೊದಲಾದವುಗಳಿಂದ ಮತ್ತು ಬಹುವರ್ಣಗಳಿಂದ ಮನೋಹರವಾದ ಮೇಲ್ಹೊದಿಕೆ ಮತ್ತು ಹಲವಾರು ಚಿತ್ರ, ವ್ಯಂಗ್ಯಚಿತ್ರಗಳಿಂದ ಸಂಚಿಕೆಯನ್ನು ಸರ್ವಾಂಗಸುಂದರವನ್ನಾಗಿ ಮಾಡಲು ಪ್ರಯತ್ನಿಸಿದ್ದೇವೆ.

ಈ ದೀಪಾವಳಿಯ ಶುಭಸಮಯದಲ್ಲಿ ನಮ್ಮ ರಾಷ್ಟ್ರವು ಗತವರ್ಷದಲ್ಲಿ ಎಂತು ಪ್ರಗತಿಪಥದಲ್ಲಿ ಸಾಗಿದೆಂಬುದನ್ನು ಸಿಂಹಾವಲೋಕನ ದೃಷ್ಟಿಯಿಂದ ನೋಡುವದು ಅವಶ್ಯ. ಆಹಾರ ಸ್ವಾವಲಂಬನೆಯನ್ನು ಸಾಧಿಸುವ ಧ್ಯೇಯದತ್ತ ರಾಷ್ಟ್ರವು ಭರದಿಂದ ಮುಂದೆ ಸಾಗಿದೆ. ಆದರೆ ನಿಸರ್ಗವು ಅನುಕೂಲಿಸದೆ ಅನಾವೃಷ್ಟಿ, ಅತಿವೃಷ್ಟಿ, ಮಹಾಪೂರ, ಮಿಡಚಿಗಳ ಹಾವಳಿಯಿಂದಾಗಿ ಬೆಳೆ ಅಂದಾಜಿನಷ್ಟು ಬರದಾಗಿದೆ. ಅದೇ ರೀತಿಯಾಗಿ ಬಳಕೆಯ ವಸ್ತುಗಳೆಲ್ಲವನ್ನು ಭಾರತದಲ್ಲಿಯೇ ತಯಾರಿಸುವ ಗುರಿ ಸಾಧಿಸುವದರಲ್ಲಿದೆ. ಆಡಳಿತೆಯನ್ನು ನಡೆಸುತಿರುವ ಕಾಂಗ್ರೆಸ್ ಸಂಸ್ಥೆಯಲ್ಲಿ ಒಳಜಗಳಗಳೆದ್ದು ರಾಷ್ಟ್ರದ ಪ್ರಗತಿಗೆ ಕೆಲಮಟ್ಟಿಗೆ ತೊಡಕಾಗಿದ್ದರೂ ಒಗ್ಗಟ್ಟನ್ನು ಕಾಯ್ದುಕೊಳ್ಳಬೇಕೆಂಬ ಧುರೀಣರ ಪ್ರಯತ್ನಗಳಿಗೆ ಯಶ ದೊರೆಯುತಿರುವುದು ಸಮಾಧಾನದ ಸಂಗತಿ.

ಅಂತಾರಾಷ್ಟ್ರೀಯರಂಗದಲ್ಲಿ ಭಾರತವು ತನ್ನ ತಟಸ್ಥ ನೀತಿಯಿಂದ ಎಲ್ಲರ ಪ್ರಶಂಸೆಗೂ ಪಾತ್ರವಾಗಿದೆಯೆಂದು ಹೇಳಬಹುದು. ಇತ್ತೀಚೆ ಪ್ರಧಾನಮಂತ್ರಿಗಳಾದ ಪಂಡಿತ ಜವಾಹರಲಾಲ ನೆಹರೂರವರು ಯುಕ್ತರಾಷ್ಟ್ರ ಸಂಘದ ಸಾಮಾನ್ಯ ಅಧಿವೇಶನಕ್ಕೆ ಹೋಗಿ ಭಾಷಣ ಮಾಡಿದ್ದರ ಪರಿಣಾಮವಾಗಿ ರಾಷ್ಟ್ರದ ಗೌರವ ಮತ್ತಷ್ಟು ಹೆಚ್ಚಿದೆಯೆಂದು ಹೇಳಬಹುದು. ಜಗತ್ತಿನಲ್ಲಿ ಶಾಂತಿಯನ್ನು ಸ್ಥಾಪಿಸಿ ಎಲ್ಲ ರಾಷ್ಟ್ರಗಳೂ ಸಹಜೀವನವನ್ನು ಸಾಗಿಸುವಂತಾಗಬೇಕೆಂಬುದೇ ಭಾರತೀಯ ಧುರೀಣರ ಹಿರಿಯಾಸೆಯಾಗಿದೆ. ಆ ದಿಸೆಯಲ್ಲಿಯೇ ರಾಷ್ಟ್ರವು ಮುನ್ನಡೆದಿದೆ.

ಈ ವಿಶೇಷಸಂಚಿಕೆಯನ್ನು ಸರ್ವಾಂಗಸುಂದರ ಮಾಡಲು ಸಹಾಯಕರಾದ ಸಹಕಾರಿಗಳಿಗೆ, ಮುದ್ರಣ ಜಾಹೀರಾತು ವಿಭಾಗದವರಿಗೆ, ಲೇಖನ, ಕತೆ, ಕವನ, ಭವಿಷ್ಯ, ಹರಟೆಗಳನ್ನು ಕಳಿಸಿದ ಮಹನೀಯರಿಗೆ ಕೃತಜ್ಞರಾಗಿದ್ದೇವೆ. ಅದೇ ರೀತಿ ಮುಖಪತ್ರದ ಚಿತ್ರ, ಇತರ ಚಿತ್ರ ಮತ್ತು ವ್ಯಂಗ್ಯಚಿತ್ರ, ಛಾಯಾಚಿತ್ರಗಳನ್ನು ಒದಗಿಸಿದವರಿಗೆ ನಮ್ಮ ಧನ್ಯವಾದಗಳು. ಪಡಿಯಚ್ಚುಗಳನ್ನು ಮಾಡಿಕೊಟ್ಟವರಿಗೆ ಕೃತಜ್ಞರಾಗಿದ್ದೇವೆ. ಜಾಹೀರಾತು ಕೊಟ್ಟು ನಮಗೆ ಸಹಾಯ ಮಾಡಿದವರಿಗೆಲ್ಲ ನಮ್ಮ ಅನಂತ ಅಭಿವಂದನೆಗಳು.

॥ ಸರ್ವೇ ಜನಾಃ ಸುಖಿನೋ ಭವಂತು ॥



# ತಮಸೋ-ಮಾ-ಜ್ಯೋತಿರ್ಗಮಯ



ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ ಪೂಜ್ಯಪಾದ ಅನಂತ ಶ್ರೀ ವಿಭೂಷಿತ
ಜಗದ್ಗುರು ಶ್ರೀ ಶಂಕರಾಚಾರ್ಯ ಪಶ್ಚಿಮಾಮ್ನಾಯ ಶ್ರೀ ದ್ವಾರಕಾ ಶಾರದಾ
ಪೀಠಾಧೀಶ್ವರ ಶ್ರೀ ಅಭಿನವ ಸಚ್ಚಿದಾನಂದ ತೀರ್ಥಸ್ವಾಮಿಗಳವರು
ಇತ್ತ

## "ದೀಪಾವಳಿಯ—ಶುಭಕಾಮನೆ"

ಪಾಪಾಂಧಕಾರಾರ್ಕಪರಂಪರಾಭ್ಯಾಂ ।
ತಾಪತ್ರಯಾಹೀಂದ್ರಖಗೇಶ್ವರಾಭ್ಯಾಂ ।
ಜಾಡ್ಯಾಬ್ಧಿಸಂಶೋಧನವಾಡವಾಭ್ಯಾಂ
ನಮೋನಮಃ ಶ್ರೀಗುರುಪಾದುಕಾಭ್ಯಾಂ ॥

ನಮ್ಮಲ್ಲಿಯ ಎಲ್ಲಾ ಹಬ್ಬಗಳೂ ಭಗವದಾರಾಧನೆಗಾಗಿಯೂ ಸುಸಂಸ್ಕಾರವಿಕಾಸಕ್ಕಾಗಿಯೂ ದೈವೀಸಂಪತ್ತಿನ ಅಭಿವೃದ್ಧಿಗಾಗಿಯೂ ಸಾಮಾನ್ಯತಃ ಸಂಸ್ಕಾರದ ವಿವಿಧ ಕ್ಲೇಶಗಳನ್ನು ಮರೆತು ಆನಂದವನ್ನನುಭವಿಸುವುದಕ್ಕಾಗಿ ಇರುತ್ತವೆ. ಅವುಗಳೊಳಗೂ ಶ್ರಾವಣಿ ಉಪಾಕರ್ಮ, ವಿಜಯದಶಮೀ, ದೀಪಾವಳೀ ಮತ್ತು ಹೋಳಿ ಇವುಗಳು ಅನುಕ್ರಮವಾಗಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಹಾಗೂ ಶೂದ್ರರಿಗೆ ಮುಖ್ಯ ಹಬ್ಬಗಳು. ಆದರೂ ಎಲ್ಲರೂ ಪರಸ್ಪರ ಪ್ರೇಮದಿಂದ ನಾಲ್ಕು ಪರ್ವಗಳನ್ನೂ ಆಚರಿಸುತ್ತಾರೆ. ಆದುದರಿಂದಲೇ ಇಂದಿನ ದೀಪಾವಳಿಯು ಧನಲಕ್ಷ್ಮಿಯ ಆರಾಧಕರಾದ ವೈಶ್ಯರಿಗೆ ಮುಖ್ಯ ಹಬ್ಬವಾಗಿರುವಂತೆಯೇ ಜ್ಞಾನಲಕ್ಷ್ಮೀ ಕಾರ್ಯಲಕ್ಷ್ಮ್ಯಾದಿಯರ ಉಪಾಸಕರಾದ ಬ್ರಾಹ್ಮಣ, ಕ್ಷತ್ರಿಯಾದಿಗಳಿಗೂ ಆದರಣೀಯವಾದ ಪರ್ವದಿನವಾಗಿದೆ.

ಭಗವಾನ್ ಶ್ರೀ ಕೃಷ್ಣಚಂದ್ರನು ಇದೇ ದೀಪಾವಳಿಯ ಅವಸರದಲ್ಲಿ ಮದೋದ್ಧತನೂ ಲೋಕಕಂಟಕನೂ ಆಗಿದ್ದ ನರಕಾಸುರನನ್ನು ಸಂಹರಿಸಿ, ಜಗತ್ತನ್ನು ದುಃಖಾಂಧಕಾರದಿಂದ ಉದ್ಧರಿಸಿದನು. ಆದುದರಿಂದಲೇ ಅದರ ಪ್ರತೀಕರೂಪವಾಗಿ ದೀಪಾವಳಿಯ ಹಬ್ಬವು ಆಚರಿಸಲ್ಪಡತೊಡಗಿತು. ಆದರೆ ಮಾಯಾರೂಪೀ ಘೋರ ಅಂಧಕಾರವನ್ನು ಹೋಗಲಾಡಿಸುವುದಕ್ಕಾಗಿ ಆತ್ಮಜ್ಯೋತಿಯನ್ನು ಪ್ರಜ್ವಲಿಸುವುದೇ ದೀಪಾವಳಿಯ ತಾತ್ವಿಕ ಅರ್ಥ.

ಮಾಯೆಯು ಅನಾದಿಕಾಲದಿಂದಿದ್ದರೂ ಈ ಕಲಿಯುಗದಲ್ಲಿ ಅತಿಶಯವಾಗಿ ಬೆಳೆದು ಎಲ್ಲೆಲ್ಲಿಯೂ ಮೋಹಾಂಧಕಾರವೂ ಅದರಿಂದ ಈರ್ಷೆ, ದ್ವೇಷ, ಸ್ವಾರ್ಥಪರಾಯಣತೆ ಮುಂತಾದ ಆಸುರೀ ಸಂಪತ್ತೂ ವ್ಯಾಪ್ತವಾಗಿ ತತ್ಪರಿಣಾಮವಾಗಿ ಸರ್ವತ್ರ ಅಶಾಂತಿಯೂ ದುಃಖವೂ ವ್ಯಾಕುಲತೆಯೂ ನಾನಾವಿಧವಾದ ಉಪದ್ರವಗಳೂ ವೃದ್ಧಿಂಗತವಾಗಿವೆ. ಆದುದರಿಂದ ಎಲ್ಲರ ಹೃದಯಮಂದಿರದಲ್ಲಿ ಜ್ಞಾನಜ್ಯೋತಿಯ, ಆತ್ಮಜ್ಯೋತಿಯ ದೀಪವನ್ನು ಉರಿಸುವುದೇ ಈ ಘೋರ ಸಂಕಟದ ಪರಿಹಾರಕ್ಕೆ ಏಕಮಾತ್ರ ಉಪಾಯವಾಗಿದೆ. ಈ ರಹಸ್ಯವನ್ನು ನೆನಪು ಮಾಡಿಸುವುದಕ್ಕಾಗಿಯೇ ಪ್ರತಿವರ್ಷ ದೀಪಾವಳಿಯ ಶುಭಪರ್ವವು ಬರುತ್ತದೆ.

ಭೌತಿಕ ದೀಪಮಾಲೆಗಳಿಂದಲಾದರೋ ಕೇವಲ ಭೌತಿಕ ಅಂಧಕಾರವು ಮಾತ್ರ ಸ್ವಲ್ಪ ಹೊತ್ತಿನ ಮಟ್ಟಿಗೆ ದೂರವಾಗುವುದು. ಆದರೆ ಆತ್ಮಜ್ಯೋತಿಯಿಂದಲಾದರೋ ಜನ್ಮಜನ್ಮಾಂತರದ ಗಾಢಾಂಧಕಾರವು ದೂರವಾಗಿ ಪರಮಾನಂದಮಯ ಪ್ರಕಾಶವು ಪ್ರಾಪ್ತವಾಗುತ್ತದೆ.

ಲೌಕಿಕ ದೃಷ್ಟಿಗೋಚರರಾದ ಸೂರ್ಯಚಂದ್ರಾಗ್ನ್ಯಾದಿಗಳಲ್ಲಿರುವ ಪ್ರಕಾಶವು ಪರಮಾತ್ಮನ ಪ್ರಕಾಶದ್ದೇ ಒಂದು ಅಂಶವಾಗಿದೆ. ಪರಮಾತ್ಮನನ್ನು ಪ್ರಕಾಶಪಡಿಸಲು ಬೇಕಾದ ತೇಜಸ್ಸೂ ಇಲ್ಲ. ಶ್ರುತಿಸ್ಮೃತಿಗಳೂ ಇದನ್ನೇ ಉದ್ಘೋಷಿಸುತ್ತವೆ ಏನೆಂದರೆ :—

"ನ ತತ್ರ ಸೂರ್ಯೋಭಾತಿ ನ ಚಂದ್ರತಾರಕಂ ನೇಮಾ ವಿದ್ಯುತೋ ಭಾಂತಿ ಕುತೋಽಯಮಗ್ನಿಃ ತಮೇವ ಭಾಂತಮನುಭಾತಿ ಸರ್ವಂ ತಸ್ಯ ಭಾಸಾ ಸರ್ವಮಿದಂ ವಿಭಾತಿ ॥ ಅಂಗುಷ್ಠಮಾತ್ರಃ ಪುರುಷೋ ಜ್ಯೋತಿರಿವಾಧೂಮಕಃ ॥", "ಜ್ಯೋತಿಷಾಮಪಿ ತಜ್ಜ್ಯೋತಿಸ್ತಮಸಃ ಪರಮುಚ್ಯತೇ ॥ ನ ತದ್ಭಾಸಯತೇ ಸೂರ್ಯೋ ನ ಶಶಾಂಕೋ ನ ಪಾವಕಃ" "ಯದಾದಿತ್ಯಗತಂ ತೇಜೋ ಜಗದ್ಭಾಸಯತೇಽಖಿಲಂ ಯಚ್ಚಂದ್ರಮಸಿಯಚ್ಚಾಗ್ನೌ ತತ್ತೇಜೋ ವಿದ್ಧಿ ಮಾಮಕಂ"

ಆದ್ದರಿಂದ "ತಮಸೋ ಮಾ ಜ್ಯೋತಿರ್ಗಮಯ" ಎಂಬ ವೈದಿಕ ಪ್ರಾರ್ಥನಾನುಸಾರವಾಗಿ ಜಗಜ್ಜ್ಯೋತಿಯಾದ ಪರಮಾತ್ಮನೇ ಜಗತ್ತಿನ ಅಜ್ಞಾನಾಂಧಕಾರವನ್ನು ಪರಿಹರಿಸಲಿ ಹಾಗೂ ನೂತನ ವರ್ಷದಲ್ಲಿ ಶ್ರೀ ದ್ವಾರಕಾಧೀಶ, ಚಂದ್ರಮೌಲೀಶ್ವರರು ಸಮಸ್ತರಿಗೂ ಎಲ್ಲಾ ವಿಧದಿಂದ ಕಲ್ಯಾಣ ಮಂಗಳವನ್ನುಂಟುಮಾಡಲಿ, ವಿಶ್ವದ ಸರ್ವವಿಧ ಅಶಾಂತಿಯನ್ನು ದೂರಪಡಿಸಿ, ಸರ್ವತ್ರ ಶಾಂತಿಯನ್ನೂ ಸುಖವನ್ನೂ ಕರುಣಿಸಲಿ."

ಓಂ ಶಾಂತಿಃ ! ಶಾಂತಿಃ !

---

## ಶಿಕ್ಷಣದ ಉದ್ದೇಶ

ಆಚಾರ್ಯ ವಿಶ್ವಶ್ರುತಿಯವರ ಮೂವರು ಶಿಷ್ಯರು ತಮ್ಮ ಶಿಕ್ಷಣವು ಪೂರ್ಣಗೊಂಡ ನಂತರ ತಮಗೆ ಗೃಹಸ್ಥಾಶ್ರಮ ಪ್ರವೇಶಿಸಲು ಅನುಮತಿ ನೀಡಬೇಕೆಂದು ಗುರುಗಳನ್ನು ಕೇಳಿಕೊಂಡರು. ಆಚಾರ್ಯರು ಅನಂದದಿಂದ ಅನುಮತಿಸಿದರು.

ಅಂದು ಸಾಯಂಕಾಲವಾಯಿತು. ಶಿಷ್ಯರು ಹೊರಡುವ ಸನ್ನಾಹ ಮಾಡತೊಡಗಿದರು. ಈ ಹೊತ್ತಿಗೆ ಆಚಾರ್ಯರಿಗೆ ವಿಚಾರವೊಂದು ಹೊಳೆಯಿತು. ಅವರು ಮಾರ್ಗದಲ್ಲಿ ಕೆಲ ಬಟ್ಟೆಗಳನ್ನು ಹರಡಿ ಸಮೀಪದ ಗಿಡದ ಹಿಂದೆ ಅಡಗಿ ನಿಂತರು, ಶಿಷ್ಯರು ಹೋಗುವಾಗ ಏನು ಮಾಡುವರೆಂಬುದನ್ನು ಕಾಣಲು.

೧ನೆ ಶಿಷ್ಯನು ಆ ಬಟ್ಟೆಗಳನ್ನು ದಾಟಿಕೊಂಡು ಹೋದನು. ೨ನೆ ಶಿಷ್ಯನು ಕ್ಷಣ ಹೊತ್ತು ಅಲ್ಲಿ ನಿಂತು ಬಟ್ಟೆಗಳನ್ನು ತುಳಿಯುವಂತೆ ಹೋದನು. ಆದರೆ ೩ನೆಯ ಶಿಷ್ಯನು ತನ್ನ ಸಾಮಾನುಗಳನ್ನು ಒಂದೆಡೆ ಇರಿಸಿ ಆ ಬಟ್ಟೆಗಳನ್ನುಜೋಡಿಸುವಲ್ಲಿ ಮಗ್ನನಾದನು.

ಆಚಾರ್ಯರು ಮೂರನೆಯ ಶಿಷ್ಯನಿಗೆ ಹೋಗಲು ಅನುಮತಿ ಕೊಟ್ಟು ಉಳಿದಿಬ್ಬರಿಗೆ ನಿಮ್ಮ ಶಿಕ್ಷಣವಿನ್ನು ಪೂರ್ತಿಯಾಗಿಲ್ಲ. ಶಿಕ್ಷಣದ ಉದ್ದೇಶವನ್ನಿನ್ನೂ ನೀವು ಅರಿತಿಲ್ಲ ಎಂದು ಹೇಳಿ ಅವರನ್ನು ನಿಲ್ಲಿಸಿಕೊಂಡರು.

# ಕುಮಾರವ್ಯಾಸ ಭಾರತದ ಹಿರಿಮೆ


ಕನ್ನಡದ ಕೆಲವೇ ಜನಪ್ರಿಯ ಕವಿಗಳಲ್ಲಿ ಕುಮಾರವ್ಯಾಸ ಒಬ್ಬನು. ಕಥನ ವಿಸ್ತಾರ, ಪಾತ್ರ ಚಿತ್ರಣ, ಸ್ವತಂತ್ರ ವರ್ಣನೆ, ಕಲ್ಪನಾ ಮತ್ತು ಭಾಷಾ ಸಂಪತ್ತಿ ಇವುಗಳಲ್ಲಿ ಅವನ ಹಿರಿಮೆಯನ್ನು ಕಾಣಬಹುದು. ದೇಸಿಯ 'ಬೆರಗಿನ ಬಳಕೆ' ಓದುಗರನ್ನು ಮುಗ್ಧಗೊಳಿಸುವುದು. ಇವೆಲ್ಲ ಅವನ ಭಾರತವು ಕನ್ನಡಿಗರಿಗೆ ಅಚ್ಚುಮೆಚ್ಚಾಗುವಂತೆ ಮಾಡಿರುವವು.



ಲೇಖಕರು: **ಡಾ. ರಂ. ಶ್ರೀ. ಮುಗಳಿ.** ಸಾಂಗಲಿ


ಮಹಾಕವಿಗಳ ಮಹಾಕೃತಿಗಳು ವಿಲಕ್ಷಣ ಪ್ರತಿಭೆಯ ಪವಾಡಗಳಾಗಿ ಮೆರೆಯುತ್ತವೆ. ಪ್ರತಿಯೊಂದು ಕಾಲದಲ್ಲಿ ಸಹೃದಯರು ಅವನ್ನು ಓದಿ ಮೈಮರೆಯುತ್ತಾರೆ; ಹಲವರು ತಂತಮ್ಮ ರೀತಿಯಲ್ಲಿ ಅರ್ಥ ಕಾಣುತ್ತಾರೆ, ಸ್ಫೂರ್ತಿ ಪಡೆಯುತ್ತಾರೆ, ಯಾರು ಹೆಚ್ಚು, ಯಾರು ಕಡಿಮೆ ಎಂಬ ಚರ್ಚೆಗಳು ನಡೆಯುತ್ತವೆ. ಯಾವೊಬ್ಬನು ಮಹಾಕವಿ ಹೌದೇ, ಅವನ ಕೃತಿ ಮಹಾಕೃತಿಯೇಕೆ ಎಂಬ ಪ್ರಶ್ನೆಗಳನ್ನೂ ಕೆಲವರು ಕೇಳುತ್ತಾರೆ. ರಾಗದ್ವೇಷದ ಸೋಗಿಲ್ಲದೆ ಜಿಜ್ಞಾಸೆ ಮತ್ತು ರಸಿಕತೆಗಳ ಮನೋಭಾವದಿಂದ ಇದೆಲ್ಲ ನಡೆಯುವುದಾದರೆ ಅದು ಜೀವಂತ ವಿಮರ್ಶೆಯ, ಸ್ವತಂತ್ರ ಸಾಹಿತ್ಯಾಭಿರುಚಿಯ ಗುರುತೆನ್ನಬಹುದು.

ಕುಮಾರವ್ಯಾಸನು ಕರ್ನಾಟಕದ ಮಟ್ಟಿಗೆ ಅತ್ಯಂತ ಜನಪ್ರಿಯರಾದ ಮಹಾಕವಿಗಳಲ್ಲಿ ಒಬ್ಬನು. ಅವನ ಭಾರತವು ಕನ್ನಡಜನದ ಮನಸ್ಸನ್ನು ಸೆರೆಹಿಡಿದಿರುವ ಮಹಾಕೃತಿಗಳಲ್ಲಿ ಒಂದು. ರಾಷ್ಟ್ರೀಯ ಮಹಾಕಾವ್ಯವೆಂದು ಹೆಸರಾದ ವ್ಯಾಸಭಾರತದಿಂದ ಅದು ಪ್ರೇರಣೆಹೊಂದಿ ನಿರ್ಮಿತವಾಗಿದೆ. ಮಹಾಕೃತಿಯೆಂದೆನಿಸಿಕೊಳ್ಳುವಂಥ ಗುಣವು ಅದರಲ್ಲೇನಿದೆ, ಅದರ ಹಿರಿಮೆಯೆಲ್ಲಿ? ಎಂಬ ಪ್ರಶ್ನೆ ಯಾವಾಗಲೂ ದೋಷೈಕದೃಷ್ಟಿಯಿಂದಲೇ ಹುಟ್ಟುತ್ತದೆಂದಲ್ಲ. ಎಂಥ ಸಹೃದಯರ ಅಂತಃಕರಣದಲ್ಲಿಯೂ ಅದು ಹುಟ್ಟಬಹುದು. ಇಂಥ ಹೊತ್ತಿನಲ್ಲಿ ಆ ಪ್ರಶ್ನೆಯೆ ಅನಾವಶ್ಯಕ ಎನ್ನುವುದಕ್ಕಿಂತ ಅದಕ್ಕೆ ನಿರ್ವಿಕಾರವಾದ ರೀತಿಯಲ್ಲಿ ಉತ್ತರವನ್ನು ಪಡೆಯಬೇಕು. ಕಳೆದ ಕೆಲವು ವರ್ಷಗಳಲ್ಲಿ ಪ್ರಕಟವಾದ ಪ್ರಶಸ್ತಿಗ್ರಂಥಗಳಲ್ಲಿ, ಪರಿಚಯ ಪುಸ್ತಿಕೆಗಳಲ್ಲಿ ಮತ್ತು ಅನೇಕ ಲೇಖನಗಳಲ್ಲಿ ಈ ವಿಷಯದ ಚರ್ಚೆ ಬಂದಿದೆ. ಕುಮಾರವ್ಯಾಸನ ಕಥನ ವಿಸ್ತಾರದಲ್ಲಿ, ಪಾತ್ರಚಿತ್ರಣದಲ್ಲಿ, ಸ್ವತಂತ್ರ ವರ್ಣನೆಗಳಲ್ಲಿ, ಕಲ್ಪನಾಸಂಪತ್ತಿ ಮತ್ತು ಭಾಷಾಸಂಪತ್ತಿಗಳಲ್ಲಿ ವಿಮರ್ಶಕರು ಅವನ ಹಿರಿಮೆಯನ್ನು ಎತ್ತಿ ತೋರಿಸಿದ್ದಾರೆ. ಇನ್ನೂ ಹೆಚ್ಚಿಗೇನಾದರೂ ಮಾಡಬೇಕಾದದ್ದಿದೆ ಎಂದಲ್ಲ. ಬಹುಶಃ ಹಿರಿಮೆಯನ್ನು ಪ್ರಾಮಾಣಿಕವಾಗಿ ಅಲ್ಲಗಳೆಯುವ ಬರೆವಣಿಗೆಯೇ ಹೆಚ್ಚಾಗಿ ಬರಬೇಕಾಗಿದೆ! ಆ ಮೇಲೆ ಅದಕ್ಕೆ ಅವಶ್ಯ ಉತ್ತರವೆಂದು ಹಿರಿಮೆಯನ್ನು ಎತ್ತಿ ತೋರುವ ಬರೆವಣಿಗೆ ಮತ್ತೆ ಬರಬಹುದು. ಈಗಿನ ಮಟ್ಟಿಗೆ ಅವನ ಭಾರತದ ಹರವಿನಲ್ಲಿ ಹರಡಿಬಂದ ಹಲವಾರುಬಗೆಯ ಮಾತಿನಲ್ಲಿ ಅವನ ಅಸಾಧಾರಣಪ್ರತಿಭೆ ಹೇಗೆ ಮೈತಾಳಿದೆ, ಮಾತಿನ ಹಿರಿಮೆಯಲ್ಲಿ ಎಲ್ಲ ಬಗೆಯ, ವಿಶೇಷವಾಗಿ ಅಭಿವ್ಯಕ್ತಿಯ ಹಿರಿಮೆ ಹೇಗೆ ಒಡಮೂಡಿದೆ ಎಂಬುದನ್ನು ಈ ಲೇಖನದಲ್ಲಿ ನಿರೂಪಿಸುವ ಉದ್ದೇಶವಿದೆ.

## ಬಳಕೆ ಮಾತಿನ ಪ್ರಯೋಗ

ಕುಮಾರವ್ಯಾಸನು ತನ್ನ ಭಾರತದ ಪೀಠಿಕಾ ಸಂಧಿಯಲ್ಲಿ ಮಾಡಿದ ಅನೇಕ ಪ್ರಾರ್ಥನೆಗಳಲ್ಲಿ ಶಾರದೆಯ ಪ್ರಾರ್ಥನೆಯನ್ನೂ ಮಾಡಿದ್ದಾನೆ. ಅದು ಹೆಚ್ಚಾಗಿ ಸಾಂಪ್ರದಾಯಿಕವಾಗಿದೆ. ಆದರೂ 'ವಾರಿಜಾಸನೆ.. ವಚನರಚನೋದ್ಧಾರೆ.. ಶಾರದೆಯೆ ನರ್ತಿಸುಗೆ ನಲಿದೊಲಿದೆನ್ನ ಜಿಹ್ವೆಯಲಿ' ಎಂಬ ಅವನ ಬೇಡಿಕೆಯನ್ನು ಮನ್ನಿಸಿದಂತೆ ಶಾರದೆ ಅವನ ನಾಲಿಗೆಯ ಮೇಲೆ ಭಾಮಿನಿಷಟ್ಪದಿಯ ತಾಳಮೇಳದೊಡನೆ ಅವಿಶ್ರಾಂತವಾಗಿ ನರ್ತಿಸುತ್ತ ಹೊರಟಿದ್ದಾಳೆ ಎನ್ನಬಹುದು. 'ವಚನರಚನೋದ್ಧಾರೆ' ಎಂದು ಕವಿ ಶಾರದೆಯನ್ನು ಕರೆದಿದ್ದಾನೆ. ಸ್ಫೂರ್ತಿಯ ಕೋಶದಿಂದ ಅನಂತವಾದ ವಚನರಚನೆಗಳನ್ನು ಅಂದರೆ ಮಾತಿನ ಹೆಣಿಕೆಗಳನ್ನು ಶಾರದೆ ಹೊರತಂದು ಪ್ರತಿಭಾಸಂಪನ್ನ ಕವಿಯ ಕೃತಿಯನ್ನು ಸಿಂಗರಿಸುತ್ತಾಳೆ. ಕುಮಾರವ್ಯಾಸನಿಗೆ ಈ ಸಿಂಗರ ಅವಳ ಕೃಪೆಯಿಂದ ದೊರೆತಿದೆ. ಮುಂದೆ 'ಹಲಗೆ ಬಳಹವ ಹಿಡಿಯದೊಂದಗ್ಗಳಿಕೆ' ಮುಂತಾದ ಪ್ರಸಿದ್ಧಪದ್ಯದಲ್ಲಿ ಅವನು ತನ್ನ ಅಗ್ಗಳಿಕೆಯನ್ನು ಹೇಳಿಕೊಂಡಿದ್ದಾನೆ. ಅದರಲ್ಲಿ ಅಹಂಕಾರವಿರುವಂತೆ ಕಂಡರೂ 'ಈ ಬಲುಹು ಸಲುವುದು ವೀರನಾರಾಯಣನ ಕಿಂಕರಗೆ' ಎಂಬ ಕೊನೆಯ ಮಾತಿನಿಂದ ಭಕ್ತಿಜನ್ಯವಾದ ವಿನಯವು ಪ್ರಕಟವಾಗಿದೆ. ಪೀಠಿಕಾ ಸಂಧಿಯ ಕೊನೆಕೊನೆಯ ಪದ್ಯದಲ್ಲಿ ತನ್ನ ಮಾತು ಹೇಗೆ ಹರಿಯಲಿದೆ ಎಂಬುದನ್ನು ಅವನು ಸಮರ್ಪಕವಾಗಿ ಬಣ್ಣಿಸಿದ್ದಾನೆ. ಈ ಪದ್ಯದ ಮಾತುಗಾರಿಕೆಯಲ್ಲಿಯೇ ಕೆಲಮಟ್ಟಿಗೆ ಅದರ ಪ್ರತ್ಯಯವುಂಟಾಗುತ್ತದೆ. ಆ ಪದ್ಯ ಹೀಗಿದೆ:

> ಮಾತು ಬೆರಗಿನ ಬಳಕೆ ರಾಗದ।
> ರೀತಿ ಕರ್ಣಾಮೃತದ ಬೆಳದಸು।
> ಧಾತು ಜಾಣರ ಧಾತು ಸೊಗಸಿನ ಸಾಗರದ ಲಹರಿ।
> ನೂತನಾಳಾಪವನು ಲೋಕದ।
> ಧಾತುಗಳ ಬಳಕೆಗಳ ಬೆಳಪಸು।
> ಧಾತು ರಂಗದಸಮ ಕುಮಾರವ್ಯಾಸಕೃತಿವಚನ॥

ಈ ಪದ್ಯದ ಸರಿಯಾದ ಪಾಠವೇನು, ಇಡಿಯಾದ ಅರ್ಥವೇನು ಎಂಬುದು ಸ್ಪಷ್ಟವಾಗಿಲ್ಲ. ಆದರೂ ತನ್ನ ಮಾತು ಬೆರಗಿನ ಬಳಕೆ ಅಂದರೆ ಆಶ್ಚರ್ಯದ ಪ್ರಯೋಗ ಅಥವಾ ಆಶ್ಚರ್ಯಕಾರಕವಾದ ಜನಭಾಷೆಯ ಬಳಕೆಮಾತಿನ ಪ್ರಯೋಗವೆಂದೂ 'ಸೊಗಸಿನ ಸಾಗರದ ಲಹರಿ' ಅಂದರೆ ಸುಖದ ಸಮುದ್ರದ ತೆರೆತೆರೆಯೆಂದು ಹೇಳಿದ್ದು ಯಥೋಚಿತವಾಗಿದೆ. ಕುಮಾರವ್ಯಾಸನ ಮಾತು ನಿಜವಾಗಿ 'ಬೆರಗಿನ ಬಳಕೆ' ಅಥವಾ 'ಬಳಕೆಯ ಬೆರಗು' ಎಂದು ಹೇಳಿದರೆ ಅತಿಶಯೋಕ್ತಿಯಾಗದು.

## ಸಹಜತೆ

ಮಾತು 'ಬೆರಗಿನ ಬಳಕೆ' ಯಾಗಿ ಮೊದಮೊದಲು ಅಷ್ಟು ತೋರುವುದಿಲ್ಲ. ಆದಿಪರ್ವದ ಚಿತ್ರದಲ್ಲಿ ಮನಸ್ಸನ್ನು ಇಕ್ಕುಳಿಗೊಳ್ಳುವ ಸನ್ನಿವೇಶಗಳು ಕಡಿಮೆ. ಒಂದು ಬಗೆಯ ಪೌರಾಣಿಕ ಪದ್ಧತಿಯಲ್ಲಿ ಅನೇಕ ಕಥನಗಳು ಸುಳಿದುಹೋಗುತ್ತವೆ. ಇಂಥದರಲ್ಲಿಯೂ ಮಾತಿನ ಸಹಜಪ್ರವಾಹವೊಂದು ಅಡೆತಡೆಯಿಲ್ಲದೆ ಸಾಗಿರುತ್ತದೆ. ಆಗಾಗ ಅದು ಉಬ್ಬರಗೊಳ್ಳುತ್ತದೆ, ಸಹಜದೇಸಿಯ ಶಕ್ತಿಯಾಗಿ ಮಿನುಗುತ್ತದೆ. ಜತುಗೃಹಪರ್ವದ ೨೧ ನೆಯ ಸಂಧಿಯಿಂದ ಇದನ್ನು

ಉದಾಹರಿಸಬಹುದು. ಕುರು ಪಾಂಡವರ ವೈರ ಹೇಗೆ ಬೆಳೆಯಿತೆಂಬುದನ್ನು ಇದರಲ್ಲಿ ಬಣ್ಣಿಸಲಾಗಿದೆ. 'ಗಜನಗರಿಯಲಿ ಪಾಂಡವ ರಾಳ ಕೌರವರಾಳ ಸೆಣಸಿನ ಕಾಲುಮೆಟ್ಟುಗಳ ಸೂಳು, ಮತ್ಸರ, ಬಿರುದುಪಾಡಿನ ಜೋಳಿ, ಕಲಹದ ಕದಡು, ಜೂಜಿನ ಕೋಳು, ಚಲದೊಳತೋಟಿ ಮಸಗಿತು ದಿವಸದಿವಸದಲಿ' ಇಲ್ಲಿ ಸ್ಪರ್ಧೆ-ಮತ್ಸರ-ಛಲಗಳು ಹೇಗೆ ಹೆಚ್ಚುತ್ತ ಹೋದುವೆಂಬುದನ್ನು ತರತರದ ದೇಸಿಯಲ್ಲಿ ಹೇಳಲಾಗಿದೆ. 'ಬೀದಿಗಲಹದ ಕದಡು ಬೀಡಿನೊಳೈದೆ ಹಬ್ಬಿತು' ಎಂದೂ ಬಣ್ಣಿಸಲಾಗಿದೆ. ಕರ್ಣಶಕುನಿಗಳು ದುರ್ಯೋಧನನ ಹತ್ತಿರ ಬಂದು ಅವನ ದ್ವೇಷ ಮತ್ಸರಗಳಿಗೆ ಪುಟಕೊಡುತ್ತಾರೆ. ಆಗ ಕರ್ಣ ಹೇಳಿದ್ದೆಂದರೆ,

ದುಗುಡವೇತಕೆ ಜೀಯ ಡೊಂಬಿಯ
ಜಗಳವನು ತೆಗೆದರಿನ್ನಪರ ಸುಂ
ಟಗೆಯನಾಯುವೆನವರ ತನುವನು ಯುದ್ಧ
ರಂಗದಲಿ ।
ದಿಗುಬಲಿಯ ಕೊಡಿಸುವೆನು ಸಾಕಿ
ನ್ನೊಗುಮಿಗೆಯ ಚಿಂತಾಂಗನೆಯನೋ
ಲಗಿಸದಿರು ಕುರುರಾಯ ಚಿತ್ತೈಸೆಂದನಾ ಕರ್ಣ॥

ಈ ಪದ್ಯದಲ್ಲಿ ಭಾರತಯುದ್ಧಕ್ಕೆ ಮೂಲವಾದ ಮತ್ಸರ ಮತ್ತು ನಿಷ್ಕಾರಣ ಕಲಹ ಇವುಗಳ ಚಿತ್ರವನ್ನು ಕವಿ ಕೊಡುತ್ತಾನೆ. 'ಡೊಂಬಿಯ ಜಗಳವನು ತೆಗೆದು' ಅಂದರೆ 'ಏನಾದರೂ ಗುಲ್ಲು ಇಲ್ಲವೆ ಕೋಲಾಹಲ ಮಾಡಿ ಕಾಲು ಕೆದರಿ ಜಗಳ ತೆಗೆದು' ಎಂದರ್ಥ. ಇದರಲ್ಲಿ ಬಳಕೆ ಮಾತು ಹೇಗೆ ಸಹಜವಾಗಿ ಬಂದಿದೆ ಎಂಬುದನ್ನು ನೋಡಬೇಕು. ಇಂಥ ಮಾತಿನೊಡನೆ ಭಾವವು ಕಾವೇರುತ್ತ ಹೋಗಿ 'ಚಿಂತಾಂಗನೆಯನೋಲಗಿಸದಿರು' ಎಂಬ ರೂಪಕದಲ್ಲಿ ಉತ್ಕರ್ಷಹೊಂದುತ್ತದೆ. ಇದೇ ಸಂಧಿಯಲ್ಲಿ ಧೃತರಾಷ್ಟ್ರನು ಧರ್ಮನನ್ನು ಕುರಿತು ಹೇಳುವಾಗ 'ತಂದೆಯಿಲ್ಲದೆ ಹಿತವರೆಮಗಾರೆಂದು ನೀವಿಹಿರೆನ್ನ ಮಕ್ಕಳು ಕೊಂದು ಹಿಂಡೆಯ ಕೂಳನುಂಬರು ಹೇಸುವವರಲ್ಲ' ಎಂಬಲ್ಲಿ ಬಳಕೆ ಮಾತಿನ ಸಹಜತೆಯನ್ನು ಗಮನಿಸಬೇಕು. ಹಿಂಡೆಯ ಕೂಳು ಅಂದರೆ ಶ್ರಾದ್ಧದ ಅನ್ನ ಎಂಬುದು 'ಹಿಂಡಿಕೂಳು' ಎಂಬ ರೂಪದಲ್ಲಿ ಇನ್ನೂ ಪ್ರಚಲಿತವಾಗಿದೆ. ಉತ್ತರಕರ್ನಾಟಕದ ರೂಢಿಯಲ್ಲಿ ಈ ಬಗೆಯ ಮಾತು ಹೆಚ್ಚು ಪ್ರಚುರವಾಗಿದೆ.

### ಆಡುಮಾತುಗಳ ಬಳಕೆ

ಕುಮಾರವ್ಯಾಸನ ಶೈಲಿಯಲ್ಲಿ ಸಾಮಾನ್ಯವಾಗಿ ಜನಭಾಷೆಯ ವಿವಿಧ ಸಂಪತ್ತಿ ಎದ್ದು ಕಾಣುವಂತೆ ವಿಶೇಷವಾಗಿ ಉತ್ತರ ಕರ್ನಾಟಕದ ಆಡುಮಾತು ತನ್ನೆಲ್ಲ ಸಾಹಚರ್ಯದೊಡನೆ ಎದ್ದು ನಿಲ್ಲುತ್ತದೆ. ಅಂತೇ 'ಕನ್ನಡ ಭಾರತ' ಎಂಬ ಹೆಸರಿನೊಡನೆ 'ಗದುಗಿನ ಭಾರತ' ಎಂಬ ಹೆಸರೂ ಅದಕ್ಕೆ ಯೋಗ್ಯವಾಗಿದೆ. ಇದಕ್ಕೆ ಆದಿಪರ್ವದಲ್ಲಿ ಅಪರೂಪವಾಗಿ ನಿದರ್ಶನಗಳು ದೊರೆಯುತ್ತವೆ. ಹಿಡಿಂಬವಧ ಪರ್ವದಲ್ಲಿ 'ಅರಸ ಹಿಡಿಯಲಿ ದಾನವರು ನಿಂದಿರಿಕೆಯಲಿ ನುಂಗಲಿ' ಎಂಬುದನ್ನು ಲಕ್ಷಿಸಬೇಕು. 'ನಿಂದಿರಿಕೆಯಲಿ' ಎಂಬುದಕ್ಕೆ 'ತತ್‌ಕ್ಷಣ, ಕೂಡಲೆ' ಎಂದರ್ಥ. 'ನಿಂದರಕೀಲೆ' ಎಂಬ ರೂಪದಲ್ಲಿ ಅದಿನ್ನೂ ಬಳಕೆಯಲ್ಲಿದೆ. ಮುಂದೆ ಸ್ವಯಂವರಪರ್ವದಲ್ಲಿ 'ಮಿಡುಕದೀ ಧನು ನಮ್ಮ ಝಾಡಿಸಿ ಕೆಡಗಿತು' ಎಂದಿದೆ. ಈ ಪ್ರಯೋಗ ವಿಶೇಷಾರ್ಥದಲ್ಲಿ ಇಂದಿಗೂ ಉತ್ತರ ಕರ್ನಾಟಕದಲ್ಲಿ ಬಳಕೆಯಲ್ಲಿದೆ.

ಕುಮಾರವ್ಯಾಸ ಭಾರತದ ಹಿರಿಮೆ ಎಲ್ಲ ಅಂಶಗಳಲ್ಲಿಯೂ ಏರೇರುತ್ತ ಒಡಮೂಡಿದ್ದು ಮೂರನೆಯ ಸಂಪುಟದಿಂದ ಹತ್ತನೆಯ ಸಂಪುಟಗಳ ವರೆಗಿನ ಭಾಗದಲ್ಲಿ ಮಾತ್ರ. ಅದರಲ್ಲಿಯೂ ಸಭಾಪರ್ವ, ವಿರಾಟಪರ್ವ, ಉದ್ಯೋಗಪರ್ವಗಳು ಈ ಕೃತಿಗೆ ಕಳಸವಿಟ್ಟವೆ. ಇವುಗಳಲ್ಲಿ ಕ್ರಮೇಣ ಕವಿಯ ಸಹಜರೂಪಕಗಳು ಭಾವಪ್ರತೀಕಗಳಾಗಿ ಮಾಲೆಮಾಲೆಯಾಗಿ ಬರುತ್ತವೆ; ಮಾತು ಸಹಜತೆಯನ್ನು ಕಾಯ್ದುಕೊಂಡು ಉನ್ನತಿಯನ್ನು ಮೆರೆಯುತ್ತದೆ. ಇದಕ್ಕೆ ಎಷ್ಟು ಉದಾಹರಣೆ ಕೊಟ್ಟರೂ ಸಾಲದು, ಅಂಥ ಅಕ್ಷಯಪಾತ್ರೆ ದೈವಕೃಪೆಯಿಂದ ಕವಿಗೆ ದೊರೆತಿದೆ. ಅದನ್ನು ಅವನು ಸಮುಚಿತವಾಗಿ ಬಳಸುತ್ತಾನೆ. ಸಹಜರೂಪಕಗಳ ಭಾಷೆಯಲ್ಲಿ ಕುಮಾರವ್ಯಾಸನು ಹೇಗೆ ಬಣ್ಣಿಸುತ್ತಾನೆ ಎಂಬುದಕ್ಕೆ ಇದೊಂದು ಸಾಕ್ಷಿ:

ಮುನಿಯ ಮಾತಿನ ಬಲೆಗೆ ಸಿಲುಕಿತು
ಜನಪತಿಯಂ ಚೈತನ್ಯಮೃಗವೀ-
ತನ ವಚೋವರುಷದಲಿ ನೆನೆದುವು ಕರಣ-
ವೃತ್ತಿಗಳು ।
ಮನದಲಂಕುರವಾಯ್ತು ನಾಲಗೆ-
ಗೊನೆಯಲೆರೆಡೆಲೆಯಾಯ್ತು ಯಜ್ಞದ
ನೆನಹು ಭಾರವಣೆಯಲಿ ಬಿಗಿದುದು
ಧರ್ಮನಂದನನ ॥

ಮುನಿಯ ಮಾತಿಗೆ ಜನಪತಿ ಪೂರ್ತಿಯಾಗಿ ವಶವಾದನು ಎಂಬುದನ್ನು 'ಮುನಿಯ ಮಾತಿನ ಬಲೆಗೆ ಸಿಲುಕಿತು ಜನಪತಿಯ ಚೈತನ್ಯಮೃಗ' ಎಂಬ ಉಚಿತರೂಪಕವು ತಿಳಿಸುತ್ತದೆ. ಮುಂದೆ ಬೇರೊಂದು ಸಮಗ್ರ-ರೂಪಕವು ತಲೆಯೆತ್ತಿ ಆ ವಿಚಾರವು ಹೇಗೆ ಅರಸನ ಮನದಲ್ಲಿ ಬೆಳೆಯುತ್ತ ಹೋಯಿತೆಂ-ಬುದನ್ನು ಸೂಚಿಸುತ್ತದೆ. ಮುನಿಯ ಮಾತಿನ ಮಳೆಗೆ ಇಂದ್ರಿಯಗಳು ನೆನೆಯುತ್ತವೆ, ಮನದಲ್ಲಿ ಮೊಳಕೆಯೇಳುತ್ತದೆ, ನಾಲಗೆಗೊನೆಯಲ್ಲಿ ಎರಡೆಲೆಯಾಗುತ್ತದೆ. ಇಲ್ಲಿಯ ರೂಪಕ ಕ್ರಮ ಮತ್ತು ಅದನ್ನು ನಿರೂಪಿಸಿದ ಮಾತು ಎರಡೂ ಹಿರಿಮೆಗೆ ಗುರುತಾಗಿರುತ್ತವೆ.

### ಕಲ್ಪಕತೆ ಮತ್ತು ಅಭಿವ್ಯಕ್ತಿ

ಸಭಾಪರ್ವದ ದ್ರೌಪದೀಮಾನಭಂಗದ ಸಂದರ್ಭದಲ್ಲಿ ಕುಮಾರವ್ಯಾಸನ ಕಲ್ಪಕತೆ

ಮತ್ತು ಅಭಿವ್ಯಕ್ತಿಗಳು ಏರೇರುತ್ತ ಹೋಗುತ್ತವೆ. ವಿದುರನು ದುರ್ಯೋಧನನನ್ನು ಧಿಕ್ಕರಿಸಿ ಆಡಿದ ಮಾತುಗಳಿವು :

ಸಿಡಿಲಪಟ್ಟಣಗಟ್ಟಿ ಶಾಖವ
ಗೊಡುವರೇ, ಹರನೇತ್ರವಹ್ನಿಯೊ
ಳಡಬಳವ ಸುಡಬಗೆವರೆ, ಮರುಳೆ
ಮಹೀಪತಿಯೆ।
ಹೆಡತಲೆಯ ತುಱಿಸುವರೆ ಹಾವಿನ
ಹೆಡೆಯೊಳಕಟಾ ಪಾಂಡುಪುತ್ರರ
ಮಡದಿ ತೊತ್ತಹಳೆ ಶಿವಾಯೆಂದಳಲಿದನು
ವಿದುರ॥

ದ್ರೌಪದಿಯ ಮಾನಹಾನಿಯೆಂದರೆ ಸಾವಿಗೆ ಅವುತಣವಿತ್ತಂತೆ ಎಂಬ ಭಾವವು ಇಲ್ಲಿ ಎಷ್ಟು ಪ್ರಭಾವಿಯಾಗಿ ಬಂದಿದೆ! ಭವಿಷ್ಯದುರಂತದ ಸೂಚನೆ ಹೇಗೆ ಸುಳಿದಿದೆ! ದ್ರೌಪದಿಯ ದುರವಸ್ಥೆಯನ್ನು ಕಂಡು ಭೀಮಾರ್ಜುನರ ಸಂತಾಪವು ಯಾವ ತುತ್ತತುದಿಗೇರಿತೆಂಬುದನ್ನು ಕೆಳಗಿನ ಪದ್ಯವು ಉತ್ಕಟವಾಗಿ ಬಣ್ಣಿಸುತ್ತದೆ.

ವನಜಮುಖಿಯಕ್ಕೆಯನುದುಶ್ಶಾ
ಸನನ ದುರ್ನೀತಿಯನು ದುರ್ಯೋ
ಧನನ ದುಶ್ಚೇಷ್ಟೆಯನು ಕಂಡೀ ಭೀಮ
ಫಲಗುಣರು।
ಮನದೊಳಗೆ ಕೌರವನ ಕರುಳನು
ತನಿರಕುತದಲಿ ಕುದಿಸಿದರಂ ನಿಜ
ಜನಿತ ಕರ್ಮಕ್ರಮವ ನೆನೆವುದನಱಿದ-
ನಾಭೂಪ ॥

ಇಲ್ಲಿ ಅವರಿಬ್ಬರು ಮನದೊಳಗೆ ಕೌರವನ ಕರುಳನ್ನು ತನಿರಕುತದಲ್ಲಿ ಕುದಿಸಿದರು ಎಂಬ ಉಕ್ತಿ ಕುಮಾರವ್ಯಾಸನ ಪರಮಾವಧಿ ಶಕ್ತಿಗೆ ನಿದರ್ಶನವಾಗಿದೆ. ಹೊರಗೆ ಅವರೇನೂ ಮಾಡುವಂತಿರಲಿಲ್ಲ. ಮಾಡಬೇಕೆಂದರೂ ಧರ್ಮರಾಜನು ಮಾಡಿಗೊಡುತ್ತಿರಲಿಲ್ಲ. ಆಗ ಅವರು ಮನದೊಳಗೇ ತಮ್ಮ ತೀವ್ರ ಸಂತಾಪವನ್ನು ಹೇಗೆ ವ್ಯಕ್ತ ಮಾಡಿದರೆಂಬುದನ್ನು ಇಲ್ಲಿ ಶಕ್ತಿಯುತವಾಗಿ ಸಹಜನುಡಿಗಳಲ್ಲಿ ಬಣ್ಣಿಸಲಾಗಿದೆ.

ವಿರಾಟಪರ್ವದಲ್ಲಿ ಸೈರಂಧ್ರಿಯ ವೇಷದಲ್ಲಿದ್ದ ದ್ರೌಪದಿಗೆ ಕೀಚಕನಿಂದ ಮತ್ತೊಂದು ಮಾನಹಾನಿಯ ಕಠಿಣಪ್ರಸಂಗ ಒದಗಿತು. ಈ ಸಂದರ್ಭದಲ್ಲಿಯೂ ಕುಮಾರವ್ಯಾಸನು ದ್ರೌಪದಿಯ ತ್ವೇಷವನ್ನೂ ಭೀಮಸೇನನ ರೋಷವನ್ನೂ ಅತ್ಯಂತ ಸಮರ್ಪಕವಾದ ದೇಸಿನುಡಿಗಳಲ್ಲಿ ಮೂಡಿಸಿದ್ದಾನೆ. ದ್ರೌಪದಿ ತನ್ನ ದುಃಖವನ್ನು ಭೀಮನಿಗೆ ತೋಡಿಕೊಳ್ಳಲು ಅವನು ಹೇಳಿದನಂತೆ: 'ಕಲಹಕಾದರೆ ನಾವು, ರಮಿಸುವರುಱದವರು' ಬಳಿಕೇನು ಗಾದೆಯುಬಳಕೆ, ಕೆಲಬರು ಫಳಿಸಿದರೆ ಕೆಲರುಂಡು ಜಾರುವರು' ಎಂದೂ 'ಹೊದ್ದುವುದು ಫಲ್ಗುಣನ ಪದದಲಿ ಬಿದ್ದು, ಯಮನಂದನನ ಮನವನು ತಿದ್ದುವುದು, ಸಹದೇವನಕುಲರ ಕೈಯೊಳೆನಿಸುವುದು' ಎಂದೂ ಕೊಂಕುನುಡಿಗಳಲ್ಲಿ ತನ್ನ ಉದಾಸೀನತೆಯನ್ನು ತೋರಿದನಂತೆ. ಇಲ್ಲಿಯ ಮಾತುಗಳಲ್ಲಿ ಆಡುಮಾತು. ಸಾಜಕೊಂಕಿನಿಂದ ಕೂಡಿಬಂದಿದೆ ಎಂಬುದನ್ನು ಗಮನಿಸಬೇಕು.

## ತೀವ್ರ ಪ್ರತಿಕ್ರಿಯೆ

ಇಂಥ ಮಾತಿಗೆ ದೌಪದಿ ಎಷ್ಟು ತಪ್ತಳಾದಳೆಂಬುದು ಕೆಳಗಿನ ಆವಳ ಕಿಡಿನುಡಿಗಳಿಂದ ತಿಳಿಯಬಹುದು :

ಹೆಂಡತಿಯ ಹರಿಬದಲಿಯೊಬ್ಬನೆ
ಗಂಡನಾದರೆ ವೈರಿಯನು ಕಡಿ-
ಖಂಡವನು ಮಾಡುವನು ಮೇಣ್ತನ್ನೊಡಲ-
ನಿಕ್ಕುವನು॥
ಗಂಡರೈವರು ಮೂರುಲೋಕದ
ಗಂಡರೊಬ್ಬಳನಾಳಲಾರಿರಿ
ಗಂಡರೋ ನೀವ್ ಷಂಡರೋ ಹೇಳೆಂದಳಿಂದು
ಮುಖಿ ॥

ಇದರ ಅರ್ಥವೆಂದರೆ, ಹೆಂಡತಿಯ ಮಾನಕಾಯುವ ಕಾರ್ಯದಲ್ಲಿ ಒಬ್ಬನೆ ಗಂಡನಾದರೆ ವೈರಿಯನ್ನು ಕಡಿದು ಚೂರುಮಾಡುವನು, ಅಲ್ಲದೆ ತನ್ನ ಮೈಯನೂ ಬಲಿಗೊಡುವನು ನೀವೋ ೫ ಜನ ಗಂಡಂದಿರು, ಮೂರುಲೋಕಕ್ಕೂ ಶೂರರು, ಹೀಗಿದ್ದು ಒಬ್ಬ ಹೆಂಡತಿಯನ್ನೂ ಆಳಲಾರಿರಿ, ಗಂಡರೋ ನೀವು ಷಂಡರೋ ಹೇಳು ಎಂದು ದ್ರೌಪದಿ ಅಂದಳು. ಒಟ್ಟನಲ್ಲಿ ಇದು ತೀವ್ರ ಪರಿಣಾಮವುಂಟು ಮಾಡುವಂತೆ ಪ್ರತಿ ವಿವರದಲ್ಲಿಯೂ ಪರಿಣಾಮಕಾರಿಯಾಗಿದೆ. ಮಾತಿನಲ್ಲಿಯ ಸಹಜ ದೇಸಿ ಸಾರ್ಥಕವಾಗಿದೆ. ವಿಶೇಷವಾಗಿ 'ಒಬ್ಬಳನಾಳಲಾರಿರಿ' ಎಂಬುದು ಅರ್ಥಪೂರ್ಣವಾಗಿದೆ. 'ಒಬ್ಬ ಹೆಂಡತಿಯನ್ನು ಆಳಲಾರಿರಿ' ಅಂದರೆ ಅವಳ ಮೇಲೆ ಅಧಿಕಾರ ನಡಿಸಲಾರಿರಿ ಎಂದಲ್ಲ. ಒಬ್ಬ ಹೆಂಡತಿಯ ಸುಖ-ದುಃಖ ನಿಮ್ಮ ಸುಖ ದುಃಖವೆಂದು ತಿಳಿಯಲಾರಿರಿ ಎಂದರ್ಥ. 'ಅಧಿಕಾರನಡಿಸು' ಎಂಬ ಅರ್ಥಕ್ಕಿಂತ ಈ ವಿಶೇಷಾರ್ಥವು ಇಲ್ಲಿ ಪ್ರಮುಖವಾಗಿದೆ. ಒಬ್ಬ ಒಳ್ಳೆಯ ಅರಸು ಪ್ರಜೆಗಳನ್ನು ಆಳುತ್ತಾನೆ ಅಂದರೆ ಅವರ ಸುಖದುಃಖದಲ್ಲಿ ಸಮರಸನಾಗಿ ಅವರನ್ನು ರಕ್ಷಿಸುತ್ತಾನೆ. 'ಹೆಂಡತಿಯನ್ನು ಆಳುವುದು' ಎಂಬಲ್ಲಿಯ ಈ ವಿಶೇಷಾರ್ಥವು ಇದೇ ರೂಪದಲ್ಲಿ ಇನ್ನೂ ಉತ್ತರಕರ್ನಾಟಕದ ದೇಸಿಯಲ್ಲಿದೆ.

ದ್ರೌಪದಿಯ ತ್ವೇಷಯುಕ್ತವಾದ ನುಡಿಗಳನ್ನು ಕೇಳಿ ಭೀಮನಲ್ಲಿ ಉಂಟಾದ ಪ್ರತಿಕ್ರಿಯೆಯನ್ನು ಅಷ್ಟೇ ಸಮರ್ಥವಾಗಿ ಕುಮಾರವ್ಯಾಸನು ವರ್ಣಿಸಿದ್ದಾನೆ: 'ಎನಲು ಕಂಬನಿದುಂಬಿದುದು, ಕಡುನೆನೆದುದಂತಃಕರಣ, ರೋಷದ ಘನತೆಹೆಚ್ಚಿತು, ಹಿಂಡಿದನು ಹಗೆಗಳನು ಮನದೊಳಗೆ' ಇಲ್ಲಿ ಮಾತು ಎಷ್ಟು ಸಹಜ ಮತ್ತು ಭಾವಪೂರ್ಣ! ತತ್‌ಕ್ಷಣ ಪ್ರತಿಕ್ರಿಯೆಯಾಗಿ ಭೀಮನು ವೈರಿಗಳನ್ನು ಮನದೊಳಗೆ ಹಿಂಡಿದನಂತೆ. ಹೀಗೆ ಉಕ್ತಿಯ ಸಹಜದೇಸಿ ಮತ್ತು ಭಾವಾಭಿವ್ಯಕ್ತಿಯ ಉತ್ಕಟತೆ ಇವೆರಡನ್ನೂ ವಿರಳವಾಗಿ ಕೂಡಿಸಬಲ್ಲ ಕವಿಗಳಲ್ಲಿ ಒಬ್ಬನಾಗಿದ್ದಾನೆ ಕುಮಾರವ್ಯಾಸ. ಅವನ ಕೃತಿಯ ಹಿರಿಮೆ ಈ ಅಂಶದಲ್ಲಿ ಹೊಳೆಹೊಳೆದು ಕಾಣುತ್ತದೆ. ಸಾವಿರಾರು ಸಂದರ್ಭಗಳಲ್ಲಿ ನಿದರ್ಶನಗಳು ತಲೆದೂಗಿ ಇದನ್ನು ಹೇಳುತ್ತವೆ.



# ಪ್ರಸಾದ-ಶಿಕ್ಷೆ



ದೇವರನ್ನು ಮನಸ್ಸಿನಿಂದ ಸಹ ವಂಚಿಸಲು ಸಾಧ್ಯವಿಲ್ಲ. ಮಾನಸಿಕ ವಂಚನೆಗೆ ಮಾನಸಿಕ ಶಿಕ್ಷೆಯೇ ದೊರೆಯುವುದು. ಇಂತಹ ಒಂದು ಹೃದಯಂಗಮವಾದ ಸನ್ನಿವೇಶವನ್ನು ನಾವಿಲ್ಲಿ ಕಾಣುತ್ತೇವೆ.

ಲೇಖಕರು :

ಶ್ರೀ ಗೊರೂರು ರಾಮಸ್ವಾಮಿ ಅಯ್ಯಂಗಾರ, ಹಾಸನ

ಕೆಲವು ವರುಷಗಳಿಂದ ಪಾಳುಬಿದ್ದಿದ್ದ ಕುಮಾರಿ ದೇವಾಲಯಕ್ಕೆ, ಹೊಸ ಅರ್ಚಕ ಬಂದನಂತರ, ಇದ್ದಕ್ಕಿದ್ದಂತೆ ಒಳ್ಳೆಯ ದೆಸೆ ಬಂದಿತ್ತು. ದೇವಾಲಯ ಊರಹೊರಗೆ ನದಿಯ ತೀರದಲ್ಲಿ ನಿರ್ಜನವಾದ ತೋಪಿನ ನಡುವೆ ಇತ್ತು. ದೇವಸ್ಥಾನದ ಹಿಂದೆಯೇ ಊರಿನ ಸ್ಮಶಾನ. ಸಂಧ್ಯಾಕಾಲವಾದ ನಂತರ ಹಳ್ಳಿಯವರು ಯಾರೂ ಹೆಚ್ಚಾಗಿ ತೋಪಿನ ಕಡೆ ಹೋಗುತ್ತಿರಲಿಲ್ಲ. ನೋಡುವುದಕ್ಕೆ ತೋಪು ಭಯಂಕರವಾಗಿ ತೋರುತ್ತಿದ್ದಿತು. ತೋಪಿನ ಮರಗಳಲ್ಲಿ ಅಡಗಿದ್ದ ಗೂಬೆಗಳು ಹಗಲು ಹೊತ್ತು ಸಹ, ಕೇಳುವವರಿಗೆ ಗಾಬರಿಯಾಗುವಂತೆ ಕೂಗುತ್ತಿದ್ದವು. ದೇವಾಲಯದ ಬಾಗಿಲಿನ ಬಳಿ, ಬಿಸಲಿನಿಂದ ಬೆಚ್ಚಗಾದ ಕಲ್ಲು ಮೆಟ್ಟಲುಗಳ ಮೇಲೆ, ಸರ್ಪಗಳು ಬಂದು ಸಂಧ್ಯಾಕಾಲಕ್ಕೆ ಮುಂಚಿತವಾಗಿಯೇ ಬೆಚ್ಚಗೆ ವಿಶ್ರಮಿಸಿಕೊಳ್ಳುತ್ತಿದ್ದವು. ಭಕ್ತಾದಿಗಳು ದೇವಾಲಯಕ್ಕೆ ಹಗಲು ಹೊತ್ತು ಮಾತ್ರ ಹೋಗುತ್ತಿದ್ದರು. ಮುದಿ ಅರ್ಚಕನೊಬ್ಬನೇ ಸಂಧ್ಯಾಕಾಲದ ಪೂಜೆಗೆ ಹೋಗಿ ದೇವಿಯ ಪೂಜೆ ಮಾಡಿಕೊಂಡು ಬರುತ್ತಿದ್ದನು. ಆತ ದೇವಾಲಯದಲ್ಲಿ ರಾತ್ರಿಯ ಪೂಜೆಗಾಗಿ ಹೊಡೆದ ಗಂಟೆಯ ಸದ್ದನ್ನು ಕೇಳಿ, ಊರಿನವರು ದೇವಾಲಯದಲ್ಲಿ ಪೂಜೆ ನಡೆಯುತ್ತಿದೆಯೆಂದು ಗುರುತಿಸುತ್ತಿದ್ದರು., ಮುದಿ ಅರ್ಚಕ ಅನೇಕ ದಿನಗಳು, ದೇವಸ್ಥಾನದ ಮೆಟ್ಟಲುಗಳ ಮೇಲೆ ಮಲಗಿರುತ್ತಿದ್ದ ಸರ್ಪಗಳನ್ನು ತನ್ನ ಕೈಯಲ್ಲಿದ್ದ ದೊಣ್ಣೆಯಿಂದ ಆಚೆ ಈಚೆ ತಳ್ಳಿ ಒಳಕ್ಕೆ ಹೋಗುತ್ತಿದ್ದನೆಂದು ಜನ ಹೇಳುತ್ತಿದ್ದರು

ಮುದಿಅರ್ಚಕನ ಮಗ ಕಾಶಿಯಲ್ಲಿದ್ದುಕೊಂಡು ಆಗಮಶಾಸ್ತ್ರ ಮತ್ತು ಸಂಸ್ಕೃತವನ್ನು ಕಲಿಯುತ್ತಿದ್ದನು. ಮುದಿ ಅರ್ಚಕನಿಗೆ ಆ ಬಗೆಯ ಅರ್ಹತೆ ಯಾವುದೂ ಇರಲಿಲ್ಲ. ಅವನು ಹಿಂದಲಿಂದ ಉಂಟಾದ ಅನುಭವದಿಂದ ಸಂಪ್ರದಾಯಮಾರ್ಗದಲ್ಲಿ ಪೂಜೆಮಾಡುತ್ತ ಬಂದವನು. ಆತನ ಹೆಂಡತಿ ತೀರಿಕೊಂಡ ನಂತರ ಅವನು, ಕಾಶಿಯಲ್ಲಿದ್ದ ದೂರದ ಬಂಧುವೊಬ್ಬನ ಬಳಿಗೆ, ತನ್ನ ಮಗನನ್ನು ಕಳುಹಿಸಿದನು. ಆ ಬಂಧು, ಆ ಹುಡುಗನನ್ನು ಆಗಮಶಾಸ್ತ್ರ (ಭಗವತ್ಪೂಜೆಯ ಶಾಸ್ತ್ರ) ಮತ್ತು ಸಂಸ್ಕೃತ ಭಾಷಾ ಅಧ್ಯಯನಗಳಿಗೆ ತೊಡಗಿಸಿದನು. ಪೂರ್ವಸಂಸ್ಕಾರಬಲದಿಂದ, ಹುಡುಗ ತೀಕ್ಷ್ಣಬುದ್ಧಿಯವನೂ ಮೇಧಾವಿಯೂ ಆಗಿದ್ದುದರಿಂದ, ಬಹಳ ಸ್ವಲ್ಪ ಕಾಲದೊಳಗೆ ಆಗಮಶಾಸ್ತ್ರವನ್ನು ಕರತಲಾಮಲಕ ಮಾಡಿಕೊಂಡು, ತರ್ಕ, ವೇದಾಂತ, ಧರ್ಮಶಾಸ್ತ್ರ, ಸಾಹಿತ್ಯ ಇವುಗಳಲ್ಲಿಯೂ ಆಳವಾದ ಜ್ಞಾನವನ್ನು ಸಂಪಾದಿಸಿದನು. ಆತ ತನ್ನ ಇಪ್ಪತ್ತಮೂರನೆಯ ವಯಸ್ಸಿನ ವೇಳೆಗೆ ಒಳ್ಳೆಯ ವಿದ್ವಾಂಸನಾದನು. ಅವನನ್ನು ಯಾವುದಾದರೂ ಸಂಸ್ಕೃತ ವಿಶ್ವವಿದ್ಯಾಲಯದಲ್ಲಿ ಅಧ್ಯಾಪಕನನ್ನಾಗಿಯೋ, ಅಥವಾ ಪಟ್ಟಣಗಳಲ್ಲಿ ಶಿಕ್ಷಕನನ್ನಾಗಿಯೋ ಮಾಡಬೇಕೆಂಬುದು ಅವನ ಪೋಷಕರ ಬಯಕೆಯಾಗಿತ್ತು.

ಆ ವೇಳೆಗೆ ಹಳ್ಳಿಯಲ್ಲಿ ತಮ್ಮ ತಂದೆ, ಮುದಿ ಅರ್ಚಕ ರೋಗದಿಂದ ಹಾಸಿಗೆ ಹಿಡಿದು ಮಲಗಿದ ಸುದ್ದಿ ತಿಳಿದು, ಅವರನ್ನು ನೋಡಿಕೊಂಡು ಹಿಂದಿರುಗಬೇಕೆಂದು ಮಗ ಹಳ್ಳಿಗೆ ಬಂದ. ಮಗ ಬರುವವರೆಗೆ ತಂದೆಯ ಪ್ರಾಣಪಕ್ಷಿ ಹಾರಿಹೋಗಿರಲಿಲ್ಲ. ಮುದಿ ಅರ್ಚಕ, ಬದುಕಿರುವಾಗ ಹೇಗೆಯೋ ಸಾಯುವಾಗಲೂ ಹಾಗೆಯೇ ದೇವರನ್ನು ನಂಬಿ ಮಗನೊಂದಿಗೆ ಕೊನೆಯ ಮಾತುಗಳನ್ನಾಡಿ ಶಾಂತಿಯಿಂದ ಪ್ರಾಣಬಿಟ್ಟನು. ತಂದೆಯ ಅದ್ಭುತವಾದ ಮನಶ್ಶಾಂತಿಯನ್ನು ಕಂಡು ಮಗನಿಗೆ ತುಂಬ ಆಶ್ಚರ್ಯವಾಯಿತು. ಅವಿದ್ಯಾವಂತನಾದ, ಏನನ್ನೂ ಅರಿಯದ ಮುದುಕ, ಬಾಳನ್ನು ದೇವರಪೂಜೆಯಲ್ಲಿ ಸವೆಸಿ ಕೊನೆಗೆ ಆಟವಾಡುತ್ತಲೊ ! ಎಂಬಂ

ಸರಾಗವಾಗಿ ಹಳೆಯ ಬಟ್ಟೆಯನ್ನು ಒಗೆಯುವಂತೆ ದೇಹವನ್ನು ಒಗೆದು ಹೋಗಿಬಿಟ್ಟಿದ್ದನು. ಅನೇಕ ಶಾಸ್ತ್ರಗಳ ಪಾಂಡಿತ್ಯದಿಂದ, ಚುರುಕಾಗಿದ್ದರೂ ಕದಡಿಹೋದ ಬುದ್ಧಿಯುಳ್ಳ ಮಗನಿಗೆ, ತಂದೆಯ ಜೀವ ಸಾವು ಎರಡೂ ಅಸ್ವಾದ್ಯಕವಾಗಿ ಆಕರ್ಷ-ಣೀಯವಾಗಿ ತೋರಿ, "ಮನುಷ್ಯ ಹೀಗೆ ಬಾಳಬೇಕು, ಹೀಗೆ ಸಾಯಬೇಕು" ಎನಿಸಿತು.

ಕೇಶವ (ಮಗ) ತಂದೆಯ ಉತ್ತರಕ್ರಿಯಾದಿಗಳನ್ನು ನಡಸಿದ ನಂತರ ಮತ್ತೆ ಕಾಶಿಗೇ ಹೊರಡಬೇಕೆಂದು ತೀರ್ಮಾನಿಸಿದ್ದನು. ಆದರೆ ಹಳ್ಳಿಯವರೆಲ್ಲ ಬಂದು "ಇದು ಬಹು ಪುರಾತನ ಕಾಲದಿಂದ ನಡೆದುಬಂದಿರುವ ದೇವಾಲಯ. ವಂಶಪಾರಂಪರ್ಯವಾಗಿ ತಂದೆಯಿಂದ ಮಗ, ಮಗನಿಂದ ಮೊಮ್ಮಗ ಹೀಗೆ ಇದರ ಅರ್ಚಕರಾಗಿದ್ದಾರೆ. ಅಲ್ಲದೆ ಕುಮಾರಿ ದೇವಾಲಯ ಈ ಊರಿನ ಉಸಿರು. ಈ ದೇವರನ್ನು ಪ್ರಾರ್ಥಿಸದೆ, ಈ ದೇವರಿಗೆ ಹರಕೆ ಹೊರದೆ ನಾವು ಯಾವ ಕಾರ್ಯವನ್ನೂ ಮಾಡುವುದೇ ಇಲ್ಲ. ದೇವಾಲಯದಲ್ಲಿ ಪೂಜೆ ನಿಂತರೆ ಈ ಹಳ್ಳಿಯೂ ಇದರ ಸುತ್ತುಮುತ್ತಲಿನ ಹಳ್ಳಿಗಳೂ ನಾಶವಾಗುವುವೆಂದು ನಮ್ಮ ಹಿರಿಯರು ಹೇಳುತ್ತಿದ್ದರು. ಆದುದರಿಂದ ನೀವು ಇಲ್ಲಿಯೇ ಪೂಜೆ ಮಾಡುತ್ತ ನಿಲ್ಲಬೇಕು" ಎಂದು ಹೇಳಿಕೊಂಡರು. ಕೇಶವನು "ಎಲ್ಲ ಶಾಸ್ತ್ರಗಳಲ್ಲಿಯೂ ನಿಷ್ಣಾತನಾದ ನಾನು ಈ ಕುಗ್ರಾಮದಲ್ಲಿ ಕುಳಿತು ಮಾಡುವುದೇನು" ಎಂದು ಚಿಂತಿಸಿ ಕೊನೆಗೆ, ಹಳ್ಳಿಯನ್ನು ಬಿಟ್ಟುಹೋಗಬೇಕೆಂದೇ ನಿರ್ಣಯಿಸಿ, ಒಂದು ಸಲ ಕುಮಾರಿದೇವಿಯನ್ನು ನೋಡಿಬರೋಣ ಎಂದು ದೇವಾಲಯಕ್ಕೆ ಹೋದನು.

ಕೇಶವ, ನದಿಯಲ್ಲಿ ಸ್ನಾನಮಾಡಿ ದೇವರ ಧ್ಯಾನಾದಿ ತನ್ನ ಪದ್ಧತಿಗನುಸಾರವಾದ ನಿತ್ಯ ಕರ್ಮ-ಗಳನ್ನು ಮುಗಿಸಿ ಕುಮಾರಿದೇವಾಲಯಕ್ಕೆ ಹೋದನು. ಮುದಿ ಅರ್ಚಕ ಕಾಹಿಲೆ ಬಿದ್ದಿದ್ದ ಕೆಲವು ದಿನಗಳು ಮತ್ತು ಈಚೆಗೆ ಹತ್ತು ಹದಿನೈದು ದಿನಗಳಿಂದ ದೇವಸ್ಥಾನದಲ್ಲಿ ಪೂಜೆಯಿಲ್ಲದೆ ದೇವಾಲಯದ ಹೊರ ಪ್ರಾಕಾರ ಬಿಕೋ ಎನ್ನುತ್ತಿತ್ತು. ತೋಟದ ಮರಗಳ ಎಲೆಗಳು ಪ್ರಾಕಾರದಲ್ಲೆಲ್ಲ ಉದುರಿದ್ದುವು. ಕೇಶವ ದೇವಾಲಯದ ಬಾಗಿಲಿನ ಬೀಗವನ್ನು ತೆರೆದನು. ಬಾಗಿಲನ್ನು ಹಿಂದಕ್ಕೆ ತಳ್ಳಿದ ಕೂಡಲೇ ಒಳಗಿನಿಂದ ನೂರಾರು ಕಪಟ (ಬಾವುಲಿ) ಪಕ್ಷಿಗಳು ಸೈನ್ಯದಂತೆ ಅವನ ಕಡೆ ನುಗ್ಗಿ ಅವನನ್ನು ದಾಟಿ ಹೊರಬಂದವು. ಕೇಶವ ನಿಧಾನವಾಗಿ ದೇವಾಲಯವನ್ನು ಪ್ರವೇಶಿಸಿ ದೇವಿಯ ಎದುರಿಗೆ ಹೋಗಿನಿಂತನು.

ಅನೇಕ ಶಾಸ್ತ್ರಗಳ ಅಧ್ಯಯನದಿಂದ ಕೇಶವನ ಹೃದಯಕ್ಕಿಂತ ಬುದ್ಧಿ ಹೆಚ್ಚಾಗಿ ಬೆಳೆದಿತ್ತು. ಅವನ ಆ ವಯಸ್ಸಿಗೇ ಅವನು ಅನೇಕ ದೇವತಾವಿಗ್ರಹಗಳನ್ನು ನೋಡಿದ್ದನು. ಆದರೆ ನೋಡುವಾಗಲೆಲ್ಲ ಅವನು "ಇದೊಂದು ಸಂಕೇತ. ನಿಜವಾದ ನಿರ್ಗುಣ ಬ್ರಹ್ಮ ನಿರಾಕಾರ. ಈ ವಿಗ್ರಹದಲ್ಲಿ ನನ್ನ ಮನಸ್ಸನ್ನು ತೊಡಗಿಸಬಾರದು" ಎಂದು ನಿರ್ಣಯಿಸಿಕೊಳ್ಳುತ್ತಿದ್ದನು. ಈಗಲೂ ಅವನು ಅದೇ ಭಾವದಿಂದಲೇ ಕುಮಾರಿಯನ್ನು ನೋಡಿದನು. ಕುಮಾರಿಯು ಆತನನ್ನೇ ದೃಷ್ಟಿಸಿ ನೋಡುತ್ತಿದ್ದಳು. ಅವನ ಮೇಲೆ ಇಟ್ಟ ಕಣ್ಣನ್ನು ಕುಮಾರಿ ತೆಗೆಯಲೇ ಇಲ್ಲ! ಆ ಕಣ್ಣಿನ ತೀಕ್ಷ್ಣ ಆಕರ್ಷಣೆಯಲ್ಲಿ ಸಿಕ್ಕಿಕೊಂಡ ಕೇಶವ, ಅಯಸ್ಕಾಂತದಲ್ಲಿ ಸಿಕ್ಕಿದ ಲೋಹದಂತೆ ನಿಶ್ಚಲನಾಗಿ ನಿಂತನು. ಅವನು ಕಲಿತ ತರ್ಕದ ವಿತಂಡವಾದಗಳೆಲ್ಲ ಅವನಿಗೆ ಮರೆತುಹೋಗಿ ಎದುರಿಗಿದ್ದ ತಾಯಿಯ ಕೃಪೆಗಾಗಿ ಅವನು ಹಾತೊರೆದನು. "ತಾನು ಕುಮಾರಿಯನ್ನು ಅಂದೇ ನೋಡುತ್ತಿರುವುದು" ಎಂಬುದು ಅವನಿಗೆ ಮರೆತು ಜಗತ್ತು ಹುಟ್ಟಿದಂದಿನಿಂದ ಯುಗಯುಗಾಂತರದಿಂದ ತಾನು ಕುಮಾರಿಯನ್ನು ಪೂಜೆ ಮಾಡುತ್ತಿರುವೆನೆಂದು ಅವನಿಗೆ ತೋರಿತು. ಈ ಜಗತ್ತಿನಲ್ಲಿ ಇರುವುದು ಎರಡೇ, ತಾನು, ಕುಮಾರಿ. ಮತ್ತಾರೂ ಯಾವಾಗಲೂ ಇರಲಿಲ್ಲ ಎಂದೇ ಅವನಿಗೆ ಭಾಸವಾಯಿತು. ಕೇಶವನಿಗೆ ಕುಮಾರಿಯ ಕಣ್ಣುಗಳಲ್ಲಿ ಆಜ್ಞೆ, ಕೃಪೆ ಎರಡೂ ತೋರಿತು. ಆಜ್ಞೆಯನ್ನು ಮೀರಲು ಧೈರ್ಯ ಬರಲಿಲ್ಲ. ಕೃಪೆಯ ಹೊರಗೆ ನಿಲ್ಲಲು ಚೈತನ್ಯವುಂಟಾಗಲಿಲ್ಲ. ಕೇಶವ, ಹೊಳೆಯಿಂದ ಬರುವಾಗ ಚೊಂಬಿನಲ್ಲಿ ಹಿಡಿದುಕೊಂಡು ಬಂದಿದ್ದ ನೀರಿನೊಂದಿಗೆ ದೇವಾಲಯವನ್ನು ಪ್ರವೇಶಿಸಿದ್ದನು. ಅವನ ಇಚ್ಛೆಯೇ ಇಲ್ಲದೆ ಕಾಲುಗಳು ಅವನನ್ನು ಗರ್ಭಗುಡಿಯ ಒಳಕ್ಕೆ ಎಳೆದುವು. ಅವನು ಗರ್ಭಗುಡಿಯನ್ನು ಪ್ರವೇಶಿಸಿ ದೇವರ ದೀಪವನ್ನು ಹೊತ್ತಿಸಿದನು. ಚೊಂಬಿನ ನೀರಿನಿಂದ ಅಭಿಷೇಕ ಮಾಡಿದನು. ಅರಿಷಿಣ ಕುಂಕುಮಗಳನ್ನು ತೆಗೆದು ದೇವಿಯನ್ನು ಪೂಜಿಸಿದನು. ದೇವರ ಕಾರ್ಯಗಳನ್ನೆಲ್ಲ ತಾನು ಕಲಿತಿದ್ದ ಆಗಮಶಾಸ್ತ್ರದ ಅನುಸಾರವಾಗಿಯೇ ಮಾಡಿದನು. ಮಂಗಳಾರತಿ ಮಾಡಿ ಗಂಟೆಯನ್ನು ಬಾರಿಸಿ ತಾನು ಕಲಿತಿದ್ದ ಎಲ್ಲ ಸ್ತೋತ್ರ ಅಂಜಲಿಗಳನ್ನೂ ಕುಮಾರಿಗೆ ಅರ್ಪಿಸುತ್ತ ದೇವಿಯ ಮುಂದೆಯೇ ಕುಳಿತನು. ಕುಮಾರಿಯಂತಹ ಸುಂದರವಾದ ವಿಗ್ರಹವನ್ನು ಅವನು ಅದುವರೆಗೆ ಎಲ್ಲಿಯೂ ನೋಡಿರಲಿಲ್ಲ. ಎಲ್ಲಕ್ಕಿಂತ ಹೆಚ್ಚಾಗಿ ಅವನನ್ನು ಆಕರ್ಷಿಸಿದುದು ದೇವಿಯ ಆ ಅಮರ ಸೌಂದರ್ಯವೇ. ಆದರೆ ಆ ಗಳಿಗೆಯಲ್ಲಿ ಅದು ಅವನಿಗೆ ಗೊತ್ತಾಗಲಿಲ್ಲ.

ಕೇಶವ ದೇವಾಲಯದಲ್ಲಿ ಹೊಡೆದ ಗಂಟೆಯ ಸದ್ದು ಕೇಳಿದ ಕೂಡಲೆ ಹಳ್ಳಿಯ ಜನರಿಗೆ ಒಂದು ಬಗೆಯ ಹಿತವಾದ ಆಶ್ಚರ್ಯವುಂಟಾಯಿತು. "ಊರು

ಬಿಟ್ಟು ಹೋಗುವುದಕ್ಕೆ ಮುಂಚೆ ಕೊನೆಯ ಬಾರಿಗೆ ತನ್ನ ಮನೆದೇವರನ್ನು ಪೂಜಾರಿ ಪೂಜಿಸುತ್ತಿದ್ದಾನೆ." ಎಂದುಕೊಂಡು ಅವರೆಲ್ಲ ಹಣ್ಣು-ಕಾಯಿ-ಹಾಲು ತೆಗೆದುಕೊಂಡು ದೇವಸ್ಥಾನಕ್ಕೆ ಬಂದರು. ಅವರು ಬಂದುದು ಕೇಶವನ ಲಕ್ಷ್ಯಕ್ಕೆ ಬರಲಿಲ್ಲ. ಅವನು ಕಣ್ಣು ಮುಚ್ಚಿಕೊಂಡು ಏಕಾಗ್ರನಾಗಿ ಭಗವತಿ ಸ್ತೋತ್ರಗಳನ್ನು ಹೇಳುತ್ತ ಕುಳಿತಿದ್ದನು. ದೇವಿಯ ಸ್ತೋತ್ರವನ್ನು ಮಾಡುವಾಗ ಆನಂದಾತಿಶಯದಿಂದಲೂ ಭಕ್ತಿಯ ಆಧಿಕ್ಯದಿಂದಲೂ ಅವನ ಕಣ್ಣುಗಳಿಂದ ಧಾರಾಕಾರವಾಗಿ ನೀರು ಹರಿಯುತ್ತಿದ್ದಿತು. ಆತನ ಸ್ತೋತ್ರ ಮುಗಿಯುವ ವರೆಗೆ ಗ್ರಾಮಸ್ಥರು ಮೌನವಾಗಿಯೇ ಕುಳಿತಿದ್ದರು. ಅನಂತರ ಕೇಶವ ಎದ್ದು ಎಲ್ಲರ ಹಣ್ಣುಕಾಯಿಗಳನ್ನು ದೇವರಿಗೆ ನಿವೇದಿಸಿ, ಭಕ್ತರಿಗೆಲ್ಲ ತೀರ್ಥಪ್ರಸಾದವನ್ನು ಕೊಟ್ಟು ಕಳುಹಿಸಿದನು.

ಮಾರನೆಯ ದಿನ ಕಾಶಿಗೆ ಹೊರಟುಹೋಗುವನೆಂದು ಹೆದರಿದ್ದ ಗ್ರಾಮಸ್ಥರಿಗೆ, ಕೇಶವ ಹೊರಡದುದನ್ನು ಕಂಡು ಸಮಾಧಾನವಾಯಿತು. ಕೇಶವ ಅಂದಿನಿಂದ ತನ್ನ ಕಾಲದ ಬಹುಭಾಗವನ್ನು ಕುಮಾರಿ ದೇವಾಲಯದಲ್ಲಿಯೇ ಕಳೆಯತೊಡಗಿದನು. ದೇವಾಲಯಕ್ಕೆ ಬರುವ ಎಲ್ಲ ಭಕ್ತರಿಗಿಂತಲೂ ಅವನು ಹೆಚ್ಚು ಭಕ್ತನಾಗಿದ್ದನು. "ಗುರುವಿನಲ್ಲಿ ಗುಣವಿದ್ದರೆ ತೀರ್ಥ ರುಚಿ" ಎಂಬ ನುಡಿಯಂತೆ ಪೂಜಾರಿಯ ಭಕ್ತಿಯನ್ನು ನೋಡಿ ಭಕ್ತರು ಹೆಚ್ಚು ಭಕ್ತರಾಗುತ್ತಿದ್ದರು. ಬ್ರಹ್ಮಚಾರಿಯಾಗಿ ಒಂಟಿಯಾಗಿ ಬಾಳುತ್ತಿದ್ದ ಕೇಶವನಿಗೆ ಕುಮಾರಿಯ ವಿಗ್ರಹವನ್ನು ಎಷ್ಟು ನೋಡಿದರೂ ತೃಪ್ತಿಯೇ ಆಗುತ್ತಿರಲಿಲ್ಲ. ಅವನು ಗಂಟೆಗಟ್ಟಲೆ ವಿಗ್ರಹದ ಮುಂದೆಯೇ ಕುಳಿತಿರುತ್ತಿದ್ದನು. ದೇವಾಲಯವನ್ನು ಇಣಕಿ ನೋಡುವವರಿಗೆ ಅವನು ಭಕ್ತಿಯ ಆಧಿಕ್ಯದಿಂದ ಹಾಗೆ ಕುಳಿತಿರುವುದು ಕಾಣುತ್ತಿದ್ದಿತು. ಆದರೆ ಕೇಶವನಿಗೆ ಗೊತ್ತು, ತಾನು ಭಕ್ತಿಯ ಆಧಿಕ್ಯದಿಂದ ಹಾಗೆ ಕುಳಿತಿಲ್ಲವೆಂದು; ಸರ್ವವಿಧದಲ್ಲಿಯೂ ಪರಿಪೂರ್ಣವಾದ ಆ ಅತ್ಯಂತ ಮನೋಹರವಾದ ವಿಗ್ರಹದ ನಿರ್ದುಷ್ಟವಾದ ಸೌಂದರ್ಯದ ಉಪಾಸನೆಯಲ್ಲಿ ತಾನು ಕುಳಿತಿರುವೆನೆಂದು. ತಾನು ವಾಸ್ತವವಾಗಿ ಮಾಡುತ್ತಿರುವುದಕ್ಕೂ ತಾನು ಏನನ್ನು ಮಾಡುತ್ತಿರುವೆನೆಂದು ಜನರು ಭಾವಿಸಿರುವರೋ ಅದಕ್ಕೂ ಮೂಲದಲ್ಲಿಯೇ ಸ್ವಲ್ಪ ವ್ಯತ್ಯಾಸವಿದೆಯೆಂಬುದೂ ಅವನಿಗೆ ಗೊತ್ತಿತ್ತು.



ಕೇಶವ, ಪ್ರತಿಸಂಜೆಯೂ ದೇವಾಲಯದಲ್ಲಿ ಯಾವುದಾದರೂ ಪುರಾಣದ ಪ್ರವಚನೆಯನ್ನು ಇಟ್ಟುಕೊಂಡಿದ್ದನು. ಗೀತಗೋವಿಂದ, ಕೃಷ್ಣಕರ್ಣಾಮೃತ, ದೇವಿಭಾಗವತ, ಶಂಕರಾಚಾರ್ಯರ ಪಾರ್ವತೀ ಸ್ತೋತ್ರಗಳು, ರಾಮಾಯಣ, ಭಾರತ, ಭಾಗವತ ಹೀಗೆ ಪುರಾಣಗಳ ಅಮೃತವರ್ಷ ದೇವಾಲಯದಲ್ಲಿ ಸದಾ ಕರೆಯುತ್ತಿದ್ದಿತು. ದೇವಸ್ಥಾನದ ಮಹಿಮೆ ಆ ಹಳ್ಳಿಯಲ್ಲಿ ಮಾತ್ರವೇ ಅಲ್ಲದೆ ಸುತ್ತಲ ಹಳ್ಳಿಗಳಿಗೂ ಹರಡಿತು. ಸುತ್ತಲೂ ಹಳ್ಳಿಯವರೂ ಪುರಾಣಶ್ರವಣಕ್ಕಾಗಿ ದೇವಾಲಯಕ್ಕೆ ಬರತೊಡಗಿದರು. ಯುವಕನಾದ ಕೇಶವನ ಅದ್ಭುತ ಪಾಂಡಿತ್ಯ, ಅವನ ಏಕಾಗ್ರತೆ, ಅಚ್ಚುಕಟ್ಟಾದ ಆರೋಗ್ಯ, ದೃಢಕಾಯವಾಗಿ ಕಂಚಿನಂತಿದ್ದ ಅವನ ಮೈಕಟ್ಟು, ಪುರಾಣವನ್ನು ಹೇಳುವಾಗ ಅವನು ಇಹಲೋಕವನ್ನೇ ಮರೆತಂತೆ ತಾನು ಆ ಪೌರಾಣಿಕ ವ್ಯಕ್ತಿಗಳನ್ನು ಅನುಸರಿಸುತ್ತಿರುವ ಒಂದು ಅಲೌಕಿಕ ಭಾವನಾಪರವಶತೆ, ಇವು ಕಥೆಗಳ ಸ್ವಾರಸ್ಯವನ್ನು ಇಮ್ಮಡಿ ಮಾಡುತ್ತಿದ್ದುವು.

ಕೇಶವ ಹಳ್ಳಿಗೆ ಬಂದು ನೆಲಸಿದಾಗ ಅವನಿಗೆ ವಯಸ್ಸು ಇಪ್ಪತ್ತಮೂರು. ಅಂದಿನಿಂದ ಇಂದಿಗೆ ನಾಲ್ಕು ವರುಷ ಕಳೆದಿತ್ತು. ಈ ಅವಧಿಯಲ್ಲಿ ದೇವಸ್ಥಾನದ ಕಟ್ಟಡ ಮೊದಲಿಗಿಂತ ಇಮ್ಮಡಿಯಾಗಿ ಬೆಳೆದಿತ್ತು. ನೆಲಕ್ಕೆಲ್ಲ ಅಮೃತಶಿಲೆ, ಗೋಡೆಗಳಿಗೆ ಸುಣ್ಣ ಬಣ್ಣ, ಗೋಪುರಕ್ಕೆ ಚಿನ್ನದ ಮುಲಾಮಿನ ಕಲಶ, ದೇವಾಲಯದ ಮುಂದಲ ಗರುಡಗಂಬಕ್ಕೆ ಬೆಳ್ಳಿಯ ತಗಡು ; ಇನ್ನು ಕುಮಾರಿದೇವಿಗೆ ಭಕ್ತರು ಅರ್ಪಿಸಿದ ಕಾಣಿಕೆಗೆ ಕೊನೆಯೇ ಇರಲಿಲ್ಲ. ಕುಮಾರಿಗೆ ವಜ್ರಕಿರೀಟ, ಕಂಠಕ್ಕೆ ಮುತ್ತಿನಹಾರ, ನಡುವಿಗೆ ಕೆಂಪುಗಳುಮೆಟ್ಟಿದ ವಡ್ಯಾಣ, ಕೆಂಪು ಒಳಗೆ ತುಂಬಿದ ನೂಪುರ, ಪುಷ್ಯರಾಗವನ್ನು ಮೆತ್ತಿದ ಹೆಜ್ಜೆಯ ಪಿಲ್ಲಿ, ಕಿವಿಗೆ ವಜ್ರದಓಲೆಗಳು, ಕೈಬೆರಳುಗಳಿಗೆ ವಜ್ರದುಂಗುರಗಳು. ಇನ್ನು ಚಿನ್ನದ ಒಡವೆಗಳಿಗಂತೂ ಲೆಕ್ಕವೇ ಇರಲಿಲ್ಲ. ಕೇಶವ ದಿನದ ಬಹುಭಾಗವನ್ನು ಕುಮಾರಿಯ ಅಲಂಕಾರದಲ್ಲಿ ಕಳೆಯುತ್ತಿದ್ದನು. ಆ ಎಲ್ಲ ಒಡವೆಗಳೂ ಕೇಶವ ಅಲ್ಲಿ ಬಂದನಂತರ ಭಕ್ತರಿಂದಲೇ ದೊರೆತುವು. ಕೇಶವನ ತಂದೆ ಹಳೆಯ ಅರ್ಚಕ ಇದ್ದಾಗ, ಕುಮಾರಿ ಮೈಮೇಲೆ ಒಂದು ಕಾಸಿನ ಒಡವೆಯೂ ಇರಲಿಲ್ಲ. ಈಚೆಗೆ ಒಡವೆಗಳ ಸಂಖ್ಯೆ ಎಷ್ಟು ಬೆಳೆದಿದ್ದಿತೆಂದರೆ ಎಲ್ಲ ಒಡವೆಗಳನ್ನೂ ಒಂದೇ ಸಲ ಕುಮಾರಿಗೆ ಇಟ್ಟು ಅಲಂಕರಿಸಲು ಸಾಧ್ಯವಾಗುತ್ತಿರಲಿಲ್ಲ.

ಕೇಶವ ಏಕಾದಶಿಯಂದು ಉಪವಾಸಮಾಡುತ್ತಿದ್ದನು. ಆ ದಿನವನ್ನು ಅವನು ಪೂರ್ಣವಾಗಿ ದೇವಿಯ ಆರಾಧನೆಗೇ ಮೀಸಲಾಗಿಟ್ಟಿದ್ದನು. ಬೆಳಿಗ್ಗೆ ಎದ್ದು ನದಿಯಲ್ಲಿ ಸ್ನಾನ ಮಾಡಿ ತನ್ನ ನಿತ್ಯ ಕರ್ಮಗಳು ಜಪಗಳನ್ನು ಮುಗಿಸಿಕೊಂಡು ದೇವಸ್ಥಾನಕ್ಕೆ ಬಂದು, ಅದರ ಪ್ರಾಕಾರದಲ್ಲಿದ್ದ ಹೂವುಗಳನ್ನು ದೇವಿಗಾಗಿ ಕುಯ್ದುಕೊಳ್ಳುತ್ತಿದ್ದನು. ಅವುಗಳನ್ನು ತಾನೇ ನಿಧಾನವಾಗಿ ಹಾರವಾಗಿ ಕಟ್ಟುವುದು, ಅನಂತರ ಕುಮಾರಿಗೆ ಪಾಮಾಲೆ ( ಸ್ತೋತ್ರ ಭಕ್ತಿಗೀತೆಗಳ ಹಾಡು )ಗಳೊಂದಿಗೆ ಆ ಪೂಮಾಲೆಯನ್ನು ಅರ್ಪಿಸುವುದು, ಒಡವೆಗಳನ್ನೆಲ್ಲ ಅಲಂಕರಿಸುವುದು, ಮತ್ತೆ ಒಡವೆಗಳನ್ನು ತೆಗೆದಿಟ್ಟು ಹೊಸ ಒಡವೆಗಳನ್ನು ಅಲಂಕರಿಸುವದು ಹೀಗೆ ವಿವಿಧ ರೀತಿಯ ಅಲಂಕಾರಗಳೊಂದಿಗೆ ಕುಮಾರಿಯ ಸೌಂದರ್ಯವನ್ನು ಪದೇಪದೇ ಈಕ್ಷಿಸಿ ಆನಂದಿಸುವುದು; ಆ ವೇಳೆಗೆ ಸಂಧ್ಯಾಕಾಲದ ಪುರಾಣ ಪಠನದ ಸಮಯ ಒದಗುತ್ತಿತ್ತು. ಕೇಶವ ಯಾವಾಗಲೂ ಪುರಾಣವನ್ನು ಅತ್ಯಂತ ಆಕರ್ಷಣೀಯವಾಗಿ ಹೇಳುತ್ತಿದ್ದನು. ಅದರಲ್ಲಿಯೂ ಏಕಾದಶಿ ದಿವಸ, ಅವನ ನಿರಶನವ್ರತದಿಂದಲೂ ಭಕ್ತಿಯ ಆಧಿಕ್ಯದಿಂದಲೂ ಎಂದಿಗಿಂತಲೂ ಹೆಚ್ಚು ಭಾವಾವಿಷ್ಟನಾಗಿ ಕಥಾಭಾಗವನ್ನು ಅತಿ ರಮಣೀಯವೂ ಮಧುರವೂ ಆಗಿಮಾಡುತ್ತಿದ್ದನು.

ಒಂದು ಏಕಾದಶಿಯ ದಿವಸ ಕೇಶವ ದೇವಿಗೆ ಮೋಹಿನಿಯ ಅಲಂಕಾರವನ್ನು ಮಾಡಿ ಪುರಾಣ ಪಠನಕ್ಕೆ ದೇವಿಯ ಮುಂದೆ ಕುಳಿತನು. ಕುಮಾರಿಯನ್ನು ಅಲಂಕರಿಸುವುದರಲ್ಲಿ ಅವನು ಹೆಸರಾಂತ ಕಲೆಗಾರನಾಗಿದ್ದರೂ ಅಂದು ತಾನು ಮಾಡಿದ ಅಲಂಕಾರವನ್ನು ಕಂಡು ಅವನೇ ಆನಂದದಿಂದ ದಿಗ್ಭ್ರಾಂತನಾಗಿದ್ದನು. ಅವನ ಕೈಗಳು ಅವನ ಇಚ್ಛೆಯೇ ಇಲ್ಲದೆ ಯಾವುದೋ ಒಂದು ಅಮರ ಲೋಕದ ಅಲೌಕಿಕ ಶಕ್ತಿಯಿಂದ ದೇವಿಯನ್ನು ಅಲಂಕರಿಸತೊಡಗಿದ್ದುವು. ಅಲಂಕಾರ ಮಾಡುವಾಗ ಅವನು ಪೂರ್ಣವಾಗಿ ಪರವಶನಾಗಿದ್ದನು. ಯಾವಾಗ ಅಲಂಕಾರವನ್ನು ಪ್ರಾರಂಭಿಸಿದೆ; ಯಾವ ಯಾವ ಭಾಗಕ್ಕೆ ಯಾವ ಯಾವ ಒಡವೆ ವಸ್ತ್ರ ಇಡಬೇಕು, ಇಟ್ಟೆ ಎಂಬುದೊಂದೂ ಅವನಿಗೆ ಲಕ್ಷ್ಯವಿರಲಿಲ್ಲ. ಅವನ ಕೈಗಳು ತಾವೇ ಸ್ವಯಂಪ್ರೇರಿತಗಳಾಗಿ ತೆಗೆದುಕೊಳ್ಳಬೇಕಾದ ವಸ್ತುಗಳನ್ನು ತೆಗೆದುಕೊಂಡು ಅಲಂಕಾರ ಮಾಡಿದುವು. ಕೇಶವ ತಾನೇ ಕೇವಲ ಪ್ರೇಕ್ಷಕನಂತೆ ತನ್ನ ಕೈಗಳು ಮಾಡಿದ ಕಾರ್ಯವನ್ನು ಅನಾಸಕ್ತಿಯಿಂದ ನೋಡುತ್ತಿದ್ದನು. ಅಲಂಕಾರವೆಲ್ಲ ಮುಗಿದ ಮೇಲೆ ಕೇಶವ ನೋಡುತ್ತಾನೆ! ಅಂದಿನಂತೆ ಎಂದೂ ದೇವಿ, ಸೌಂದರ್ಯದ ಅಧಿದೇವತೆಯಾಗಿ ಕಂಡಿರಲಿಲ್ಲ. ದೇವಿ ಭೂಲೋಕದ ಸಂಪರ್ಕವೇ ಇಲ್ಲದೆ ಸರ್ವಾಲಂಕಾರಭೂಷಿತಳಾಗಿ ಅಮರಲೋಕದ ಮಂಗಳಂಗಳದಿಂದ ಇಳಿದು ಅಲ್ಲಿ ಬಂದು ಕುಳಿತಂತೆ ತೋರಿತು ಕೇಶವನಿಗೆ. ಅವನಿಗೂ ಒಂದು ಹೊಸ

ಬಗೆಯ ಸ್ಫೂರ್ತಿಯುಂಟಾಗಿ ಪುರಾಣಪಠನಕ್ಕೆ ಸಿದ್ಧನಾಗಿ ಕುಳಿತನು.

ಅಂದು ವಿಶೇಷ ಪುಣ್ಯಕರವಾದ ಏಕಾದಶಿ ದಿನವಾದುದರಿಂದ ಪುರಾಣ ಶ್ರೋತೃಗಳ ಸಂಖ್ಯೆ ನಿತ್ಯಕ್ಕಿಂತಹೆಚ್ಚಾಗಿತ್ತು. ಕೇಶವನೊಬ್ಬನೇ ಅಂದು ದೇವಿಯ ಅಲೌಕಿಕ ಅಸದೃಶ ರೂಪವನ್ನು ನೋಡಿದನೆಂದಲ್ಲ. ಶ್ರೋತೃಗಳೆಲ್ಲರಿಗೂ ಸಹ ಅದು ಅನುಭವವಾಯಿತು. ಕುಮಾರಿ, ತಾವು ನಿತ್ಯ ನೋಡುತ್ತಿದ್ದ ದೇವತೆಯಾದರೂ ಅಂದು ಅವಳು ಭಕ್ತರಿಗೆ ಒಂದು ಅಲೌಕಿಕ ಜ್ಯೋತಿಯೊಡನೆ ಹೊಳೆದಳು. "ನಾವು ನಿತ್ಯ ನೋಡುತ್ತಿದ್ದುದು ಬರಿಯ ಕುಮಾರಿಯ ವಿಗ್ರಹ; ಇಂದು ನೋಡುತ್ತಿರುವುದು ಸಾಕ್ಷಾತ್ ಕುಮಾರಿ ದೇವಿ. ಈ ದಿನ ಈಕೆಗೆ ದೇವಲೋಕ ಋಷಿಯಿಂದ ಪ್ರಾಣಪ್ರತಿಷ್ಠೆಯಾಗಿದೆ" ಎಂದುಕೊಂಡು ಭಕ್ತರೆಲ್ಲ ತಪ್ಪುಕಾಣಿಕೆ ಕೊಡಲು ತಮ್ಮ ಕಪಾಲಗಳಿಗೆ ತಾವೇ ಹೊಡೆದುಕೊಳ್ಳುತ್ತ ಪದೇ ಪದೇ ನಮಸ್ಕಾರ ಮಾಡುತ್ತಿದ್ದರು. ಅವರಿಗೆ ಅಂದು ಕೇಶವ ಸಹ ನಿತ್ಯದ ಕೇಶವನಾಗಿ ತೋರಲಿಲ್ಲ. ಅವನೂ ಸಹ ನಿಜವಾಗಿ ಭಕ್ತಿಮೂರ್ತಿಯಾಗಿ ತೋರಿದನು. ಎಲ್ಲವು ಗಳಿಗೂ ಕಳಸವಿಟ್ಟಂತೆ ಅಂದು ಪುರಾಣ ಸಹ ನಿತ್ಯಕ್ಕಿಂತ ಹೆಚ್ಚು ಕಳೆಗಟ್ಟಿ ರಸವತ್ತಾಯಿತು.

ಪುರಾಣಪಠಣ ಮುಂದುವರಿದಂತೆ ಕೇಶವನ ಏಕಾಗ್ರತೆ ಹೆಚ್ಚುತ್ತಾ ಹೋಯಿತು. ಒಂದೇ ಗಳಿಗೆಯಲ್ಲಿ ಕೇಶವ ಪೂರ್ಣನಾಗಿ ಅಲೌಕಿಕನಾಗಿ ತೋರಿದನು. ಆಗ ಕೇಶವ ಕುಮಾರಿಯ ನಾನಾ ಅಲಂಕಾರಗಳನ್ನು ವರ್ಣಿಸತೊಡಗಿದ್ದನು. ಆ ವೇಳೆಗೆ ಮುಕ್ತಾ ಅಲ್ಲಿ ಬಂದು ಶ್ರೋತೃಗಳ ಮಧ್ಯೆ ಕುಳಿತಳು. ಮುಕ್ತಾ ಸುಂದರಳಾದ ಹದಿನಾರು ಹದಿನೇಳು ವರುಷಗಳ ಮೋಹನಾಂಗಿ. ಆಕೆಯನ್ನು ಕೇಶವ ಮದುವೆಯಾಗಬೇಕೆಂಬುದು ಮುಕ್ತಾಳ ತಂದೆಯ ಇಚ್ಛೆಯಾಗಿತ್ತು. ಕೇಶವನ ತಂದೆ ಜೀವಿಸಿರುವಾಗಲೇ ಇಬ್ಬರು ಹಿರಿಯರಲ್ಲಿಯೂ ಆ ವಿಚಾರವಾಗಿ ಒಪ್ಪಂದವಾಗಿತ್ತು. ಸಾಯುವುದಕ್ಕೆ ಮುಂಚಿತವಾಗಿ ಕೇಶವನ ತಂದೆ ಮಗನಿಗೆ ಆ ವಿಚಾರವಾಗಿ ಹೇಳಿದ್ದರು. ಆಗ ಮುಕ್ತಾ ಮಂಡಿಯ ವರೆಗೆ ಲಂಗ ಹಾಕಿಕೊಂಡು ಓಡಾಡುತ್ತಿದ್ದ ಸಣ್ಣ ಹುಡುಗಿ. ಅಂದು ಮದುವೆಯ ವಿಷಯದಲ್ಲಿ ಕೇಶವ ಅಷ್ಟಾಗಿ ಶ್ರದ್ಧೆಯಿಟ್ಟು ಯೋಚಿಸಿರಲಿಲ್ಲ. ಅಲ್ಲದೆ ತಾನು ಹಳ್ಳಿಯಲ್ಲಿ ಇರುವುದಿಲ್ಲವೆಂದೂ ಮತ್ತೆ ಕಾಶಿಗೇ ಹೋಗುವೆನೆಂದೂ ಅವನು ಭಾವಿಸಿದ್ದನು. ಆದರೆ ಹಳ್ಳಿಯಲ್ಲಿ ನಿಂತ ಮೇಲೆ ನಿತ್ಯ ಮುಕ್ತಾ ದೇವರಿಗೆ ಹೂವುಗಳನ್ನು ತಂದು ಕೊಡತೊಡಗಿದಳು. ದೇವಸ್ಥಾನವನ್ನು ಗುಡಿಸಿ ಸಾರಿಸಿ, ರಂಗವಲ್ಲಿ ಇಡುತ್ತಿದ್ದಳು. ಸಣ್ಣ ಹುಡುಗಿಯಾಗಿದ್ದ ಮುಕ್ತಾ ಕೇಶವನ ಎದುರಿನಲ್ಲಿಯೇ ಪ್ರೌಢೆಯಾಗಿ ಬೆಳೆದಳು. ಆಕೆಯ ತಂದೆ, ಆಗಿಂದಾಗ್ಗೆ ಕೇಶವ ಆಕೆಯನ್ನು ಮದುವೆಯಾಗಬೇಕೆಂದು ಸೂಚಿಸುತ್ತಲೇ ಇದ್ದನು. ತಾನು ಮುಕ್ತಾಳಿಂದ ಆಕರ್ಷಿತನಾಗಿರುವ ಅನುಭವ ಕೇಶವನಿಗೆ ಉಂಟಾಗಿತ್ತು. ಮುಕ್ತಾ ಪ್ರತಿ ದಿನವೂ ಪುರಾಣ ಶ್ರವಣಕ್ಕಾಗಿ ಬಂದು ಕುಳಿತುಕೊಳ್ಳುತ್ತಿದ್ದಳು. ಅವಳು ಬಂದು ಕುಳಿತ ನಂತರ ಕೇಶವನ ಪುರಾಣ ಪ್ರವಚನ, ಮೊದಲಿಗಿಂತ ಹೆಚ್ಚು ಸ್ಫೂರ್ತಿಯಿಂದ ಸಾಗುತ್ತಿದ್ದಿತು.

ಆ ಏಕಾದಶಿಯ ದಿನ ಮುಕ್ತಾ ಬಂದು ಕುಳಿತಾಗ ಕೇಶವ ದೇವಿಯ ಅಲಂಕಾರ ವರ್ಣನೆಯನ್ನು ಮುಗಿಸಿ ದೇವಿಯ ಸೌಂದರ್ಯವನ್ನು ವರ್ಣಿಸುತ್ತಿದ್ದನು. ಪೀನೋನ್ನತಸ್ತನಿ, ವಲ್ಗುಭಾಷಿಣಿ, ಮೌಕ್ತಿಕ ಹಾರದಂತೆ ಮನೋಹರ ದಂತಪಂಕ್ತಿಯುಳ್ಳವಳು, ಕೋಗಿಲೆಯ ಧ್ವನಿಯಂತೆ ಅತಿಶ್ರಾವ್ಯ ಧ್ವನಿಯುಳ್ಳವಳು ಎಂದೆಲ್ಲ ಹೇಳುತ್ತಾ ಕೇಶವ ಮುಕ್ತಾಳ ಕಡೆ ನೋಡಿದನು. ಅನಂತರ ಅವನ ದೃಷ್ಟಿ ಸರ್ವಾಲಂಕಾರಭೂಷಿತಳಾಗಿದ್ದ ದೇವಿಯ ಕಡೆ ಹರಿಯಿತು. ಆ ಗಳಿಗೆಯಲ್ಲಿ ಕೇಶವನ ಮನಸ್ಸಿಗೆ ಒಂದು ಭಾವನೆ ಹೊಳೆಯಿತು. "ದೇವಿಯ ಈ ಅದ್ಭುತವಾದ ಒಡವೆಗಳನ್ನೆಲ್ಲ ಒಂದು ಸಲ ಮುಕ್ತಾಳಿಗೆ ತೊಡಿಸಿ ಆ ಅಲಂಕಾರದಲ್ಲಿ ಅವಳನ್ನು ನೋಡಬೇಕು" ಎಂದು. ಈ ಆಲೋಚನೆ ಹೊಳೆದುದೇ ತಡ. ದೇವಿಯಲ್ಲಿ ಮಾಡಿದ ಅಪಚಾರದಿಂದ ಕೇಶವ ಗಡಗಡನೆ ನಡುಗಿದನು. ಅವನ ದೇಹದಲ್ಲಿ ವಿದ್ಯುತ್ ಪ್ರವೇಶಿಸಿದಂತೆ ಆಯಿತು. ಅವನ ಬಾಯಿ ತೊದಲಿತು. ಕಾಂತಿಯುಕ್ತವಾಗಿದ್ದ ಅವನ ಮುಖ ಶ್ರೋತೃ

ಗಳಿಗೆ ವಿಕಾರವಾಗಿ ಕಂಡಿತು. ಪುರಾಣದ ಪುಸ್ತಕವನ್ನಿಟ್ಟುಕೊಂಡಿದ್ದ ತನ್ನ ಮುಂದಿದ್ದ ಕಾಲುಮಣೆಯ ಮೇಲೆ ತಲೆಯಿಟ್ಟು ಅವನು ಪ್ರಜ್ಞಾರಹಿತನಾದನು. ಇದೂ ಒಂದು ಬಗೆಯ ಸಮಾಧಿ ಇರಬಹುದೇನೋ ಎಂದು ಶ್ರೋತೃಗಳು ಒಬ್ಬೊಬ್ಬರಾಗಿ ನಿಶ್ಶಬ್ದರಾಗಿ, ದೇವಸ್ಥಾನವನ್ನು ಬಿಟ್ಟು ತಮ್ಮ ಮನೆಗಳಿಗೆ ಹೊರಟುಹೋದರು.

"....ಪುರಾಣ ಪಠನವನ್ನು ಮುಗಿಸಿ ಕೇಶವ ಎದ್ದು ನಿಂತನು. ದೇವಸ್ಥಾನದಲ್ಲಿ ಯಾರೂ ಇರಲಿಲ್ಲ. ಕೇಶವ ದೇವಾಲಯದ ಹೊರಬಾಗಿಲನ್ನು ಮುಚ್ಚಿ, ದೇವಿಯ ಅಲಂಕಾರದ ವಸ್ತ್ರವೊಂದನ್ನು ನೆಲದಮೇಲೆ ಹರಡಿ ದೇವಿಯ ಮೇಲಿದ್ದ ಆಭರಣಗಳನ್ನೆಲ್ಲ ಒಂದೊಂದಾಗಿ ತೆಗೆದು ಆ ವಸ್ತ್ರದಮೇಲೆ ಇಡತೊಡಗಿದನು. ದೇವಿಯ ಮೈಯಿಂದ ಒಂದೊಂದು ಆಭರಣವನ್ನೂ ತೆಗೆಯುವಾಗಲೂ "ಇದು ಮುಕ್ತಾಳ ಮೈಮೇಲೆ ಹೇಗೆ ತೋರುತ್ತದೆ" ಎಂದು ಯೋಚಿಸುತ್ತಿದ್ದನು. ಮುತ್ತಿನ ಹಾರ, ಕೆಂಪಿನ ಬಳೆಗಳು, ವಜ್ರದ ಓಲ್ಲಿ, ಪುಷ್ಯರಾಗದ ವಡ್ಯಾಣ, ಗೋಮೇಧಿಕದ ನೂಪುರ, ನವರತ್ನಗಳ ಉಂಗುರಗಳು ಎಲ್ಲವನ್ನೂ ಕೇಶವ ದೇವಿಯ ಮೈಯಿಂದ ತೆಗೆದನು. ದೇವಿಯ ಮೂಗಿನಲ್ಲಿ ಅತ್ಯಂತ ಉಜ್ವಲವಾದ ವಜ್ರದ ಮೂಗುತಿಯೊಂದು ಇತ್ತು. ಅದು ಸೂರ್ಯನ ಕಾಂತಿಗಿಂತ ಹೆಚ್ಚು ಪ್ರಕಾಶಮಾನವಾಗಿತ್ತು. ಅದನ್ನು ಯಾವಾಗಲೂ ದೇವಿಯ ಮೂಗಿನಿಂದ ತೆಗೆದೇ ಇರಲಿಲ್ಲವೆಂದು ಊರಿನವರೆಲ್ಲ ಹೇಳುತ್ತಿದ್ದರು. ಕೇಶವನೂ ತನ್ನ ನಾಲ್ಕು ವರುಷಗಳ ಅವಧಿಯಲ್ಲಿ, ಇತರ ಆಭರಣಗಳನ್ನು ಆಗಿಂದಾಗ್ಗೆ ತೆಗೆದು ಇಡುತ್ತಿದ್ದರೂ ಆ ಮೂಗುತಿಯ ಗೋಜಿಗೆ ಕೈಹಾಕಿರಲಿಲ್ಲ. ಆದರೆ ಈಗ ಮುಕ್ತಾಳನ್ನು ದೇವಿಯ ಒಡವೆಗಳಿಂದ ಅಲಂಕರಿಸಬೇಕೆಂಬ ಆಸೆ, ಆ ನಿಯಮಭಂಗವನ್ನೂ ಅವನಿಂದ ಮಾಡಿಸಿತು. ಆ ಮೂಗುತಿಯನ್ನು ದೇವಿಯಿಂದ ತೆಗೆಯುವುದು, ಇತರ ಒಡವೆಗಳನ್ನು ತೆಗೆದುದಕ್ಕಿಂತ ಕೇಶವನಿಗೆ ಹೆಚ್ಚು ಕಷ್ಟವಾಯಿತು. ಅದನ್ನು ತೆಗೆಯುವಾಗ, ಯಾವಾಗಲೂ ಸೌಮ್ಯಳಾಗಿದ್ದ ದೇವಿ ಕುಪಿತಳಾದಂತೆಯೂ ತೋರಿದಳು. ಕೇಶವನ ಕೈಕಾಲುಗಳು ನಡುಗುತ್ತಿದ್ದವು. ಆತನು ನಡುಗುತ್ತಿರುವ ಕೈಗಳಿಂದಲೇ ವಸ್ತ್ರದ ಗಂಟನ್ನು ಕಟ್ಟಿಕೊಂಡು ದೇವಸ್ಥಾನದ ಬಾಗಿಲನ್ನು ಭದ್ರಪಡಿಸಿ ಮುಕ್ತಾಳ ಮನೆಯ ಕಡೆಗೆ ಹೊರಟನು.

ದೇವಾಲಯದ ಮುಂದಲ ನಿರ್ಜನವಾದ ತೋಪನ್ನು ದಾಟುತ್ತಿರುವಾಗ ಕಳ್ಳನಂತೆ ಕೇಶವ ಹೆದರಿದನು. ಹೌದು ನಾನು ಕಳ್ಳನೇ. ಆದರೆ ನಾನು ಕಳ್ಳನೂ ಅಲ್ಲ. ದೇವಿ, ಪೂಜೆ ಸಹ ಇಲ್ಲದೆ ನಿರಾಭರಣಳಾಗಿದ್ದಳು. ಈ ಎಲ್ಲ ಆಭರಣಗಳನ್ನೂ ನನ್ನ ಶಕ್ತಿಯಿಂದ ಭಕ್ತಿಯಿಂದ ಸಂಪಾದಿಸಿದೆ. ಈಗಲೂ ನಾನೇನೂ ಕದ್ದುಕೊಂಡು ಹೋಗುತ್ತಿಲ್ಲ. ಒಂದು ಗಳಿಗೆ ಒಂದೇ ಗಳಿಗೆ ನನ್ನ ಮುಕ್ತಾಳಿಗೆ ಎಲ್ಲವನ್ನೂ ತೊಡಿಸಿ ಕಣ್ಣುತುಂಬ ಆ ಸುಂದರ ರೂಪವನ್ನು ನೋಡಿಬಿಟ್ಟು ಮತ್ತೆ ಎಲ್ಲವನ್ನೂ ತಂದುಬಿಡುತ್ತೇನೆ" ಎಂದು ಧೈರ್ಯ ಮಾಡಿಕೊಂಡನು.

ಕೇಶವ ಇನ್ನು ಹತ್ತು ಹೆಜ್ಜೆ ಹೋಗಿದ್ದರೆ ಮುಕ್ತಾಳ ಮನೆ ಸಿಕ್ಕಿರುತಿದ್ದಿತು. ಅಷ್ಟರಲ್ಲಿ ಭಯಂಕರವಾದ ಬಿರುಗಾಳಿ ಎದ್ದಿತು. ಅಂತರಿಕ್ಷ ಪೂರ್ಣವಾಗಿ ಅಂಧಕಾರಮಯವಾಯಿತು. ಕಾಳಮೇಘಗಳಂತಿದ್ದ ನಾಲ್ಕು ಜನ ಯಮದೂತ ಸಮಾನರಾದ ಭಟರು ಅವನ ಮೇಲೆ ಬಿದ್ದು ಅವನನ್ನು ನೂಲು ಕಣ್ಣಿಗಳಿಂದ ಕಟ್ಟಿ ದರದರನೆ ಎಳೆದುಕೊಂಡು ಹೋಗತೊಡಗಿದರು. ಕೇಶವ ಕೂಗಿಕೊಳ್ಳಲು ಪ್ರಯತ್ನಿಸಿದನು. ಅವನ ಬಾಯಿಯಿಂದ ಧ್ವನಿಯೇ ಹೊರಡಲಿಲ್ಲ. ಭಟರ ಮಾತುಗಳಿಂದ ತನ್ನನ್ನು ಅವರು ವೀರಭದ್ರನ ಹತ್ತಿರಕ್ಕೆ ಕರೆದುಕೊಂಡು ಹೋಗುತ್ತಿರುವರೆಂದು ಅವನಿಗೆ ಗೊತ್ತಾಯಿತು. ಭಟರು ಕೇಶವನನ್ನು ಬಹಳ ದೂರ ನಡೆಸಿಕೊಂಡು ಹೋದರು. ಅವನ ಕಾಲು ನೋವಿನಿಂದ ಬಾತುಕೊಂಡಿತು. ಕೊನೆಯಲ್ಲಿ ವೀರಭದ್ರನ ಆಸ್ಥಾನ ಸಿಕ್ಕಿತು. ಅಲ್ಲಿ ಭಟರು ಕೇಶವನನ್ನು ನೆಲದ ಮೇಲೆ ಕೆಡವಿ "ಈ ದೈವದ್ರೋಹಿಯನ್ನೂ ಮಾತೃದ್ರೋಹಿಯನ್ನೂ ಕಳ್ಳ ಪೂಜಾರಿಯನ್ನೂ ಆಸ್ಥಾನದ ಅಪ್ಪಣೆಯಂತೆ ಹಿಂಗಟ್ಟು ಮುರಿಕಟ್ಟಿ ಹಿಡಿದುಕೊಂಡು ಬಂದಿದ್ದೇವೆ. ಸನ್ನಿಧಾನದ ಅಪ್ಪಣೆಯಾದರೆ ಇವನ ಎರಡು ಕೈಗಳನ್ನೂ ಕತ್ತರಿಸಿ ಹಾಕುತ್ತೇವೆ" ಎಂದರು. ಕೇಶವ ಗಡಗಡನೆ ನಡುಗಿದನು. 'ಬೇಡಿ ಮನ್ನಿಸಿ' ಎಂದು ಕೇಳಿಕೊಳ್ಳಬೇಕೆಂದು ಅವನು ತನ್ನ ಶಕ್ತಿಯನ್ನೆಲ್ಲ ಉಪಯೋಗಿಸಿ ಪ್ರಯತ್ನಿಸಿದರೂ ಬಾಯಿಂದ ಧ್ವನಿ

ಮಾತ್ರ ಹೊರಡಲಿಲ್ಲ. ಭಟರು ಕೈಗಳನ್ನು ಕತ್ತರಿಸಲು ಕತ್ತಿ ಹಿಡಿದು, ವೀರಭದ್ರನ ಆಜ್ಞೆಯನ್ನೇ ಕಾಯುತ್ತಾ ನಿಂತಿದ್ದರು. ಕೊನೆಗೆ ವೀರಭದ್ರನು "ತಡೆಯಿರಿ, ಈ ನೀಚ ಮಾಡಿರುವ ಅಪರಾಧಕ್ಕೆ ಕೈಗಳನ್ನು ಕತ್ತರಿಸುವುದಲ್ಲ. ತಲೆಯನ್ನೇ ಕತ್ತರಿಸಲು ಅಪ್ಪಣೆಕೊಡುತ್ತಿದ್ದೆ. ಆದರೆ ಈ ಪಾಷಂಡಿ ಕೆಲವು ವರ್ಷಗಳಾದರೂ ದೇವಿಯ ಪೂಜೆಮಾಡಿದ್ದಾನೆ. ಇವನನ್ನು ನಾವು ಶಿಕ್ಷಿಸಿದರೆ ದೇವಿ ಏನೆಂದುಕೊಂಡಾಳು? ಈ ಕಳ್ಳನನ್ನು ಆಭರಣಗಳ ಸಹಿತ ದೇವಿಯ ಮುಂದೆ ನಿಲ್ಲಿಸಿ. ಆಕೆಯೇ ಶಿಕ್ಷಿಸಲಿ. ಹೊರಡಿ" ಎಂದನು. ಕೇಶವನು "ದೇವಿಗೆ ಹೇಗೆ ಮುಖ ತೋರಿಸಲಿ? ಬೇಡಬೇಡ. ನೀವೇ ಇಲ್ಲಿ ನನ್ನನ್ನು ಕೊಂದು ಹಾಕಿ ಬಿಡಿ. ನಾನು ದೇವಿಯ ಮುಂದೆ ಹೋಗಲಾರೆ" ಎಂದು ಕಿರಚಬೇಕೆಂದು ಪ್ರಯತ್ನಿಸಿದನು. ಆದರೆ ಬಾಯಿಂದ ಧ್ವನಿ ಹೊರಡಲಿಲ್ಲ.

ಯಮದೂತರು ಕೇಶವನನ್ನು ಹಿಡಿದುಕೊಂಡು ಬಂದು ದೇವಿಯ ಮುಂದೆ ನಿಲ್ಲಿಸಿದರು. ಕೇಶವನ ಕಟ್ಟುಗಳನ್ನು ಸಡಲಿಸುವಂತೆ ದೇವಿ ಭಟರಿಗೆ ಸನ್ನೆ ಮಾಡಿದಳು. ಕೇಶವನ ಕಟ್ಟುಗಳೆಲ್ಲ ಕಳಚಿ ಕೆಳಕ್ಕೆ ಬಿದ್ದವು. ದೇವಿಯನ್ನು ನೋಡಲು ಕಣ್ಣೆತ್ತಲು ಕೇಶವನಿಂದ ಆಗಲಿಲ್ಲ. ಆದರೂ ದೇವಿ ತನ್ನನ್ನು ನೋಡುತ್ತಿರುವಂತೆ ಅವನ ಮನಸ್ಸಿನ ಕಣ್ಣಿಗೆ ತೋರಿತು. ಅವನು ನಾಚಿಕೆಯಿಂದ ನೆಲಕ್ಕೆ ಕುಸಿದು ಹೋಗಿದ್ದನು. ದೇವಿಯ ಕಣ್ಣುಸನ್ನೆಯ ಮೇಲೆ ಭಟರು ಹೊರಟುಹೋದರು. ಕೇಶವ ಭಯದಿಂದ ಸ್ವಲ್ಪ ದೃಷ್ಟಿ ಎತ್ತಿ ದೇವಿಯನ್ನು ನೋಡಿದನು. ದೇವಿ ಶಾಂತಳಾಗಿ ಕನಿಕರದಿಂದ "ಅಯ್ಯೋ ಪಾಪ" ಎನ್ನುವಂತೆ ತನ್ನನ್ನು ನೋಡುತ್ತಿರುವುದು ಅವನಿಗೆ ಕಂಡಿತು. ಅವಳ ಮೈಮೇಲೆ ಒಂದಾದರೂ ಆಭರಣ ಇರಲಿಲ್ಲ. ಆದರೂ ಆ ದಯಾಮೂರ್ತಿ ಕಾರುಣ್ಯದಿಂದಲೇ ಸರ್ವಲಕ್ಷಣ ಸಂಪನ್ನಳಾಗಿ ತೋರುತ್ತಿದ್ದಳು. ಕೇಶವ ಪ್ರಶ್ಚಾತ್ತಾಪದಿಂದ ಗಟ್ಟಿಯಾಗಿ "ತಾಯಿ ಮನ್ನಿಸು, ತಪ್ಪಿದೆ ಕ್ಷಮಿಸು, ಪಾದಾಕ್ರಾಂತನಾದೆ, ಕರುಣಿಸು" ಎಂದು ಹೇಳಿಕೊಂಡು ತನ್ನ ಎರಡೂ ಕೈಗಳಿಂದ ತನ್ನ ಕಪಾಳಕ್ಕೆ ನೂರಾರು ಏಟುಗಳನ್ನು ಗಟ್ಟಿಯಾಗಿ ಹೊಡೆದುಕೊಂಡನು.

ಕೇಶವನ ಮೈಬೆವತಿತು. ಕನಸು ಹರಿದು ಎಚ್ಚರವಾಯಿತು. ಮುಕ್ತಾ ಅವನ ಎರಡು ಕೈಗಳನ್ನು ಹಿಡಿದುಕೊಂಡು "ಬೇಡಿ ಬೇಡಿ ಹಾಗೆ ಹೊಡೆದುಕೊಳ್ಳಬೇಡಿ"ಎಂದು ಸಮಾಧಾನ ಪಡಿಸುತ್ತಿದ್ದಳು. ಕೇಶವ ಕಣ್ಣುಬಿಟ್ಟು ನೋಡಿದನು. ದೇವಾಲಯ ನಿಶ್ಯಬ್ದವಾಗಿತ್ತು. ದೇವಿಯು ಮೊದಲಿನಂತೆ ಸರ್ವಾಭರಣ ಭೂಷಿತಳಾಗಿ ನಗುಮುಖದಿಂದ ಅವನ ಮೇಲೆ ದೃಷ್ಟಿ ಬೀರುತ್ತಿರುವಂತೆ ತೋರಿತು. ಮುಕ್ತಾ "ನೀವು ಸಮಾಧಿಹೊಂದಿರಬಹುದೆಂದು ಎಲ್ಲರೂ ಸದ್ದು ಮಾಡದೆ ಹೊರಟುಹೋದರು. ನಾನು ಮಾತ್ರ ಸ್ವಲ್ಪಹೊತ್ತು ಕುಳಿತೆ. ನೀವು ನಿಮ್ಮ ಕಪಾಳಕ್ಕೆ ನೂರಾರು ಏಟು ಹೊಡೆದುಕೊಂಡುಬಿಟ್ಟಿರಿ. ನಾನೇನಾದರೂ ಬಂದು ಕೈಹಿಡಿದುಕೊಳ್ಳದೆ ಹೋಗಿದ್ದರೆ ನಿಮ್ಮ ಸಮಾಧಿಯಲ್ಲಿಯೇ ನೀವು ನಿಮ್ಮ ಕಪಾಳವನ್ನು ಒಡೆದುಕೊಳ್ಳುತ್ತಿದ್ದಿರಿ. ಏನಾಯಿತು?" ಎಂದು ಕೇಳಿದಳು. ಕೇಶವನು ದೇವಿಯ ಕಡೆ ಭಕ್ತಿಯಿಂದ ನೋಡುತ್ತ "ನರಕದ ದಾರಿ ಹಿಡಿದಿದ್ದೆ. ದೇವಿಯ ಕೃಪೆ ಆಯಿತು. ಬದುಕಿದೆ" ಎಂದು ಹೇಳಿ ಕಪಾಳವನ್ನು ಸವರಿ ನೋಡಿಕೊಂಡನು. ತುಂಬ ಊದಿತ್ತು. ಏಟೂ ಬಿದ್ದಿತ್ತು. "ಸಾಲದು ಸಾಲದು ಇನ್ನೂ ಬೇಕು" ಎಂದು ಸುಮ್ಮನಾದನು.

ಈಚೆಗೆ ಕೇಶವ, ಮುಕ್ತಾಳನ್ನು ಮದುವೆಯಾದನು. ಅವರಿಬ್ಬರೂ ಎಂದಿಗಿಂತಲೂ ಹೆಚ್ಚು ಭಕ್ತಿಯಿಂದ ದೇವಿಯನ್ನು ಆರಾಧಿಸುತ್ತಿದ್ದಾರೆ. ಆದರೆ ಅಂದು ನಡೆದುದೇನುಯೆಂಬುದು ಮುಕ್ತಾಳಿಗೆ ಇಂದಿಗೂ ಅರ್ಥವಾಗಿಲ್ಲ.

---

# ಕನ್ನಡ ಸಾಹಿತ್ಯ ಪರಿಷತ್ತನ್ನು ಕುರಿತು

ಕನ್ನಡ ಸಾಹಿತ್ಯ ಪರಿಷತ್ತು ಒಂದು ಪ್ರಾತಿನಿಧಿಕವಾದ ಸಾಂಸ್ಕೃತಿಕ ಸಂಸ್ಥೆಯಾಗಿರುವುದು. ಅದು ಅಖಿಲ ಕರ್ನಾಟಕದ ದೃಷ್ಟಿಯಿಂದ ಅನೇಕ ಮಹತ್ವದ ಕಾರ್ಯಗಳನ್ನು ಮಾಡಿರುವುದು. ಕಾರ್ಯಕ್ಷೇತ್ರವನ್ನು ವಿಸ್ತರಿಸಬೇಕೆಂಬ ಗುರಿಯೂ ಇದೆ. ಪರಿಷತ್ತಿನ ಬಹುಮುಖಕಾರ್ಯದ ಪರಿಚಯುವನ್ನಿಲ್ಲಿ ಕಾಣಬಹುದು.

ಲೇಖಕರು:
ಶ್ರೀ. ಬಿ. ಶಿವಮೂರ್ತಿ ಶಾಸ್ತ್ರಿಗಳು,
ಅಧ್ಯಕ್ಷರು: ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

ಭಾರತೀಯ ಇತಿಹಾಸದಲ್ಲಿ ಕನ್ನಡ ನಾಡು ನುಡಿಗಳಿಗೆ ಒಂದು ವಿಶಿಷ್ಟವಾದ ಸ್ಥಾನವಿದೆ. ಪ್ರಕೃತಿ ಸೌಂದರ್ಯದಿಂದಲೂ ಸಮುದ್ರ, ಪರ್ವತ, ಅರಣ್ಯ, ನದಿ, ಜಲಪಾತ, ಫಲಭರಿತವಾದ ಭೂಮಿ, ಸಂಪದ್ಯುಕ್ತ ಭೂಗರ್ಭ ಮೊದಲಾದವುಗಳಿಂದಲೂ ಕರ್ಣಾಟಕವು ಭಾರತದ ಮತ್ತುಳಿದ ರಾಜ್ಯಗಳಲ್ಲಿ ಹೆಚ್ಚಿನ ಅದೃಷ್ಟಶಾಲಿಯೆನಿಸಿದೆ. ಒಬ್ಬ ವಿಚಾರಪರನ ಅಭಿಪ್ರಾಯದಂತೆ ಲೋಹಗಳಲ್ಲಿ ಶ್ರೇಷ್ಠವಾದ ಚಿನ್ನ, ಪ್ರಾಣಿಗಳಲ್ಲಿ ಶ್ರೇಷ್ಠವಾದ ಆನೆ, ವೃಕ್ಷಗಳಲ್ಲಿ ಶ್ರೇಷ್ಠವಾದ ಶ್ರೀಗಂಧ, ನದಿಗಳಲ್ಲಿ ಪವಿತ್ರತಮವೆನಿಸಿರುವ ಕಾವೇರಿ ಮತ್ತು ಕೃಷ್ಣಾ ಕರ್ಣಾಟಕದಲ್ಲಿರುವುದರಿಂದ ಇದು ಶ್ರೇಷ್ಠವಾದ ನಾಡು ಎನಿಸಿಕೊಂಡಿದೆ. ಕರ್ಣಾಟಕವು ಚಿತ್ರಕಲೆ, ಶಿಲ್ಪಕಲೆ, ಸಂಗೀತ, ಸಾಹಿತ್ಯ, ತತ್ತ್ವಜ್ಞಾನ, ಉಜ್ವಲವಾದ ಇತಿಹಾಸ ಮಿಗಿಲಾದ ಸಂಸ್ಕೃತಿಗಳಿಂದ ಕೂಡ ಭಾರತದಲ್ಲಿ ಪ್ರಖ್ಯಾತಿಯನ್ನು ಗಳಿಸಿದೆ. ಕರ್ಣಾಟಕದ ಹಿರಿಮೆ ಮತ್ತು ಗರಿಮೆಗಳಿಗೆ ಗಂಗ, ಕದಂಬ, ಚಾಲುಕ್ಯ, ರಾಷ್ಟ್ರಕೂಟ, ಹೊಯ್ಸಳ, ಯಾದವ, ಕಾಕತೀಯ, ವಿಜಯನಗರ, ಮೈಸೂರು, ಕೆಳದಿ ಮೊದಲಾದ ರಾಜ್ಯಗಳ ಚರಿತ್ರೆಗಳಲ್ಲಿ ಬೇಕಾದಷ್ಟು ಆಧಾರಗಳಿವೆ.

## ಸಾಂಸ್ಕೃತಿಕ ಪ್ರತಿನಿಧಿ

ಸುಮಾರು ಎರಡು ಕೋಟಿಗೂ ಹೆಚ್ಚಿಗೆ ಜನಸಂಖ್ಯೆಯುಳ್ಳ ಸುಮಾರು ಎಂಬತ್ತು ಸಾವಿರ ಚದುರ ಮೈಲಿಯಷ್ಟು ವಿಸ್ತಾರವುಳ್ಳ ಕನ್ನಡನಾಡನ್ನು ಸಾಂಸ್ಕೃತಿಕ ದೃಷ್ಟಿಯಿಂದ ಪರಿಪೂರ್ಣವಾಗಿ ಪ್ರತಿನಿಧಿಸುವ ಕನ್ನಡನಾಡಿನ ಏಕೈಕ ಮಹಾಸಂಸ್ಥೆ ಕನ್ನಡ ಸಾಹಿತ್ಯ ಪರಿಷತ್ತು. ಭಾರತದ ಹದಿನಾಲ್ಕು ರಾಜ್ಯಭಾಷೆಗಳಲ್ಲಿ ಒಂದಾಗಿರುವ, ಎರಡು ಸಾವಿರ ವರ್ಷಗಳಷ್ಟು ಪ್ರಾಚೀನತೆಯಿಂದ ಕೂಡಿರುವ, ವಿಪುಲವಾದ ಸಾಹಿತ್ಯ ಮತ್ತು ಶಾಸನಸಂಪತ್ತುಗಳಿಂದ ಕಂಗೊಳಿಸುತ್ತಿರುವ, ನಲವತ್ತೈದು ವರ್ಷಗಳ ಪ್ರಾಚೀನತೆಯಿಂದ ಕೂಡಿರುವ ಕನ್ನಡಿಗರ ಏಕೈಕ ಮಹಾಸಂಸ್ಥೆ ಕನ್ನಡ ಸಾಹಿತ್ಯ ಪರಿಷತ್ತು. ನವಮೈಸೂರಿನ ನಿರ್ಮಾಪಕರಾದ ಭಾರತರತ್ನ ಸರ್ ಎಂ. ವಿಶ್ವೇಶ್ವರಯ್ಯನವರ ದಿವಾನಗಿರಿಯ ಅವಧಿಯಲ್ಲಿ ೧೯೧೫ ರಲ್ಲಿ ಕನ್ನಡ ನಾಡುನುಡಿಗಳ ಅಭಿಮಾನಿಗಳೆಲ್ಲರ ಆಲೋಚನೆಯ ಫಲವಾಗಿ ಬೆಂಗಳೂರಿನಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ಸ್ಥಾಪನೆಯಾಯಿತು. ಪುಣ್ಯಶ್ಲೋಕರಾದ ಹೆಚ್. ವಿ. ನಂಜುಂಡಯ್ಯನವರು, ಸರ್ ಪುಟ್ಟಣ್ಣಶೆಟ್ಟಿಯವರು, ಎಂ. ಶಾಮರಾಯರು, ಆರ್. ನರಸಿಂಹಾಚಾರ್ಯರು, ಸರ್ ಕಾಂತರಾಜ ಅರಸರು, ಕರ್ಪೂರ ಶ್ರೀನಿವಾಸರಾಯರು, ಆರ್. ರಘುನಾಥರಾಯರು, ಎಂ. ವೆಂಕಟಕೃಷ್ಣಯ್ಯನವರು, ಎಚ್. ಲಿಂಗರಾಜ ಅರಸರು, ಕೆರೂರು ವಾಸುದೇವಾಚಾರ್ಯರು, ಶ್ರೀ ಆಲೂರು ವೆಂಕಟರಾಯರು ಮೊದಲಾದ ನಾಡಿನ ಮುಖಂಡರು ದೂರದೃಷ್ಟಿಯಿಂದ ಈ ಪರಿಷತ್ತನ್ನು ಸ್ಥಾಪನೆ ಮಾಡಿದರು. ಅಲ್ಲಿಂದ ಮುಂದೆ ದಿವಂಗತರಾದ ಬಿ. ವೆಂಕಟನಾರಣಪ್ಪನವರು, ಬಿ. ಕೃಷ್ಣಪ್ಪನವರು. ಚ. ವಾಸುದೇವಯ್ಯನವರು, ಮುದವೀಡು ಕೃಷ್ಣರಾಯರು ಮತ್ತು ಹಿರಿಯ ಸಾಹಿತಿಗಳೆನಿಸಿದ ಡಾ. ಮಾಸ್ತಿ ವೆಂಕಟೇಶಯ್ಯಂಗಾರ್ಯರು, ಶ್ರೀ ಡಿ. ವಿ. ಗುಂಡಪ್ಪನವರು, ಪ್ರೊ. ಎ. ಆರ್. ಕೃಷ್ಣಶಾಸ್ತ್ರಿಗಳು ಮೊದಲಾದ ಮಹನೀಯರು ಈ ಪರಿಷತ್ತಿನ ಅಭ್ಯುದಯಕ್ಕಾಗಿ ಬಹಳವಾಗಿ ಶ್ರಮಿಸಿದರು. ಪರಿಷತ್ತು ಸ್ಥಾಪನೆಯಾದ ಮೇಲೆ ಅದು ೧೯ ವರ್ಷಗಳ ಕಾಲ ಒಂದು ಬಾಡಿಗೆಮನೆಯಲ್ಲಿ ನಡೆಯಿತು. ಅನಂತರ ದೇಶಭಾಷಾಭಿಮಾನಿಗಳಾದ ದಿವಂಗತ ಸರ್ ಕಾಂತರಾಜ ಅರಸ, ಸರ್ ಮಿರ್ಜಾ ಇಸ್ಮಾಯಿಲ್, ದಿ. ಕರ್ಪೂರ ಶ್ರೀನಿವಾಸರಾವ ಮೊದಲಾದ ಮಹನೀಯರ ಪ್ರಯತ್ನದ ಫಲವಾಗಿ ಬೆಂಗಳೂರು ಚಾಮರಾಜಪೇಟೆಯಲ್ಲಿ ೧೯೩೪ ರಲ್ಲಿ ಈಗಿರುವ ಕನ್ನಡ ಸಾಹಿತ್ಯ ಪರಿಷನ್ಮಂದಿರವು ನಿರ್ಮಾಣವಾಯಿತು. ಈ ಕಾರ್ಯದಲ್ಲಿ ಉದಾರವಾಗಿ ಧನ ಸಹಾಯ ಮಾಡಿದ ಮೈಸೂರಿನ ಆಳಿದ ಮಹಾರಾಜರು ಶ್ರೀ ನಾಲ್ವಡಿ ಕೃಷ್ಣರಾಜ ಒಡೆಯರು ದಿವಂಗತ ಶ್ರೀ ಕಂಠೀರವ ನರಸಿಂಹರಾಜ ಒಡೆಯರು ಇವರುಗಳು ಪರಿಷತ್ತಿಗಿತ್ತ ಉದಾರಾಶ್ರಯದ ಫಲವಾಗಿ ಪರಿಷತ್ತಿನ ಕಾರ್ಯಾಲಯಕ್ಕೆ ಶ್ರೀ ಕೃಷ್ಣರಾಜ ಪರಿಷನ್ಮಂದಿರ ಎಂಬ ಶುಭ ನಾಮವನ್ನು ಇಡಲಾಯಿತು. ಕನ್ನಡನಾಡು ನುಡಿಗಳ ಹಿರಿಯ ಅಭಿಮಾನಿಗಳಾದ ದಿವಂಗತ ಬಿ. ಎಂ. ಶ್ರೀಕಂಠಯ್ಯನವರ ಉದಾರ ಧನ ಸಹಾಯದ ಫಲವಾಗಿ ೧೯೪೦ ರಲ್ಲಿ ಪರಿಷತ್ತಿನ ಅಚ್ಚುಕೂಟ ಸ್ಥಾಪನೆಯಾಯಿತು.

## ಹಲವಾರು ಮಹತ್ಕಾರ್ಯಗಳು

ಕನ್ನಡ ಸಾಹಿತ್ಯ ಪರಿಷನ್ಮಂದಿರದಲ್ಲಿ ಇಂದು ಹಲವಾರು ಮಹತ್ಕಾರ್ಯಗಳು ನಡೆಯುತ್ತಿವೆ. ಕನ್ನಡನುಡಿ ಎಂಬ ಮಾಸಪತ್ರಿಕೆ, ಕನ್ನಡ ಸಾಹಿತ್ಯ ಪರಿಷತ್‌ಪತ್ರಿಕೆ ಎಂಬ ಷಾಣ್ಮಾಸಿಕ ಪತ್ರಿಕೆಗಳು ಪ್ರಕಟವಾಗಿ ನಿಯಮಿತವಾಗಿ ಸದಸ್ಯರ ಕೈಸೇರುತ್ತಿವೆ. ಪರಿಷತ್ತಿನಲ್ಲಿ ವಾಚನಾಲಯ, ಪುಸ್ತಕಾಲಯ, ಮುದ್ರಣಾಲಯಗಳು ಸುವ್ಯವಸ್ಥಿತವಾಗಿ ನಡೆಯುತ್ತಿವೆ. ಇದುವರೆಗೆ ಕನ್ನಡ ಸಾಹಿತ್ಯ ಪರಿಷತ್ತು ಕನ್ನಡ ನಾಡಿನ ಪ್ರಮುಖ ಸ್ಥಳಗಳಲ್ಲಿಯೂ ಮುಂಬೈ, ಮದ್ರಾಸ್, ಹೈದರಾಬಾದ್ ಮೊದಲಾದ ಪ್ರಮುಖ ಪಟ್ಟಣಗಳಲ್ಲಿಯೂ ೪೧ ಸಾಹಿತ್ಯ ಸಮ್ಮೇಳನಗಳನ್ನು ನಡೆಸಿದೆ. ಅಲ್ಲದೆ ಕನ್ನಡ ಕಾವ, ಜಾಣ ಎಂಬ ಸಾಹಿತ್ಯ ಪರೀಕ್ಷೆಗಳನೂ ಗಮಕ ಪ್ರೌಢ, ಗಮಕ ಪ್ರವೇಶ ಎಂಬ ಕಾವ್ಯ ವಾಚನ ಪರೀಕ್ಷೆಗಳನ್ನೂ ಪರಿಷತ್ತು ನಡೆಸುತ್ತಿದೆ. ಕನ್ನಡ ನಾಡು ನುಡಿಗಳ ಅಭಿಮಾನವನ್ನು ಪರಿಷತ್ತಿನ ವಿದ್ವಾಂಸರು ಸಮಗ್ರ ಕನ್ನಡ ನಾಡಿನಲ್ಲಿ ಪ್ರಸಾರ ಮಾಡಿ ಕರ್ಣಾಟಕ ಏಕೀಕರಣ ಚಳುವಳಿಯನ್ನು ಹುರಿದುಂಬಿಸಿ ಕರ್ಣಾಟಕ ಅಥವಾ ವಿಶಾಲ ಮೈಸೂರು ಸ್ಥಾಪನೆಗೆ ಪರಿಷತ್ತು ಬಹುಮಟ್ಟಿಗೆ ನೆರವಾಗಿದೆ. ಕನ್ನಡ ಸಾಹಿತ್ಯ ಪರಿಷತ್ತಿನ ಪುಸ್ತಕಾಲಯದಲ್ಲಿ ಸುಮಾರು ೧೨ ಸಾವಿರ ಗ್ರಂಥಗಳಿವೆ. ಪರಿಷತ್ತಿನ ವಾಚನಾಲಯದಲ್ಲಿ ಸುಮಾರು ೧೫೦ ನಿಯತಕಾಲಿಕ, ದಿನ, ವಾರ, ಮಾಸಪತ್ರಿಕೆಗಳು ಬರುತ್ತಿವೆ. ಈ ವಾಚನಾಲಯ, ಪುಸ್ತಕಾಲಯಗಳ ಪ್ರಯೋಜನವನ್ನು ಬೆಂಗಳೂರಿನ

ನಾಗರಿಕರು ಮತ್ತು ವಿದ್ಯಾರ್ಥಿಗಳು ಬಹಳ ಮಟ್ಟಿಗೆ ಪಡೆಯುತ್ತಿದ್ದಾರೆ. ಸರಿಷತ್ತಿನ ಸಭಾ ಭವನದಲ್ಲಿ ಸಂಗೀತ, ನಾಟಕ, ನೃತ್ಯ, ಕಲೆಗಳಿಗೆ ಪ್ರೋತ್ಸಾಹಕೊಡುವ ಸಲುವಾಗಿ ಒಂದು ರಂಗಮಂಟಪವನ್ನು ಸಜ್ಜುಗೊಳಿಸಲಾಗಿದೆ. ಮೈಸೂರು ಸಂಗೀತ ನಾಟಕ ಅಕಾಡೆಮಿಯವರ ಸಹಾಯದಿಂದ ಅದು ಈಗ ವಿನೂತನ ಕಾಂತಿಯಿಂದ ಪರಿಶೋಭಿಸುತ್ತಿದೆ. ಇದರ ಪ್ರಯೋಜನವನ್ನು ಬೆಂಗಳೂರಿನ ಕಲಾವಿಲಾಸಿಗಳು ಬಹು ಮಟ್ಟಿಗೆ ಪಡೆಯುತ್ತಿದ್ದಾರೆ. ಕನ್ನಡ ಸಾಹಿತ್ಯ ಪರಿಷತ್ತು ಕೈಗೊಂಡಿರುವ ಮಹತ್ಕಾರ್ಯಗಳಲ್ಲಿ, ಬೃಹದಾಕಾರವಾದ ಕನ್ನಡ ಕನ್ನಡ ಕೋಶ ರಚನೆಯು ಪ್ರಾಮುಖ್ಯವೆನಿಸಿದೆ. ಪ್ರೊ॥ ಎ. ಆರ್. ಕೃಷ್ಣಶಾಸ್ತ್ರಿ, ಪ್ರೊ॥ ಟಿ. ಎನ್. ಶ್ರೀಕಂಠಯ್ಯ, ಪ್ರೊ॥ ಡಿ. ಎಲ್. ನರಸಿಂಹಾಚಾರ್ಯ, ಡಾ. ಆರ್. ಎಸ್. ಮುಗಳಿ, ಪ್ರೊ॥ ಡಿ. ಕೆ. ಭೀಮಸೇನರಾವ್, ಪ್ರೊ॥ ಎಂ. ಮರಿಯಪ್ಪ ಭಟ್, ಪ್ರೊ. ಕೆ. ಜಿ. ಕುಂದಣಗಾರ್, ಪ್ರೊ॥ ಎಸ್. ಎಸ್. ಮಾಳವಾಡ, ಶ್ರೀ. ಲಕ್ಷ್ಮೀನಾರಾಯಣರಾವ, ಶ್ರೀ ಕೆ. ವಿ. ರಾಘವಾಚಾರ್ ಮೊದಲಾದ ಮಹನೀಯರು ಇದರಲ್ಲಿ ಹೆಚ್ಚಿನ ಪಾತ್ರವನ್ನು ವಹಿಸಿರುತ್ತಾರೆ. ಸುಮಾರು ನಾಲ್ಕು ಲಕ್ಷಗಳಿಗೂ ಹೆಚ್ಚಾದ ಶಬ್ದಗಳನ್ನು ಸಂಗ್ರಹಿಸಿ ನಮ್ಮ ವಿದ್ವಾಂಸರು ಭಾರತದ ದೇಶ ಭಾಷೆಗಳಲ್ಲಿಯೇ ಅದ್ವಿತೀಯವೆನಿಸುವಂತೆ ಕನ್ನಡ ಕೋಶದ ಕಾರ್ಯವನ್ನು ನಿರ್ವಹಿಸಿದ್ದಾರೆ. ಭಾರತದ ಯಾವ ದೇಶಭಾಷೆಗಳಲ್ಲಿಯೂ ಇಲ್ಲದಿರುವಂತಹ ಮಹಾಮಹೋಪಾಧ್ಯಾಯ ಆರ್. ನರಸಿಂಹಾಚಾರ್ಯರಿಂದ ವಿರಚಿತವಾಗಿರುವ ಕರ್ಣಾಟಕ ಕವಿಚರಿತ್ರೆಯ ಮೂರು ಭಾಗಗಳನ್ನು ಪರಿಷತ್ತು ವಿನೂತವಾಗಿ ಸಂಸ್ಕರಿಸಿ ಇನ್ನೂ ಹೆಚ್ಚು ಸಂಖ್ಯೆಗಳ ಕವಿಗಳ ಹೆಸರನ್ನು ಸೇರಿಸಿ ಪ್ರಕಟಿಸಲು ಸಿದ್ಧಗೊಳಿಸಿದೆ.

## ಕಾರ್ಯಕ್ಷೇತ್ರ ವಿಸ್ತಾರ

ಪರಿಷತ್ತು ಇಂದಿನ ಕಾಲಮಾನಕ್ಕೆ ಅನುಗುಣವಾಗಿ ತನ್ನ ಕಾರ್ಯಕ್ಷೇತ್ರಗಳನ್ನು ವಿಸ್ತರಿಸಲು ಆಶಿಸಿದೆ. ಪರಿಷತ್ತಿನ ಆಶ್ರಯದಲ್ಲಿ ಒಂದು ಸಾಹಿತ್ಯ ಮತ್ತು ಇತಿಹಾಸ ಸಂಶೋಧನಾ ಕೇಂದ್ರವನ್ನು ಸ್ಥಾಪಿಸುವುದು, ಪರಿಷತ್ತಿಗೆ ಒಂದು ವಿಶಾಲವಾದ ಸಭಾ ಭವನವನ್ನು ನಿರ್ಮಿಸುವುದು, ಪರಿಷತ್ತಿನ ಅಚ್ಚುಕೂಟವನ್ನು ವಿಸ್ತರಿಸಿ ಅಭಿವೃದ್ಧಿಗೊಳಿಸುವುದು, ಪರಿಷತ್ತಿನ ಗ್ರಂಥ ಪ್ರಕಟನಾಕಾರ್ಯವನ್ನು ತ್ವರಿತಗೊಳಿಸುವುದು, ಇಂದು ಬೆಂಗಳೂರಿನಲ್ಲಿ ನಡೆಸುತ್ತಿರುವ ವಸಂತ ಸಾಹಿತ್ಯೋತ್ಸವದಂಥ ಸಮಾರಂಭಗಳನ್ನು ಕನ್ನಡ ನಾಡಿನ ಎಲ್ಲಾ ಚಿಕ್ಕ ದೊಡ್ಡ ಊರುಗಳಲ್ಲಿ ನಡೆಸುವುದು, ಪರಿಷತ್ತಿನ ಸಾಹಿತ್ಯ ಮತ್ತು ಗಮಕ ಪರೀಕ್ಷೆಗಳನ್ನು ಹೆಚ್ಚು ಆಕರ್ಷಕಗೊಳಿಸುವುದು. ಇವು ಮುಖ್ಯವಾದ ಕಾರ್ಯಕ್ರಮಗಳೆನಿಸಿವೆ. ಈ ಮಹತ್ಕಾರ್ಯ ಸಾಧನೆಗೆ ಸುಮಾರು ನಾಲ್ಕು ಲಕ್ಷ ರೂಪಾಯಿಗಳು ಪರಿಷತ್ತಿಗೆ ಬೇಕಾಗುತ್ತವೆ. ಈ ಹಣವು ಕರ್ಣಾಟಕದ ಮಹಾಜನರು ಮೈಸೂರು ಸರಕಾರ ಮತ್ತು ಕೇಂದ್ರ ಸರಕಾರಗಳಿಂದ ಲಭಿಸುವ ಸಂಭವವಿದೆ. ಸುಮಾರು ೪೫ ವರ್ಷಗಳ ಹಿಂದೆ ಸ್ಥಾಪಿತವಾದ ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಕಲಾಪಗಳು, ಭಾರತದಲ್ಲಿ ಭಾಷಾ ರಾಜ್ಯಗಳು ತಲೆ ಎತ್ತಿರುವ ಹಾಗೂ ವಿಶಾಲ ಮೈಸೂರುರಾಜ್ಯ ಸ್ಥಾಪನೆಯಾಗಿರುವ ಇಂದಿನ ದಿವಸಗಳಲ್ಲಿ ಪರಿಸ್ಥಿತಿಗೆ ಅನುಗುಣವಾಗಿ ವಿಸ್ತಾರಗೊಳ್ಳುವುದು ಅಗತ್ಯವೂ ಅನಿವಾರ್ಯವೂ ಆಗಿದೆ. ಮೇಲೆ ಕಂಡಂತೆ ಪರಿಷತ್ತಿನ ಅಗಾಧವಾದ ಈ ಕಾರ್ಯ ಕಲಾಪಗಳನ್ನು ಸಮಗ್ರ ಕರ್ಣಾಟಕದ ಪ್ರಾತಿನಿಧ್ಯವುಳ್ಳ, ಚುನಾಯಿತರಾದ ೧೮ ಮಂದಿ ಮಹನೀಯರುಗಳಿಂದ ಕೂಡಿದ ಕಾರ್ಯಕಾರಿ ಸಮಿತಿಯು ನಿರ್ವಹಿಸುತ್ತದೆ. ಈ ಕಾರ್ಯಕಾರಿ ಸಮಿತಿಗೆ ನಿರ್ದೇಶಿಸಿದಂತೆ ಪರಿಷತ್ತಿನ ಅಧ್ಯಕ್ಷರು, ಕಾರ್ಯದರ್ಶಿಗಳು ಮತ್ತು ಕೋಶಾಧಿಕಾರಿಗಳು ಈ ಮಹಾಸಂಸ್ಥೆಯ

ಪ್ರತಿನಿತ್ಯದ ಕಾರ್ಯಕಲಾಪಗಳನ್ನು ನಡೆಸುತ್ತಿದ್ದಾರೆ. ಇತರ ವ್ಯವಸ್ಥಿತ ಸಂಸ್ಥೆಗಳಂತೆ ವರ್ಷಕ್ಕೊಮ್ಮೆ ಸಕಲ ಸದಸ್ಯರ ಅಧಿವೇಶನ ಬೆಂಗಳೂರಿನಲ್ಲಿ ಸೇರಿ ಪರಿಷತ್ತಿನ ಆಡಳಿತ ವ್ಯವಸ್ಥೆಯನ್ನು ಲೆಕ್ಕಪತ್ರಗಳನ್ನು ಪರಿಶೀಲಿಸುತ್ತಿದೆ. ಇದೇ ಪರಿಷತ್ತಿನ ಪರಮಾಧಿಕಾರವುಳ್ಳದ್ದಾಗಿದೆ. ವರ್ಷಕ್ಕೊಮ್ಮೆ ನಡೆಯುವ ಸಾಹಿತ್ಯ ಸಮ್ಮೇಳನಗಳಲ್ಲಿ ಆಗುವ ತೀರ್ಮಾನಗಳನ್ನು ಪರಿಷತ್ತು ಕಾರ್ಯರೂಪಕ್ಕೆ ತರಲು ಬಹಳವಾಗಿ ಶ್ರಮಿಸುತ್ತದೆ.

ಕನ್ನಡ ಸಾಹಿತ್ಯ ಪರಿಷತ್ತಿಗೆ ಮೊದಲಿನಿಂದಲೂ ರಾಜಮನೆತನದವರು ಉದಾರ ಧನ ಸಹಾಯ ಮಾಡುತ್ತಿದ್ದಾರೆ. ಅಲ್ಲದೆ ಪರಿಷತ್ತಿನ ಮಹಾಪೋಷಕರಾಗಿ ಗೌರವಾಧ್ಯಕ್ಷರಾಗಿ ದಿವಂಗತ ನಾಲ್ವಡಿ ಕೃಷ್ಣರಾಜ ಒಡೆಯರು ಯುವರಾಜ ಕಂಠೀರವ ನರಸಿಂಹರಾಜ ಒಡೆಯರು, ಸರ್ ಕಾಂತರಾಜ ಅರಸರು ಮಾಡಿರುವ ಉಪಕಾರವನ್ನು ಇಂದು ನಾವು ಕೃತಜ್ಞತೆಯಿಂದ ಸ್ಮರಿಸಬೇಕಾಗಿದೆ. ಮೈಸೂರು ಸರಕಾರದವರು ಪರಿಷತ್ತಿನ ಕಾರ್ಯನಿರ್ವಹಣೆಗಾಗಿ ವರ್ಷಕ್ಕೆ ಈಗ ಏಳೂವರೆ ಸಾವಿರ ರೂಪಾಯಿಗಳ ಸಹಾಯಧನವನ್ನು ನೀಡುತ್ತಿದ್ದಾರೆ. ಕನ್ನಡ ಕನ್ನಡ ಕೋಶದ ನಿರ್ವಹಣೆಗಾಗಿ ಮೈಸೂರು ಸರಕಾರದವರು ಮೊದಲಿನಿಂದಲೂ ಉದಾರವಾಗಿ ಧನ-ಸಹಾಯ ಮಾಡುತ್ತಾ ಬಂದಿದ್ದಾರೆ. ಕನ್ನಡ ನಾಡಿನ ತುಂಬ ಇರುವ ಪರಿಷತ್ತಿನ ಸದಸ್ಯರಿಂದಬರುವ ಚಂದಾ ಹಣವು ಕೆಲಮಟ್ಟಿಗೆ ಪರಿಷತ್ತಿನ ಕಾರ್ಯ ನಿರ್ವಹಣೆಗೆ ನೆರವಾಗುತ್ತದೆ. ಪರಿಷತ್ತಿನ ವಾರ್ಷಿಕ ಸದಸ್ಯತ್ವದ ಚಂದಾ ಕೇವಲ ಆರು ರೂಪಾಯಿಗಳು ಮಾತ್ರ. ಇದರಿಂದ ಸದಸ್ಯರು ಪರಿಷತ್ತಿನ ಮಾಸಿಕ, ಷಾಣ್ಮಾಸಿಕ ಪತ್ರಿಕೆಗಳನ್ನು ಪಡೆಯುವರಲ್ಲದೆ ಪರಿಷತ್ತಿನ ಗ್ರಂಥಗಳನ್ನು ಕೊಳ್ಳುವುದರಲ್ಲಿ ರಿಯಾಯತಿ, ಪರಿಷತ್ತಿನ ಪುಸ್ತಕ ಮತ್ತು ವಾಚನಾಲಯಗಳ ಸೌಕರ್ಯ, ಪರಿಷತ್ತಿನ ಚುನಾವಣೆಯಲ್ಲಿ ಮತಾಧಿಕಾರ, ಪರಿಷತ್ತಿನ ಸಭೆ ಸಮ್ಮೇಳನಗಳಲ್ಲಿ ಭಾಗವಹಿಸುವ ಅವಕಾಶ, ಇವನ್ನೆಲ್ಲ ಪಡೆದುಕೊಳ್ಳುತ್ತಾರೆ ಎಂಬುದು ಇಲ್ಲಿ ಗಮನಾರ್ಹವಾಗಿದೆ. ಪರಿಷತ್ತು ಇಂದು ರಾಷ್ಟ್ರಪತಿಗಳು ರಾಜ್ಯಪಾಲರು ಆದಿಯಾಗಿ ಎಲ್ಲರಿಗೂ ಸುಪರಿಚಿತವೆನಿಸಿದೆ. ಕನ್ನಡದ ಅಭಿಮಾನಿಗಳು ಇಟ್ಟಿರುವ ನಿಧಿಯ ಬಡ್ಡಿ ಹಣದಿಂದ ಪರಿಷತ್ತು ನಾಡಿನ ಬೇರೆ ಬೇರೆ ಸ್ಥಳಗಳಲ್ಲಿ ದತ್ತಿ ಉಪನ್ಯಾಸಗಳನ್ನು ವಿದ್ವಾಂಸರಿಂದ ನಡೆಸುತ್ತದೆ. ಒಟ್ಟಿನಲ್ಲಿ ಪರಿಷತ್ತು ಕನ್ನಡ ನಾಡು ನುಡಿಗಳ ಏಳಿಗೆಗಾಗಿ ಬಹುಮುಖವಾಗಿ ಶ್ರಮಿಸುತ್ತಿದೆ. ಕರ್ನಾಟಕದ ಗಣ್ಯ ಮಹನೀಯರು ಪರಿಷತ್ತು ನಡೆಸಿದ ಸಮ್ಮೇಳನಗಳ ಅಧ್ಯಕ್ಷರಾಗಿ ಕರ್ಣಾಟಕದ ಅಭ್ಯುದಯದ ಹಾದಿಯಲ್ಲಿ ಸೇವೆ ಸಲ್ಲಿಸಿದ್ದಾರೆ. ಪರಿಷತ್ತು ಹಲವಾರು ಅಂಗ ಸಂಸ್ಥೆಗಳನ್ನು ಉಳ್ಳುದಾಗಿ ಉಪನದಿಗಳಿಂದ ಕೂಡಿದ ಮಹಾ ನದಿಯಂತೆ ಪರಿಶೋಭಿಸುತ್ತಿದೆ. ಪರಿಷತ್ತಿನ ಮಹತ್ವವನ್ನು ಅರಿತ ಜನ ಇದನ್ನು "ಕನ್ನಡ ಜನತೆಯ ವಿಶ್ವವಿದ್ಯಾನಿಲಯ" ಎಂದು ಕರೆಯುವುದರಲ್ಲಿ ತುಂಬಾ ಔಚಿತ್ಯವಿದೆ. ಕನ್ನಡ ಸರಸ್ವತಿಯ ಮಂದಿರವೆನಿಸಿದ ಸಾಹಿತ್ಯಪರಿಷತ್ತಿಗೆ ನಾಡು ನುಡಿಗಳ ಅಭಿಮಾನಿಗಳೆಲ್ಲರೂ ಜಾತಿ ಕುಲಭೇದವಿಲ್ಲದೆ ಸಹಾಯಮಾಡಿ ಸದಸ್ಯರಾಗಿ ಶ್ರೀ ಭುವನೇಶ್ವರಿಯ ಕೃಪೆಗೆ ಪಾತ್ರರಾಗುವರೆಂದು ನಂಬಲಾಗಿದೆ.



1920
-1960

ಪ್ರತಿಯೊಂದು ವರ್ಷವೂ ಆಹಾರೋತ್ಪತ್ತಿಯ ಕ್ಷೇತ್ರದಲ್ಲಿ ಪ್ರಗತಿಯ ಹೆಜ್ಜೆ



# ವರ್ಷಗಳು...

ಆ ದಿನವನ್ನು ನಾವು ಮರೆಯುವಂತಿಲ್ಲ...ನಲ್ವತ್ತು ವರ್ಷಗಳ ಹಿಂದೆ ಇದೇ ದಿನ ಬಹಳ ಸಣ್ಣ ಪರಿಮಾಣದಲ್ಲಿ ಬಿಸ್ಕತ್ತುಗಳನ್ನು ತಯಾರಿಸಲು ಪ್ರಾರಂಭಿಸಿದೆವು—ಪೂನಾ-ನಗರದ ಒಂದು ಸಣ್ಣ ಕೋಣೆಯಲ್ಲಿ ಅಂದು ನಾವು ಮಾಡುತ್ತಿದ್ದುದು ದಿನಕ್ಕೆ ಕೆಲವು ಪೌಂಡುಗಳಷ್ಟು ಮಾತ್ರ!

ಅಂದಿನಿಂದ ನಾವು ಪ್ರಗತಿಯ ಮಾರ್ಗದಲ್ಲಿ ಬಹಳ ಮುಂದುವರಿದಿದ್ದೇವೆ. ಶೈಶವದ ಕಷ್ಟಗಳು ನಮಗೂ ಇದ್ದುವು; ಆದರೆ ನಾವು ಬೆಳೆದುಕೊಂಡು ಬಂದಿದ್ದೇವೆ, ಅಭಿವೃದ್ಧಿ ಹೊಂದಿದ್ದೇವೆ. ಇಂದು ನಾವು ಭಾರತದ ಪ್ರಮುಖ ಬಿಸ್ಕತ್ತು ನಿರ್ಮಾಣಕರಲ್ಲಿ ಒಬ್ಬರಾಗಿದ್ದೇವೆ. ಇಂದು ಐ.ಎಸ್.ಐ. ISI 'ಯೋಗ್ಯತಾ ಮಟ್ಟಕ್ಕೆ' ಸರಿಯಾದ ಉತ್ಕೃಷ್ಟ ಬಿಸ್ಕತ್ತುಗಳನ್ನು ಆಧುನಿಕವಾದ ಏರ್‌-ಕಂಡಿಶನ್ ಮಾಡಲ್ಪಟ್ಟ ಕಾರ್ಖಾನೆಯಲ್ಲಿ ತಯಾರಿಸುತ್ತಿದ್ದೇವೆ.

ನಮ್ಮ ದೇಶದಲ್ಲಿ ಕೋಕೋ ಮತ್ತು ಚಾಕ್‌ಲೇಟ್ ಉದ್ದಿಮೆಯನ್ನು ಸ್ಥಾಪಿಸಿದವರಲ್ಲಿ ನಾವೇ ಮೊದಲಿಗರು.

| | |
|---|---|
| ನಮ್ಮ ಮಿತ್ರರಿಗೂ ಕ್ಷೇಮಾಕಾಂಕ್ಷಿಗಳಿಗೂ | ಧನ್ಯವಾದ. |
| ನಮಗೆ ಧನ ಸಹಾಯವಿತ್ತವರಿಗೂ, ನಮ್ಮಲ್ಲಿ ಡಿಪಾಜಿಟ್ ಇಟ್ಟವರಿಗೂ ಮತ್ತು ಶೇಯರ್ ಹೋಲ್ಡರರಿಗೂ | ಧನ್ಯವಾದ. |
| ನಮ್ಮ ಎಲ್ಲ ವಿತರಕರಿಗೂ, ಸ್ಟಾಕಿಸ್ಟರಿಗೂ | ಧನ್ಯವಾದ. |
| ವ್ಯಾಪಾರಿಗಳಿಗೂ ನಮ್ಮ ಎಲ್ಲ ಕೆಲಸಗಾರರಿಗೂ | ಧನ್ಯವಾದ. |
| ನಮ್ಮ ಲಕ್ಷೋಪಲಕ್ಷ ಗ್ರಾಹಕರಿಗೂ | ಧನ್ಯವಾದ. |

## ಸಾಠೆ ಬಿಸ್ಕಟ್ ಅಂಡ್ ಚಾಕೊಲೇಟ್ ಕಂ, ಲಿ., ಪೂನಾ-2



# ತಾಯಿ ಹೇಳಿದಳು



'ಭೂರತ'ರ ಮಧ್ಯದಲಿ ಬಂದಿಹಳು 'ಭಾರತಿ'
ನಿತ್ಯ ನೂತನ ಚೆಲುವೆ ತಾಯಿ ಯುವತಿ
ಗಲ್ಲಗೈಯಲ್ಲಿ ಚಿಂತಿಸುತಿಹಳು ಈ ರೀತಿ:-

……

" ಇದು ನಂದು, ಅದು ನಿಂದು.
ಅದು ನಂದು ಇದು ನಿಂದು "
ಈ ಜಗಳ ಮತ್ಸರದಿ ನಾವೇಲು ನೀವೇಲು
ಸೆಣೆಸಾಟ ನಡೆದಿಹುದು, ಇಲ್ಲ ಕೂಸಿಗೆ ಹಾಲು

……

ಸತ್ಯದ ಮಹಾತ್ಮ್ಯ-
-ಬೂಟಾಟಿಕೆಯ ನುಡಿಗಳಲಿ;
ಅಹಿಂಸೆಯಾ ಕೂಗು-
-ಹೇಡಿಯುಸಿರಿನಲಿ;
ಸೇವೆಯಾ ಸೋಗು-
-ಒಡೆತನದ ರೀತಿಯಲಿ;
ತ್ಯಾಗದಾ ಸೊಬಗು-
-ಭೋಗಷಟ್ಪದಿಯಲ್ಲಿ;
ದೇಶಭಕ್ತಿಯು
-ಹೊಟ್ಟೆ ಬೆಳೆವ ಪಟ್ಟಣಲಿ;
ಪಂಚಶೀಲವು-
-ಪ್ರಪಂಚೀರತರ ಲೋಲಿನಲಿ;
ಮಾತೊಂದು, ಕೃತಿಯೊಂದು,
ಯೋಚನೆಯು ಇನ್ನೊಂದು
ಹರವೊಂದು, ಇರವೊಂದು
ಕೊಳಕ ಕುಸ್ತಿಯ ಆಳು ಹೊಡೆದಂತೆ ಸಡ್ಡು
ಹತ್ತು ಯತ್ನದಿ ಹಾಲು ಕರೆದೀತೆ ಗೊಡ್ಡು ?

……

ತನ್ನನ್ನವನ್ನುಣದ, ತನ್ನರಿವೆಯನ್ನುಡದ
ತನ್ನ ನೆಲ-ಜಲದೌಷಧಿಯನು ಸೇವಿಸದ
ತನ್ನ ಪೂರ್ವಜರ ವಿದ್ಯೆಯ ತಾನು ಅರಿಯದ
ಜನವೆಂತು ಬದುಕೀತು ? ಎಂತು ಬಾಳೀತು?

……

" ಲಕ್ಷ ಲಕ್ಷದ ಹೊನ್ನಹೊಳೆಯು-
ಹರಿಯುತ್ತಿಹುದು
ಪರದೇಶಿಯರಿವೆಯನು ಉಡುವ-
ಸೊಗಸಿನಲಿ "
ಎಂದು ಅಲ್ಪರಿದ ಬಾಪೂನ ನಾಡೊಳಗಿಂದು
ಕೋಟಿ, ಅಬ್ಜವು ಸೂರೆ! ಅನ್ನಕೆಂದು !!
ಮತ್ತೆ ಹತ್ತಾರಬ್ಜ ಅರಿವೆಯೌಷಧಿಗೆಂದು
ಪರವಿದ್ಯೆ ಬಿಟ್ಟು ಪರಕೀಯ ವಿದ್ಯಕ್ಕೆಂದು

……

ನಾಟಕದ ಸೋಗಿನಾ 'ಭೀಮ' ಶಕ್ತಿಯ-
-ಗುಂಗು
ಬರಿ ಬಣ್ಣ ಪಡದೆಗಳ ನೆಚ್ಚಿರುವ ರಂಗು
ಹೆಜ್ಜೆಹೆಜ್ಜೆಗು, ಉಸಿರುಉಸಿರಿಗೂ ಢೋಂಗು
ಒಳಗೊಳಗೆ ಹೆಣೆಯುತಿದೆ ಪರಕೀಯ ಹಂಗು
ಬಿಕ್ಕೆಗಾಗಿಯೆ ಛಟಪ ದುರಗಮುರಗಿಯ-
-ಲಡ್ಡು
ಹತ್ತು ಯತ್ನದಿ ಹಾಲು ಕರೆದೀತೆ ಗೊಡ್ಡು ?

……

ಅಧಿಕಾರ ಅಧ್ಯತೆಯ ದಾಹ ದಾವಾನಲಕೆ
ಅನೃತದಮೃತವ ಪೂಸೆ, ಬಹುದೆ ಚಿರಜೀವಿಕೆ?
ಗುಂಪುಗುಂಪಿನ ರಂಪು, ಒಳಜಗಳ, ಸೆಣೆಸಾಟ
ತನ್ನದೇ ಸರಿಯೈ; ಸಮರ್ಥನೀಯವು ಬೇಟ,
ನಡೆದಿಹುದು ಗಾಳಿ ಹಡಗದಲಿ ಹಾರಾಟ
ವ್ಯರ್ಥಹಣ ಹಾಳುಗೈಯುತ್ತಲಿದೆ ಏರಾಟ
ವೇಳೆ ಉತ್ಸಾಹ ಹಾಳೋ ಗೂಳಿ ಗುಟುರಾಟ
ಆ ಸಭೆಯು, ಈ ಸಭೆಯು ಆ ಸಮಿತಿ,-
-ಈ ಸಮಿತಿ
ಎಷ್ಟೊಂದು, ಏನೆಷ್ಟು, ಇಲ್ಲದಕೆ ಇತಿಮಿತಿ
"ಹತ್ತು ಹೊಲೆಯರು ತೊಗಲಮಿಣಿಯ ಹದ
ಕೆಡಿಸಿದರು"
ಎಂಬ ಗಾದೆಯ ಮಾತಿನಂತಿಹುದು-
-ಈ ಚೆದುರು !
ಏನು ಔಷಧಿ ಮಾಡೆ ಬಿಟ್ಟೀತು ಮಡ್ಡು
ಹತ್ತು ಯತ್ನದಿ ಹಾಲು ಕರೆದೀತೆ ಗೊಡ್ಡು ?

……

ನಾಡರಿಕೆ, ನುಡಿಯರಿಕೆ, ಸಂಸ್ಕೃತಿಯ ಅರಿಕೆ
ಸರ್ವೋನ್ನತಿಯ ಅರಿಕೆ; ಚಿಗುರಲಿಹ-
-ಮಾಮರಕೆ
ಅಯ್ಯೊ ಈ ಜನವೆಲ್ಲ ಆಯ್ತು 'ಬಂದರಿಕೆ'
ಚಿಗುರಗೊಡದಿದ್ದು ಮರವ 'ಕರ' ಚಾಚಿ-
-ಚಿವುಟ
ಹೂ ಬಿಡದು ಮರ ನಿಯಮನಿರ್ಬಂಧದಲಿ
-ಕಮರಿ
ಕರ-ನಿಯಮ-ನಿರ್ಬಂಧಗಳ ಭರಭರಾಟಿ
ಮಿಡಿ ಹೀಚು ಬಿದ್ದು ಮಣ್ಪಾಲು ತುಂಬುದುರಿ
ಟೊಂಗೆಯೊಣಗುತ್ತಲಿದೆ, ಬಡ್ಡಿ-
-ಸೊರಗುತ್ತಲಿದೆ
ಬೇರು ಸಡಿಲಾಗುತ್ತಿವೆ, 'ಬಂದರಿಕೆ' ಹೆಚ್ಚೆ
ನಾಡಿಗೆಂಥದು 'ಬಂದಿತನ್ವ ಈ ರಚ್ಚೆ !
ಏನು ಮಾಡಲಿ ತೊಳೆದು ಕಳೆಯಲೀ ಜಿಡ್ಡು
ಹತ್ತು ಯತ್ನದಿ ಹಾಲು ಕರೆದೀತೆ ಗೊಡ್ಡು ?

……

ತಾಯಿ ತಟ್ಟನೆ ಗಲ್ಲಗೈ ತೆಗೆದು ಕಣ್ಣೆತ್ತಿ
ನೋಡೆ ಸಂತಸವು ತುಂಬಿತು ಚಿತ್ತ ಭಿತ್ತಿ
ಚಿತ್ತ ಚಿತ್ತಾರಗೊಂಡಿತು, ಮೂಡಿತಾಸೆ
ಯುವಕ ಕಂದರ ಕಂಡು, ಹರುಷ ಸೂಸೆ,
ತುಂಬಿ ಬಂದಿತು ಹೃದಯ, ಮಾತಾಯಿ
ಭಾರತಿ
ದೇವಸುಂದರ ಕಂದರಿಗೆ ನುಡಿದಳೀ ರೀತಿ:—
ದೇವ ಕಂದಾ, ಓ ಹರಿಗಡಿಯದಾನಂದ !
ನಿನ್ನಲ್ಲೆ ಮೊಳೆಯುತಿದೆ ಸರ್ವೋನ್ನತಿಯ
ಚೆಂದ
ಅಳಿಸಿ ಬಿಡು, ಈ ಅನೈಸರ್ಗಿಕದ ನೀತಿ
ನಿಯಮಗಳ ಕಟ್ಟನ್ನು, ಕರಭಾರ ರೀತಿ
ಸಡಿಲು ಸಂರಕ್ಷಣೆ, ನ್ಯಾಯ ದಾನ
ನಿರುದ್ಯೋಗ ದುಮ್ಮಾಳದ ತಾನ, ತಾನ,
ಭೂದಾನ, ಧನದಾನ ಮತ್ತೆ ಶ್ರಮದಾನ
ಸಂಪತ್ತಿದಾನ, ಸೇವಾದಾನ, ಸಂತೆ
ಹಪಾಪಿ ಹೊಕ್ಕಂಥ ಜೀವನದ ಚಿಂತೆ
ಗ್ರಹಣ ಹಿಡಿದಾಗ ಕಿರಿಚುವ ತಿರುಕನಂತೆ
ತೊರೆದುಬಿಡು, ಮರೆತುಬಿಡು, ಈ ಎಲ್ಲ
ಕಂತೆ !

……

" ಅನ್ನ, ಅರಿವೆಯು, ವೈದ್ಯ, ವಿದ್ಯೆಯ
ಸಮೃದ್ಧಿ
ಈ ಚತುರ್ಮುಖದಲೇ ಜೀವನದ ವೃದ್ಧಿ "
ನೆರೆನಂಬಿ ಈ ಮಂತ್ರ ಏಳು ಮುನ್ನುಗ್ಗು
ಜಗದಲೆ ಜಗನ್ನಾಥನನು ಕಾಂಬ ಹಿಗ್ಗು
ಪ್ರತಿಯೊಂದು ಗೃಹವೆ ಗುಡಿ; ಗೃಹಿಣಿ
ಮಾತಾಯಿ
ಗೃಹಸ್ಥನೆ ದೇವಪಿತ; ಕಂದರೆಲ್ಲರು ಬಾಯಿ
'ವಿದ್ಯೆ'ಗಾಗಿಯೆ ಅನ್ನ, ಅರಿವೆ, ಮೇಣ್
ವೈದ್ಯ
ನಡೆದಿರಲು ಜೀವನವೆ ದೇವ ನೈವೇದ್ಯ
ಅಕ್ರಮಣವಲ್ಲಿಲ್ಲ, ಅನ್ಯಾಯವಿಲ್ಲ
ಅಧಿಕಾರದಾಹದಾ ಸೊಲ್ಲೆ ಅಲ್ಲಿಲ್ಲ
ಸಂರಕ್ಷಣೆಯ ಅವಶ್ಯಕತೆಯೆ ಇಲ್ಲ
ನೆಲ-ನೀರು-ಗಾಳಿ-ಬಾನ್-ಬೆಳಕು,ಸರ್ವರದು
ಯಾರ ಸೊತ್ತೂ ಅಲ್ಲ ಎಂಬ ತೆರನಿಹುದು
ಇವುಗಳನು, ಹೆಚ್ಚಿಸಲು, ಕಡಿಮೆ ಗೈಯಲು-
ಬರದು
ನೈಸರ್ಗಿಕದ ಈ 'ಪಂಚಶೀಲ'ದ ಬಿರುದು
ಸರ್ವದಾ ನಿನ್ನ ಹೃದಯದಲಿ ಜಾಗ್ರತವಿದ್ದು
ಇದಕೆ, ತಕ್ಕಂತೆ 'ಜೀವನ'ವನ್ನು ತಿದ್ದು

……

ಪ್ರಾಣಿಯಂತೆ ಬದುಕಬೇಡ, ಜೀವಿಯಂತೆ-
-ಜೀವಿಸು
ಮೂರುಕಾಲ ಒಳ್ಳೆಯದೆನೆ ಮಾತ್ರ ನೀನು
ಸೇವಿಸು
ಭದ್ರ ಶುಭಂ ಮಂಗಲವನು ಸರ್ವಕಾಲ
ಭಾವಿಸು
ನಾಡನೆಲ್ಲ 'ದೇವಭಾವ'ದಿಂದ ನೀನು
ತೀವಿಸು !
ಧರ್ಮದರಿವಿನಲಿ ತಾಳುವುದೆ ಜೀವನವು
ದೇವನರಿವಿನಲಿ ಬಾಳುವುದೆ ಜೀವನವು
'ತಾಳಿದವ ಬಾಳುವನು! ಬಾಳಲಿಕೆ ತಾಳು
'ತಂತ್ರ'ವನು ತೊರೆದು ಈ ಮಂತ್ರ
ಊದೇಳು
ಉದಯವಾಗಲಿ 'ದೇವ ಜೀವನ'ದ ಬಾಳು !

—ಶ್ರೀ ದೇವದತ್ತ

ಲೇಖಕರು: **ಆನಂದಕಂದ**



# ಬೀರಣ್ಣನ ದರ್ಶನ

ಹಳ್ಳಿಯ ಒಬ್ಬ ರೈತ ಬೀರಣ್ಣ. ಹಳೆಯ ಸಂಪ್ರದಾಯದಲ್ಲಿ ಬೆಳೆದ ಅವನಿಗೆ ತನ್ನ ಮಗನ ರೀತಿ, ನಡತೆ ಸರಿಕಾಣಲಿಲ್ಲ. ಉಪ್ಪುಂಡ ಧನಿಗೆ ಎರಡು ಬಗೆಯುವದೇ? ಧನಿಗಾಗಿ ಮಗನನ್ನೇ ಅವನು ಬಲಿಕೊಟ್ಟ. ಭೂಸಮಸ್ಯೆಯ ಹಿನ್ನೆಲೆಯಲ್ಲಿರುವ ಈ ಕಥೆ ದಾರುಣವಾದ ಚಿತ್ರವನ್ನು ಕೊಡುತ್ತದೆ.

"ನೋಡು ರಾಜು, ಈ ಧರ್ಮ-ಅಧರ್ಮಗಳ ನಡುವೆ, ನೀತಿ-ಅನೀತಿಗಳ ನಡುವೆ—ಎಲ್ಲೆಲ್ಲಿಯೂ ಯಾವಾಗಲೂ ಘರ್ಷಣೆ ನಡೆದೇ ಇರುತ್ತದೆ. ಈ ಘರ್ಷಣೆ ನಾಗರಿಕರು, ಗಾವಿಲರು ಎಂದು ಭೇದಮಾಡುವುದಿಲ್ಲ; ಸುಸಂಸ್ಕೃತರು ಅಸಂಸ್ಕೃತರು ಎಂದು ಲೆಕ್ಕ ಹಾಕುವದಿಲ್ಲ. ಲೌಕಿಕ ಬುದ್ಧಿಯುವರಾದ ನಮಗೆ ಈ ಘರ್ಷಣೆಯ ಪರಿಣಾಮದ ಅರಿವು ಇರುವುದಿಲ್ಲ. ಘರ್ಷಣೆಯ ಅಜ್ಞಾತ ಆಘಾತಗಳಿಂದ ನಾವು ಗಾಬರಿ ಮಾತ್ರ ಆಗುತ್ತೇವೆ!"

"ಈ ಪ್ರಸ್ತಾವನೆ, ನೀನು ಹೇಳಲಿರುವ—ನಿನ್ನ ಹಳ್ಳಿಯಲ್ಲಿ ನಡೆದ—ಘಟನೆಗೆ ಸಂಬಂಧಿಸಿದುದೇನು ವಾಸಣ್ಣ?"

"ಆ ಘಟನೆಯೊಂದನ್ನೇ ಲಕ್ಷಿಸಿ ನಾನು ಈ ಮಾತುಗಳನ್ನು ಹೇಳುತ್ತಿಲ್ಲ. ಆದರೆ ಆ ಘಟನೆ, ಈ ಸತ್ಯವನ್ನು ಕಾಣುವಂತಹ ಹೊಸ ದೃಷ್ಟಿಯನ್ನು ನನಗೆ ಕೊಟ್ಟಿದೇನೂ ಸುಳ್ಳಲ್ಲ!"

"ಹೀಗೆ ಮತ್ತೆ ಮತ್ತೆ ಹೇಳಿ ನನ್ನಲ್ಲಿ ಕುತೂಹಲವನ್ನು ಹೆಚ್ಚಿಸುತ್ತಿದ್ದಿಯೆ, ಆಯಿತು; ನಿನ್ನ ಹಳ್ಳಿಯಲ್ಲಿ ನಡೆದ ಘಟನೆಯೇನೆಂಬುದನ್ನು ಹೇಳಲೊಲ್ಲೆ."

"ನೋಡು ರಾಜು, ಒಂದೊಂದು ನಡೆದ ಘಟನೆಗಳು ಕಟ್ಟುಕಥೆಗಳಿಗಿಂತಲೂ ಅದ್ಭುತವೆನ್ನಿಸುತ್ತವೆ. ಅಂತಹ ಅದ್ಭುತ ಘಟನೆಗಳಲ್ಲಿ ಇದೂ ಒಂದು!"

"ನನ್ನಲ್ಲಿ ಕುತೂಹಲವನ್ನು ಕೆರಳಿಸುವುದಕ್ಕೆ ಹೂಡಿದ ತಂತ್ರವಲ್ಲವಷ್ಟೆ!"

"ಇದೇನು ನಿನ್ನ ಮಾತು ರಾಜು! ನಿನ್ನೊಂದಿಗೆ ನಾನೆಂದಾದರೂ ನಗೆಯಾಟವಾಡಿದ್ದೇನೆಯೆ? ಈಗ, ನಡೆದ ಕಥೆಯನ್ನು ಹೇಳುತ್ತೇನೆ ಕೇಳು. ನಾನು ನನ್ನ ಹೊಲದ ವ್ಯವಹಾರಕ್ಕಾಗಿ ನನ್ನ ಹಳ್ಳಿಗೆ ಹೋದೆನಲ್ಲ! ಅಂದೇ ರಾತ್ರಿ ನಮ್ಮ ರೈತ ಬೀರಣ್ಣ, ಆತನ ಮಗ ದೊಡ್ಡಯ್ಯ ಇವರಿಬ್ಬರಲ್ಲಿ ಹೀಗೆ ಹೀಗೆ ಮಾತು-ಕಥೆಗಳು ನಡೆದುವಂತೆ:

"ಏ ದೊಡ್ಡಣ್ಣಾ! ಅಲ್ಲದ ಸೊಕ್ಕು ಮನಿಸ್ಯಾಗ ಪಾಡ ಅಲ್ಲ; ಸುಮ್ಮನs ನಾ ಹೇಳಿದ್ಹಾಂಗ ಕೇಳು. ವಾಸಪ್ಪನವರು ಈ ಊರಿಗೆ, ನಮ್ಮ ಹೊಲದ ಸಲುವಾಗೇ ಬಂದಾರಂತ. ಸಂತಸುಖದಿಂದ ನಿಂತ ಬಾಕೀ ಹಣಾ ಎಲ್ಲಾ ಅವರಿಗೆ ಒಪ್ಪಿಸಿಬಿಡು. ಮುಂದ ಅವರ ಮನಸಿಗೆ ಬಂದರ, ಹೊಲಾ ನಮಗ ಹಚ್ಚಲಿ; ಬ್ಯಾಡಂದರ ಏನ ಮಾಡಿಕೋತಾರೋ ಮಾಡಿಕೊಳ್ಳಿ! ತಮ್ಮ ಹೊಲಾ, ತಮ್ಮ ಮಾತು!"

"ನೀ ಮೂಲೀ ಹಿಡಿದು ಮಲಗೀದಿ; ಸುಮ್ಮನ ಬಿದ್ಕೋಬಾರದs? ನಿನಗೆಲ್ಲಾ ಯಾತಕ್ಕ ಬೇಕಾಗೆಯ್ತಿ ಒಣಾ ಉಸಾಬರಿ! ಹೊಲಾ ಯಾರದಂತ ತಿಳಿದೀದಿ? ದುಡಿಯೂ ರೈತಂದು ಹೊಲಾ! ಸರಕಾರ ಕಾಯ್ದೇನs ಮಾಡೆಯ್ತಿ ಹಾಂಗ!"

ಬೀರಣ್ಣ ಮರುಕದಿಂದ ಹೇಳತೊಡಗಿದ: "ಸರಕಾರ ಏನಾದರೂ ಕಾಯದೇ ಮಾಡಿಕೊಳ್ಳವೊಲ್ಲದ್ಯಾಕ; ನಾವು ದೇವರ ಕಾಯದೇ ಅನುಸರಿಸಿ ನಡಕೋಬೇಕೋ ನನ್ನ ಮಗನ! ನಾವು ಆ ಹೊಲದಾಗ ದುಡೀತಿದ್ದರೂ ನಮ್ದ್ಹ್ಯಾಂಗ ಆದೀತು ಆ ಹೊಲಾ? ವಾಸಪ್ಪನವರ ಯಜಮಾನರು, ಮನ್ಯಾಗಿನ ಹಣಾನೆಲ್ಲಾ ಸೂರಿಮಾಡಿ ಆ ಹೊಲಾ ಕೊಂಡುಕೊಂಡದ್ದು ನಾನು ಕಣ್ಣಾರೆ ಕಂಡ ಸಂಗತಿ. ಆ ಹೊಲ ಮಾರಾಟಕ್ಕೆ ಹೊಂಟಾಗ, ನಾನs ಆ ಯಜಮಾನರಿಗೆ ಹೇಳಿದೆ: 'ಯಪ್ಪಾ, ಒಳ್ಳೇ ಐನ್ ಕಟ್ಟಿನ ಹೊಲ; ಬಂಗಾರ ಬಿತ್ತಿ ಬಂಗಾರ ಬೆಳಿಯುವಂಥಾ ನೆಲ! ಆ ಮುಗ್ಗಲಗೇಡಿಗೊಳು, ದುಡಿಲಾರದೇ ಒಣಾ ಹಿರೇತನಕ್ಕ ಬಿದ್ದು ಸಾಲಗಾರನ ಮಕ್ಕಳಾದರು. ನೀವು ಮಾತ್ರ ಅದನ್ನ ಬಿಡಬ್ಯಾಡ್ರಿ' ಅಂತ! ಯಜಮಾನರಿಗೂ ನನ್ನ ಮಾತು ಒಪ್ಪಿಗಿ ಆತು. ಮನಿಯೊಳಗ ಇದ್ದುಬಿದ್ದದ್ದನ್ನೆಲ್ಲಾ ಹಾಕಿ ಹೊಲಾ ಹಿಡಿದರು. ಈ ವ್ಯಾಪಾರದೊಳಗ ಅವರಿಗೆ ಮಕ್ಕಳ ಮೈಯ್ಯಾಗಿನ ಬಂಗಾರಾಸಯಿತ ಮಾರಬೇಕಾತು. ಆ ಮಾತಿಗೆ ಈಗ ನಾಲೊತ್ತು ವರ್ಷ ಆಗಿರಬೇಕು ನೋಡು; ಅಂದಿನಿಂದನೂ ಆ ಹೊಲಾನ ನಾನs ಮಾಡಿಕೋತs ಬಂದೀನಿ! ಯಜಮಾನರ ದೈವ ಒಳ್ಳೇದು; ಆ ಭೂಮಿತಾಯಿ ನನ್ನ ದುಡಿಕೀನ ಎಂದೂ ಹುಸಿ

ಹೋಗಗೊಡಲಿಲ್ಲ. ಆ ಹೊಲದ ಕುಲಗುಣದಿಂದಲೇ ನನ್ನಮನಿ ಗೋಕುಲನಗರದ್ಹಾಂಗ ಅತು. ಮನ್ಯಾಗ ದನಾಕರಾ ತುಂಬಿ ತುಳಿಕಿದೂ. ಕಾಳು-ಕಡಿ ಇಡಲಾಕ ತೆರವು ಇರತಿದ್ದಿಲ್ಲ. ಆ ಯಜಮಾನರು ನನ್ನಮ್ಯಾಲ ಮಾಡಿದ ಉಪಕಾರ ದೊಡ್ಡದು. ಅಂತವರ ಮ್ಯಾಗ ನಾವು ಎರಡು ಬಗೀ ಬಾರದು ದೊಡ್ಡಣ್ಣಾ ! ”

“ ನೀನು ಹೇಳೂದೆಲ್ಲಾ ಹಿಂದಿನ ಯುಗದ ಮಾತು ಯಪಾ ! ಈಗ ಕಾಲ ಎಲ್ಲಾ ಬದಲ ಆಗೆಯ್ತಿ. ಆಯತಾಗೇ ಆ ಹೊಲಾ ನಮ್ಮದು ಆಗತಿರುವಾಗ, ಅದನ್ನ ನಾವ್ಯಾಕ ಬಿಡಬೇಕು ? ನಿನ್ನ ಮಾತಿನ್ಹಾಂಗ ನಾ ನಡದರ, ಊರೆಲ್ಲಾ ನನಗ ಹುಚ್ಚ್ಯಂತ ಛೀ ಹಾಕೀತು!”

“ ಅಂದರ ಏನಲೇ ನಿನ್ನ ಮಾತು ? ನ್ಯಾಯಾ, ನೀತಿ ಎಲ್ಲಾ ಈ ಊರುಬಿಟ್ಟು ಹೋದುವೋ ಏನು ? ”

“ ಅದನ್ನೆಲ್ಲಾ ತೊಗೊಂಡು ನೀ ಏನ ಮಾಡತೀ ? ನಾ ಇದ್ದೀನಿ, ಆ ಹೊಲಾ ಐತಿ ! ವಾಸಪ್ಪ ಬಂದು ಈಗ ಏನ ಮಾಡತಾನೋ ಮಾಡಲಿ ! ಅಂವಗ ಹಿಂದಿನ ಬಾಕಿಗೆ ಗಂಟೇ ತೋರಸ್ತೀನಿ. ಇಷ್ಟs ಅಲ್ಲ ; ಹೊಲದ ಕಡೆ ಹೆಜ್ಜೀ ಇಟ್ಟರ, ಅಂವ ತಾಯಿ ಹೊಟ್ಟಿಂದs ಹುಟ್ಟದ್ದನೋ ಇಲ್ಲೋ—ಅನ್ನೂಹಾಂಗ ಮಾಡಿಬಿಡತೀನಿ. ”

“ ಇದು ರೀತಿ ಅಲ್ಲೋ ತಮ್ಮಾ ! ನ್ಯೆ-ಯಾಗ ಕಸುವು ಐತೀ ಅಂತ ಬಾಯಿ ಬಲ್ಲಾಂಗ ಮಾತಾಡಜ್ಯಾಡ. ನೀನು ನನ್ನ ಮನಿತನಕ್ಕ ಮಗಾ ಆಗಿ ಬದಿಕಿ ಉಳಿದದ್ದಕ್ಕೂ ನನ್ನ ಆ ದೇವರಂಥಾ ಧಣಿಯೇ ಕಾರಣ. ಐದನೇ ವರಸದ ವಯಸ್ಸಿನಾಗ ನೀನು ಕಟ್ಟಿನ ಜ್ವರಾ ಬಂದು ಬಿದ್ದರ, ಮಂದೆಲ್ಲಾ ಅಂದರು — ಹುಡಗ ಕೈ ಬಿಟ್ಯಾಂಗs—ಅಂತ. ಆಗ ಯಜಮಾನರು ಮನಿಗೇ ಬಂದು, ಹಗಲಿರುಳೂ ಇಲ್ಲೇ ಕೂತು, ಅವುಸುದೀ ಕೊಟ್ಟು ನಿನ್ನ ಬದಿಕಿಸಿದರು. ಮೂರುದಿನಾ ಅಂತೂ ಅವರಿಗೆ ಊಟ ಇರಲಿಲ್ಲ—ನಿದ್ದಿ ಇರಲಿಲ್ಲ. ಅವರ ಪುಣ್ಣೇದಿಂದ ಬದಿಕಿ ಉಳಿದ ಕೂಸು ನೀನು!”

“ ಎಲ್ಲಾರನ್ನೂ ಬದಕಿಸಲಾಕ ದೇವರು ಇರತಾನ ಏಳ ! ”

“ ಭಪ್ಪರೆ ಮಗನs ! ನಿನ್ನಂತಾ ಉಪಕಾರಗೇಡಿಗೊಳಿಗೆಲ್ಲಾ ದೇವರು ಇರತಾನs?”

“ ದೇವರು ಇರತಾನೋ ಇಲ್ಲೋ ನನಗೇನೂ ಗೊತ್ತಿಲ್ಲ. ನಮ್ಮನ್ನೆಲ್ಲಾ ಸಂರಕ್ಷಣ ಮಾಡೋ ಸರಕಾರ್ಯೆತಿ ; ಅದರ ಕಾಯದೆ—ಕಾನೂನು ಅದಾವು. ಇನ್ನ ಹೆಚ್ಚು ಮಾತಾಡಬ್ಯಾಡ ; ಅದೂ ಒಂದು ಕಾಲನ್ನ ಮುರಿದು ಬಿಟ್ಟೇನು ! ನಾಳೆ ನಸಿಕಿಲೆ ನಾನು ದೊಡ್ಡೂರಿಗೆ ಹೋಗಿ, ಅಲ್ಲಿಯ ಹಿರ್‍ಯಾರನ್ನ ಕೇಳಿ ಬರತೀನಿ—ಅವರು ಏನ ಹೇಳತಾರೋ ಅದರಂತೆ ಮುಂದಿನ ಯೆವಸ್ತಾ ! ”

ಬಿಸಿಯುಸಿರೊಂದನ್ನು ಚೆಲ್ಲಿ ಬೀರಣ್ಣ ಸುಮ್ಮನೆ ಮಲಗಿಕೊಂಡನು.

ಹಳ್ಳಿಯ ಜನರು ನನ್ನ ಬಳಿ ಬಂದು ಮಾತನಾಡಿ, ನನ್ನಲ್ಲಿ ಭೀತಿ-ನಿರಾಶೆಗಳನ್ನು ಹೆಚ್ಚಿಸುತ್ತಿದ್ದರು. ದೊಡ್ಡಯ್ಯನ ದರ್ಪದ ನಡೆವಳಿಗಳನ್ನು ಕಥೆಮಾಡಿ ಹೇಳುತ್ತಿದ್ದರು. ದೊಡ್ಡಯ್ಯನೆಂದರೆ ಆ ಹಳ್ಳಿಯ ಪುಂಡದೊರೆ. ಎಲ್ಲರೂ ಅತನಿಗೆ ಹೆದರಿ ನಡೆದುಕೊಳ್ಳುವರು. ಅವನ ವಿಷಯದಲ್ಲಿ ಯಾರಲ್ಲಿಯೂ ಪ್ರೀತಿ-ವಿಶ್ವಾಸಗಳು ಕಾಣುತ್ತಿರಲಿಲ್ಲವಾದರೂ ಆತನ ಆಜ್ಞೆಯನ್ನು ಮೀರಿನಡೆಯುವ ಧೈರ್ಯ ಯಾರಲ್ಲಿಯೂ ಇರಲಿಲ್ಲ. ಇಂತಹ ಸ್ಥಳದಲ್ಲಿ ನಾನೇನು ಮಾಡಬೇಕೆಂಬುದೇ ನನಗೆ ತಿಳಿಯದಂತಾಯಿತು.

....ಮೂರು ವರ್ಷದಿಂದ ಬರಬೇಕಾದ ಕಂದಾಯದ ಹಣ ಬಂದಿಲ್ಲ..ಅಲ್ಲದೆ ಹೊಲವನ್ನು ಸ್ವಾಧೀನಕ್ಕೆ ತೆಗೆದುಕೊಂಡು ಅದರ ಮಾರಾಟ ಮಾಡಿದ ಹೊರತು, ತಂಗಿಯ ಮದುವೆಯ ಕಾರ್ಯ ನೆರವೇರುವಂತಿಲ್ಲ.. ತಂಗಿ ಬೆಳೆದು ದೊಡ್ಡವಳಾಗಿ, ತಾಯಿಯ ಕರುಳನ್ನು ಎಡೆಬಿಡದೆ ಕೊರೆಯುತ್ತಲಿದ್ದಾಳೆ. ..ಈ ಹೊಲದ ಮಾರಾಟದ ಭರವಸೆಯಿಂದಲೇ ನಾನು ತಂಗಿಗಾಗಿ ವರನನ್ನು ಗೊತ್ತುಮಾಡಿಟ್ಟೆ..ಈ ವಿಷಯವನ್ನು ರೈತ ಬೀರಣ್ಣನಿಗೆ ಹೇಳಿಕಳುಹಿದರೆ, ದೊಡ್ಡಯ್ಯನಿಂದ ನಿರಾಶೆಯನ್ನುಂಟುಮಾಡುವಂತಹ—ಉದ್ಧಟತನದ ಉತ್ತರ ಬಂದಿತು. ನಾನೇ ಪ್ರತ್ಯಕ್ಷ ಬಂದರೆ, ಏನಾದರೂ ಕಾರ್ಯ ಸುಗಮವಾದೀತೆಂದು ಭಾವಿಸಿ ಧಾವಿಸಿ ಇಲ್ಲಿಗೆ ಬಂದರೆ ಇಲ್ಲಿ ಎಲ್ಲವೂ ಕಗ್ಗತ್ತಲೆ ! ಅಯ್ಯೊ ! ಹಣದ ಅಭಾವದಿಂದ ತಂಗಿಯ ಲಗ್ನನಿಶ್ಚಯವನ್ನು ಮುರಿದುಬಿಡಬೇಕಾಗುವುದೋ ಏನೋ ! ಹಾಗೆ ಆದರೆ, ಜನರಲ್ಲಿ ಎಂತಹ ನಗೆಗೀಡು ! ನಮ್ಮ ತಾಯಿಯಂತೂ ಆಘಾತಗೊಂಡು ಸತ್ತುಹೋಗಬಹುದು.... ಮುಂದೆ ಗತಿಯೇನು ?..

ಈ ವಿಚಾರಗಳ ಹೊರಳಾಟದಲ್ಲಿಯೆ ಅಂದಿನ ರಾತ್ರಿಯನ್ನು ಕಳೆದೆನು. ಮರುದಿನ ಬೆಳಗಿನಲ್ಲಿ ಬೇಗನೆ ಎದ್ದು, ಪ್ರಾತರ್ವಿಧಿಗಳನ್ನು ತೀರಿಸಿ, ‘ ದೊಡ್ಡಯ್ಯನನ್ನು ಕರೆದುಕೊಂಡು ಬಾ ’ ಎಂದು ನಮ್ಮ ಹಳೆಯ ಸೇವಕ ತಿಪ್ಪಣನನ್ನು ಕಳುಹಿದೆನು.

ದೊಡ್ಡಯ್ಯ ಊರಲ್ಲಿಲ್ಲವೆಂದು ತಿಪ್ಪಣ್ಣ ವರ್ತಮಾನವನ್ನು ತಂದ. ನಾನು ಕಂಗೆಟ್ಟವನಾಗಿ, ಮುಂದೆ ಏನು ಮಾಡಬೇಕೆಂಬುದು ತಿಳಿಯದೆ, ಸುಮ್ಮನೆ ಕುಳಿತುಕೊಂಡೆನು. ನನ್ನವರಾಗಿ ನನಗೆ ಸೂಕ್ತಸಲಹೆಗಳನ್ನು ಕೊಡುವವರು ಅಲ್ಲಿ ಯಾರೂ ಇರಲಿಲ್ಲ. ಅಂಗಳದಲ್ಲಿ ಗುಬ್ಬಿಗಳುಕುಳಿತು ಚಿಂವಗುಡು

ತ್ತಿದ್ದವು. ಮನೆಯ ಮುಂಗೋಡೆಯ ಮೇಲೆ ಕುಳಿತುಕೊಂಡ ಎರಡು ಕಾಗೆಗಳು ಆಗಾಗ 'ಕಾ ಕಾ' ಎಂದು ಕಿರುಚುತ್ತಿದ್ದವು. ತಿಪ್ಪಣ್ಣ ಆತುರದಿಂದ ಓಡುತ್ತ ನನ್ನ ಬಳಿ ಬಂದು ಹೇಳಿದ:

"ನಿಮ್ಮ ಹಿರೀ ರೈತ ಬೀರಣ್ಣ ಬರಲಾಕ ಹತ್ಯಾನರಿ! ಎಂದೂ ಮನಿ ಬಿಟ್ಟು ಹೊರ ಬೀಳದಂವ ಇಂದ್ಯಾಕ ಹೊರಬಿದ್ದಾನೋ ಏನೋ!"

ಕೇಳಿ ನನ್ನ ಎದೆ ದಡದಡಿಸಿತು. ತಿಪ್ಪಣ್ಣ ಮತ್ತೆ ಮಾತನಾಡಿದ:

"ಥಾಳಮಾಡಿ, ಅಂವ ನಿಮಗ ಬಿಟ್ಟು ಅಗ ಬೇಕಂತs ಬರತಿರಬೇಕರಿ!"

ನನ್ನೆದೆ ಇನ್ನಿಷ್ಟು ದಡಗುಟ್ಟಿತು. ಬೀರಣ್ಣನನ್ನು ನನ್ನ ತಲೆಬಾಗಿಲಲ್ಲಿಯೆ ನೋಡಿದೆ. ಕೈಗೋಲು, ಕೆಂಚಮ್ಮ ಇವರ ಸಹಾಯದಿಂದ ಕುಂಟುತ್ತಲೇ ತಲೆಬಾಗಿಲನ್ನು ದಾಟಿ ಅಂಗಳದಲ್ಲಿ ಅಡಿಯಿಟ್ಟ. ಕೆಂಚಮ್ಮ ಬೀರಣ್ಣನ ತಂಗಿ; ವಿಧವೆಯಾದ ಮೇಲೆ ಮರುಮದುವೆ ಮಾಡಿಕೊಳ್ಳದೆ, ಚಿಕ್ಕತನದಿಂದಲೂ ಅಣ್ಣನ ಮನೆಯಲ್ಲಿಯೆ ಇರುತ್ತಿದ್ದಳು. ನಾನು ಅವಳನ್ನು ಚೆನ್ನಾಗಿ ಗುರುತಿಸಿದೆ.

ನನ್ನನ್ನು ಕಂಡೊಡನೆಯೆ ಇಬ್ಬರ ಮುಖದಲ್ಲಿಯೂ ಆದರ-ಆತ್ಮೀಯತೆಗಳ ಮೆಲುನಗೆ ಮೂಡಿ ನಿಂತಿತು. ಅದನ್ನು ನೋಡಿ ನನಗೆ ಧೈರ್ಯವೆನಿಸಿತು. ನಾನೂ ಮುಖದಲ್ಲಿ ಮೆಲು ನಗೆ ಮೂಡಿಸಿಕೊಂಡು, ಅವರನ್ನು ಸ್ವಾಗತಿಸಲು ಎದ್ದುನಿಂತೆ. ಬೀರಣ್ಣ ನಿಧಾನವಾಗಿ ಮೆಟ್ಟಲುಗಳನ್ನು ಹತ್ತಿ ಪಡಸಾಲೆಯಲ್ಲಿ ಬಂದ, ಹನಿಗೊಂಡ ಕಣ್ಣು, ಅಂತಃಕರಣ ಉಕ್ಕಿಬಂದ-ಕಂಠ ಇವುಗಳಿಂದ ಕೂಡಿ ನನ್ನ ಬಳಿಸಾರಿ, ನನ್ನ ಪಾದಗಳ ಮೇಲೆ ಬಿದ್ದುಕೊಂಡ.

ನನಗೆ ಯಾವುದೂ ತಿಳಿಯದಂತಾಯಿತಾದರೂ ನನ್ನ ಕಂಠವೂ ತುಂಬಿಬಂದಿತು. ಗದ್ಗದ ಸ್ವರದಲ್ಲಿಯೆ ನುಡಿದೆ:

"ಏನು ಬೀರಣ್ಣಾ, ನೀನು ಹಿರಿಯ ಮನುಷ್ಯ! ನಾನು ನಿನ್ನ ಮುಂದಿನ ಹುಡುಗ. ನೀನು ನನ್ನ ಕಾಲಿಗೆ ಬೀಳಬೇಕೆ? ಏಳು ಏಳು!!" ಎಂದು ಆತನ ತಲೆಯನ್ನು ಹಿಡಿದು ಎಬ್ಬಿಸಿದೆ. ಬೀರಣ್ಣ ನನ್ನ ಮುಂಗಡೆಯಲ್ಲಿಯೆ ಕುಳಿತುಕೊಂಡ; ಸ್ವಲ್ಪ ದೂರದಲ್ಲಿ ಕೆಂಚಮ್ಮ ಕುಳಿತಳು.

ಮೊದಲು ಉಭಯ-ಕುಶಲ-ವಿಚಾರದ ಸಂಪ್ರದಾಯ ಮುಗಿಯಿತು. ನಾನು ಅದಕ್ಕೆ ಸಂಪ್ರದಾಯವೆನ್ನುತ್ತಿದ್ದರೂ ಬೀರಣ್ಣ-ಕೆಂಚಮ್ಮರ ಕುಶಲ ಪ್ರಶ್ನೆಗಳಲ್ಲಿ ಆತ್ಮೀಯತೆ ತುಂಬಿ ತುಳುಕುತ್ತಿರುವುದನ್ನು ನಾನು ಕಂಡೆ. ಬೀರಣ್ಣ ಕೃತಜ್ಞತೆಯ ಮೂರ್ತಿಯಾಗಿ ಹೇಳತೊಡಗಿದ:

"ವಾಸಣ್ಣಾ, ನಿಮ್ಮ ಮನಿತನದ ಉಪಕಾರಾ ನಾ ಎಂದೂ ಮರಿಯೂಹಾಂಗಿಲ್ಲ. ನಿಮ್ಮ ತಂದೀ-ತಾಯಿವು ಐದು ಬಟ್ಟು ನನ್ನ ಹೊಟ್ಯಾಗ ಮೂಡಿ ನಿಂತಾವ್ರಿ! ಮನ್ಯಾಗ ಬ್ಯಾಳ್ಯಾಗ ಬೆಲ್ಲ ಬಿದ್ದರ ಆತು; ನಿಮ್ಮ ಯಜಮಾನರು ನನ್ನ ಒಂದು ದಿನಾನೂ ಮರೀತಿದ್ದಿಲ್ಲ.! ಇಲ್ಲೇ ಊಟ ಆಗಲಿ— ಅಂತ ಹೇಳವರs! ಮತ್ತ ಆ ಪುಣ್ಯೇವಂತಿ ನಿಮ್ಮ ತಾಯಿ— ಎಷ್ಟು ನೀಡಿದರೂ ಸಾಕಿಲ್ಲ ಅವರಿಗೆ! ವಾಸಣ್ಣಾ, ಆ ಹಿಂದಿನ ದಿನಾ ಎಲ್ಲಾ ನೆನಪಾದರ, ಹಾಂಗs ಹಿಗ್ಗು ಉಕ್ಕಿ ಬರತೈತಿ!"

ನಾನು ಸಮಾಧಾನಸ್ವರದಲ್ಲಿ ಹೇಳಿದೆ:

"ನಾನೂ ನಮ್ಮ ತಾಯಿಯ ಬಾಯಿಂದ ಎಲ್ಲಾ ಕೇಳೀನಿ—ಬೀರಣ್ಣಾ! ನಮ್ಮ ನಿಮ್ಮ ಮನೆತನಗಳ ನಡುವೆ ಹೊಲದ ಧಣಿ-ರೈತ-ಅಂಬೂ ಭೇದವೇ ಇರಲಿಲ್ಲಂತ. ಇಬ್ಬರ ಸುಖ-ದುಃಖ ಇನ್ನೊಬ್ಬರದು—ಅಂತ ತಿಳಿದು ನಡಕೋತಿದ್ದರಂತ. ಈಗ ಆ ಕಾಲವೆಲ್ಲಾ ಬದಲಾಯ್ತು ಬೀರಣ್ಣಾ! ಪಣತೀ ದೀಪದ ಬೆಳಕು ಹೋಗಿ, ಮಿಂಚಿನ ದೀಪದ ಬೆಳಕು ಬಂದಯ್ತಿ!"

"ಏನು ಬೆಳಕು ಬಿಡ ನನ್ನ ದೊರಿ! ಹೊರಗಿನ ದೀಪ ನಮಗೆಷ್ಟು ಬೆಳಕು ಕೊಟ್ಟೀತು. ಮನಿಸ್ಯಾನ ಬದಿಕಿನಾಗಿನ ಕಗ್ಗತ್ತಲೀ ಕಳಿಯಾಕ, ಒಳಗ ದೀಪ ಬೆಳಗಬೇಕು—ಅಂತ ನಿನ್ನ ಯಜಮಾನರು ಆಗಾಗ ಹೇಳುತಿದ್ದರು! ಬಂಗಾರದ ಮಾತದು!"

ಬೀರಣ್ಣನ ಪ್ರತಿಯೊಂದು ನಡೆವಳಿ, ಪ್ರತಿಯೊಂದು ನುಡಿವಳಿ—ನನ್ನನ್ನು ಮುಗ್ಧಗೊಳಿಸಿದುವು. ಏನು ಮಾತನಾಡಬೇಕೆಂಬುದೇ ನನಗೆ ತಿಳಿಯದಂತಾಯಿತು. ಇಂತಹ ಶ್ರದ್ಧಾಪೂರ್ಣ ಪ್ರೀತಿಜೀವದ ಮುಂದೆ, ಹೊಲದ ವ್ಯವಹಾರದ ನೀರಸ ಮಾತುಗಳನ್ನು ತೆಗೆಯಬೇಕು ಹೇಗೆ?

ಕೆಂಚವ್ವ ವಿನಯದ ಧ್ವನಿಯಲ್ಲಿ ಹೇಳತೊಡಗಿದಳು:

"ವಾಸಪ್ಪನವರ, ನಮ್ಮ ದೊಡ್ಡಣ್ಣ ಒಂದು ತರದ ಮನಿಸ್ಯಾನ್ರಿ! ನೇಗಲ ಕುಳಾ ಬಡದು ಈ ಹಿರ್ಯಾನ ಒಂದು ಕಾಲು ಬಾದ ಆದಾಗಿನಿಂದ, ದೊಡ್ಡಣ್ಣನs ಎಲ್ಲಾ ಮನಿತನದ ಕಾರಬಾರಾ ನೋಡಿಕೋತಾನ್ರಿ! ನಾಕ ಮಂದೀ ಮಾತು ಕೇಳಿ, ಏನೇನೊ ಕಾಯದೇ-ಕಾನೂನು-ಅಂತ ಹೇಳಿ, ನಿಮ್ಮ ಹೊಲದ ಹಣಾ ಕೊಡೂದು ನಿಲ್ಲಿಸಿಬಿಟ್ಯಾನ್ರಿ! ಅವನ ಈ ನಡತಿ ಈ ಹಿರ್ಯಾಗ ಏನೂ ಮನಸ್ಸಿಗೆ ಬಂದಿಲ್ಲರಿ; ಆದರ, ತಾ ನೋಡಿದರ ಪರಸ್ವಾಧೀನ! ಮಾಡತಾನ ಏನರಿ! ಸುಮ್ಮನs ಮೂಲ್ಯಾಗ ಮರಿಗಿಕೋತs ಬಿದ್ದಾನ ಅಯ್ತರಿ!"

ನಾನು ಬೀರಣ್ಣನ ಕಡೆಗೆ ಕುತೂಹಲಿಯಾಗಿ ನೋಡತೊಡಗಿದೆ.

"ವಾಸಣ್ಣ, ಈಗ ದೊಡ್ಡಯ್ಯನ ಬೆನ್ನ ಹತ್ತಿ ನಡಿದರ ಒಂದು ಕವಡಿ ಸುದಾ ನಿಮ್ಮ ಕೈಗೆ ಹತ್ತಲಾಕಿಲ್ಲ. ಮನ್ಯಾಗ ನೀವು ತಂಗೀ ಮದಿವೀ ಹೂಡೀರಿ! ನಿಮ್ಮ ಮಂದೀ ಮದಿವಿಗೆ ಎಷ್ಟು ಹಣಾ ಇದ್ದರೂ ಸಾಲೂದಿಲ್ಲ—ಅಂಬೂದನ್ನ ನಾ ಬಲ್ಲೆನಿ! ಅದರಾಗ ಮೂರು ವರಸಾತು; ಹೊಲದ ಹಣಾ ನಿಮಗ ಸಿಕ್ಕಿಲ್ಲ. ತುಟ್ಟೀ ದಿನಮಾನ; ಪಟ್ಟಣದಾಗ ಇರುವವರು ನೀವು! ಹೊಟ್ಟಿ ತುಂಬೂದs ನಿಮಗ ಕಷ್ಟ ಆಗಿದ್ದೀತು. ಇವೆಲ್ಲಾ ಮಾತು ಮನಿಸ್ಸ್ಯಾಗ ಬಂದು, ನಾನs ಕೆಂಚಮ್ಮಗ ಹೇಳಿದೆ: 'ವಾಸಪ್ಪನಾರ ಹತೀಲಿ ನನ್ನ ಮೆಲ್ಲಗs ಕರಕೊಂಡು ಹೋಗು'—ಅಂತ!"

ನಾನು ನಿರಾಶೆಯ ಸ್ವರದಲ್ಲಿ ಮಾತನಾಡಿದೆ:

"ದೊಡ್ಡಯ್ಯ ವಿರುದ್ಧ ನಿಂತಿರುವಾಗ, ನೀನೇನು ಮಾಡಬಲ್ಲೆ ಪಾಪ,—ಬೀರಣ್ಣಾ?"

ಕೆಂಚವ್ವ ಆತುರಧ್ವನಿಯಲ್ಲಿ ಹೇಳಿದಳು:

"ಏನಾದರೂ ಮಾಡಿ ಹೋಗಬೇಕಂತs ಬಂದಾನ್ರಿ ಈ ಹಿರ್ಯಾ!"

ನನಗೇನೂ ತಿಳಿಯದಂತಾಗಿ, ನಾನು ಬೀರಣ್ಣನ ಕಡೆಗೆ ಆಶೆಯ ನೋಟಗಳಿಂದ ನೋಡತೊಡಗಿದೆ. ಬೀರಣ್ಣ ಮಾತನ್ನಾರಂಭಿಸಿದ:

"ತಂಗಿ, ಆ ಹಮ್ಮಿಣೆ ಇತ್ತ ಕೊಡು. ವಾಸಣ್ಣಾ, ನಿಮ್ಮ ಮೂರು ವರುಷದ ಹೊಲದ ಕಂದಾಯದ ಹಣಾ ಎಷ್ಟು ಆಗತೈತ್ಯೋ ಆಗವೊಲ್ಲದ್ಯಾಕ. ನನ್ನ ಮಗನಿಗೆ ಗೊತ್ತಿಲ್ಲದ್ಹಾಂಗ ಕಳವಿಲೆ ಇಟ್ಟ ರೂಪಾಯಿ ಇಷ್ಟು ಅದಾವು. ಇವನ್ನ ಎಣಿಸಿ ನಿಮ್ಮ ಸ್ವಾಧೀನಕ್ಕ

ತೊಗೊಳ್ರಿ! ದೊಡ್ಡಯ್ಯನ ಕಡಿಂದ ಹಣಾ ಬಂದೀತು- ಅಂತ ಆಶಾ ಹಿಡೀಬ್ಯಾಡ್ರಿ!"

ಮಾತಿನ ಕೊನೆಯೊಂದಿಗೆ ಬೀರಣ್ಣ ಹವ್ಮಿ-ಣಿಯನ್ನು ಬಿಚ್ಚಿ ಹಣವನ್ನು ನನ್ನೆದುರು ಸುರಿದ. ಸುರಿದ ಹಣದಲ್ಲಿ ರೂಪಾಯಿಗಳೂ ಇದ್ದುವು; ನೋಟುಗಳೂ ಇದ್ದುವು. ನಾನು ಮಾತನ್ನೇನೂ ಆಡದೆ, ಬೀರಣ್ಣನನ್ನೊಮ್ಮೆ ಹಣದ ರಾಶಿಯನ್ನೊಮ್ಮೆ ನೋಡತೊಡಗಿದೆ. ಬೀರಣ್ಣ ಮಾತನಾಡಿದ:

"ದೊಡ್ಡಯ್ಯ ಈಗ ಊರೊಳಗ ಇಲ್ಲರಿ. ಅಂವ ಬರೂದರೊಳಗ ನಾನು ತಿರುಗಿ ಮನೆಗೆ ಹೋಗಬೇಕು. ಗಡಾಗಡಾನs ಎಣಿಸಿಕೊಳ್ರಿ ಹಣಾನ !"

ನಾನು ನಿರ್ವಿಣ್ಣಭಾವದವನಾಗಿ ಕೇಳಿದೆ :

"ಇದರ ಪರಿಣಾಮ ನಿನ್ನ ಮೇಲೆ ಏನಾಗ ಬಹುದು—ಅಂಬೂದರ ವಿಚಾರ ಮಾಡಬೇ-ಕಾಗಿಲ್ಲೇನು ಈಗ?"

"ಮುಂದಿನದೆಲ್ಲಾ ನಾ ನೋಡಿಕೋತೀ-ನೇಳ್ರಿ! ನಿಮ್ಮ ಪರಸಂಗಕ್ಕ ಏನಾದರೂ ನೆರವು ದೊರಿತೀತಂತ ನಾ ಈಗ ಇಲ್ಲಿಗೆ ಬಂದೀನಿ! ಎಣಿಸಿಕೊಳ್ರಿ ಗಡಾನs !"

ಜಡಭಾವದವನಾಗಿಯೇ ನಾನು ಹಣವನ್ನು ಎಣಿಸತೊಡಗಿದೆ. ಅಣ್ಣ ತಂಗಿ ಇಬ್ಬರೂ ಕುತೂಹಲತುಂಬಿದ ಕಣ್ಣುಗಳಿಂದ ನೋಡುತ್ತಿದ್ದರು. ಎಣಿಸುವುದೆಲ್ಲ ಮುಗಿದೊಡನೆ ನಾನು ನುಡಿದೆ :

"ಹನ್ನೆರಡು ನೂರರ ಮ್ಯಾಲ ಹದಿನೈದು ರೂಪಾಯಿ ಅದಾವು ಇವು. ಬೇಕಾದರ ನೀನೂ ಒಂದು ಸಲ ಎಣಿಸಿ ನೋಡ ಬಹುದು !"

"ಅದ್ಯಾಕಪ್ಪಾ, ನಿನ್ನ ಮಾತಿನ ಮ್ಯಾಗ ನಂಬಿಕಿಲ್ಲೇನು ನನಗ? ಇಷ್ಟು ಹಣ ಅಂದರ ನಿಮ್ಮ ಹೊಲದ ಮೂರು ವರಸದ ಕಂದಾಯ ಮುಟ್ಟತೈತ್ಯೋ ಇಲ್ಲೋ ?"

"ಮುಟ್ಟದ ಏನ ಮಾಡತೈತಿ: ಮ್ಯಾಗ ಇನ್ನೂ ಹದಿನೈದು ರೂಪಾಯಿ ಹೆಚ್ಚಿಗೇನೂ ಆದಾವು !"

"ಬಂಗಾರದಂತಾ ಕೆಲಸ ಆತು ಬಿಡ್ರಿ! ಆ ಮ್ಯಾಗಿನ ಹದಿನೈದು ರೂಪಾಯಿಗಳನ್ನ ಮದಿವೀಉಡುಗೊರೀ ಅಂತ ತಂಗೆಮ್ಮಗ ಕೊಟ್ಟುಬಿಡ್ರಿ: ಇದಕ್ಕೂ ಹೆಚ್ಚಿಗೆ ನನ್ನ ಹತೀಲಿ ಇರಲಿಲ್ಲರಿ.....ಇದ್ದಷ್ಟು ತಂದು ಕೊಟ್ಟೇನಿ !"

ಬೀರಣ್ಣನ ವಿಷಯದಲ್ಲಿ—ನನ್ನಲ್ಲಿ ವಿಲಕ್ಷಣವಾದ ಆದರಭಾವ ಹುಟ್ಟಿತು. ಆಪ್ತರೊಡನೆ ಮಾತನಾಡುವ ಧ್ವನಿಯಲ್ಲಿ ಹೇಳಿದೆ:

"ತಂಗಿಯ ಮದುವಿಗಾಗಿ ನಾನು ಇನ್ನೂ ನಾಲ್ಕುಸಾವಿರ ರೂಪಾಯಿಗಳನ್ನು ಕೂಡಿಸಬೇಕಾಗೇದ. ಈ ದಿವಸದೊಳಗ ಅಷ್ಟು ರೂ-ಪಾಯಿ ಎಲ್ಲಿಂದ ಸಿಗಬೇಕು? ಅದಕ್ಕಾಗಿ ಈ ಹೊಲದ ಅರ್ಧಭಾಗವನ್ನು ಮಾರಾಟ ಮಾಡಬೇಕಂತ ಮಾಡೀನಿ !"

ನಿರುಪಾಯದ ವಿಷಾದಭಾವದವನಾಗಿ ಬೀರಣ್ಣ ಸುಮ್ಮನೆ ಕುಳಿತುಕೊಂಡ. ಸ್ವಲ್ಪ ವೇಳೆ ತಡೆದು ಮತ್ತೆ ನಾನೇ ಮಾತನಾಡಿದೆ:

"ಬಹುದಿನಗಳಿಂದ ಆ ಹೊಲವನ್ನ ನೀನೇ ಮಾಡಿಕೊಂಡು ಬಂದಿರುವಿ. ನೀನೇ ಯಾಕೆ ಅದನ್ನು ಮಾರಾಟಕ್ಕೆ ತೆಗೆದುಕೊಂಡು ಬಿಡಬಾರದು ಬೀರಣ್ಣಾ ?"

ನಿಡಿದಾದ ಉಸಿರೊಂದನ್ನು ಚೆಲ್ಲಿ ಬೀರಣ್ಣ ಹೇಳಿದ :

"ಈಗ ನಾನು ನಾ ಆಗಿ ಉಳಿದಿಲ್ಲ ವಾಸಣ್ಣ! ನಿನ್ನ ಮುಂದ ಕುಂತದ್ದು ಬೀರಣ್ಣನ ಜೀವಂತ ಹೆಣ !"

ಕೆಂಚವ್ವ ನಡುವೇ ಮಾತನಾಡಿದಳು :

"ಈ ಮಾತಿಗೆ ದೊಡ್ಡಯ್ಯ ಒಪ್ಪಿದರ, ಎಲ್ಲಾ ಸುರಳೀತ ಆಗತೈತಿ ಖರೇ! ಆದರ ಅಂವ ಎಂದೂ ಒಪ್ಪೂದಿಲ್ಲ !"

"ಚೇ ಚೇ ಚೇ! ಅಂವ ಎಂದಾದರೂ ಒಪ್ಪ್ಯಾನs! ಸರಕಾರ ಅಂವಗ ಆ ಹೊಲಾ ಕೊಡಿಸೇಬಿಟ್ಟೈತಂತ ತಿಳಕೊಂಡು ಬಿಟ್ಟಾನ ಆ ಮಗ !"

ನಾನು ನಿರ್ವಿಣ್ಣಭಾವದವನಾಗಿ ಕೇಳಿದೆ :

"ಹಾಂಗಾದರ, ನನಗೆ ಏನ ಮಾಡಂತೀ ಬೀರಣ್ಣಾ ?"

"ನನಗೇನ ಗೊತ್ತರೀ ಅದೆಲ್ಲಾ ! ನಾ ಏನಾದರೂ ಮಾಡಬೇಕಂಬೂ ಹಾಂಗ ಇದ್ದರ ಹೇಳ್ರಿ; ಅದನ್ನ ನಾ ಮಾಡಿಕೊಡತೀನಿ!"

ಸಂದಿಗ್ಧಭಾವದಲ್ಲಿಯೆ ನಾನು ಹೇಳತೊಡಗಿದೆ:

"ನೀನು ಮಾಡಿಕೊಡಬೇಕಾದ ಕೆಲಸವೇ ಆದೆ ಬೀರಣ್ಣಾ ! ನಮ್ಮ ಹೊಲ ಮಾಡಿದ ರೈತ ನೀನು! ನಿನ್ನ ಹೆಸರಿನಲ್ಲಿಯೇ ಆ ಹೊಲ ಆದೆ. ಅದಕ್ಕ ನೀನು ರಾಜೀನಾಮೆ ಬರೆದು ಕೊಟ್ಟರ, ಅದನ್ನ ನಾನು ಬೇರೆ ಯಾರಿಗಾ-ದರೂ ಮಾರಿ, ಹಣ ದೊರಕಿಸತೀನಿ !"

ಬೀರಣ್ಣ ಗುಂಗುಹಿಡಿದವರಂತೆ ಸ್ವಲ್ಪಕಾಲ ಸುಮ್ಮನೆ ಕುಳಿತ; ಆ ಮೇಲೆ ಹೇಳಿದ :

"ನಿಮ್ಮ ಹೊಲಾ ನಿಮಗ ಬಿಟ್ಟುಕೊಡೂದರೊಳಗ ಅನ್ನೆಯ ಏನ ಐತಿರಿ. ಹ್ಯಾಂಗ ಬರಿಸಿಗೋತೀರೋ ಬರಿಸಿಗೊಳ್ರಿ ರಾಜೀನಾಮೆ ! ಇಷ್ಟs..ನಾಲ್ವತ್ತು ವರಸದ ಕಾಲ ನನ್ನ ಹೊಟ್ಟೀ ನೆತ್ತೀ ನೋಡಿದ ತಾಯಿನ್ನ ಹ್ಯಾಂಗ ಅಗಲಬೇಕೂ ಅಂತ ಮನಾ ಮರಗದs ಏನೂ ಇರೂದಿಲ್ಲ; ಹೇಳಿ ಕೇಳಿ ನಾನು ಕಾಲು ಮುರಕೊಂಡು ಮೂಲೀ ಹಿಡದು ಬಿಟ್ಟೇನಿ. ದೊಡ್ಡಯ್ಯ ಆ ತಾಯಿ ಕೂಡ ಪರಮಾಣಕ್ಕ ಅನುಸರಿಸಿ ನಡೀತಾ ಇಲ್ಲರಿ ! ಅಂತs ಈಗ ಎರಡು ವರಸ ಆತು; ಆ ತಾಯಿ ನಮಗ ಕೊಡಬೇಕಾದ ಫಲಾ ಕಟ್ಟುಮಾಡಿ ಬಿಟ್ಟಾಳ್ರಿ !"

ಕೆಂಚವ್ವ ನುಡಿದಳು :

"ಹೌದರಿ ವಾಸಣ್ಣಾ ! ಈಗ ಎಡ್ಡು ವರಸ ಆ ಹೊಲಾ ಬೆಳದೇ ಇಲ್ಲರಿ. ಎಂಥೆಂಥಾ ಬರಗಾಲದಾಗ ಬೆಳೆದ ಹೊಲಾನ್ರಿ ಅದು ; ಈಗ ಅದಕ್ಕ ಏನಾಗೇತ್ಯೋ ಏನೋ !"

"ಅದಕ್ಕೇನಾಗತೈತೇ ಕೆಂಚವ್ವಾ ! ದುಡಿಯೂ ಹಾಂಗ ದುಡಿದರ ಹೊಲಾ ಬೆಳೀದs ಏನ ಮಾಡೀತು? ಅಂಗಡ್ಯಾಗಿನ ಚಾ ಕುಡದು, ಕಟ್ಟಿ-ಕಟ್ಟಿಗೆ ಕುಂತು ಕಾರಬಾರಾ ಮಾಡೂ ಮೂಳಗೋಳು, ಹೊಲಕ್ಕ ಹೋಗಿ ಕೆಲಸಾ ಮಾಡತಾವs ! ವಾಸಣ್ಣಾ, ಅದೇನs ಆಗಲಿ, ನನ್ನ ಕಡಿಂದ ಏನ ಬರಿಸಿಕೋಬೇಕೋ ಬರಿಸಿಕೊಂಡು ಬಿಡ್ರಿ:"

"ಇಲ್ಲೇ ಆಗೂ ಕೆಲಸ ಅಲ್ಲದು ಬೀರಣ್ಣಾ! ಅದಕ್ಕಾಗಿ ಕಚೇರಿಗೆ ಹೋಗಿ, ಮಾಮಲೇ-ದಾರ ಮುಂದ ನಿನ್ನ ಜವಾಬು ಆಗಬೇಕಾತsದ !"

"ಕರಕೊಂಡು ಹೊಗುವರು ನೀವು ಗಟ್ಟಿ ಆದರ, ನಾ ಎಲ್ಲಿಗೆ ಬೇಕಾದಲ್ಲೆ ಬಂದು ಜವಾಬು ಕೊಡಲಾಕ ತಯಾರ ಆದೀನಿ:"

ನನಗೆ ಬೀರಣ್ಣನನ್ನು ತಬ್ಬಿಕೊಂಡು ಅಳಬೇಕೆನಿಸಿತು. ಅಷ್ಟು ದೂರಕ್ಕೆ ಹೋಗದೆ ಬೀರಣ್ಣನ ಪಾದಗಳ ಮೇಲೆ ಹಣೆಯಿಟ್ಟು ಕಂಬನಿಗರೆದೆ. 'ಇದೆಲ್ಲೀ ನಡತಿರೀ ?'

ಎನ್ನುತ್ತ ಬೀರಣ್ಣ, ತನ್ನ ಮುಪ್ಪಿನ ಕೈಗಳಿಂದ ನನ್ನ ತಲೆಯನ್ನು ಮೇಲಕ್ಕೆತ್ತಿದ.

ಮುಂದೆ ಹೆಚ್ಚು ಹೊತ್ತು ಕುಳಿತುಕೊಳ್ಳದೆ ಆ ಅಣ್ಣ ತಂಗಿ, ನಮ್ಮ ಮನೆಯಿಂದ ಹೊರಟು ನಡೆದರು. ಕುಂಟುತ್ತ ಕುಂಟುತ್ತ ನಡೆದಿದ್ದ ಬೀರಣ್ಣನನ್ನು ಅವನು ಕಣ್ಮರೆಯಾಗುವ ವರೆಗೂ ಆದರ ತುಂಬಿದ ಕಣ್ಣುಗಳಿಂದ ನೋಡುತ್ತಲಿದ್ದೆ.

* * *

ರಾಜು ಅರಳಿದ ಹೃದಯದವನಾಗಿ ನುಡಿದ:

" ಬೀರಣ್ಣನಂತಹ ಜನರು ಈ ಕಾಲದಲ್ಲಿಯೂ ಇದ್ದಾರೆಯೇ ವಾಸಣ್ಣಾ ! "

" ಇನ್ನೂ ಇದ್ದಾನೆ; ಬೇಕಾದರೆ ನಮ್ಮ ಊರಿಗೆ ಹೋಗಿ ನೋಡಿಕೊಂಡು ಬರೋಣ ನಡೆ ! "

" ನೋಡಲೇ ಬೇಕಾದ ವ್ಯಕ್ತಿಯದು! ಮುಂದೆ ನಿನ್ನ ಕೆಲಸವೆಲ್ಲ ಸುಸೂತ್ರವಾಗಿ ಕೊನೆಗೊಂಡಿರಬಹುದು ! "

" ಕಾರ್ಯವೇನೋ ಕೊನೆಗೊಂಡಿತು; ಆದರೆ ಸುಸೂತ್ರವಾಗಿ ಕೊನೆಗೊಳ್ಳಲಿಲ್ಲ. "

" ಅಂದರೆ? ಏನಾಯಿತು? "

" ಅದನ್ನೇ ಹೇಳುತ್ತೇನೆ ಕೇಳು ! "

ಬೀರಣ್ಣ ನಮ್ಮಲ್ಲಿಗೆ ಬಂದ ಸಂಗತಿ ಮುಚ್ಚುವಂತಹದೇ? ಅದರಲ್ಲಿಯೂ ನಮ್ಮ ತಿಪ್ಪನ ಸ್ವಾಮಿಭಕ್ತಿ, ಒಡೆಯನ ವಿಜಯದ ವಾರ್ತೆಯನ್ನು— ಉಪ್ಪುಕಾರ ಹಚ್ಚಿ— ಎಲ್ಲೆಲ್ಲಿಯೂ ಬೀರತೊಡಗಿತು. ಊರಲ್ಲಿ ಎಲ್ಲರ ಬಾಯಲ್ಲಿಯೂ ಬೀರಣ್ಣನ ಸುದ್ದಿಯೇ ಸುದ್ದಿ!

ದೊಡ್ಡಯ್ಯ ಹನ್ನೊಂದು ಗಂಟೆಗೆ ಮರಳಿ ಹಳ್ಳಿಗೆ ಬಂದನಂತೆ; ಬಂದ ಅರ್ಧ ತಾಸಿನಲ್ಲಿಯೇ ಮತ್ತೆ ಸೈಕಲ್ಲ ಮೇಲೆ ಕುಳಿತು, ದೊಡ್ಡೂರ ದಾರಿಯಿಂದ ಹೋದನಂತೆ.

"ಬೀರಣ್ಣ ಹೊಲದ ಕಂದಾಯದ ಹಣವನ್ನೆಲ್ಲಾ ಕೊಟ್ಟುಬಿಟ್ಟನಂತ"

" ಒಡೆಯರ ತಂಗಿಗೆ ಉಡುಗೊರೀ ಅಂತ ನೂರು ರೂಪಾಯಿ ಕೊಟ್ಟನಂತ!"

" ಹೊಲದ ರಾಜೀನಾಮೆ ಪತ್ರ ಬರಸಿಕೊಂಡು ಬಿಟ್ಟರಂತ ವಾಸಪ್ಪನವರು ! "

ಹಳ್ಳಿಯ ಜನರ ಬಾಯಲ್ಲಿ ಇವೇ ಮಾತುಗಳು ! ದೊಡ್ಡಯ್ಯನ ಗೆಳೆಯರ ಕರುಳಿಗೆ ಕೊಳ್ಳಿಯನ್ನು ಕೊಟ್ಟಂತೆ ಮಾಡಿದುವು. ಈ ಮಾತು, ದೊಡ್ಡಯ್ಯ ಇಳಿಹೊತ್ತಿನ ವೇಳೆಗೆ ಮರಳಿ ಬಂದನಂತೆ-ಮನೆಗೆ ಬಂದಾಗ ಯಾರ ಜೊತೆಯಲ್ಲಿಯೂ ಮಾತುಗಳನ್ನಾಡಲಿಲ್ಲವಂತೆ ಬಿಗಿದ ಮುಖದಿಂದಲೇ ಇದ್ದನಂತೆ. ಮತ್ತೊಂದು ಸಲ ಹೊರಗೆ ಹೋಗಿಬಂದ ಮೇಲೆ, ಮನೆಯ ಜನರೊಂದಿಗೆ ನಗು-ನಗುತ್ತ ಮಾತನಾಡತೊಡಗಿದನಂತೆ.

ಸಂಜೆ ಮುಳುಗಿ, ದೀಪ ಹತ್ತುವ ವೇಳೆ. ಅಗ ಕೆಂಚಮ್ಮ ಗಾಬರಿಯ ಮುಖದಿಂದ ಅಣ್ಣನ ಬಳಿಗೆ ಬಂದು ಮೆಲ್ಲಗೆ ಹೇಳಿದಳಂತೆ:

" ನೀನು ರೂಪಾಯಿ ಕೊಟ್ಟು ವಾಸಪ್ಪಗೇನೂ ಒಳ್ಳೇದು ಮಾಡಿದ್ಹಾಂಗ ಅಗಲಿಲ್ಲ! "

" ಯಾಕ? ಈಗೇನಾಯ್ತು? "

" ನಿನ್ನ ಮಗದೊರಿ! ಇಂದ ರಾತ್ರೀನs ವಾಸಪ್ಪನ್ನ ಖಲಾಸ್ ಮಾಡಿಬಿಡಬೇಕಂತ ಗೊತ್ತು ಮಾಡ್ಯಾನಂತ!"

" ಅಯ್ಯಯ್ಯೊ!" ರಾಜು ಒಮ್ಮೆಲೇ ಕೂಗಿಕೊಂಡ, ನಾನು ಹೇಳಿದೆ:

" ನಾನು ನಿನ್ನ ಮುಂದೆ ಸಜೀವಿಯಾಗಿಯೇ ಕುಳಿತಿದ್ದೇನೆ. ನೀನು ಗಾಬರಿಯಾಗುವ ಕಾರಣವೇನೂ ಇಲ್ಲ. ಮುಂದಿನ ವಿಷಯ ಏನಾಯಿತೆಂಬುದನ್ನು ಕೇಳು!"

ಬೀರಣ್ಣ ದಡಗಡಿಸುವ ಎದೆಯೊಂದಿಗೆ ಕೇಳಿದ:

" ನಿನಗ ಈ ಮಾತು ಹ್ಯಾಂಗ ಗೊತ್ತಾತು ಕೆಂಚಮ್ಮಾ!"

"ನಮ್ಮ ಹೊಲದ ಗುಡಸಲದೊಳಗ, ಈ ಪಳಿಂಕರ ಸಭಾ ಸೇರಿತ್ತಂತ!

ಅಲ್ಲೇನೋ ಗುಣು ಗುಣು - ಗುಸು ಗುಸು ಮಾತು ನಡದಿದ್ದುವಂತ. ನಮ್ಮ ಆಳುಮಗ ಬಾಳ್ಯಾ ಮರಿಗೆ ನಿಂತು, ಅವರು ಆಡುವ ಮಾತನೆಲ್ಲ ಕೇಳಿದನಂತ! ಅವನs ಗಾಬರ್‍ಯಾಗಿ ಮನೆಗೆ ಬಂದು 'ಚಿಗವ್ವಾ, ಹಿಂಗಿನ ಮಾತು ಹೀಂಗ!' ನೋಡು ಅಂತ ಹೇಳಿದ. ಈಗ ಏನ ಮಾಡಬೇಕು ನಾವು?"

"ನೋಡು, ನಾನು ಕಾಲಿಲ್ಲದ ಮುಪ್ಪಿನ ಮುದುಕ; ನೀನು ಹೆಣ್ಣು ಹೆಂಗಸು! ನಮ್ಮಿಬ್ಬರ ಕೈಯಿಂದ ಏನಾದೀತು ಇದರೊಳಗ! ಅವರೆಲ್ಲಾ ಹುಂಬ ನನ್ನ ಮಕ್ಕಳು! ದೆವ್ವ ಇದ್ದಾಂಗ ಇದಾರು. ಈಗ ಇದನ್ನ ಎಲ್ಲ್ಯೂ ಉಲಬಸಬ್ಯಾಡ... ಆ ಬಾಳ್ಯಾಗೂ ಹೇಳು—ಬ್ಯಾರೇ ಯಾರ ಮುಂದೂ ಈ ಸುದ್ದೀ ಒಡೀಬ್ಯಾಡ—ಅಂತ. ಊರಾಗಿನ ಜನಕ್ಕೆಲ್ಲಾ ಏನಾದರೂ ಮೋಜು ಬೇಕು, ಇದರಾಗ ಯಾರ ನೆರವೂ ನಮಗ ಸಿಗೂಹಾಂಗಿಲ್ಲ!"

"ಮುಂದ ಗತಿ? ಕಾರಣಿಲ್ಲದs ಆ ಬಡ ಹರಾಣಿ ಸತ್ತು ಹೋಗತೈತ್ಯಲ್ಲಾ!"

"ಹಾಂಗಾದರ ತಂಗೀ ನೋಡು; ನಮ್ಮ ದೊಡ್ಡಯ್ಯ ಮುಂದಾದರನs ಎಲ್ಲಾ ಜನರೂ ಒಟ್ಟುಗೂಡುವರು, ಅದಕ್ಕ, ದೊಡ್ಡಯ್ಯನ್ನs ನಮ್ಮ ಮನೀ ಬಿಟ್ಟು ಹೋಗದ್ಹಾಂಗ ನಾವು ಮಾಡಬೇಕು!"

"ಮನ್ಯಾಗ ಅವನ ಹೆಣ್ತಿ ಸಯಿತ ಇಲ್ಲ. ಅವನ್ನ ಮನ್ಯಾಗ ಯಾರು ಕಟ್ಟಿಹಾಕಬೇಕು? ನಾವು ಹೋಗಬ್ಯಾಡಂದರ, ಆ ಹಟಮಾರಿ ಗಂಡು ಕೇಳೀತs?"

"ಅದಕ್ಕ ಒಂದು ಮುಸಲತ್ತು ನೀನs ಮಾಡಬೇಕು ನೋಡು ಕೆಂಚಮ್ಮಾ!"

"ಅದೇನಪಾ, ನಾ ಮಾಡಬೇಕಾದ ಮುಸಲತ್ತು?"

"ನನ್ನ ಕಾಲು ನೋವಾದಾಗ, ನಿದ್ದಿ ಬರಲೀ ಅಂತ ಅಯ್ಯನವರು ಅವುಸುದ್ದೀ ಕೊಟ್ಟಿದ್ದರು ನೋಡು! ಅದು ಇನ್ನೂ ಬಾಟ್ಲಿಯೊಳಗ ಉಳದೈತಿ, ಅದು ಹ್ಯಾಂಗಾದರೂ ಮಾಡಿ, ಅವನ ಹೊಟ್ಟಿಯೊಳಗೆ ಹೋಗೂಹಾಂಗ ಮಾಡು! ನಿದ್ದೀ ಗುಂಗಿನೊಳಗ ಅಂವ ಬಿದ್ದುಕೊಂಡುಬಿಟ್ಟರ, ಮನಿಗೆ ಬಂದವರನ್ನೆಲ್ಲಾ ಬೆದರಿಸಿ ಕಳಿಸಲಾಕ ಬಂದೀತಂತ!"

"ಈ ಕೆಲಸ ನನಗ ಒಪ್ಪಿತು ಬಿಡು. ಆ ಅವುಸುದ್ದೀ ತಾ ಇಲ್ಲೆ!"

*

ಬಳಿಯಲ್ಲಿ ಸಾವಿರದ ಇನ್ನೂರು ರೂಪಾಯಿಗಳಿದ್ದುವು. ಹಳ್ಳಿಯೂರಿನ ಕೆಲಸ. ಬೆಳಗಿನಲ್ಲಿ ಬೇಗನೆ ಎದ್ದು ಇಲ್ಲಿಗೆ ಬರಲು ಹೊರಡಬೇಕೆಂದು ನಿರ್ಣಯಿಸಿಕೊಂಡಿದ್ದೆ. ಆದರೂ ಯಾವುದೋ ಆಂತರಿಕ ಭೀತಿಯ ಮೂಲಕ, ತಿಪ್ಪನ ನಂಬುಗೆಯವರೆಂದಿದ್ದ ಏಳೆಂಟು ಜನರನ್ನು ಬರಮಾಡಿಕೊಂಡು, ತಲೆಬಾಗಿಲ ಮುಂಗಟ್ಟಿಯ ಮೇಲೆ ಮಲಗಿಕೊಳ್ಳುವಂತೆ ಏರ್ಪಾಡು ಮಾಡಿದ್ದೆ. ಅವರೆಲ್ಲರಿಗೂ ಚಹದ ವ್ಯವಸ್ಥೆಗಾಗಿ ತಿಪ್ಪನ ಕೈಯಲ್ಲಿ ಎರಡು ರೂಪಾಯಿಗಳನ್ನು ಕೊಟ್ಟಿದ್ದೆ.

ನಾನು ಭದ್ರವಾಗಿ ಬಾಗಿಲನ್ನುಇಕ್ಕಿಕೊಂಡು ಒಳಗೆ ಮಲಗಿದ್ದೆನಾದರೂ ಅದೆಷ್ಟೋ ವೇಳೆಯ ವರೆಗೆ ನಿದ್ದೆಯೇ ಬರಲಿಲ್ಲ. ಗುಡಿಯ ಮುಂದಣ ಅರಳಿಯ ಮರದಲ್ಲಿ, ಬಾವಲಿಗಳು ತಮ್ಮ ರೆಕ್ಕೆಗಳನ್ನು ಚಾಚಿ ಫಟಫಟಿಸುವ ಶಬ್ದ, ಆಗಾಗ ರಾತ್ರಿಯ ಶಾಂತತೆಯನ್ನು ಕದಡುತ್ತಿತ್ತು, ಯಾವುದೋ ಹಾಳು ಮನೆಯೊಳಗಿಂದ ಗೂಗೆಯ ಘೂತ್ಕಾರ ನಡುನಡುವೆ ಕೇಳಬರುತ್ತಿತ್ತು. ಹನ್ನೆರಡು ಮಿಕ್ಕಿ ಒಂದು ಗಂಟೆಗೆ ರಾತ್ರಿ ಬಂದಿರಬಹುದು. ತಲೆಬಾಗಿಲ ಮುಂಬದಿಯಲ್ಲಿ ಮೂರು-ನಾಲ್ಕು ಜನರ ಸುಳಿದಾಟ ಗುಣಗುಣಾಟಗಳು ಕೇಳಿಸಿದವು. ಎಚ್ಚರವಾಗಿಯೆ ಇದ್ದ ತಿಪ್ಪಣ್ಣ 'ಯಾರಲೇ ಅವರು?' ಎಂದು ಕೇಳಿದ. ಆತನಿಗೆ ಉತ್ತರ ಕೊಡದೆ, ಆ ಜನರು ದುಡುದುಡನೆ ಓಡಿ ಹೋದರಂತೆ. ಇದೆಲ್ಲ ಗಡಿಬಿಡಿಯಲ್ಲಿ ನನಗೆ ನಿದ್ದೆ ಯಾವಾಗ ಹತ್ತಿತೋ ಗೊತ್ತಾಗಲಿಲ್ಲ.

ತಿಪ್ಪಣ್ಣ ಎದ್ದು ಹೊರಗಿನಿಂದ ಬಾಗಿಲನ್ನು ಬಡಿಯತೊಡಗಿದ್ದಾಗ ನನಗೆ ಎಚ್ಚರಾಯಿತು. ಎದ್ದವನೇ ಮೊದಲು ಗಡಿಯಾರವನ್ನು ನೋಡಿಕೊಂಡೆ; ಏಳುವರೆ ಗಂಟೆಯಾಗಿತ್ತು. ಅವಸರದಿಂದ ಎದ್ದು ಬಾಗಿಲನ್ನು ತೆರೆದೆ. ತಿಪ್ಪ ಗಾಬರಿಯ ಧ್ವನಿಯಲ್ಲಿ ಹೇಳಿದ;

"ಯಪ್ಪಾ, ಬೆಳಿಗ್ಗೆ ಏಳೂದರೊಳಗ, ಒಂದು ಕೆಟ್ಟಸುದ್ದೀ ಕೇಳುವದಾಯ್ತಲ್ರಿ!"

"ಅದೇನೋ ಕೆಟ್ಟಸುದ್ದಿ?"

"ಪಾಪ, ಬೀರಣ್ಣನ ಮಗ ದೊಡ್ಡಯ್ಯ, ಮಲಗಿದಂವ ಮಲಗಿದ್ಹಾಂಗs ಸತ್ತು ಹೋಗ್ಯಾನಂತ! ಕೆಟ್ಟ ಜಾತಿಯ ಹಾವು ಕಚ್ಚಿರಬೇಕೂ—ಅಂತ ಜನರೆಲ್ಲಾ ಮಾತಾಡತಾರ!"

ನನ್ನ ಎದೆಗೆ ಒಮ್ಮೆಲೆ ಸಿಡಿಲು ಬಡಿದಂತಾಯಿತು. ಹೋಗಿ ನೋಡಿ ಬರಬೇಕೆಂಬ ತವಕವು ಮನದಲ್ಲಿ ಕುಣಿದಾಡತೊಡಗಿತು. ಹೇಗೋ ಹೇಗೋ ಮುಖ ತೊಳೆದುಕೊಂಡು ತಿಪ್ಪನನ್ನು ಜೊತೆಗೆ ಕರೆದುಕೊಂಡುಬೀರಣ್ಣನ ಮನೆಗೆ ಹೋದೆ. ಮನೆಯ ಮುಂದೆ, ಒಳಗೆ, ಹೊರಗೆ ಎಲ್ಲೆಲ್ಲಿಯೂ ಜನ ನೆರೆದಿದ್ದರು. ಕೆಂಚಮ್ಮನ ಅಳುವು ದೂರದ ವರೆಗೆ ಕೇಳಿಸುತ್ತಿತ್ತು. ಒಳಗೆ ಹೋಗುವುದಕ್ಕೆ ನನಗೆ ಆಸ್ಪದವೇ ಇರಲಿಲ್ಲ. ಮನೆಯ ಮುಂದೆ ನಿಂತವರಲ್ಲಿ ಕೆಲವು ಜನ ತರುಣರು ಕುತೂಹಲ ತುಂಬಿದ ನೋಟಗಳಿಂದ ನನ್ನನ್ನು ನೋಡುತ್ತಿದ್ದರು. ಆ ನೋಟಗಳು ನನ್ನ ಎದೆಯನ್ನು ಭೀತಿಯಿಂದ ನಡುಗಿಸಿದವು.

ಪ್ರಯತ್ನಪೂರ್ವಕವಾಗಿ ತಿಪ್ಪ ಬೀರಣ್ಣನ ಬಳಿಗೆ ಹೋಗಿ, ನಾನು ಬಂದ ಸುದ್ದಿಯನ್ನು ಹೇಳಿದನಂತೆ. ಬೀರಣ್ಣ ಭ್ರಾಂತಿಹಿಡಿದವನಂತೆ ಕುಳಿತಿದ್ದನಂತೆ. ನಾನು ಬಂದುದನ್ನು ಕೇಳಿ, 'ಆಗಲಿ ತಿಪ್ಪಣ್ಣಾ! ಅವರನ್ನು ನಾನೀಗ ಕಾಣುವಂತಿಲ್ಲ. ವಾಸಪ್ಪನವರಿಗೆ ನಾನು ಹೀಗೆ ಹೇಳಿದೆನೆಂದು ಹೇಳು; 'ಅನ್ಯಾಯದ ದಾರಿ ಮನಿಸ್ಯಾನ್ನ ಮಸಣದ ಕಡೇನs ಒಯ್ಯತಿರತೈತಿ! ಅವನ ಕುರುಡಗಣ್ಣಿಗೆ ಅದು ಕಾಣುದೇ ಇಲ್ಲ! ದೇವರು ದೊಡ್ಡಂವ ಅದಾನು!' ಅಂತ. ಮತ್ತ ಅವರಿಗೆ ಇದನ್ನೂ ಹೇಳು: ಇಂದs ನೀವು ಮರಳಿ ಊರಿಗೆ ಹೋಗಿ ಬಿಡ್ರಿ— ಅಂತ! ತಿಪ್ಪಣ್ಣಾ, ನೀನು ಜ್ವಾಕಿಂದ ನೋಡಿಕೊಂಡು, ನಿಮ್ಮ ಯಜಮಾನರನ್ನ



ಗಾಡೀತನಕಾ ಮುಟ್ಟಿಸಿಬಾರs ! ಎಂದು ಹೇಳಿದನಂತೆ.

ಬೀರಣ್ಣನನ್ನು ಕಾಣದೆ ಬರುವುದೆಂದರೆ, ನನಗೆ ದೊಡ್ಡ ಅಪರಾಧವೆನಿಸಿತಾದರೂ ಆತನ ಆಜ್ಞೆಯನ್ನು ದೈವದ ಆಜ್ಞೆಯೆಂದು ಪಾಲಿಸ ಬೇಕಾಗಿ ಬುದ್ಧಿ ನನ್ನನ್ನು ಎಚ್ಚರಿಸಿತು. ಕೂಡಲೆ ಮನೆಗೆ ಮರಳಿ, ಹೊರಡುವ ಸಿದ್ಧತೆ ಯನ್ನೇ ಮಾಡಿದೆ. ಭೀತಿ— ವಿಷಾದ— ಕರುಣೆ— ಕೃತಜ್ಞತೆಗಳ ಸಮ್ಮಿಶ್ರಭಾವವನ್ನು ಹೃದಯದಲ್ಲಿ ತುಂಬಿಕೊಂಡು ತಿಪ್ಪನೊಂದಿಗೆ ನಿಲ್ದಾಣದಾರಿಯನ್ನು ಹಿಡಿದೆ. ಈ ಊರನ್ನು ತಲ್ಪುವ ವರೆಗೂ ನಾನು ಯಾರೆಂಬುದರ ಅರಿವೂ ನನಗೆ ಇಲ್ಲದಂತಾಗಿತ್ತು.

ಇಷ್ಟು ಹೇಳಿ ನಾನು ರಾಜುವಿನ ಕಡೆಗೆ ನಿಟ್ಟಿಸಿನೋಡಿದೆ. ಅವನೂ ಕಂಗೆಟ್ಟ ಭಾವ ದಲ್ಲಿ ಕುಳಿತುಕೊಂಡಿದ್ದ. ಕಣ್ಣಲ್ಲಿ ಹನಿಗಳು ಮೂಡಿನಿಂತಿದ್ದವು. ಗದ್ಗದ ಸ್ವರದಲ್ಲಿಯೇ ಮಾತನಾಡಿದ.

" ಬೀರಣ್ಣ ಕೊನೆಗೂ ದೇವರ ಕಾಯದೆ ಯನ್ನು ಅನುಸರಿಸಿದ ! "

" ಅಹುದು, ದೇವರ ಕಾಯದೆಯನ್ನು ಅನುಸರಿಸಿ ಇದ್ದ ಒಬ್ಬ ಮಗನನ್ನು ಕಳೆದು ಕೊಂಡ. ದೇವರ ಕಾಯಿದೆಯ ರೀತಿಯೇ ಹೀಗೆ! ಲೌಕಿಕ ಸುಖಗಳನ್ನು ಅದು ದೂರ ದೂರಕ್ಕೆ ಅಟ್ಟುತ್ತ ಹೋಗುವುದು! ಎಂತಲೇ ಜನಸಾಮಾನ್ಯರು ದೇವರ ಕಾಯದೆಯಿಂದ ದೂರ ದೂರಕ್ಕೆ ಸರಿಯತೊಡಗುವರು ! "

ರಾಜು ರುಷ್ಟನಾಗಿ ನುಡಿದ :

" ಎಂತಲೇ ಭೂಲೋಕ ರಾಕ್ಷಸಲೋಕ ವಾಗುತ್ತ ಹೊರಟಿದೆ. ಎಲ್ಲೆಲ್ಲಿಯೂ ದೊಡ್ಡ-ಯ್ಯಗಳ ಸ್ವರೂಪ ಕಣ್ಣಿಗೆ ಬೀಳುತ್ತಲಿದೆ ! "

"ಪ್ರಲ್ಹಾದನ ಅವತಾರವಾದುದು ರಾಕ್ಷಸರ ಲೋಕದಲ್ಲಿಯೇ ಅಲ್ಲವೆ ? ಅವನೊಬ್ಬನೇ ತನ್ನ ಕಾರ್ಯದಿಂದ, ರಾಕ್ಷಸರನ್ನೆಲ್ಲ ದೇವರ ಕಾಯದೆಯ ದಾರಿಗೆ ತಿರುಗಿಸಿದ. ನಿರಾಶೆಗೆ ಕಾರಣವೇನೂ ಇಲ್ಲ. ಬೀರಣ್ಣನಂತಹರ ಪ್ರಾಣಶಕ್ತಿ ಹಾಳಾಗಿ ಹೋಗುವಂತಹದಲ್ಲ. ಮತ್ತೆ ಮತ್ತೆ ಜಗತ್ತಿನಲ್ಲಿ ಹುಟ್ಟಿಬರುವಂತ ಹದು !"

"ಇಂತಹ ಒಂದೊಂದು ಜೀವಗಳೇ ನಮ್ಮಲ್ಲಿ ಬಾಳಿನ ಆಶೆಯನ್ನು ಪೋಷಿಸಬೇಕು. ಬೀರಣ್ಣ ನಿಮ್ಮ ಹೊಲದ ರಾಜೀನಾಮೆ ಬರೆದುಕೊಟ್ಟನೇ? "

" ನಾನು ಮತ್ತೊಂದು ಸಲ ಹೋಗುವ ಕಾರಣವೇ ಬೀಳಲಿಲ್ಲ. ತಾನಾಗಿಯೆ ಕಚೇರಿಗೆ ಹೋಗಿ, ರಾಜೀನಾಮೆಯ ಬಗೆಗೆ ಜವಾಬನ್ನು ಕೊಟ್ಟು, ಅದು ನನಗೆ ತಲ್ಪುವಂತೆ ವ್ಯವಸ್ಥೆ ಮಾಡಿದ್ದಾನೆ. ಇನ್ನು ಆ ಹೊಲದ ಮಾರಾಟ ಕ್ಕಾಗಿ ನಾನು ನನ್ನ ಹಳ್ಳಿಗೆ ಹೋಗಿ ಬರ ಬೇಕಾಗಿದೆ. ನೀನೂ ನಡೆ; ಬೀರಣ್ಣನನ್ನು ನೀನು ಪ್ರತ್ಯಕ್ಷವಾಗಿ ನೋಡುವೆಯಂತೆ! "

"ಅವಶ್ಯ ಬರುತ್ತೇನೆ. ಕಾಶೀವಿಶ್ವೇಶ್ವರನ ದರ್ಶನಕ್ಕಿಂತ ಬೀರಣ್ಣನ ದರ್ಶನ ಮಹತ್ವ ದ್ದೆಂದು ನಾನು ಭಾವಿಸುತ್ತೇನೆ! "



# ನನ್ನ ಪ್ರಥಮ ಕವಿತೆ

ಲೇಖಕರು :

**ಶ್ರೀ. ವಿ. ಕೃ. ಗೋಕಾಕ,** ಎಂ. ಎ. ( ಆಕ್ಸನ್ )

**ಹೈದರಾಬಾದ**

◆

ನವೋನವವಾಗಿ ಕುಸುಮಿಸುತ್ತಿರುವ ಕಾವ್ಯವಲ್ಲಿಯಲ್ಲಿ ಪ್ರಥಮ ಕವಿತೆ ಇದೇ ಎಂದು ಹೇಳುವುದು ಹೇಗೆ? ಒಂದೊಂದು ಸ್ತರಕ್ಕೆ ಒಂದೊಂದು ಪ್ರಥಮ ಕವಿತೆ ಇದೆ ಎನ್ನಬಹುದು. ‘ ಬರೆದ ಕವಿತೆ ಕಸ, ಬರೆಯಲಿರುವ ಕವಿತೆ ನವೀನ ರಸ ’ ಎಂಬುದು ಎಲ್ಲ ಕವಿಗಳ ಅನುಭವದ ಒಂದು ಅಂಶವೆನ್ನಬಹುದು. ಹೀಗೆ ಕವಿಯ ಪ್ರಪ್ರಥಮ ಪೂರ್ಣ ಕವಿತೆ ಅವನು ಪೂರ್ಣವಾದಾಗ ಮಾತ್ರ ಮೂಡಿಬಂದೀತು. ಕಾವ್ಯರಂಗದಲ್ಲಿ ‘ ವಿನಾಯಕ ’ರೆಂದು ಹೆಸರಾದ ಗೋಕಾಕರು ತಮ್ಮ ಪ್ರಥಮ ಕವಿತೆಯನ್ನು ಕುರಿತಾಗಿ ಈ ಬಗೆಯ ಸುಂದರ ವಿವೇಚನೆಯನ್ನು ಇಲ್ಲಿ ಕೊಟ್ಟಿರುವರು.

---

ನಾನು ಬರೆದ ಪ್ರಥಮ ಕವಿತೆ ಯಾವುದು ಎಂದು ಹೇಳುವದೇ ಕಷ್ಟ. ನನ್ನ ಪ್ರಥಮ ಕವಿತೆ ಪ್ರಾಥಮಿಕ ಕವಿತೆಯೇ ಆಗಿತ್ತೆಂದೆನ್ನಬಹುದು. ಅಂದರೆ ನಾನು ಪ್ರಾಥಮಿಕ ಶಾಲೆಯಲ್ಲಿದ್ದಾಗ ನನ್ನ ಕಾವ್ಯೋದಯವಾಯಿತು. ಆದರೆ ಇದರ ವಿಷಯ ಹೇಳುವದಕ್ಕಿಂತ ಮುಂಚೆ ಯಾವ ಕೃತಿಗೆ ನಾವು “ ಕವಿತೆ ” ಎಂದು ಕರೆಯುತ್ತೇವೆಂಬುದನ್ನು ಆಲೋಚಿಸಬೇಕಾಗಿದೆ.

ಪ್ರಾಸ ಅನುಪ್ರಾಸಗಳನ್ನೊಳಗೊಂಡು ಬಂದ ಕೃತಿಯನ್ನು ನಾವು ಕವಿತೆಯೆಂದು ಕರೆಯಬಹುದೇ? ಅನುಕರಣವೇ ಜೀವಾಳವಾದ ಕೃತಿಯನ್ನು ನಾವು ಕಾವ್ಯವೆನ್ನಬಹುದೇ? ನಾನು ಪ್ರಾಥಮಿಕ ಶಾಲೆಯಲ್ಲಿದ್ದಾಗ ಕೆಲವೊಂದು ಬಾಲಸ್ನೇಹಿತರು ಕೂಡಿ ಒಂದು ಗುಡಿಯಲ್ಲಿ ಭಜನೆ ಮಾಡುತ್ತಿದ್ದೆವು. ನಮ್ಮಲ್ಲಿ ಚುರುಕಾದ ಎಳೆಯನೊಬ್ಬ

“ಮಾತುತಿರಾಯಾ ಬಲಭೀಮಾ। ಭಕ್ತರ ಮ್ಯಾಲss ಬಲು ಪ್ರೇಮಾ” ಎಂಬ ಹೊಸ ಪಲ್ಲವಿಯನ್ನು ಕಲಿತುಕೊಂಡು ಬಂದ. ಈ ಪಲ್ಲವಿಯೇ ನನಗೆ ಸ್ಫೂರ್ತಿದಾಯಕವಾಯಿತು. ಅದರಂತೆ ಕೆಲವು ಭಕ್ತಿಗೀತೆಗಳನ್ನು ನಾನು ರಚಿಸಿ ಹಾಡಿದ್ದುಂಟು. ಅವೆಲ್ಲ ಈಗ ಮರೆತುಹೋಗಿವೆ. ಮರೆತುಹೋದ ಈ ಭಜನೆಗಳನ್ನು ನಾನು ಕಾವ್ಯವೆಂದು ಹೇಗೆ ಕರೆಯಬಹುದು ?

ಮಾಧ್ಯಮಿಕ ಶಾಲೆಗೆ ಬಂದ ಮೇಲೆ ಇಂಗ್ಲೀಷಿನ ಪ್ರಾಬಲ್ಯವಾಯಿತು. ಆಂಗ್ಲ ಕವಿತೆಗಳನ್ನು ಓದಿ ಸ್ಫೂರ್ತಿಗೊಂಡ ನಾನು ಇಂಗ್ಲಿಷ ೫ ನೆಯ ಹಾಗೂ ೬ ನೆಯ ಈಯತ್ತೆಯಲ್ಲಿರುವಾಗ ಆಂಗ್ಲ ಭಾಷೆಯಲ್ಲಿಯೇ ಕಾವ್ಯವನ್ನು ಬರೆಯಲು ಪ್ರಾರಂಭಿಸಿದೆ. ಆಕಸ್ಮಾತ್ ನನ್ನ ಒಂದೆರಡು ವರ್ಗದ ವಹಿಗಳಲ್ಲಿ ಬರೆದಿದ್ದ ಈ ನನ್ನ ಪ್ರಯತ್ನಗಳನ್ನು ನೋಡಿದ ಶಿಕ್ಷಕರೊಬ್ಬರು ನನಗೆ ಆಂಗ್ಲ ಛಂದಸ್ಸಿನ ಆದಿನಿಯಮಗಳನ್ನು ಕಲಿಸಿಕೊಟ್ಟರು, ಸರಿ. ಆಂಗ್ಲಭಾಷೆಯಲ್ಲಿ ನಾನು ನೂರಾರು ಸಾಲುಗಳನ್ನು ಬರೆದೆ. ಆಂಗ್ಲ ಕವಿಗಳು ನಿಸರ್ಗವನ್ನು ವರ್ಣಿಸಿದರು. ನಾನೂ ಪ್ರಕೃತಿಗೀತೆಗಳನ್ನು ಬರೆಯಲು ಪ್ರಾರಂಭಿಸಿದೆ.

“ Rain is over, rain is past
Blows away the fearful blast ”

ಎಂದು ಮಳೆಗಾಲವನ್ನು ವರ್ಣಿಸಿದೆ. ಆಂಗ್ಲ ಕವಿಗಳು ತಾವು ವಾಸಿಸಿದ್ದ ಹಳ್ಳಿಗಳನ್ನು ಬಣ್ಣಿಸಿದ್ದರು. ಹೊಸೂರು ಎಂಬ ಹಳ್ಳಿಯಲ್ಲಿ ನಾನು ಕೆಲವು ವಾರ ನಮ್ಮ ಮನೆಯವರೊಡನೆ ಇದ್ದೆ. ಸವಣೂರಿನಲ್ಲಿ ಪ್ಲೇಗಿನ ಹಾವಳಿ ಬಹಳವಾದ ಕಾರಣ ನನ್ನ ಬೀಗರಾದ ಶ್ರೀ ಬಾ. ಕೃ. ಲಕ್ಷ್ಮೇಶ್ವರ (“ಗ್ರಾಮ ಪಂಚಾನನ” ಎಂಬ ಕಾದಂಬರಿಯನ್ನು ಇವರು ಬರೆದಿದ್ದಾರೆ) ಎಂಬ ಶಿಕ್ಷಕರ ಮನೆಯಲ್ಲಿ ನಾನು ಇದ್ದೆ. ಹೊಸೂರು ನನ್ನ ಕಾವ್ಯಕ್ಕೆ ಆಹುತಿಯಾಯಿತು.

“ Hosoor ! Home of flowers gay,
Crowding by the busy way
Rose bushes sprout and creepers grow
There, in your land of flowery glow.”

ಎಂದು ನಾನು ಹೊಸೂರನ್ನು ಬಣ್ಣಿಸಿದೆ.

ಆಂಗ್ಲ ಕವಿಗಳು “ Skylark, ‘ Nightingale, ’ ಮೊದಲಾದ ಪಕ್ಷಿಗಳನ್ನು ಬಣ್ಣಿಸಿದರು. ನಾನು ಬುದ್ಧಿಪೂರ್ವಕವಾಗಿ ದೂರ ತಿರುಗಾಡಲು ಹೋಗಿ ಒಂದು ಪಕ್ಷಿಯ ಧ್ವನಿಯನ್ನು ಕೇಳಿ,

“ Oh ! Independent ! Free from cares of earth ” ಎಂದು ಅದರ ಬಗ್ಗೆ ಹಾಡಿದೆ. ಹುಡಿಯಲ್ಲಿ ಹರಿದಾಡುವ ಹುಳಗಳನ್ನು, ಹಿಡಿಯುವ ಬಣ್ಣ ಬಣ್ಣದ ಪಕ್ಷಿಯೊಂದನ್ನು ನೋಡಿ,

“ Ugliness hides in seeming beautiful things,” ಎಂದು ನಾನು ಉದ್ಗಾರ ತೆಗೆದೆ. Shelley ಯ ಕವಿತೆಗಳನ್ನು ಓದಿ ಅವನಂತೆ ಜೀವನದ ಬಗೆಗೆ ವಿಷಾದಪೂರಿತ ಉಕ್ತಿಗಳನ್ನಾಡಿದೆ. Tennyson ಕವಿಯ “ Guinivere ” ಎಂಬ ಕಥನಕಾವ್ಯವನ್ನು ನಮ್ಮ ಮೆಟ್ರಿಕ್ ಪರೀಕ್ಷೆಗೆ ಹಚ್ಚಿದ್ದರು. ಅದನ್ನು ಮೀರಿಸಲೆಂದು ಏಳೆಂಟು ನೂರು ಸಾಲಿನ “Laila” ಎಂಬ ಕಥನಕಾವ್ಯವನ್ನೂ ನಾನು ಬರೆದೆ. ಅಂತೂ ಮೆಟ್ರಿಕ್ ಪರೀಕ್ಷೆ ಪಾಸಾಗಿ ನಾನು ಧಾರವಾಡದಲ್ಲಿ ಕರ್ನಾಟಕ ಕಾಲೇಜು ಸೇರುವ ಹೊತ್ತಿಗೆ ಇಂಗ್ಲೀಷಿನಲ್ಲಿ ಎರಡು ಮೂರು ಸಾವಿರ ಸಾಲುಗಳನ್ನು ಮಿಕ್ಕುವಂತೆ ಕವಿತೆಗಳನ್ನು ಬರೆದಿದ್ದೆ. ಆದರೆ ಇನ್ನೂ ನಾನು ಕವಿಯಾಗಿದ್ದಿಲ್ಲ.

ಈ ಕಾಲಾವಧಿಯಲ್ಲಿ ಉಳಿದ ಭಾಷೆಗಳಲ್ಲಿ ಸಹ ಕಾವ್ಯವನ್ನು ಬರೆಯಲು ನಾನು ಪ್ರಯತ್ನಿಸಿದ್ದುಂಟು. ಶಾಲೆಯಲ್ಲಿ ನನ್ನ ಸ್ನೇಹಿತನೊಬ್ಬ ಸುದಾಮಚರಿತ್ರೆಯನ್ನು ಸಂಸ್ಕೃತ ಶ್ಲೋಕಗಳಲ್ಲಿ ಬರೆದು ಅದನ್ನು ಮುದ್ರಿಸಿದ್ದ. ಅವನನ್ನು ಅಣಕಿಸಲೆಂದು—

कवीश कालदासोऽपि ताडितस्तत्र कवितया

ಎಂದು ಸಂಸ್ಕೃತದಲ್ಲಿ ಆಂಗ್ಲ ಪಡೆನುಡಿಯನ್ನು ಪ್ರಯೋಗಿಸಿದ್ದೆ. ನಮ್ಮ ಮನೆಯಲ್ಲಿ ಬಾಳೇಕುಂದ್ರಿಯ ಮಹಾಪುರುಷರಾದ ಪಂತರ ಮರಾಠಿ ಗೀತೆಗಳನ್ನು ಹೇಳುವ ಪರಿಪಾಠವಿದ್ದಿತು. ಆ ಮಾದರಿಯಂತೆ ಕೆಲವು ಮರಾಠಿ ಗೀತೆಗಳನ್ನು ಸಹ ರಚಿಸುವ ಸಾಹಸವನ್ನು

ನಾನು ಮಾಡಿದೆ. ಕನ್ನಡವನ್ನು ಆಗ ಶಾಲೆಗಳಲ್ಲಿ ಹೆಚ್ಚಾಗಿ ಕಲಿಸುತ್ತಿರಲಿಲ್ಲ. ಹೊಸಗನ್ನಡದ ಕವಿತೆಗೆ ಅಲ್ಲಿ ಇನ್ನೂ ಸ್ಥಾನವಿರಲಿಲ್ಲ. ಹೀಗಾಗಿ ಭಜನಗೀತೆಗಳನ್ನು ಬಿಟ್ಟರೆ ಕನ್ನಡ ನನ್ನ ಕಾವ್ಯಕ್ಷಿತಿಜದಲ್ಲಿ ಸುಳಿದಿರಲಿಲ್ಲ. ಸಂಸ್ಕೃತ ಮರಾಠಿ ಭಾಷೆಗಳು ತಾತ್ಪೂರ್ತಿಕ ಹೊಳವುಗಳಾಗಿದ್ದವು. ಶಾಲೆಯಲ್ಲಿಯ ಅಭ್ಯಾಸ ಹಾಗೂ ನನ್ನ ವಾಚನದ ಮೂಲಕ ಆಂಗ್ಲ ಭಾಷೆಯೇ ನನ್ನ ಕಾವ್ಯಕ್ಕೆ ಆಗ ನಿರಂತರ ಮಾಧ್ಯಮವಾಗಿತ್ತು. ಆದರೆ ಮೇಲೆ ಹೇಳಿದಂತೆ ನಾನು ಇನ್ನೂ ಕವಿಯಾಗಿದ್ದಿಲ್ಲ. ನನ್ನ ಕಾವ್ಯದ ಪರೀಕ್ಷಣ ಮಾಡುವ ಮಾರ್ಗದರ್ಶಕರು ನನಗೆ ಬೇಕಾಗಿತ್ತು.

ಕಾಲೇಜನ್ನು ಸೇರಿದ ಮೇಲೆ ಪ್ರಾಧ್ಯಾಪಕರೊಡನೆ ನನ್ನ ಕಾವ್ಯದ ಸಮಸ್ಯೆಯನ್ನು ಚರ್ಚಿಸಲು ನಾನು ಬಯಸಿದೆ. ಅವರಲ್ಲಿ ಕೆಲವರಿಂದ ನನಗೆ ಪ್ರೋತ್ಸಾಹ ದೊರೆಯಿತು. ಆದರೆ ಮಾರ್ಗದರ್ಶನವಿಲ್ಲದೆ ಸುತ್ತಿದ ದಾರಿಯಲ್ಲಿಯೇ ನಾನು ಸುತ್ತುತ್ತಿದ್ದೆ. ಆಗಲೇ ಉದಯೋನ್ಮುಖವಾಗಿದ್ದ ಗೆಳೆಯರಗುಂಪಿನ ಸದಸ್ಯನಾದ ನನ್ನ ಗೆಳೆಯನೊಬ್ಬನಿದ್ದ. ನನ್ನ ಬಯಕೆ ಈಡೇರಿತು. ನನ್ನ ಕವಿತೆಗಳನ್ನು ಮೇಲಿಂದ ಮೇಲೆ ಓದಿತೋರಿಸಿ ಈ ಗೆಳೆಯನಿಗೆ ನಾನು ತೊಂದರೆ ಕೊಡುತ್ತಿದ್ದೆ. ನನ್ನ ಕವಿತೆಗಳ ಪರೀಕ್ಷೆ ಆಗಿಬಿಡಲೆಂದು ಒಂದು ದಿನ ಆತ ನನ್ನನ್ನು ಬೇಂದ್ರೆಯವರ ಕಡೆಗೆ ಕರೆದುಕೊಂಡು ಹೋದ.

ಬೇಂದ್ರೆಯವರು ನಾನು ಓದಿದ ಕವಿತೆಗಳನ್ನು ತಾಳ್ಮೆಯಿಂದ ಕೇಳಿಕೊಂಡರು. ಅರ್ಥಾತ್ ನನ್ನ ಕವಿತೆಗಳೆಲ್ಲ ಆಂಗ್ಲ ಭಾಷೆಯಲ್ಲಿದ್ದವು. "ಕಾವ್ಯದಲ್ಲಿ ಸಹಜತೆ ಇದೆ. ಇದೊಂದು ಆಳವಾದ ಪೂರ್ವಸಂಸ್ಕಾರವಿರಬೇಕು." ಎಂದು ಬೇಂದ್ರೆಯವರು ಅಭಿಪ್ರಾಯಪಟ್ಟರು. ಆಂಗ್ಲಭಾಷೆಯಲ್ಲಿ ಬರೆಯುವ ರೂಢಿಯನ್ನು ಮುಂದುವರಿಸಿದರೂ ಕನ್ನಡದಲ್ಲಿ ಬರೆಯಲು ಪ್ರಾರಂಭಿಸಬೇಕೆಂದು ನನಗೆ ಸೂಚಿಸಿದರು. ಆಮೇಲೆ ಕಾವ್ಯದ ಜೀವಾಳದ ಬಗೆಗೆ ಅವರು ಮೋಹಕವಾಗಿ ಮಾತನಾಡಿದರು. ಕವಿ ಎಂದರೆ ದ್ರಷ್ಟಾರ, ಅನುಭಾವಿ ಎಂಬ ಮಾತು ಅಂದು ನನ್ನ ಕಣ್ಣೆದುರಿಗೆ ಬಂದಿತು. ಕಾವ್ಯದ ಬಗ್ಗೆ ನನ್ನ ವಿಚಾರದಲ್ಲಿಯೇ ಒಂದು ಕ್ರಾಂತಿ ಉಂಟಾಗಿತ್ತು.

ಕಾಲೇಜಿನಲ್ಲಿ ನಾನು ಕಳೆದ ೬ ವರುಷಗಳು ಹೊಯ್ದಾಟದ ವರುಷಗಳಾಗಿದ್ದವು. ಇಂಗ್ಲಿಷಿನಲ್ಲಿ ಬರೆಯುವದೇ ಮುಖ್ಯವಾಯಿತು. ಆದರೆ ಕನ್ನಡವು ಕ್ರಮೇಣ ನನ್ನ ಮಾಧ್ಯಮವಾಯಿತು. ಬೇಂದ್ರೆಯವರ ಹಾಗೂ ಇನ್ನುಳಿದ ಕೆಲವು ಕವಿಗಳ ಕವಿತೆಗಳನ್ನು ಇಂಗ್ಲಿಷಿನಲ್ಲಿ ಭಾಷಾಂತರಿಸಿದೆ. ಭಾಷಾಂತರ ಹೇಗೇ ಇರಲಿ, ಈ ಮೂಲಕ ಹೊಸಗನ್ನಡ "ಕಾವ್ಯವನ್ನು" ನಾನು ಆಳವಾಗಿ ಅಭ್ಯಾಸ ಮಾಡಿದ್ದೆ. B. A., M. A. ಪರೀಕ್ಷೆಗಳಲ್ಲಿ ಇಂಗ್ಲಿಷಿನ



ಜೊತೆಗೆ ಕನ್ನಡವನ್ನು ಐಚ್ಛಿಕ ವಿಷಯವೆಂದು ತೆಗೆದುಕೊಂಡು ನಾನು ಹಳೆಗನ್ನಡ ಕಾವ್ಯವನ್ನು ಓದಿದೆ. ಗುಂಪಿನ ವಾತಾವರಣದಲ್ಲಿ ನನ್ನ ದರ್ಶನವೂ ಹಿಗ್ಗಿತು. ಕವಿಯೊಬ್ಬ ಕ್ರಮೇಣ ನನ್ನಲ್ಲಿ ಬಂದು ನೆಲಿಸಹತ್ತಿದ. ಈ ಅವಧಿಯಲ್ಲಿ ನಾನು ಬರೆದ ಕೆಲವು ಕವಿತೆಗಳು "ಪಯಣ" ಎಂಬ ನನ್ನ ಸಂಗ್ರಹದಲ್ಲಿ ಅಚ್ಚಾಗಿವೆ. "ಹಕ್ಕಿ ಹಾರುತಿದೆ" ಎಂಬ ಕವನಸಂಗ್ರಹದಲ್ಲಿ "ಅಯೋಧ್ಯೆ" ಹಾಗೂ "ಸೌಂದರ್ಯ" ಎಂಬ ಎರಡು ಕವಿತೆಗಳು ಪ್ರಸಿದ್ಧವಾಗಿವೆ. ಈ ಕವಿತೆಗಳಿಗೆ ರೂಪ ತುಂಬಿಬಂದಿಲ್ಲ. ಆದರೆ ಕಾಣ್ಕೆ ಇಲ್ಲವೆ ಸ್ಪಂದನ ಆ ಕವಿತೆಗಳ ಹೃದಯಾಂತರದಲ್ಲಿ ಮೂಡಿದೆ. "ಪಯಣ"ದಲ್ಲಿ ಸೇರಿಸಿದ "ದಾರಿಕಾರ" ಮೊದಲಾದ ಕವಿತೆಗಳ ಬಗ್ಗೆ ಸಹ ಈ ಮಾತನ್ನು ಹೇಳಬಹುದು.

ಕವಿಯ ಸೋಲು, ಸೌಂದರ್ಯ ಮೊದಲಾದ ಕವಿತೆಗಳು ಪಯಣದಲ್ಲಿವೆ. ಒಂದು ದೃಷ್ಟಿಯಿಂದ ನನ್ನ ಪ್ರಥಮ ಕವಿತೆ ಎಂದರೆ ಕಲೋಪಾಸಕ ಎಂಬ "ನೀಳ್ಗವನ". ನಾನು ಪುಣೆಯಲ್ಲಿದ್ದಾಗ ಅಕಸ್ಮಾತ್ ಒಂದು ಕಾಣ್ಕೆ ಕನಸಿನ ಮೂಲಕ ಬಂದಿತು. ಯಾವುದೋ ಒಂದು ಅರಣ್ಯದಲ್ಲಿ ನಾನು ತಿರುಗಾಡುತ ಹೊರಟಿದ್ದೆ. ಅಲ್ಲಿ "ಏಟ್ಸ" ಕವಿ ಭೆಟ್ಟಿಯಾಗಿ ನನ್ನ ಸ್ನೇಹಿತನಾಗಿದ್ದ. ನಾವಿಬ್ಬರೂ ಅಲೆದಾಡುತ್ತಿರುವಾಗ ಇಂಗ್ಲಿಷಿನಲ್ಲಿಯ ಎರಡು ಸಾಲುಗಳ ಶ್ಲೋಕವೊಂದು ಎಲ್ಲಿಂದಲೋ ತೇಲುತ್ತ ಬಂದು ನನ್ನ ಕಿವಿಗಳನ್ನು ಸೇರಿತು. ನಸುಕಿನಲ್ಲಿ ಎದ್ದಾಗ ಮೊದಲಿನ ಸಾಲು ತಾನಾಗಿಯೇ ನೆನಪಾಯಿತು. ಅದರ ಜಾಡು ಹಿಡಿದು ನೆನೆಸುತ್ತಿರಲು ಇನ್ನೊಂದು ಸಾಲು ಸ್ಮೃತಿಪಟಲದಲ್ಲಿ ಉಜ್ವಲವಾಯಿತು.

" Imagination is the body of
thought
Be it for thee to find its
harness out. "

ಉಳಿದುದೆಲ್ಲ ಸಿದ್ಧಿ ಇದ್ದು ಅಭಿವ್ಯಕ್ತಿಯನ್ನು ಸಾಧಿಸದ ಕವಿಗೆ ಉತ್ತಮ ಬಲವನ್ನು ಸಾಧಿಸಬೇಕೆಂದು ಈ ಸಾಲುಗಳ ಔತಣವಾಗಿತ್ತು. ಇದೊಂದು ಮಂತ್ರವೆಂದೇ ನಾನು ಬಗೆದಿದ್ದೇನೆ. ಇದನ್ನು ಜ್ಞಾಪಿಸಿಕೊಂಡ ನನ್ನ ಆನಂದಕ್ಕೆ ಸೀಮೆ ಇರಲಿಲ್ಲ. ಈ ಸಾಲುಗಳ ಅರ್ಥವನ್ನು ಚಿಂತಿಸುತ್ತ ಹೋದ ಹಾಗೆ ಒಂದು ಕಥೆಯೇ ನನ್ನ ಮನಸ್ಸಿನಲ್ಲಿ ತನಗೆ ತಾನೆ ಕಟ್ಟಿಕೊಂಡಿತು. ಮೂರು ನಾಲ್ಕು ದಿನಗಳಲ್ಲಿ "ಕಲೋಪಾಸಕ" ಎಂಬ "ನೀಳ್ಗವನ"ವನ್ನು ನಾನು ಬರೆದೆ.

ಈ ಕವಿತೆಯಲ್ಲಿ ದರ್ಶನವಿದೆ. ಕಲ್ಪಕತೆ ಇದೆ. ಉತ್ಕಟತೆ ಇದೆ. ಆದರೆ ಅದರ ಶೈಲಿಯಲ್ಲಿ ವಿಷಮತೆಯೂ ಇದೆ. ಹಳೆಗನ್ನಡ ಶಬ್ದಗಳು ಅಲ್ಲಲ್ಲಿ ಅಸಹಜವಾಗಿ ಹೊಸಗನ್ನಡ ಶೈಲಿಯೊಡನೆ ಕೂಡಿಕೊಂಡಿವೆ. ಹೀಗಾಗಿ ಇದರಲ್ಲಿಯೂ ಪೂರ್ಣ ಕವಿತೆಯ ಹೊಳವು ಇಳಿದು ಬಂದಿಲ್ಲವೆನ್ನಬಹುದು. ಹಾಗಾದರೆ ನನ್ನ ಪ್ರಥಮ ಕವಿತೆ ಯಾವುದು? ಸಮುದ್ರ ಗೀತಗಳನ್ನು ಬರೆದಾಗ ಅಲ್ಲಿಯ ಮೊದಲನೆಯ ಕವಿತೆಯಾದ "ಪ್ರತಿಜ್ಞೆ" ನನ್ನ ಪ್ರಥಮ ಕವಿತೆಯೆಂದು ಹೇಳಬಹುದೆ?

ಸ್ವಚ್ಛಂದ ಛಂದದಲ್ಲಿ,
ಜಲಕ್ರೀಡಾ ವೃತ್ತದಲ್ಲಿ,
ತೆರೆಗಳು ಅನುದಿನ ಹಿಡಿದ ತಾಳಲಯದಲ್ಲಿ
ಗೀತವನೊರೆದೆನೆಂದು ಗೀಳ್ ಮಾಡಬೇಡ
ಸಮುದ್ರವ ಸೆರೆ ಹಿಡಿದವರುಂಟೆ !

ಒಂದು ದೃಷ್ಟಿಯಿಂದ ಇದು ನನ್ನ ಪ್ರಥಮ ಕವಿತೆ ಅಹುದು. ಆದರೆ ಇಲ್ಲಿಯೇ ನಾನು ಕಾಲೂರಿ ನಿಲ್ಲಲಿಲ್ಲ. ನನ್ನ ಶೈಲಿಯಲ್ಲಿ ಮುಂದೆ ಅಭ್ಯಂತರಗಳಾದವು. ನಾನು ಉಲ್ಲಂಘಿಸಿದ ಸಂಪ್ರದಾಯಗಳಲ್ಲಿ ಮುಂದೆ ವಿಶೇಷ ಭೇದಗಳು ತೋರಿಬಂದವು. ನನ್ನ ದರ್ಶನದಲ್ಲಿ ಮುಂದೆ ಒಂದು ವಿಸ್ತಾರವು ಬಂದೂ ಸೇರಿಕೊಂಡಿತು. "ಎಡಿನ್‌ಬರೋ ಕೋಟೆಯ ಮೇಲಿಂದ" ಎಂಬ ಕವಿತೆಯಲ್ಲಿ ಅದು ಒಂದು ವಿಧವಾಗಿ ಕಾಣಿಸಿಕೊಂಡರೆ ಬಾಳ್ ದೇವಿಗೆ ಉಸುರಿದ odeನಲ್ಲಿ ಅದು ಇನ್ನೊಂದು ರೀತಿಯಲ್ಲಿ ವ್ಯಕ್ತವಾಯಿತು. "ಮುಕ್ತ ಜೀವಿಗಳು" ಎಂಬ ಕವಿತೆಯಲ್ಲಿ ನನ್ನ ಕಾವ್ಯವು ಇನ್ನೊಂದು ಪೂರ್ಣತೆಯನ್ನು ಕಂಡಿತು. ಹೀಗೆ ನವೋನವವಾಗಿ ಕುಸುಮಿಸುತ್ತಿರುವ ಕಾವ್ಯವಲ್ಲರಿಯಲ್ಲಿ ನನ್ನ ಪ್ರಥಮ ಕವಿತೆ ಇದೇ ಎಂದು ಹೇಳುವುದು ಹೇಗೆ? ಒಂದೊಂದು ಸ್ತರಕ್ಕೆ ಒಂದೊಂದು ಪ್ರಥಮ ಕವಿತೆ ಇದೆ ಎಂದು ಮಾತ್ರ ಹೇಳಬಹುದು.

'ರಸ ಸಂಸಾರ' ಎಂಬ ಕವಿತೆಯಲ್ಲಿ ಈ ವಿಷಯವನ್ನು ಕುರಿತು ನಾನು ಬರೆದಿದ್ದೇನೆ. "ಬರೆದ ಕವಿತೆ ಕಸ; ಬರೆಯಲಿರುವ ಕವಿತೆ ನವೀನ ರಸ" ಎಂದು ಹೇಳಿದರೆ, ಅದು ಎಲ್ಲ ಕವಿಗಳ ಅನುಭವದ ಒಂದು ಅಂಶವೆನ್ನಬಹುದು.

" ಕಟ್ಟಲಿಹ ಕವನ ಭೂಕೈಲಾಸ
ಕಟ್ಟಿದ ಮೇಲದಕೊದಗಿತು ಹ್ರಾಸ "

*   *   *

" ಕಬ್ಬವಾಯಿತದು ಕಾಲುಕಸ
ಇನ್ನೊಬ್ಬರಿಗಿರಬಹುದು ರಸ "

ಹೀಗಾಗಿ ಕವಿಯ ಪ್ರಪ್ರಥಮ ಪೂರ್ಣ ಕವಿತೆ ಅವನು ಪೂರ್ಣನಾದಾಗ ಮಾತ್ರ ಮೂಡಿಬಂದೀತು.

" ಎಲ್ಲ ದಾಹವಿದು ನ್ಯೂನ, ಅಪೂರ್ಣ,
ಅಪಕ್ವ ಅಜೀರ್ಣ
ನನ್ನನೆ ನಾ ತಿಳಿದಿಲ್ಲ
ಅಂತೇ ದಾಹವು ಕಳೆದಿಲ್ಲ
ಬ್ರಹ್ಮಾಂಡದೊಡನೆ ನಾನೇಕಜೀವವಾಗಿಲ್ಲ
ಅಂತೇ ಸಕಲವು ಭಾವವಾಗಿಲ್ಲ.
ಅದಕೀ ದಾಹ.
ಅದಕೀ ಮೋಹ.
ನನ್ನಾಳ ನನ್ನೆತ್ತರವೆಲ್ಲ
ಪಡದಿಹ ಬಿತ್ತರವೆಲ್ಲ
ನಾ ತಿಳಿದಂದು
ಈ ಪ್ರಪಂಚದಾ ಅಂಚು ಹೊಂಚನೆಲ್ಲ
ಸಂಚು ಮಿಂಚನೆಲ್ಲ
ಸಾಧಿಸಿ ಭೇದಿಸಿ
ಬೋಧಿಸಿ ಆರಾಧಿಸಿ
ಮೂಲೆ ಮೂಲೆಯೂ ವೈವಿಧ್ಯದಿ ಮಿಂದು
ಒಂದಾಗುತ ನಿಂದು
ನಾ ಹೊಳೆದಂದು
ಇಲ್ಲವು ದಾಹ,
ಇಲ್ಲವು ಮೋಹ.
ಅಂದಿಗಿಹುದು ಬರಿ ನಿರ್ವೃತಿ, ಆನಂದ;
ಸಾನುಭೂತಿಯ ಚಂದ, ಸಂತೃಪ್ತಿ, ಸ್ವಚ್ಛಂದ.

ಇಂತಹ ದರ್ಶನದಿಂದ ಜನ್ಮಗೊಂಡ ಕವಿತೆಯನ್ನು ಮಾತ್ರ ನಾನು ಧೈರ್ಯದಿಂದ 'ಕವಿತೆ'ಯೆಂದು ಕರೆಯಬಹುದು. ಅಲ್ಲಿಯ ವರೆಗೆ ಹುಟ್ಟಿದ ಕವಿತೆಗಳೆಲ್ಲ ಪ್ರಥಮ ಕವಿತೆಗಳಲ್ಲ; 'ಪ್ರಥಮ ಪ್ರಯತ್ನಗಳು'. ಆದರೆ ಬೆಳೆಯುತ್ತಿರುವ ವ್ಯಕ್ತಿತ್ವ ವಿವಿಧ ಸ್ತರಗಳಲ್ಲಿ ಆ ಸ್ತರಕ್ಕೆ ಪೂರ್ಣವೆನಿಸುವ ದರ್ಶನವನ್ನೂ ಅಭಿವ್ಯಕ್ತಿಯನ್ನೂ ಪಡೆಯುತ್ತದೆ. ಹೀಗಾಗಿ ಒಂದೊಂದು ಸ್ತರಕ್ಕೆ ಒಂದೊಂದು ಪ್ರಥಮ ಕವಿತೆಯಿದೆಯೆಂದೂ ಹೇಳಬಹುದು.

ಒಂದು ಕವಿತೆಯಲ್ಲಿ ಬೇಂದ್ರೆಯವರು ಕವಿಯ ಕವನಗಳನ್ನು ಹಕ್ಕಿಯ ಗರಿಗಳಿಗೆ ಹೋಲಿಸಿದ್ದಾರೆ. ಹಕ್ಕಿ ಹಾರುತ್ತ ಮೇಲೆ ಮೇಲೆ ಹೋದಂತೆ ಅದರ ಗರಿಗಳು ಕೆಳಕೆಳಗೆ ಉದುರಿ ಬೀಳುತ್ತವೆ. ಆ ಗರಿಗಳನ್ನೆತ್ತಿ ರಸಿಕರು ಕವಿಯ ವ್ಯಕ್ತಿತ್ವವನ್ನು ಅಳೆಯಲೆಳಸುತ್ತಾರೆ. ಈ ಪುಚ್ಛಗಳ ಬಣ್ಣ ಹಾಗು ನಯ ಮಾಸ ಮಾಸಕ್ಕೆ ಬದಲಾಗುತ್ತಿರುತ್ತವೆ. ಪಕ್ಷಿಗೆ ತನ್ನ ಪುಚ್ಛಗಳ ಅರಿವು ಇರುವದಿಲ್ಲ. ತನ್ನ ಕೊರಲು ತುಂಬುವಂತೆ ಹಾಡಿದರೆ ಮಾತ್ರ ತನ್ನ ಹಾಡಿಗೆ ಸಫಲತೆ ಬಂದಿತೆಂದು ಪಕ್ಷಿ ತಿಳಿಯುತ್ತದೆ. ತುಂಬುಗೊರಲಿನ ಬಗ್ಗೆ ಆ ಪಕ್ಷಿಗಿದ್ದ ಎಣಿಕೆ ಆ ಪಕ್ಷಿಯ ವ್ಯಕ್ತಿತ್ವ ಹಿಗ್ಗಿದಂತೆ ಹಿಗ್ಗುತ್ತ ಹೋಗುತ್ತದೆ. ಹೀಗಾಗಿ ಪ್ರಥಮ ಕವಿತೆಗಳು ಪ್ರಾಥಮಿಕ ಶಾಲೆಗಳ ವರ್ಗಗಳಂತೆ ಅನೇಕವಾಗುತ್ತವೆ. ಹಕ್ಕಿಯ ಪುಚ್ಛಗಳನ್ನೆಣಿಸುವ ರಸಿಕರು ಅದರ ತುಂಬುಗೊರಲಿನ ಹವಣಿಕೆಗಳನ್ನೂ ಲಕ್ಷ್ಯದಲ್ಲಿಡಬೇಕಾಗಿದೆ.



## ವೈದಿಕ ತತ್ತ್ವಜ್ಞಾನದ ಹಿನ್ನೆಲೆಯಲ್ಲಿ

# ಗಾಂಧೀ ತತ್ತ್ವಜ್ಞಾನ


ಲೇಖಕರು :

**ಪ್ರೊ. ಎಂ. ಯಾಮುನಾಚಾರ್ಯ,** ಎಂ. ಏ.

ಪ್ರಧಾನ ಸಂಪಾದಕರು,

ಗಾಂಧೀ ಗ್ರಂಥಮಾಲೆ, ಮೈಸೂರು.


ಭಾರತೀಯ ತತ್ತ್ವಜ್ಞಾನದ ಇತಿಹಾಸದಲ್ಲಿ ಹಿಂದೂ ತತ್ತ್ವಜ್ಞಾನ ಬಹು ಪ್ರಾಚೀನವಾದದ್ದು ಮತ್ತು ಪ್ರಧಾನವಾದದ್ದು. ಬೌದ್ಧ ಮತ್ತು ಜೈನ ತತ್ತ್ವಜ್ಞಾನಗಳು ಅವೈದಿಕ ಎಂದೂ ಹಿಂದೂ ತತ್ತ್ವಜ್ಞಾನ ವೈದಿಕವೆಂದೂ ಎಣಿಸಲ್ಪಟ್ಟವೆ. ಬೌದ್ಧ ಮತ್ತು ಜೈನ ಧರ್ಮಗಳಲ್ಲಿ ಅಹಿಂಸೆ ಪರಮ ಆದರಣೀಯವಾದ ಸದ್ಗುಣ. ಆದರೆ ಇದು ಕೇವಲ ಬೌದ್ಧ ಮತ್ತು ಜೈನ ಧರ್ಮಗಳಲ್ಲಿ ಹೊಸದಾಗಿ ಹುಟ್ಟಿದ ಕಲ್ಪನೆ ಎಂಬ ಭಾವನೆಗೆ ಅವಕಾಶವಿಲ್ಲ. ವೈದಿಕ ತತ್ತ್ವಜ್ಞಾನದಲ್ಲಿ ಅಹಿಂಸೆಗೆ ಸದ್ಗುಣಗಳಲ್ಲಿ ಉತ್ಕೃಷ್ಟ ಸ್ಥಾನಕೊಟ್ಟಿದೆ. ಶೌಚ, ಇಂದ್ರಿಯನಿಗ್ರಹ, ಅನಾಸಕ್ತಿ, ಸತ್ಯ, ಅಹಿಂಸೆಗಳಿಗೆ ಹಿಂದೂ ಧರ್ಮದಲ್ಲಿ ಅಂದರೆ ವೈದಿಕ ಧರ್ಮದಲ್ಲಿ ಹೆಚ್ಚು ಪ್ರಾಶಸ್ತ್ಯಕೊಟ್ಟಿದೆ. ಅಹಿಂಸೆಯನ್ನು ಸಾರ್ವಭೌಮ ಮಹಾವ್ರತವೆಂದು ಕರೆದಿದೆ. ಪತಂಜಲಿಯ ಯೋಗ ಸೂತ್ರದಲ್ಲಿ ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹಗಳು ಜಾತಿ ದೇಶ ಕಾಲ ಸಮಯ ಇವುಗಳನ್ನು ಮೀರಿದುದು ಎಂದು ವರ್ಣಿಸಿದೆ—ಅಹಿಂಸಾಸ್ತೇಯ ಬ್ರಹ್ಮಚರ್ಯಾಪರಿಗ್ರಹಾಯಮಃ | ಏತೇ ಜಾತಿ ದೇಶ ಕಾಲ ಸಮಯಾನವಚ್ಛಿನ್ನಾಃ ( II. 30-31 ). ಇದೇ ಪತಂಜಲಿ, 'ಅಹಿಂಸಾ ಪ್ರತಿಷ್ಠಾಯಾಂ ತತ್ಸನಿಧೌ ವೈರತ್ಯಾಗಃ' ಎಂದೂ ಹೇಳಿದರು.

### ಅಹಿಂಸೆಯೆಂದರೇನು ?

ಅಹಿಂಸೆ ಅಂದರೆ ಯಾವ ಪ್ರಾಣಿಗೂ ಯಾವ ವಿಧದಲ್ಲೂ ಯಾವ ಕಾಲದಲ್ಲೂ ನೋವನ್ನು ಉಂಟುಮಾಡದಿರುವುದೇ ಅಹಿಂಸೆ ಎಂದು ವಿವರಿಸಿದೆ. ಗಾಂಧಿ ಅವರ ಆಶ್ರಮವ್ರತಗಳಲ್ಲಿ ಇವನ್ನು ಮುಖ್ಯವಾದ ವ್ರತಗಳನ್ನಾಗಿ ಮಾಡಿದರು. ದುಷ್ಟಂ ಹಿಂಸಾಯಾಂ ಅನ್ನುವ ವೈಶೇಷಿಕ ಸೂತ್ರದಲ್ಲಿ ಹಿಂಸೆಯನ್ನು ನಿಷಿದ್ಧ ಕರ್ಮಗಳ ಉಪಲಕ್ಷಣವೆಂದು ಭಾವಿಸಿದೆ. ಇದರ ದೃಷ್ಟಿಯಲ್ಲಿ ಅಶುಚಿ ಅಂದರೆ ಹಿಂಸೆ ಮತ್ತು ಕ್ರೌರ್ಯದಿಂದ ಕೂಡಿದ್ದು ಎಂದರ್ಥ. ನ್ಯಾಯಸೂತ್ರದಲ್ಲಿಯೂ ಇದರ ಸಮರ್ಥನೆ ಇದೆ. ವೈದಿಕ ವಾಙ್ಮಯದಲ್ಲಿ ಅಹಿಂಸೆಯ ಪ್ರಥಮ ಉಲ್ಲೇಖನವನ್ನು ಛಾಂದೋಗ್ಯ ಉಪನಿಷತ್ತಿನಲ್ಲಿ ಕಾಣುತ್ತೇವೆ. ಅಲ್ಲಿ ಮಾನವನ ಇಡೀ ಜೀವನ ಒಂದು ಯಜ್ಞವೆಂದೂ ಈ ಯಜ್ಞದ ಪೂರ್ತಿಗಾಗಿ ಕೊಡಬೇಕಾದದ್ದು ತಪಸ್ಸು, ದಾನ, ಆರ್ಜವ ಅಹಿಂಸೆ ಸತ್ಯವಚನವೆಂದು ವರ್ಣಿಸಿದೆ – 'ಅಥ ಯತ್ ತಪೋದಾನಮ್ ಆರ್ಜವಮ್ ಅಹಿಂಸಾ ಸತ್ಯವಚನಮ್ ಇತಿತಾ ಅಸ್ಯ ದಕ್ಷಿಣಾಃ' ಉಪನಿಷತ್ತನ್ನೇ ಅನುಸರಿಸಿದ ಭಗವದ್ಗೀತೆಯಲ್ಲಿ ಅಹಿಂಸೆಯ ಉಲ್ಲೇಖವಿರುವುದು ಆಶ್ಚರ್ಯವೇನಲ್ಲ. ವೈದಿಕ ತತ್ತ್ವಜ್ಞಾನದಲ್ಲಿ ಅಹಿಂಸೆಯ ತಾತ್ತ್ವಿಕ ಆಧಾರ 'ಆತ್ಮೌಪಮ್ಯ' ಅಂದರೆ 'ನನ್ನಂತೆಯೇ ಇತರರು!' ಅನ್ನುವ ನ್ಯಾಯ. ಉಪನಿಷತ್ತು

> ವೈದಿಕ ತತ್ತ್ವಜ್ಞಾನವು ಅಹಿಂಸೆಯು ಸದ್ಗುಣಗಳಲ್ಲಿ ಶ್ರೇಷ್ಠವೆಂದು ಹೇಳಿರುವುದು. ಅದೇ ರೀತಿ ಸತ್ಯವೇ ಎಲ್ಲದರ ಆಧಾರವೆಂದು ಅದು ಪರಿಗಣಿಸಿರುವುದು. ಗಾಂಧೀಜಿ ಇವೆರಡನ್ನೂ ತಮ್ಮ ಜೀವನದಲ್ಲಿ ಅಳವಡಿಸಿಕೊಂಡು ಬೋಧಿಸಿದರು. ಗಾಂಧಿ ತತ್ತ್ವಜ್ಞಾನವನ್ನು ವೈದಿಕ ತತ್ತ್ವಜ್ಞಾನದ ಹಿನ್ನೆಲೆಯಲ್ಲಿ ಅರಿಯುವಂತೆ ಲೇಖಕರಿಲ್ಲಿ ಸೋದಾಹರಣವಾಗಿ ವಿವರಿಸಿದ್ದಾರೆ.

ಮತ್ತು ಭಗವದ್ಗೀತೆಯ ದೃಷ್ಟಿಯಲ್ಲಿ ಅಹಿಂಸೆ ಮೂರು ಮೂಲ ಸೂತ್ರಗಳ ಮೇಲೆ ನಿಂತಿದೆ ಎನ್ನಬಹುದು. ಒಂದು, ಈಶ್ವರನ ದೃಷ್ಟಿಯಲ್ಲಿ ಎಲ್ಲರೂ ಸಮಾನರು ಅನ್ನುವುದು. ಎರಡನೆಯದು ಪ್ರತಿಜೀವಿಯಲ್ಲೂ ಪರಮಾತ್ಮನು ಅಂತರ್ಯಾಮಿಯಾಗಿದ್ದಾನೆ ಅನ್ನುವುದು. ಮೂರನೆಯದು, ಭಗವದ್ಗೀತೆಯಲ್ಲಿ ಹೇಳುವಂತೆ ಇತರರನ್ನೂ ನಿನ್ನಂತೆ ಕಾಣು ಎನ್ನುವ ಭಾವ.

### ತನ್ನಂತೆ ಪರರ ಬಗೆಯಬೇಕು

ಆತ್ಮೌಪಮ್ಯದ ಅರ್ಥವನ್ನು ಭಗವದ್ಗೀತೆ ( VI–32 ) ಮತ್ತು ಅದರ ಮೇಲಿನ ಶಂಕರಾಚಾರ್ಯರ ವ್ಯಾಖ್ಯೆ ಸ್ಪಷ್ಟಪಡಿಸುತ್ತದೆ. 'ಆತ್ಮೌಪಮ್ಯೇನ ಸರ್ವತ್ರ ಸಮಂ ಪಶ್ಯತಿ ಯೋಽರ್ಜುನ। ಸುಖಂವಾ ಯದಿ ವಾ ದುಃಖಂ ಸಯೋಗೀ ಪರಮೋ ಮತಃ ॥' ಎಂದು ವಿವರಿಸುತ್ತದೆ. ಅದರ ಅರ್ಥ 'ಯಾವ ಮನುಷ್ಯ ಎಲ್ಲರನ್ನೂ ತನ್ನಂತೆ ನೋಡುತ್ತಾನೋ, ಸುಖ-ದುಃಖಗಳು ಸಮಾನವೆಂದು ಭಾವಿಸುತ್ತಾನೋ, ಅವನು ಶ್ರೇಷ್ಠನಾದ ಯೋಗಿ' ಎಂದು. ತನಗೆ ಒಳ್ಳೆಯದಾಗಬೇಕೆಂದು ಬಯಸುವಂತೆಯೇ ಇತರರಿಗೂ ಒಳ್ಳೆಯದಾಗಬೇಕೆಂದು ಸಹಜವಾಗಿ ಬಯಸುತ್ತಾನೆ ಎನ್ನುವುದು ಇದರ ತಾತ್ಪರ್ಯ. ಶಂಕರಾಚಾರ್ಯರು ಅದರ ವ್ಯಾಖ್ಯೆಯನ್ನು ಈ ರೀತಿ ಮಾಡುತ್ತಾರೆ: ಯಾವನು ಅಹಿಂಸೆಯನ್ನು ಆಚರಣೆಯಲ್ಲಿ ತಂದುಕೊಂಡಿರುವನೋ ಅವನು ಇತರರಿಗೆ ಅಹಿತವಾದದ್ದನ್ನು ಎಂದಿಗೂ ಮಾಡುವುದಿಲ್ಲ. ಇದರ ಹಿಂದಿನ ಗೀತೆಯ ಶ್ಲೋಕಗಳು ಇದನ್ನೇ ಸಮರ್ಥಿಸುತ್ತವೆ. 'ಸರ್ವಭೂತಸ್ಥಮಾತ್ಮಾನಂ ಸರ್ವಭೂತಾನಿ ಚಾತ್ಮನಿ। ಈಕ್ಷತೇ ಯೋಗಯುಕ್ತಾತ್ಮಾಸರ್ವತ್ರ ಸಮದರ್ಶನಃ॥' 'ಯೋ ಮಾಂ ಪಶ್ಯತಿ ಸರ್ವತ್ರ ಸರ್ವಂ ಚ ಮಯಿ ಪಶ್ಯತಿ। ತಸ್ಯಾಹಂ ನ ಪ್ರಣಶ್ಯಾಮಿ ಸ ಚ ಮೇ ನ ಪ್ರಣಶ್ಯತಿ॥' 'ಸರ್ವಭೂತಸ್ಥಿತಂ ಯೋ ಮಾಂ ಭಜತ್ಯೇಕತ್ವಮಾಸ್ಥಿತಃ। ಸರ್ವಥಾ ವರ್ತಮಾನೋಽಪಿ ಸ ಯೋಗೀಮಯಿ ವರ್ತತೇ-ಅಂದರೆ ಸರ್ವತ್ರಸಮಭಾವವನ್ನಿಡುವ ಯೋಗಿ ತನ್ನನ್ನು ಸಕಲ ಭೂತಗಳಲ್ಲಿಯೂ ಅವುಗಳನ್ನು ತನ್ನಲ್ಲಿಯೂ ಕಾಣುತ್ತಾನೆ. ಯಾರು ನನ್ನನ್ನು ಎಲ್ಲೆಲ್ಲಿಯೂ ನೋಡುತ್ತಾರೋ, ಎಲ್ಲವನ್ನೂ ನನ್ನಲ್ಲಿ ನೋಡುತ್ತಾರೋ ಅವರು ನನಗೆ ಇಲ್ಲವೆಂದಾಗುವುದಿಲ್ಲ ಮತ್ತು ನಾನು ಅವರಿಗೆ ಇಲ್ಲವೆಂದಾಗುವದಿಲ್ಲ. ನನ್ನಲ್ಲಿ ಲೀನನಾಗಿ, ಸರ್ವಭೂತಸ್ಥಿತನಾದ ನನ್ನನ್ನು ಭಜಿಸುವ ಯೋಗಿಯು ಅವನು ಎಲ್ಲಿದ್ದರೂ ಹೇಗಿದ್ದರೂ ನನ್ನಲ್ಲಿಯೇ ಇರುತ್ತಾನೆ.

ಈ ಕೊನೆಯ ಶ್ಲೋಕಕ್ಕೆ ಗಾಂಧೀಜಿಯ ಟಿಪ್ಪಣಿ ಈ ರೀತಿ ಇದೆ. 'ಸ್ವಯಂ' ಎಂಬುದು ಎಲ್ಲಿಯ ವರೆಗಿರುವುದೋ ಅಲ್ಲಿಯ ವರೆಗೆ ಪರಮಾತ್ಮ ಪೃಥಕ್ಕಾಗಿ ಕಾಣಿಸುತ್ತಾನೆ. 'ಸ್ವಯಂ' ಎಂಬುದು ಶೂನ್ಯವಾದ ಬಳಿಕ

ಆ ಒಬ್ಬ ಪರಮಾತ್ಮನೇ ಎಲ್ಲೆಲ್ಲಿಯೂ ಕಾಣಿಸಲಾರಂಭಿಸುತ್ತಾನೆ.”

### ಸತ್ವಶುದ್ಧಿಗೆ ಮುಖ್ಯ ಉಪಾಯ

ಅಧ್ಯಾತ್ಮ ಸಾಧನೆಯ ದೃಷ್ಟಿಯಿಂದ ಅಹಿಂಸೆ ಸತ್ವಶುದ್ಧಿಗೆ ಮುಖ್ಯವಾದ ಉಪಾಯ ಮತ್ತು ಮೋಕ್ಷಕ್ಕೆ ಅತ್ಯಾವಶ್ಯಕವಾದ ಸಾಧನಸಂಪತ್ತು. ಸತ್ವಶುದ್ಧಿ ಮತ್ತು ಮುಮುಕ್ಷುತ್ವ ಅಹಿಂಸೆಯ ವಿನಾ ಕರಗತವಾಗುವುದಿಲ್ಲವೆಂಬ ಕಾರಣದಿಂದ ವ್ಯಕ್ತಿಯು ಅಹಿಂಸೆಯನ್ನು ಆಚರಣೆಯಲ್ಲಿ ತರಬೇಕು.

ಸಂಪೂರ್ಣವಾದ ಅಹಿಂಸೆ ಸಾಧ್ಯವೇ ಅನ್ನುವ ವಿಷಯದಲ್ಲಿ ವೈದಿಕ ತತ್ತ್ವಜ್ಞಾನದಲ್ಲಿ ಏಕಾಭಿಪ್ರಾಯವಿಲ್ಲ. ಪೂರ್ಣ ಅಹಿಂಸೆ ಒಂದು ಉತ್ಕೃಷ್ಟ ಆದರ್ಶ; ಆದರೆ ಇದನ್ನು ಆಚರಣೆಯಲ್ಲಿ ತರಲು ದುಸ್ಸಾಧ್ಯ ಎನ್ನುವ ಅಭಿಪ್ರಾಯವೂ ತಲೆದೋರುತ್ತದೆ. ಹೇಗೆ ಅಹಿಂಸೆ ಪರಿಮಿತವೋ ಹಿಂಸೆಯೂ ಅಷ್ಟೇ ಪರಿಮಿತ. ಯಜ್ಞ ಯಾಗಗಳಲ್ಲಿ ಮಾಡುವ ಹಿಂಸೆ ಅಲ್ಲಿಗೇ ಮುಗಿಯಬೇಕು. ಮಿಕ್ಕ ಸಂದರ್ಭಗಳಲ್ಲಿ ಅದು ಆಗಬಾರದು ಎನ್ನುವ ಅಭಿಪ್ರಾಯವೂ ಮೂಡಿದೆ. ಗಾಂಧೀಜಿ ಅಹಿಂಸೆ ಮಾನವ ಜೀವನದ ನಿಯಮವೆಂದು ಸಾರಿದರು, ಹಿಂಸೆ ವಿನಾಶಕಾರಕವೆಂದರು. ಆದರೂ ಅಹಿಂಸೆಯ ಪೂರ್ಣ ಆಚರಣೆ ಜೀವನದಲ್ಲಿ ದುಸ್ಸಾಧ್ಯವೆಂದೂ ಬಗೆದರು. ಗಾಂಧೀಜಿ ಹೇಡಿತನಕ್ಕಿಂತಲೂ ಹಿಂಸೆ ಮೇಲು ಎಂದರು. ತನ್ನ ಮಾನಸಂರಕ್ಷಣೆಗೆ ಹಿಂಸೆಯ ಅವಲಂಬನೆ ಸೂಕ್ತ ಎಂದರು.

ಅಂದರೆ ಗಾಂಧೀಜಿಯ ಅಭಿಪ್ರಾಯದಲ್ಲಿ ಅಹಿಂಸೆಯ ಆಚರಣೆಯಲ್ಲಿ ಹಂತಗಳಿವೆ. ಹಂತದ ಕೊನೆಯನ್ನು ಒಂದೇಸಲ ಮುಟ್ಟುವುದು ಅಸಾಧ್ಯ. ಕ್ರಮ ಕ್ರಮವಾಗಿ ಆದರ್ಶದ ಕಡೆಗೆ ಸಾಗಬೇಕು. ಇದನ್ನೂ ಸಾಮಾನ್ಯವಾಗಿ ಹಿಂದೂ ಧರ್ಮ ಒಪ್ಪಿರುವ ತತ್ತ್ವ.

### ಯಾವುದು ಹಿಂಸೆ?

ಹಿಂಸೆ ಮತ್ತು ಅಹಿಂಸೆ ಇವುಗಳನ್ನು ನಿರ್ಣಯಿಸಲು ಕಷ್ಟವಾದ ಅನೇಕ ಪ್ರಸಂಗಗಳು ಜೀವನದಲ್ಲಿ ಒದಗುತ್ತವೆ. ಇಂತಹ ಸಂದರ್ಭಗಳಲ್ಲಿ ನಮ್ಮ ನಿರ್ಣಯಕ್ಕೆ ಒದಗುವ ಅಂಶ ಅನಾಸಕ್ತಿ. ಅಂದರೆ ನಮ್ಮ ಉದ್ದೇಶ ಮುಖ್ಯ. ನಾವು ಹಿಂಸೆ ಮಾಡಬೇಕಾಗಿ ಬಂದಾಗ ಅದು ದುರುದ್ದೇಶದಿಂದ ಕೂಡಿದ್ದರೆ ಅಥವಾ ಸ್ವಾರ್ಥಕ್ಕಾಗಿ ಕೈಗೊಂಡುದಾದರೆ ಅದು ಪಾಪಕೃತ್ಯವೇನೋ ಹೌದು. ಆದರೆ ಕರ್ತವ್ಯದ ದೃಷ್ಟಿಯಿಂದ ಸ್ಥೂಲವಾದ ದೃಷ್ಟಿಯಿಂದ ಯಾವುದು ಹಿಂಸೆಯಾಗಿ ತೋರುವುದೋ ಅದು ನಿಜವಾದ ಹಿಂಸೆಯಲ್ಲ. ಶಿಶುವಿನ ಬೆಳವಣಿಗೆಯನ್ನೇ ಉದ್ದೇಶವಾಗಿ ಉಳ್ಳ ಶಿಕ್ಷೆ ಹಿಂಸೆ ಎಂದು ಹೇಳಲು ಸಾಧ್ಯವಿಲ್ಲ. ರೋಗಿಯ ಅನುಕೂಲಕ್ಕಾಗಿ ವೈದ್ಯನು ಕೈಗೊಳ್ಳುವ ಶಸ್ತ್ರಚಿಕಿತ್ಸೆಯ ಹಿಂಸೆ ಹಿಂಸೆಯಾಗಲಾರದು. ಯುದ್ಧದಲ್ಲಿ ಶತ್ರುವನ್ನು ಕೊಲ್ಲುವುದು-ತನ್ನ ಪ್ರಾಣಹರಣ ಮಾಡಲು ಬರುವ ‘ ಆತತಾಯಿ ’ ಯನ್ನು ಹಿಂಸೆಯಿಂದ ಪ್ರತಿಬಂಧಿಸುವುದು ಹಿಂಸೆಯಲ್ಲ. ಇಂತಹ ಸಂದರ್ಭಗಳಲ್ಲಿ ನ್ಯಾಯ್ಯವಾದ ಹಿಂಸೆ ಯಾರದು, ಅನ್ಯಾಯ್ಯವಾದ ಹಿಂಸೆ ಯಾರದು ಅನ್ನುವುದನ್ನು ವಿವೇಚನೆ ಮಾಡಬೇಕಾಗುವುದು.

ಗಾಂಧೀಜಿ ಮೂರು ಸಂದರ್ಭಗಳಲ್ಲಿ ಹಿಂಸೆಯನ್ನು ಅವಲಂಬಿಸುವುದು ಅಗತ್ಯವೆಂದು ಎಣಿಸಿರುವರು. ಅವು ಯಾವುವೆಂದರೆ (೧) ಶರೀರ ಪೋಷಣೆ (೨) ಆಶ್ರಿತ ರಕ್ಷಣೆ ಮತ್ತು (೩) ಯಾರ ಪ್ರಾಣವನ್ನು ಅಪಹಾರ ಮಾಡುತ್ತೇವೆ ಅವರ ಹಿತಕ್ಕಾಗಿ. ಒಂದು ಮತ್ತು ಎರಡು, ಪರಿಮಿತ ಹಿಂಸೆ; ಮೂರನೆಯದು ಅಹಿಂಸೆಯೇ.

ಇನ್ನೊಬ್ಬರಿಗೆ ನೋವನ್ನು ಉಂಟುಮಾಡಬೇಕು ಅನ್ನುವ ಉದ್ದೇಶದಿಂದಲೇ ಕೈಗೊಂಡ ಹಿಂಸೆ ಇದೆ. ಮುಂದೆ ಹೆಚ್ಚು ಹಿಂಸೆಗೆ ಅವಕಾಶವಿರಬಾರದೆಂಬ ಉದ್ದೇಶದಿಂದ ಕೈಗೊಂಡ ಹಿಂಸೆ ಇದೆ. ಹಿಂಸೆ ಮಾಡಬೇಕೆಂಬ ಉದ್ದೇಶವಿಲ್ಲದೆ ಮಾಡುವ ಹಿಂಸೆ ಇದೆ. ಹಿಂಸೆಮಾಡಬೇಕೆಂಬ ಉದ್ದೇಶವಿಲ್ಲ, ಹಾಗೂ ಹಿಂಸೆ ಎಂದು ಭಾವಿಸಲ್ಪಡದ ಹಿಂಸೆಯೂ ಇದೆ. ಇದರಲ್ಲಿ ಕೊನೆಯದನ್ನು ಮಾತ್ರ ಅಹಿಂಸೆ ಎಂದು ಅಂಗೀಕಾರ ಮಾಡಬಹುದು. ಹಿಂಸೆ ಮಾಡಬೇಕೆಂಬ ಉದ್ದೇಶವಿಲ್ಲದಿದ್ದರೂ ತಿಳಿದ ಹಾಗೆ ಹಿಂಸೆ ಮಾಡುವುದು ಎಂದಿಗೂ ಅಹಿಂಸೆ ಎನಿಸಿಕೊಳ್ಳಲಾರದು.

### ಕರ್ತವ್ಯನಿಷ್ಠೆ

ಕರ್ತವ್ಯನಿಷ್ಠೆ ಅಹಿಂಸೆಗಿಂತಲೂ ಮಿಗಿಲಾದ ಧರ್ಮವೆನ್ನುವುದನ್ನು ಗೀತೆ ಬೋಧಿಸುವಂತಿದೆ. ಹೀಗೆಂದು ಆಚಾರ್ಯರು ಗೀತೆಯ ವ್ಯಾಖ್ಯೆ ಮಾಡುತ್ತಾರೆ. ಅನಾಸಕ್ತರಾಗಿ, ಕರ್ತವ್ಯ ಕರ್ಮನಿಷ್ಠರಾಗಿ ಮಾಡುವ ಹಿಂಸೆ ಅಧರ್ಮದಲ್ಲಿ ಧರ್ಮ ಅನ್ನುವ ಭಾವವನ್ನು ಗೀತೆಯಲ್ಲಿ ಕಾಣುತ್ತೇವೆ. ಅರ್ಜುನ ಕ್ಷತ್ರಿಯ. ಯುದ್ಧ ಮಾಡುವುದು ಮತ್ತು ಶತ್ರುನಾಶ ಅವನ ಧರ್ಮ. ಯುದ್ಧದಲ್ಲಿ ಕೊಲ್ಲುವುದು, ಕೊಲ್ಲುವುದು ಎನಿಸಿಕೊಳ್ಳುವುದಿಲ್ಲ. ಆತ್ಮವನ್ನು ಕೊಲ್ಲಲು ಯಾರಿಂದಲೂ ಸಾಧ್ಯವಿಲ್ಲ. ದೇಹ ಮಾತ್ರ ಕೊಲ್ಲಲು ಸಾಧ್ಯ ಅನ್ನುವ ಮಾತು ಗೀತೆಯಲ್ಲಿ ಬಂದಿದೆ. ಅಂದರೆ ಅಹಿಂಸೆ ಅಂದರೆ ಕೊಲ್ಲದಿರುವುದು ಅನ್ನುವ ಸಂಕುಚಿತ ಅರ್ಥವಲ್ಲ. ಕರ್ತವ್ಯಪರಾಯಣನಾದ ಅರ್ಜುನ ಶತ್ರುಗಳನ್ನು ಕೊಂದರೆ, ಅವನು ಈಶ್ವರಸಂಕಲ್ಪ ನೆರವೇರಲು ಒಂದು ಉಪಕರಣ ಮಾತ್ರವಾದಾನು— ‘ ನಿಮಿತ್ತಮಾತ್ರಂ ಭವ ಸವ್ಯಸಾಚಿನ್.’

ಗಾಂಧೀ ತತ್ತ್ವಜ್ಞಾನದ ಮೂಲಭೂತ ತತ್ತ್ವಗಳು ಎರಡು— ಸತ್ಯ ಮತ್ತು ಅಹಿಂಸೆ. ಸತ್ಯ ಗುರಿ, ಅಹಿಂಸೆ ಅದನ್ನು ಸೇರುವ ಮಾರ್ಗ. ಗಾಂಧೀಜಿ ಹೇಳುತ್ತಾರೆ— “ಭಗವಂತನ ಪ್ರತ್ಯಕ್ಷ ದರ್ಶನದ ಹಂಬಲ ನನ್ನದು. ಭಗವಂತನೇ ಸತ್ಯ ಎಂಬುದನ್ನು ನಾನು ಬಲ್ಲೆ. ನನ್ನ ಪಾಲಿಗೆ ಭಗವಂತನನ್ನು ಕಾಣಲು

ಇರುವ ಒಂದೇ ಒಂದು ನಿಶ್ಚಿತ ಮಾರ್ಗವೆಂದರೆ ಅಹಿಂಸೆ, ಪ್ರೇಮ. ಅಹಿಂಸೆಯ ಸಾಧನೆಗಾಗಿ ನಾನು ಶ್ರಮಿಸುವಾಗ ಸತ್ಯ ಹೇಳುತ್ತದೆ: "ನನ್ನ ಮೂಲಕವೇ ಅದರ ಸಿದ್ಧಿ" ಎಂದು. ಸತ್ಯದ ಸಾಧನೆಗಾಗಿ ನಾನು ಶ್ರಮಿಸುವಾಗ ಅಹಿಂಸೆ ಹೇಳುತ್ತದೆ: ನನ್ನ ಮೂಲಕವೇ ಅದರ ಸಿದ್ಧಿ ಎಂದು."

### ಸತ್ಯ

ವೈದಿಕ ತತ್ತ್ವಜ್ಞಾನದಲ್ಲಿ ಸತ್ಯವೇ ಎಲ್ಲದರ ಆಧಾರ. ವೇದಗಳು 'ಸತ್ಯಂವದ, ಧರ್ಮಂಚರ' (ತೈತ್ತರೀಯ ಉಪನಿಷತ್ತು) ಎಂದು ಭೋಧಿಸುತ್ತವೆ. 'ಸತ್ಯಾನ್ನ ಪ್ರಮದಿತವ್ಯಂ', ಸತ್ಯದ ದಾರಿಯನ್ನು ಬಿಟ್ಟು ಎಂದಿಗೂ ಚಲಿಸಬಾರದು.' ಎಂದು ಘೋಷಿಸುತ್ತದೆ. ಪರಬ್ರಹ್ಮವಸ್ತುವನ್ನು 'ಸತ್ಯಸ್ಯ ಸತ್ಯಂ' ಎಂದು ಬೃಹದಾರಣ್ಯಕ ಉಪನಿಷತ್ತು ಮೊಳಗುತ್ತದೆ. ಈ ಸತ್ಯವನ್ನು ಹೃದಯದಿಂದ ಮಾನವನು ಅರಿಯುತ್ತಾನೆ. 'ಹೃದಯೇನ ಸತ್ಯಂ ಜಾನಾತಿ ಹೃದಯೇಹೇವ ಸತ್ಯಂ ಪ್ರತಿಷ್ಠಿತಮ್' ಎನ್ನುತ್ತದೆ ಉಪನಿಷತ್ತು. ಗಾಂಧೀಜಿ ತಮ್ಮ ಲೇಖನಗಳಲ್ಲಿ ಅನೇಕ ಸಲ ಉಲ್ಲೇಖಿಸಿರುವ ಉಪನಿಷದ್ವಾಕ್ಯ ಇದು— 'ಹಿರಣ್ಮಯೇನ ಪಾತ್ರೇಣ ಸತ್ಯಸ್ಯಾಪಿಹಿತಂ ಮುಖಂ, ತತ್ತ್ವಮ್, ಪೂಷನ್, ಅಪಾವೃಣು, ಸತ್ಯಧರ್ಮಾಯ ದೃಷ್ಟಯೇ—' ಅಂದರೆ ಹಿರಣ್ಮಯವಾದ ಪಾತ್ರೆಯಿಂದ ಸತ್ಯದ ಮುಖವು ಮುಚ್ಚಲ್ಪಟ್ಟಿದೆ. ಎಲೈ ಪೂಷನ್ ದೇವತೆಯೇ ಸತ್ಯಧರ್ಮದ ನನ್ನ ದೃಷ್ಟಿಗೆ ಅದು ಕಾಣುವಂತೆಮಾಡು." ಶ್ರದ್ಧೆ, ಸತ್ಯ, ಬ್ರಹ್ಮಚರ್ಯದಿಂದ ಬ್ರಹ್ಮದರ್ಶನ ಸಾಧ್ಯ— ಸತ್ಯವೊಂದೇ ಗೆಲ್ಲುವುದು; ಅಸತ್ಯವಲ್ಲ 'ಸತ್ಯೇ ಸರ್ವಂ ಪ್ರತಿಷ್ಠಿತಂ ತಸ್ಮಾತ್ ಸತ್ಯಂ ಪರಮಂ ವದಂತಿ'— ಎಲ್ಲವೂ ಸತ್ಯದ ಮೇಲೆ ನಿಂತಿದೆ, ಆದ್ದರಿಂದಲೇ ಇದು ಎಲ್ಲಕ್ಕೂ ಹೆಚ್ಚಿನದು- 'ಸತ್ಯೇನ ಸತ್ಯಂ ತರ್ಪಯಾಮಿ'—ಸತ್ಯದಿಂದ ಸತ್ಯವನ್ನು ತೃಪ್ತಿಗೊಳಿಸುತ್ತೇನೆ. 'ಬ್ರಹ್ಮಚರ್ಯಮಹಿಂಸ ಚಾಪರಿಗ್ರಹಂ ಚ ಸತ್ಯಂ ಚ'— ಗೀತೆಯಲ್ಲಿ 'ಕ್ಷಮಾ ಸತ್ಯಂ ದಮಃ ಶಮಃ, ಅಹಿಂಸಾ ಸತ್ಯಮಕ್ರೋಧಃ' ಎಂದು ಸದ್ಗುಣಗಳ ಉಲ್ಲೇಖವಿದೆ.

### ಪರಪೀಡನೆ ಮಾಡದಿರುವುದು

ವಿಷ್ಣು ಪುರಾಣಾಂತರ್ಗವಾದ ಶ್ಲೋಕದಲ್ಲಿ ವಿಷ್ಣುವಿನ ಅಷ್ಟವಿಧ ಪುಷ್ಪಗಳ ಅರ್ಚನೆಯನ್ನು ಕುರಿತು ಹೇಳುವಾಗ 'ಅಹಿಂಸಾ ಪ್ರಥಮಂ ಪುಷ್ಪಂ ಪುಷ್ಪಂ ಇಂದ್ರಿಯ ನಿಗ್ರಹಃ ಸರ್ವಭೂತ ದಯಾಪುಷ್ಪಂ ಕ್ಷಮಾ ಪುಷ್ಪಂ ವಿಶೇಷತಃ; ಜ್ಞಾನಂ ಪುಷ್ಪಂ ತಪಃ ಪುಷ್ಪಂ ಧ್ಯಾನಂ ಪುಷ್ಪಂ ತಥೈವಚ, ಸತ್ಯಮಷ್ಟವಿಧಂ ಪುಷ್ಪಂ ವಿಷ್ಣೋಃ ಪ್ರೀತಿಕರಂ ಭವೇತ್' ಎಂದು ಮಾನವ ಹೃದಯದಲ್ಲಿ ಅರಳಬೇಕಾದ ಕಲ್ಯಾಣಗುಣಗಳನ್ನು ಸೂಚಿಸುತ್ತದೆ. ಅಹಿಂಸೆ ಎಂದರೆ 'ಕರಣ ತ್ರಯೇಣ ಪರಪೀಡಾ ನಿವೃತ್ತಿಃ' ಎಂದು ವರವರ ಮುನೀಂದ್ರ ಆಚಾರ್ಯರು ವಿವರಿಸುತ್ತಾರೆ — ಅಂದರೆ ಕಾಯೇನ ವಾಚಾ ಮನಸಾ ಇತರರಿಗೆ ಪೀಡೆ ಮಾಡದಿರುವುದು. ಹಿಂಸೆ ಅನ್ನುವುದು ಕೇವಲ ಕಾಯಕವಲ್ಲ, ವಾಚಾ ಮತ್ತು ಮನಸಾ ಹಿಂಸೆ ಆಗಬಲ್ಲದು ಅನ್ನುವ ಸೂಕ್ಷ್ಮ ವಿಚಾರವನ್ನು ಮುಂದಿಡುತ್ತದೆ.

ಇವೆಲ್ಲ ವೈದಿಕತತ್ತ್ವಜ್ಞಾನದ ವಿಚಾರಪರಂಪರೆಗಳು ಗಾಂಧೀ ತತ್ತ್ವಜ್ಞಾನದ ಹಿನ್ನೆಲೆಯಾಗಿದೆ

# ಹರಟೆ

ಹರಟೆ ಯೌವ್ವನದಿಂದ ತುಂಬಿತುಳುಕುವ ಮುಗ್ಧೆಯ ಕಣ್ಣಿನಂತೆ; ಅದರ ಚಾಂಚಲ್ಯವೇ ಅದರ ಸೊಬಗು. ಇಲ್ಲಿ ವಿಚಾರವಿನಿಮಯವಾಗಲಿ, ವಿಷಯಪ್ರತಿಪಾದನೆಯಾಗಲಿ ಇಲ್ಲ. ಮಾತಿನ ಸರಣಿ ಯಾವ ಬಂಧನಕ್ಕೂ ಒಳಪಡುವದಿಲ್ಲ. ಅನಿಶ್ಚಿತ ಗತಿಯೇ ಅದರ ಮುಖ್ಯ ಲಕ್ಷಣ. ಅನಿರೀಕ್ಷಿತ ಫಲವೇ ಅದರಿಂದ ಬರುವ ಫಲ. ಹರಟೆಯ ಈ ಸ್ವರೂಪದ ಪರಿಚಯ ವನ್ನು ಲೇಖಕರಿಲ್ಲಿ ಮಾಡಿಕೊಟ್ಟಿದ್ದಾರೆ.

ಹರಟೆ ಸಾಂಘಿಕ ಕ್ರಿಯೆ. ಅದು ಸಮರ್ಪಕವಾಗಿ ನಡೆಯಬೇಕಾದರೆ ನಾಲ್ಕು ಜನ ಹರಟೆಮಲ್ಲರು ಒಟ್ಟಿಗೆ ಸೇರಬೇಕು. ಹಾಗೆ ಸೇರಿದ ಜನರ ಮಾತು ಯಾವುದಾದರೊಂದು ನಿಷ್ಕೃಷ್ಟವಾದ ವಿಷಯವನ್ನು ಅವಲಂಬಿಸಿ ನಡೆಯಬೇಕೆಂದು ನಿಯಮವಿರ ಬಾರದು; ಇದ್ದರೆ ಹರಟೆಗೆ ತಕ್ಕ ವಾತಾವರಣ ಸೃಷ್ಟಿಯಾಗುವುದಿಲ್ಲ. ಹರಟೆಯಲ್ಲಿ ಮಾತಿನ ಸರಣಿ ಯಾವ ಬಂಧನಕ್ಕಾಗಲಿ ಒಳಪಡುವುದಿಲ್ಲ. ಭಾವ ಜೀವಿಯೊಬ್ಬ ವಾಕ್‌ಸಮಾಧಿಗೆ ಹೋಗುವಂತೆ ತೋರಿದರೆ, ಅವನ ಮಾತು ಆವೇಶಗೊಂಡು ಕಾವ್ಯದ ಮಟ್ಟಕ್ಕೆ ಏರುವಂತೆ ತೋರಿದರೆ, ಗುಂಪಿ ನಲ್ಲಿರುವ ಹಾಸ್ಯಗಾರನೊಬ್ಬ ಅದನ್ನು ಬಲಾತ್ಕಾರ ವಾಗಿ ಕೆಳಕ್ಕಿಳಿಸುತ್ತಾನೆ. 'ಎಸ್ಸೆ' ಯಲ್ಲಿ ಇಂಥ ಬಲಾತ್ಕಾರ ರಸಕ್ಕೆ ಶತ್ರುವಾಗಬಹುದು; ಹರಟೆ ಯಲ್ಲಿ ಮಾತ್ರ ಅದು ಸರಿಹೋಗುತ್ತದೆ. ಭಗವಂತನ ಸ್ವರೂಪವನ್ನು ಕುರಿತು ಚರ್ಚೆ ನಡೆಯುತ್ತಿರುವಾಗ ಮಧ್ಯೆ ಒಬ್ಬನಿಗೆ ನೆರೆಮನೆಯ ಎಮ್ಮೆ ಕರು ತಪ್ಪಿಸಿ ಕೊಂಡು ಹೋದದ್ದು ನೆನಪಿಗೆ ಬಂದು ಅವನು ಮಾತನ್ನು ಆ ಕಡೆಗೆ ಹೊರಳಿಸಬಹುದು. ಭಗವಂತನಿಗೂ ಎಮ್ಮೆಯ ಕರುವಿಗೂ ಸಂಬಂಧವನ್ನು ಕಲ್ಪಿಸುವುದು ಅಸಾಧ್ಯವೇನಲ್ಲ; ಆದರೆ ಹರಟೆಯಲ್ಲಿ ಅಂಥ ಸಂಬಂಧವನ್ನು ಕಲ್ಪಿಸುವ ಅವಶ್ಯಕತೆಯಿಲ್ಲ. ಅಲ್ಲಿ ಮಾತು ಸಾಗುವುದು ತರ್ಕವನ್ನೋ, ಭಾವವನ್ನೋ ಅನುಸರಿಸಿಯಲ್ಲ, ಆ ಘಳಿಗೆಯಲ್ಲಿ ಯಾವುದೋ ವಿಷಯ ನೆನಪಿಗೆ ಬಂತು ಎಂಬ ಕಾರಣದಿಂದ. ಎಮ್ಮೆಯ ಕರುವಿನ ಮಾತಿನಿಂದ ನಾವು ಮತ್ತೆ ಭಗವಂತನಕಡೆಗೆ ಹಿಂದಿ ರುಗಬೇಕೆಂಬ ನಿಯಮವೂ ಇಲ್ಲ. ಹರಟೆಗಾರರು ಕೊಂಕಣ ಸುತ್ತುತ್ತಾರೆ, ಆದರೆ ಮೈಲಾರವನ್ನು ತಲುಪುತ್ತಾರೆಂಬ ಭರವಸೆಯೇನೂ ಇಲ್ಲ. ಕಾಲ, ದೇಶ, ತರ್ಕ, ಭಾವ ಗೆಲ್ಲುವ ಇಚ್ಛೆ, ನಿಶ್ಚಿತವಾದ ಗುರಿ— ಇವೊಂದರ ನಿಯಂತ್ರಣವೂ ಹರಟೆಗೆ ಇರ ಬೇಕಾದ್ದಿಲ್ಲ; ಇದ್ದರೂ ಅವೆಲ್ಲವನ್ನೂ ಗಾಳಿಗೆ ತೂರಿಕೊಟ್ಟು ಖುಷಿ ತೋರಿದ ಕಡೆಗೆ ಪ್ರಯಾಣ ಬೆಳಸಬಹುದು. ಅನಿಶ್ಚಿತಗತಿಯೇ ಅದರ ಮುಖ್ಯ ಲಕ್ಷಣ; ಅದರಿಂದ ಬರುವ ಫಲ ಅನಿರೀಕ್ಷಿತ ಫಲ.


ಲೇಖಕರು :
**ಶ್ರೀ. ಎ. ಎನ್. ಮೂರ್ತಿರಾವ,** ಎಂ. ಎ.
ಬೆಂಗಳೂರು


ಹರಟೆಯ ಸ್ವಭಾವವೇ ಇಂಥದಾದ್ದರಿಂದ ನಮ್ಮ ಮನಸ್ಸು ನಿರಾತಂಕವಾಗಿ ಹರಿಯುತ್ತದೆ ; ಸ್ವೇಚ್ಛೆ ಯಾಗಿ ವಿಷಯದಿಂದ ವಿಷಯಕ್ಕೆ ಕುಪ್ಪಳಿಸುತ್ತದೆ. ನಾವು ವಿಷಯಗಳನ್ನು ಆರಿಸಿಕೊಂಡು ಪರಿಶೀಲಿಸುವು ದಿಲ್ಲ; ಪ್ರಾಸಂಗಿಕವಾಗಿ ಯಾವ ವಿಷಯ ಬಂದರೂ ಅದರೊಡನೆ ಚಕ್ಕಂದವಾಡುತ್ತೇವೆ. ಹರಟೆಯ ರಥಕ್ಕೆ ಸಾರಥಿಯಿಲ್ಲ ; ಒಬ್ಬನ ಉತ್ಸಾಹದಿಂದ ಮತ್ತೊಬ್ಬನದ್ದು ಕೆರಳಿ ಅದು ತೋರಿದ ಕಡೆಗೆ ಸರ್ಪ ಗಮನದಿಂದ ಸಾಗಬೇಕು. ಹರಟೆ ಯೌವ್ವನದಿಂದ ತುಂಬಿ ತುಳುಕುವ ಮುಗ್ಧೆಯ ಕಣ್ಣಿನಂತೆ. ಅದರ ಚಾಂಚಲ್ಯವೇ ಅದರ ಸೊಬಗು, ಅಂದಮೇಲೆ ಹರಟೆ ಗಾರರಿಗೆಬೇಕಾದ್ದು ವಿಚಾರವಿನಿಮಯವಲ್ಲ, ವಿಷಯ ಪ್ರತಿಪಾದನೆಯೂ ಅಲ್ಲ; ಇತರ ಹರಟೆಮಲ್ಲರ ಸಹವಾಸ ಸೌಖ್ಯ.

ನಮ್ಮಲ್ಲಿ 'ಹರಟೆ' ಎಂಬ ಪದವನ್ನು ಇಂಗ್ಲಿಷಿನ 'ಎಸ್ಸೆ' (essay) ಗೆ ಪರ್ಯಾಯ ಪದವಾಗಿ ಉಪಯೋಗಿಸುವುದುಂಟು. ಈ ಪ್ರಯೋಗ ಅಷ್ಟೇನೂ ಸಾಧುವಲ್ಲ ಎನ್ನಿಸುತ್ತದೆ. ಹರಟೆಗೆ ಆರಂಭವುಂಟೇ ಹೊರತು ಅಂತ್ಯವೂ ಇಲ್ಲ, ಕೇಂದ್ರವೂ ಇಲ್ಲ. 'ಎಸ್ಸೆ' ಗಾದರೋ (ಇದನ್ನು ಪ್ರಬಂಧ ಎಂದು ಕರೆಯೋಣ) ಆದಿ, ಅಂತ್ಯ, ಕೇಂದ್ರ ಗಳೆಲ್ಲವೂ ಉಂಟು. ಪ್ರಬಂಧಕಾರನ ವ್ಯಕ್ತಿತ್ವವೇ ಅದರ ಕೇಂದ್ರ; ಪ್ರಬಂಧವೆಲ್ಲ ಆ ಕೇಂದ್ರದ ಸುತ್ತ ಬೆಳೆಯುತ್ತದೆ. ಹರಟೆಯಲ್ಲಿ ಯಾವನೊಬ್ಬ ವ್ಯಕ್ತಿಯ ಪ್ರಭಾವ ಹೆಚ್ಚಾದರೂ ಅದು ಹರಟೆಯಾಗಿ ಉಳಿಯುವುದಿಲ್ಲ. ಹರಟೆಗಾರನ ಮಾತು ಅವನ ವ್ಯಕ್ತಿತ್ವದಿಂದಲೇ ಹೊರಡುತ್ತದೆಂಬುದು ನಿಜವಾದರೂ, ಅವನು ಇಡೀ ಹರಟೆಯ ಭಂಡಾರಕ್ಕೆ ತನ್ನ ವ್ಯಕ್ತಿತ್ವದ ಕಾಣಿಕೆ ಸಲ್ಲಿಸಿ ಅನಂತರ ಹಿಂದೆ ನಿಲ್ಲುತ್ತಾನೆ. ವಾತಾವರಣವನ್ನೆಲ್ಲಾ ತಾನೇ ಆಕ್ರಮಿಸಿ ಕೊಳ್ಳುವುದಿಲ್ಲ. ನಾಲ್ಕು ಜನ ಸೇರಿ ಹರಟೆ ಹೊಡೆ ಯುವಕಡೆ ಒಬ್ಬನ ಅಹಂಭಾವ ಹೆಚ್ಚಾದರೆ ಅವನು ಗುಂಪಿನಿಂದ ಹೊರಬೀಳುತ್ತಾನೆ, ಇಲ್ಲವೆ ಹರಟೆಯ ಸ್ವರೂಪಕ್ಕೆ ಲೋಪ ಬರುತ್ತದೆ. ಅಹಂಭಾವ— ಹರಟೆಗಳೆರಡೂ ಅನ್ಯೋನ್ಯವಾಗಿ ಬೆರೆಯಲಾರವು. ಪ್ರಬಂಧವಾದರೋ, ಅಹಂಭಾವವಿಲ್ಲದೆ ಬೆಳೆಯಲೇ ಆರದು, ಪ್ರಬಂಧದಲ್ಲಿ ನಾವು ಕಾಣುವುದು ಅಹಂ-ಭಾವದ ಸ್ವಾಭಾವಿಕವಾದ ಅರಳುವಿಕೆ.

ಅಹಂಭಾವ ಕೆಟ್ಟದ್ದಲ್ಲವೇ? ಅದನ್ನು ಅದುಮ ಬೇಕೆಂದಲ್ಲವೆ ನೀತಿ ಶಾಸ್ತ್ರದ ಬೋಧನೆ? ಪ್ರಬಂಧ ಕಾರನ ಅಹಂಭಾವ ವಿಚಿತ್ರರೀತಿಯದು. ನೀತಿ ಶಾಸ್ತ್ರ ಹೇಳುತ್ತದೆ: "ಎಲ್ಲರ ನಡುವೆ ನೀನು ಒಬ್ಬ ಮಾತ್ರ; ನಿನ್ನ ಮಾತು ಇತರರಿಗೆ ಮುಖ್ಯವಲ್ಲ" ಪ್ರಬಂಧಕಾರ ಹೇಳುತ್ತಾನೆ: "ನನ್ನಂತೆ ಎಲ್ಲರೂ ಆದ್ದರಿಂದ ನನ್ನ ಆಸಕ್ತಿ ಉತ್ಸಾಹಗಳಲ್ಲಿ ಇತರರೂ ಭಾಗಿಗಳು, ನನ್ನಂತೆಯೇ ಅವರೂ ಮಾನವರಾದ್ದ ರಿಂದ ನನ್ನ ಕಷ್ಟಸುಖಗಳನ್ನು, ಶಕ್ತಿ ದೌರ್ಬಲ್ಯ ಗಳನ್ನು, ಓರೆಕೋರೆಗಳನ್ನು, ಅವರಲ್ಲಿ ಹೇಳಿ ಕೊಂಡರೆ ಅವರಿಗೆ ಬೇಸರವಾಗುವುದಿಲ್ಲ. ನನ್ನ ವ್ಯಕ್ತಿತ್ವ ಇತರರ ಮೇಲೆ ಅಧಿಕಾರ ಚಲಾಯಿಸ ಬೇಕೆಂದಲ್ಲ, ನನ್ನ ಆಸೆ; ನನಗೆ ತೋರಿದ್ದನ್ನು ಇತರರೆದುರಿಗೆ ಹೇಳಿಕೊಳ್ಳಬೇಕೆಂದು ಮಾತ್ರ ಎಲ್ಲ ರಂತೆ ನಾನೂ ಒಂದು ವಿಚಿತ್ರ ಪ್ರಾಣಿ, ನನ್ನ ವೈಚಿತ್ರ್ಯಕ್ಕೊಂದು ವಿಶಿಷ್ಟತೆಯಿರುವಂತೆ ಅವರ ದ್ದಕ್ಕೂ ಇದೆ. ಆದ್ದರಿಂದ ಅವರ ಸಹಾನುಭೂತಿ ನನಗೆ ದೊರೆತು ನಮ್ಮಿಬ್ಬರ ಮನಸ್ಸೂ ಪ್ರಸನ್ನ ವಾಗುತ್ತವೆ— ಈ ವಿಷಯದಲ್ಲಿ ನನಗೆ ಸಂದೇಹವೇ ಇಲ್ಲ."

ಇದು ಪ್ರಬಂಧಕಾರನ ಮನೋವೃತ್ತಿ, ಅವನು ಹೇಳುವುದು "ಇದಮಿತ್ಥಂ" ಎಂದಲ್ಲ; 'I am Sir Oracle' ಎಂದಲ್ಲ. ಅನೇಕ ವೇಳೆ ಪ್ರಬಂಧಕಾರ ಪ್ರಪಂಚವೆಲ್ಲಾ ಒಪ್ಪಿಕೊಂಡಿರುವ ಅಂಶಗಳನ್ನು ಹಳಿದೋ ಕಡೆಗಣಿಸಿಯೋ, ತನ್ನ ಅಭಿಪ್ರಾಯವೇ ಸರಿ ಎಂಬಂತೆ ಮಾತಾಡುತ್ತಾನೆ, ನಿಜ. ಆದರೆ ಅದು ಹಾಸ್ಯಕ್ಕಾಗಿ, ಆಗ ಅವನು ತನ್ನನ್ನು ತಾನೇ ಚೇಷ್ಟೆ ಮಾಡಿಕೊಳ್ಳುತ್ತಿದ್ದಾನೆ; ಸಮರ್ಥಿಸಲಾಗದೆಂದು ತೋರಿದ್ದನ್ನು ಸಮರ್ಥಿಸಲಾಗುವುದಿಲ್ಲವೇ ನೋಡೋಣ, ಎಂದು ಚಮತ್ಕಾರ ಪ್ರದರ್ಶನ

ಮಾಡಿ ಆನಂದಪಡುತ್ತಿದ್ದಾನೆ. ನಮಗೂ ಆನಂದ ದೊರಕಿಸುತ್ತಿದ್ದಾನೆ. ನೀತಿಶಾಸ್ತ್ರ ಯಾವ ಅಹಂ ಭಾವವನ್ನು ಖಂಡಿಸುತ್ತದೆಯೋ ಅದಕ್ಕೂ ಪ್ರಬಂಧ ಕಾರನ ಅಹಂಭಾವಕ್ಕೂ ಅರ್ಥಪೂರ್ಣವಾದ ಭೇದವಿದೆ.

### ಭಾವನೆಗಳ ಪ್ರಕಟನೆ

ಹರಟೆಯೆಲ್ಲಾ ಮುಗಿದಮೇಲೆ ಆ ಗುಂಪಿನಲ್ಲಿದ್ದವನೊಬ್ಬ ಒಂಟಿಯಾಗಿ ಕುಳಿತನೆನ್ನಿ. ಹರಟೆಯ ಪರಿಣಾಮವಾಗಿ ಅವನ ಮನಸ್ಸು ಪ್ರಸನ್ನವಾಗಿದೆ. ಮಿತ್ರರಲ್ಲೊಬ್ಬ ಅವನ ಹಾಸ್ಯವನ್ನು ಕುದುರಿಸಿದ್ದ, ಮತ್ತೊಬ್ಬ ದುಃಖಸನ್ನಿವೇಶವೊಂದರ ಕಡೆಗೆ ಮಾತು ತಿರುಗಿಸಿದ್ದ, ಮಗುದೊಬ್ಬನ ಉತ್ಸಾಹ ಗಗನಕ್ಕೆ ನೆಗೆದು ನಕ್ಷತ್ರಗಳನ್ನು ಕಿತ್ತುತರಲು ಹೊರಟಿತ್ತು—ಅಂತೂ ಜೀವನದ ಹತ್ತಾರು ಮುಖಗಳು ಅವನ ಮುಂದೆ ಸಾಗಿಹೋಗಿದ್ದವು. ಆಗ ಕೇಳಿದ ಯಾವುದೋ ಸಂಗತಿ, ನುಡಿದ ಯಾವುದೋ ಮಾತು, ಅವನ ಮನಸ್ಸಿನಲ್ಲಿ ಭಾವತರಂಗವನ್ನು ಎಬ್ಬಿಸಿದೆ. ದುಂಬಿ ಹೂವನ್ನು ಮುತ್ತುವಂತೆ ಆ ವಿಷಯ ಪದೇ ಪದೇ ಅವನನ್ನು ಮುತ್ತುತ್ತಿದೆ. ಮನಸ್ಸು ಹಗುರವಾದ ಗಾಳಿಯ ಮೇಲೆ ಸವಾರಿ ಹೊರಟು ಅಲ್ಲಿ ಇಲ್ಲಿ ಅಲೆದು, ಮತ್ತೆ ಮತ್ತೆ ಆ ವಿಷಯಕ್ಕೆ ಬಂದು, ಅದನ್ನು ಈಗೊಂದು ಆಗ ಮತ್ತೊಂದು ದೃಷ್ಟಿಯಿಂದ ಪರಿಶೀಲಿಸುತ್ತದೆ. ಭಾವಪುಷ್ಪ ಮೆಲ್ಲನೆ ಅರಳಿ ಸೌರಭವನ್ನು ಬೀರಲಾರಂಭಿಸುತ್ತದೆ. ಆ ಭಾವವನ್ನು ಅವನು ಇತರರಿಗೆ ತಿಳಿಸಬೇಕು, ಅದಕ್ಕೆ ವಾಕ್‌ರೂಪವನ್ನು ಕೊಡಬೇಕು. ಎದುರಿಗೆ ನಾಲ್ಕಾರು ಜನರಿದ್ದರೆ ಭಾವಸರಣಿಗೆ ಅಡ್ಡಿ-ಆತಂಕಗಳು ಒದಗಬಹುದು. ಆದ್ದರಿಂದ ಎದುರಿನ ಕುರ್ಚಿಯಲ್ಲಿ ಬಾಹ್ಯಪ್ರಪಂಚದ ಪ್ರತಿನಿಧಿಯಾಗಿ ಆಪ್ತಮಿತ್ರನೊಬ್ಬ ಮಾತ್ರ ಕುಳಿತಿದ್ದಾನೆಂದು ಭಾವಿಸಿಕೊಂಡು ಮಾತಾಡುತ್ತಾನೆ. ತನ್ನ ಭಾವದ ಬಾಗುತಿರುವುಗಳನ್ನು, ಅದು ಈಗ ಹಾಸ್ಯದಲ್ಲಿ ಮಿಂದು, ಮರುಕ್ಷಣ ಚಮತ್ಕಾರದಲ್ಲಿ ನಲಿದಾಡಿ, ಕಣ್ಣುಮುಚ್ಚಿ ಪರವಶತೆ ಹೊಂದಿ, ವಾಸ್ತವಿಕ ಪ್ರಪಂಚವನ್ನು ತಲೆಕೆಳಗು ಮಾಡಿ ಶೀರ್ಷಾಸನ ಹಾಕಿಸುವುದನ್ನು ಆ ಆಪ್ತಮಿತ್ರನೊಬ್ಬನೇ ಇದ್ದರೆ ಅರ್ಥಮಾಡಿಕೊಳ್ಳಬಲ್ಲ. ಆ ಕಾಲ್ಪನಿಕ ವ್ಯಕ್ತಿಯೊಡನೆ ಅವನು ಆಡುವ ಮಾತು ಹರಟೆಯಲ್ಲ, ಆತನಿಗೆ ಕೇಳುವಂತೆ, ಆದರೂ ಆತ್ಮಗತವಾಗಿ ಮಾತಾಡುತ್ತಿದ್ದಾನೆ. ಮಿತ್ರನಿಗೆ ಮಾತು ಕೇಳಬೇಕಾದ್ದರಿಂದ ಬಾಹ್ಯಪ್ರಪಂಚದ ಸಂಪರ್ಕ ಕಡಿದು ಹೋಗುವುದಿಲ್ಲ; ಆತ್ಮಗತವಾದ್ದರಿಂದ ಅವನು ಏನನ್ನೂ ಮುಚ್ಚಿಡುವ ಪ್ರಯತ್ನ ಮಾಡಬೇಕಾದ್ದಿಲ್ಲ. ಯೋಚನಾತರಂಗಗಳೂ ಭಾವತರಂಗಗಳೂ ಎಲ್ಲಿಗೆ ಒಯ್ದರೆ ಅಲ್ಲಿಗೆ ಹೋಗಲು ಸಿದ್ಧನಾಗಿದ್ದಾನೆ. ತನ್ನ ವ್ಯಕ್ತಿತ್ವಕ್ಕೆ ಹತ್ತಿಬಂದ ಪೂರ್ವಗ್ರಹಗಳನ್ನು ನಿಃಸಂಕೋಚವಾಗಿ ಹೊರಹಾಕುತ್ತಾನೆ. ಅವು ಪೂರ್ವಗ್ರಹಗಳೇ ಹೌದೆಂಬ ಅರಿವು ಅವನಿಗಿದ್ದರೂ ಅವುಗಳನು ಹುಸಿಕೋಪದಿಂದಲೂ ಯುಕ್ತಿಯಿಂದಲೂ ಸಮರ್ಥಿಸಿಕೊಳ್ಳುತ್ತಾನೆ. ಇತರರು "ಇದೇನು, ಇವನ ವಿಚಿತ್ರ ತರ್ಕ!" ಎಂದುಕೊಳ್ಳಬಹುದು—ಎಂದುಕೊಳ್ಳಲೀ! ಅವನ ಚಿತ್ತ ಆ ಭಾವವನ್ನು ಬೆಳಕಿಗೆ ಹಿಡಿದು, ಕತ್ತಲಲ್ಲಿ ಮರೆಸಿ ಹತ್ತಾರು ಕಡೆಯಿಂದ ತಿರುಗಿಸಿ ತಿರುಗಿಸಿ ನೋಡುತ್ತಿದೆ—ಇದೆಲ್ಲಾ ಇತರರಿಗೆ ತಿಳಿದರೆ ಕೆಟ್ಟದ್ದೇನು?

### ಲಲಿತಪ್ರಬಂಧ ರೂಪಿಸುವ ವಾತಾವರಣ

ಹೀಗೆ ಮನಸ್ಸನ್ನು ನಿರಾಳವಾಗಿ ಹರಿಯಬಿಟ್ಟು ಆತ್ಮೀಯನೊಬ್ಬನೊಡನೆ ಆಡಿದ ಮಾತಿನಂತಿರುತ್ತದೆ, ಲಲಿತಪ್ರಬಂಧ. ಭಾವಗೀತೆ ಹೊರಡುವುದೂ ಬಹುಮಟ್ಟಿಗೆ ಇಂಥ ಮನೋಧರ್ಮದಿಂದಲೇ. ಆದರೆ ಭಾವಗೀತೆಯನ್ನು ಬರೆಯುವವನಿಗೆ ಆರಾಮ ಕುರ್ಚಿಯಲ್ಲಿ ಕುಳಿತು ಮನಸ್ಸನ್ನು ಓಲಾಡಿಸಿದ್ದಷ್ಟರಿಂದ ತೃಪ್ತಿಯಿಲ್ಲ. 'ಹೊಂಗೇದಿಗೆಯ ಹೊಡೆ', 'ಮಿಡಿನಾಗರದ ಹೆಡೆ', 'ಹಗಲಿರುಳ ತಾಳ'—* ಇವು ಕವಿಯ ಮನಸ್ಸಿನಲ್ಲಿ ಚಿತ್ರಿತವಾಗಿ ಅಷ್ಟಕ್ಕೇ ನಿಲ್ಲಲಾರವು. ಅವನು ಕುರ್ಚಿಯಿಂದ ನೆಗೆದೆದ್ದು ಅವುಗಳ ಲಯಕ್ಕೆ ಕುಣಿಯಲಾರಂಭಿಸುತ್ತಾನೆ. ಪ್ರಬಂಧಕಾರನ ಕಣ್ಣುಗಳಂತೆ ಅವನ ಕಣ್ಣುಗಳು ಅರ್ಧ ಮುಚ್ಚಿರಲಾರವು; ಅವು ಉತ್ಸಾಹದಿಂದ ಹೊಳೆಯುತ್ತವೆ, ರೋಷದಿಂದ ಕಿಡಿಕಾರುತ್ತವೆ,

* ಶ್ರೀ ದ. ರಾ. ಬೇಂದ್ರೆಯವರ 'ಕುಣಿಯೋಣು ಬಾರ' ಎಂಬ ಕವನವನ್ನು ನೆನೆದು.




ಮರುಕದಿಂದ ಮಂಜಾಗುತ್ತವೆ. ಅವನ ಮನಸ್ಸು ಹೀಗೆ ಕುಣಿದು ಆ ಭಾವವನ್ನು ಹೊರಹಾಕಿ ಹಿತವಾದ ಆಯಾಸದ ಅನುಭವ ಪಡೆದು ಮತ್ತೆ ಸ್ತಿಮಿತಕ್ಕೆ ಬರುತ್ತದೆ. ಗೀತಕಾರನಿಗಿರುವಷ್ಟು ಉದ್ವೇಗ ಚಟುವಟಿಕೆ, ಪ್ರಬಂಧಕಾರನಿಗಿಲ್ಲ. ಅವನು ಕುರ್ಚಿಯನ್ನು ಬಿಟ್ಟು ಏಳಲೊಲ್ಲ; ಅಲ್ಲಿಯೇ ಕುಳಿತು ಭಾವಾವೇಶವನ್ನು ಮೆಲುಕುಹಾಕಿ ನಲಿಯುತ್ತಾನೆ. ಅವನ ಭಾವ ಭಗ್ಗನೆ ಹತ್ತಿ ಜ್ವಲಿಸುವುದಿಲ್ಲ, ಮೃದುವಾದ ಶಾಖವನ್ನು ಪಸರಿಸುತ್ತದೆ. ಅದು ಕೋಲ್ಮಿಂಚಲ್ಲ, ಮಿನುಗುಮಿಂಚು.

ಹೀಗೆ ಆರಾಮಕುರ್ಚಿಯಲ್ಲಿ ಕುಳಿತೇ ಛಾರಲ್ಸ್ ಲ್ಯಾಂಬ್ (Charles Lamb) ತನ್ನ ವ್ಯಕ್ತಿತ್ವದ ತಿರುಗುಮುರುಗುಗಳನ್ನೆಲ್ಲಾ ಹೊರಗೆಡಹಿದ. ಉದ್ಯೋಗದಿಂದ ನಿವೃತ್ತನಾದ ಮೇಲೆ ಅವನನ್ನು ಹಠಾತ್ತಾಗಿ ನಿಯತಕಾಲದಿಂದ ಅನಂತಕಾಲಕ್ಕೆ ಒಯ್ದಂತಾಯಿತಂತೆ†–ಇದು ಉಚ್ಚತರದ ಭಾವನೆ. ಆದರೆ ಅದರ ಹಿಂದೆಯೇ ಮತ್ತೊಂದು ಯೋಚನೆ ಬಂತು. ತಾನು ಕರ್ಮದಿಂದ ಮುಕ್ತನಾಗಿರುವಾಗ ಇತರರು ದುಡಿಯುತ್ತಿರುವುದನ್ನು ನೋಡಿದರೆ ಆನಂದ ಹೆಚ್ಚಬಹುದಲ್ಲವೆ?—ಕೀಳ್ತರದ ಭಾವನೆ, ಆದರೆ ಅದು ಮನಸ್ಸಿಗೆ ಬಂದದ್ದು ಉಂಟು. 'ಎಲ ದುಷ್ಟ ಮನಸ್ಸೆ!' ಎಂದುಕೊಂಡು ಮುಗುಳುನಗೆ ನಕ್ಕ. ಈ ದುಷ್ಟಪ್ರವೃತ್ತಿ ಇತರರಿಗೆ ತಿಳಿಯಿತಲ್ಲ ಎಂಬ ಆತಂಕವೇನೂ ಅವನಿಗಿಲ್ಲ. ತಿಳಿದರೇನು! ಎಲ್ಲರೂ ಆತ್ಮೀಯರಷ್ಟೆ "ಇವನೂ ನಮ್ಮಂತೆ" ಎಂದುಕೊಳ್ಳುತ್ತಾರೆ, ಅಷ್ಟೆ.

## ಮನಸ್ಸಿನ ಓಟ

ಮನಸ್ಸು ಹಾಗೆಯೇ ಮತ್ತೊಂದು ಕಡೆಗೆ ತಿರುಗಿತು. ಮದುವೆಯಾದವರಲ್ಲಿ ಅದೇನೋ ವಿಚಿತ್ರವಾದ ಬದಲಾವಣೆಯಾಗುತ್ತದೆ.* ಮೊದಲು ಆತ್ಮೀಯರಾಗಿದ್ದವರು ಮದುವೆಯಾದ ಮೇಲೆ ಪರಕೀಯರಾಗುತ್ತಾರೆ. ಮದುವಣಗಿತ್ತಿಗೆ ತನ್ನ ಗಂಡನ ಪೂರ್ವ ಸ್ನೇಹಿತರ ವಿಷಯದಲ್ಲಿ ಅಷ್ಟೇನೂ ಆದರವಿರುವುದಿಲ್ಲ. "ನನ್ನ ಗಂಡನಿಗೆ ನನಗಿಂತ ಇವನು ಹತ್ತಿರವಾಗಿದ್ದ; ನಾನು ಭಾಗಿಯಾಗದ ಅನುಭವಗಳನ್ನು ಇವರಿಬ್ಬರೂ ಕಂಡಿದ್ದಾರೆ" ಎನ್ನುವುದನ್ನು ನೆನೆದಾಗ ಆಕೆಗೆ ಸ್ವಲ್ಪ ಹೊಟ್ಟೆಕಿಚ್ಚು ಬರುವದು ಸ್ವಾಭಾವಿಕವೇನೊ.... ಅವರಿಬ್ಬರೂ ಸುಖವಾಗಿರಲಿ, ಯಾರು ಬೇಡವೆನ್ನುತ್ತಾರೆ! ಆದರೆ ತಮ್ಮ ಸುಖವನ್ನು ನನ್ನ ಮುಂದೇಕೆ ಮೆರಸಬೇಕು!—ಹೀಗೆ ಯೋಚನಾಲಹರಿ ನಗು ನಗುತ್ತಾ ಗಂಡ-ಹೆಂಡಿರ 'ಅನನ್ಯ' ಭಾವನೆಯನ್ನು ಹುಸಿಮುನಿಸಿನಿಂದ ಪರಿಶೀಲಿಸುತ್ತ ಸಾಗುತ್ತದೆ.

ಮದುವೆಯಾದವರನ್ನು ಹಾಸ್ಯ ಮಾಡುವ ಇದೇ ಮನುಷ್ಯನಿಗೆ, ಮದುವೆಯಿಲ್ಲದೆ ಸಂಸಾರ ಸುಖದಿಂದ ವಂಚಿತರಾದವರದ್ದು ಎಂಥ ಮರುಕದ ಸ್ಥಿತಿ ಎಂಬುದರ ಅನುಭವವೂ ಆಯಿತು. ಒಂದು ದಿನ ಸಂಜೆ ತನ್ನ ಮಕ್ಕಳು ಕುಣಿಯುತ್ತ ಬಂದು ಮೊಣಕಾಲನ್ನಪ್ಪಿ "ಕಥೆ ಹೇಳು" ಎಂದವು.‡ ಮುತ್ತಜ್ಜಿ ಫೀಲ್ಡ್ಳ ಕಥೆಯನ್ನು ಹೇಳಿದ. ಆಕೆಯ ದೈವಭಕ್ತಿ, ನಿಃಸ್ವಾರ್ಥ ಜೀವನ, ಅವಳಿಗೆ ಮೊಮ್ಮಗ ಜಾನನಲ್ಲಿದ್ದ ಪ್ರೇಮ, ಅವಳು ಕ್ಯಾನ್ಸರ್‌ನಿಂದ ನರಳಿ ಪ್ರಾಣ ಬಿಟ್ಟದ್ದು.... ತಾನು ಏಳು ವರ್ಷಕಾಲ ಆ್ಯಲಿಸ್ಸಳ ಪ್ರೇಮವನ್ನು ಯಾಚಿಸಿದ್ದು.... ಅಲ್ಲಿಗೆ ಕನಸು ಒಡೆಯಿತು. ಛಾರಲ್ಸ್ ಲ್ಯಾಂಬ್ ಮದುವೆ ಮಾಡಿಕೊಳ್ಳಲೇ ಇಲ್ಲ. ಆ್ಯಲಿಸ್ ಮದುವೆಯಾದದ್ದು ಬಾರ್ಟ್ರಮನನ್ನು; ಅವಳ ಮಕ್ಕಳು ಬಾರ್ಟ್ರಮನನ್ನು 'ಅಪ್ಪಾ' ಎಂದು ಕರೆಯುತ್ತವೆ. ಈ ಕಥೆಯಲ್ಲಿ ಬಂದ ಮಕ್ಕಳು ಕನಸಿನ ಮಕ್ಕಳು.

"A loose sally of the mind" (ಮನಸ್ಸಿನ ಮುಕ್ತ ಚತುರೋಕ್ತಿ) ಎಂಬ ಬಣ್ಣನೆಯನ್ನು ನೆನೆದು ಪ್ರಬಂಧದಲ್ಲಿ ಬಂಧವೇ ಇರಬೇಕಾದ್ದಿಲ್ಲ ಎಂದು ಭಾವಿಸುವುದು ತಪ್ಪು. ಎಲ್ಲ ಸಾಹಿತ್ಯರೂಪಗಳಲ್ಲೂ ಒಂದಲ್ಲ ಒಂದು ಬಗೆಯ ಬಂಧವಿರಲೇಬೇಕು. ಈ ಮಾತಿಗೆ ಪ್ರಬಂಧವೇನೂ ವಿನಾಯಿತಿಯಲ್ಲ. ಮದುವೆಯಿಲ್ಲದವನು ಸಂಸಾರಸುಖವನ್ನು ನೆನೆದು ಕನಸು ಕಾಣುತ್ತಾನೆ. ಆ ಕನಸಿನಲ್ಲಿ ಕಥೆ ಹೇಳುವಾಗ ಮುತ್ತಜ್ಜಿ ಫೀಲ್ಡ್, ಜಾನ್ ಲ್ಯಾಂಬ್ ಇವರ ವಿಷಯವನ್ನು ತಿಳಿಸುವುದು, ನೃತ್ಯದ ಮಾತು ಬಂದಾಗ ಮಗುವಿನ ಕಾಲು ಕುಣಿಯಲಾರಂಭಿಸುವುದು, ಇದ್ದಕ್ಕಿದ್ದ ಹಾಗೇ ಯಾವುದೋ ಭಂಗಿಯಲ್ಲಿ ಆ ಮಕ್ಕಳ ಮುಖದ ಮೇಲೆ ಅವರ ತಾಯಿಯ ಮುಖ ಛಾಯೆ ಹೊಳೆದು ಹೋಗುವುದು:—ಇವೆಲ್ಲಾ, ಆ ಕನಸಿನಲ್ಲಿ ಸ್ವಾಭಾವಿಕವಾಗಿ ಬರಬಹುದಾದ ಅಂಶಗಳೇ ತಾನೆ. ಅವೆಲ್ಲವೂ ಒಂದು ಭಾವಕ್ಕೆ ಹೊಂದಿಕೊಂಡಂತೆ ಬಂದಿವೆ; ಆ ಭಾವವೇ ಬಂಧನಸೂತ್ರ. ಪ್ರಬಂಧದಲ್ಲಿರುವುದು ಹಿತವಾದ ಲಾಘವವೇ ಹೊರತು ಬಂಧರಾಹಿತ್ಯವಲ್ಲ.

† The Superannuated Man.

* "A Bachelor's complaint of the Behaviour of married People."

‡ "Dream Children– A Reverie"

ಪ್ರಕೃತಿರಮಣಿಯ ಪ್ರಶಾಂತ ಸಾನ್ನಿಧ್ಯದಲ್ಲಿ



ಫೋಟೋ: ಬಿ. ಅಗಸ್ಟ ಜಿರಾನ, ಮದ್ರಾಸ.

# ಕರ್ನಾಟಕದಲ್ಲಿ

# ಚಾರಿತ್ರಿಕ ಸ್ಥಳಗಳು

ಕರ್ನಾಟಕದಲ್ಲಿ ಚಾರಿತ್ರಿಕ ಕ್ಷೇತ್ರಗಳು ವಿಪುಲವಾಗಿವೆ. ಕೆಲವು ಸಮಗ್ರ ಭಾರತದ ದೃಷ್ಟಿಯಿಂದ ಚಿರಸ್ಮರಣೀಯವಾಗಿರುವವು. ಈ ಸ್ಥಳಗಳ ಯಾತ್ರೆಯೊಂದು ತೀರ್ಥಯಾತ್ರೆಯಂತಿರುವುದು. ಈ ಸ್ಥಳಗಳ ಸಂದರ್ಶನದ ಮೊದಲು ಕೆಲವೊಂದು ಚಾರಿತ್ರಿಕ ಸಂಗತಿಗಳನ್ನು ಅರಿತುಕೊಂಡಿರುವುದು ಅಗತ್ಯ. ಅದರಿಂದ ಈ ಸ್ಥಳಗಳನ್ನು ಮನನಪೂರ್ವಕವಾಗಿ ಅವಲೋಕಿಸಬಹುದು. ಈ ದೃಷ್ಟಿಯಿಂದ ಕೆಲ ಸಂಸ್ಮರಣೀಯ ಸ್ಥಳಗಳ ಐತಿಹಾಸಿಕ ಮೇಲ್ಮೆಯನ್ನು ಎತ್ತಿತೋರಿಸುವ ಹಕ್ಕಿನೋಟವೊಂದನ್ನು ಲೇಖಕರು ಇಲ್ಲಿ ಕೊಟ್ಟಿರುವರು. . . . . . .

ಲೇಖಕರು :
**ಪ್ರೊ. ಪಾಂಡುರಂಗರಾವ ದೇಸಾಯಿ,**
ಎಂ. ಎ.
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಒಂದು ಸ್ಥಳವು ಚಾರಿತ್ರಿಕವೆಂದೆನಿಸಬೇಕಾದರೆ ಅದು ಇತಿಹಾಸದ ಕ್ಷೇತ್ರದಲ್ಲಿ ಸ್ಥಾನವನ್ನು ಗಳಿಸಿರಬೇಕಾಗುತ್ತದೆ. ಗಣ್ಯ ಚಾರಿತ್ರಿಕ ವ್ಯಕ್ತಿಗಳೊಡನೆ ಇಲ್ಲವೆ ಘಟನೆಗಳೊಡನೆ ನಿಕಟ ಸಂಬಂಧವನ್ನು ಧರಿಸಿರಬೇಕಾಗುತ್ತದೆ. ಈ ಪರಿಯಲ್ಲಿ ಲಕ್ಷಣೀಯವಾದ ಚಾರಿತ್ರಿಕ ಸ್ಥಳಗಳು ಕರ್ನಾಟಕದಲ್ಲಿ ವಿಪುಲವಾಗಿವೆ. ಇದಕ್ಕೆ ಕಾರಣ ಈ ನಾಡಿನ ಚರಿತ್ರೆ. ಇಲ್ಲಿಯ ಜನಗಳ ಸುಸಂಸ್ಕೃತ ಪ್ರಭಾವಶಾಲಿ ಜೀವನದಿಂದಾಗಿ ವಿಸ್ತೀರ್ಣವಾಗಿದೆ. ಬೀದರದಿಂದ ಮೈಸೂರ ವರೆಗೆ ಒಂದೊಂದು ವಿಧದಿಂದ ಚಾರಿತ್ರಿಕ ಮೇಲ್ಮೆಯನ್ನು ಪಡೆದ ನೂರಾರು ಸ್ಥಳಗಳು ಕಣ್ಣೊಳಿಸುತ್ತವೆ. ಅವುಗಳಲ್ಲಿ ಕೆಲವು ಸ್ಥಳೀಯ ಪ್ರಾಮುಖ್ಯದಿಂದ ಕೂಡಿದುವು; ವಿಶಿಷ್ಟ ಜನವರ್ಗಗಳಲ್ಲಿ ಮಾನ್ಯತೆಯನ್ನು ಪಡೆದುವು. ಇನ್ನೂ ಕೆಲವು ಉನ್ನತೋನ್ನತವಾಗಿ ಸಮಗ್ರ ಕರ್ನಾಟಕದ, ಮಾತ್ರವಲ್ಲ, ಸಮಗ್ರ ಭಾರತದ ದೃಷ್ಟಿಯಿಂದ ಚಿರಸ್ಮರಣೀಯವಾದುವು.

ಸ್ವಾತಂತ್ರ್ಯೋತ್ತರ ಭಾರತದಲ್ಲಿ ನಮ್ಮ ಚರಿತ್ರೆಯ ಕಡೆಗೆ ಹೆಚ್ಚು ಲಕ್ಷ್ಯವನ್ನು ಪೂರಯಿಸಲಾಗುತ್ತಿದೆ. ಪ್ರಾಕ್ತನ ಶಾಖೆಯವರಿಂದ ಇತಿಹಾಸ ಪ್ರಸಿದ್ಧ ಸ್ಥಳಗಳನ್ನು ಸಂರಕ್ಷಿಸುವ ಪ್ರಯತ್ನಗಳು ಮುಂದುವರಿದಿವೆ. ಚಾರಿತ್ರಿಕ ಸ್ಥಳಗಳನ್ನು ಸಂದರ್ಶಿಸುವ ಕುತೂಹಲ ವಿದ್ಯಾವಂತರಲ್ಲಿ ವರ್ಧಿಸುತ್ತಲಿದೆ. ಇಂತಹ ಸಂದರ್ಶನಕುತೂಹಲಿಗಳಲ್ಲಿ ವಿನೋದ, ವಿಹಾರದ ಲಾಲಸೆಯಿಂದ ಪ್ರೇರಿತರಾಗಿರುವವರು ಅನೇಕರು. ಶ್ರಮಸಹಿಷ್ಣುತೆ, ವ್ಯಾಸಂಗ ಬುದ್ಧಿ, ಗಂಭೀರ ವಿಚಾರಪರತೆ ಇದ್ದವರು ವಿರಲ. ಐತಿಹಾಸಿಕ ಸಂಚಾರದ ಕಾರ್ಯಕ್ರಮದಲ್ಲಿ ಮಾರ್ಗದ ಸುಖ ಸೌಲಭ್ಯಗಳಿಗೂ ಚಿತ್ತರಂಜನೆಗೂ ಪ್ರಾಶಸ್ತ್ಯ ಕೊಡುವವರು ಬಹು ಜನ. ಇಂತಹ ಸೌಲಭ್ಯಗಳು ಇಲ್ಲದೆ ಹೋದರೆ, ಅಂತಹ ಸ್ಥಳಗಳನ್ನು ಬಿಟ್ಟರೆ ನಷ್ಟವೇನು ಎಂದು ಕೇಳುವವರೂ ಸಿಕ್ಕಬಹುದು.

ಚಾರಿತ್ರಿಕ ಸ್ಥಳಗಳ ಸಂದರ್ಶನ, ಜೀವನವನ್ನು ಸುಸಂಸ್ಕೃತ ಮತ್ತು ಸಮೃದ್ಧಗೊಳಿಸುವ ಮೇಲ್ತರದ ಅನುಭವವಾಗಿದೆ. ಪ್ರತಿಯೊಬ್ಬ ಸುಶಿಕ್ಷಿತನು ಈ ಸಂಸ್ಕಾರ ಪಡೆಯುವುದು ಲೇಸು. ನಮ್ಮ ಶಿಕ್ಷಣ ಕ್ರಮದಲ್ಲಿ ಇದಕ್ಕೆ ಹೆಚ್ಚಿನ ಅವಕಾಶ ಸಲ್ಲಬೇಕಾದುದು.



ಬನವಾಸಿ ಮಧುಕೇಶ್ವರ ದೇವಾಲಯದ ಹೊರನೋಟ

## ಒಂದು ತೀರ್ಥಯಾತ್ರೆ

ಚಾರಿತ್ರಿಕ ಸ್ಥಳಗಳನ್ನು ಸಂದರ್ಶಿಸುವುದು ಅದೊಂದು ತೀರ್ಥಯಾತ್ರೆಯನ್ನು ಆಚರಿಸಿದಂತೆ. ಆ ಯಾತ್ರಿಕನು ಉತ್ಕಟ ಧಾರ್ಮಿಕ ಶ್ರದ್ಧೆಯಿಂದ ತೀರ್ಥಕ್ಷೇತ್ರಗಳಿಗೆ ಹೋಗುತ್ತಾನೆ. ಕಷ್ಟನಷ್ಟಗಳನ್ನು ಲಕ್ಷಿಸದೆ ಯಾತ್ರೆಯನ್ನು ಪೂರ್ತಿಗೊಳಿಸಿ ಜೀವನದಲ್ಲಿ ಧನ್ಯತೆಯನ್ನು ಪಡೆಯುತ್ತಾನೆ. ಐತಿ

ಹಾಸಿಕ ಸ್ಥಳಗಳ ಯಾತ್ರಿಕನಾದರೋ, ಅದೇ ಆಳದ ದೇಶಾಭಿಮಾನದಿಂದಲೂ ಪೂರ್ವಜರಲ್ಲಿನ ಗೌರವಭಾವನೆಯಿಂದಲೂ ಪ್ರೇರಿತನಾಗುತ್ತಾನೆ. ಧಾರ್ಮಿಕ ಕ್ಷೇತ್ರಗಳ ಯಾತ್ರಿಕನು ಪುಣ್ಯತೀರ್ಥಗಳಲ್ಲಿ ಸ್ನಾನ ಮಾಡಿ ಪವಿತ್ರನಾಗುವಂತೆ, ಐತಿಹಾಸಿಕ ಯಾತ್ರಿಕನು ಚರಿತ್ರೆಯ ಗಂಗೆಯಲ್ಲಿ ಮಿಂದು ಪಿತೃತರ್ಪಣ ನೀಡಿ ಸ್ಫೂರ್ತಿಗೊಳ್ಳುವನು. ಧಾರ್ಮಿಕ ಕ್ಷೇತ್ರಗಳಲ್ಲಿ ಕೆಲವಕ್ಕೆ ನದಿಯ ಸಾನ್ನಿಧ್ಯ ಇಲ್ಲದಿರಬಹುದು. ಆದರೆ ಒಂದೊಂದು ಚಾರಿತ್ರಿಕ ಸ್ಥಳವೂ ಅಖಂಡ ಕಾಲಗತಿಯಲ್ಲಿ ಹರಿಯುವ ಜೀವನದ ರಮ್ಯ ನಿರ್ಝರಿಣಿಯ ತಟದಲ್ಲಿ ನಿರ್ಮಾಣವಾಗಿರುತ್ತದೆ. ಇದು ಚಾರಿತ್ರಿಕ ಸ್ಥಳಗಳ ಮೇಲ್ಮೆ. ಧಾರ್ಮಿಕ ಕ್ಷೇತ್ರಗಳಿಗೆ ಸಾಮಾನ್ಯವಾಗಿ ಪೌರಾಣಿಕ ಸನ್ನಿವೇಶಗಳಿಂದ ಮಹತ್ವವು ಬಂದಿದ್ದರೆ, ಚಾರಿತ್ರಿಕ ಸ್ಥಳಗಳು ಕೇವಲ ಇತಿಹಾಸದ ಆಧಾರದ ಮೇಲೆಯೆ ನಿಂತಿರುತ್ತವೆ.

ಚಾರಿತ್ರಿಕ ಸ್ಥಳಗಳ ಸಂದರ್ಶಕನಿಗೆ ಪೂರ್ವಭಾವಿಯಾಗಿ ಆ ಆ ಸ್ಥಳಗಳ ಚರಿತ್ರೆ ಮತ್ತು ಚರಿತ್ರೆಯಲ್ಲಿ ಅವುಗಳ ವಿಶಿಷ್ಟ ಸ್ಥಾನ, ಈ ವಿಷಯಗಳ ಸ್ಥೂಲ ಪರಿಚಯ ಇರುವುದು ಆವಶ್ಯಕ. ಅದಿಲ್ಲದಿದ್ದರೆ ಆತನ ಯಾತ್ರೆಯ ಉದ್ದೇಶ ಸಫಲವಾಗಲಾರದು. ಏಕೆಂದರೆ ಚಾರಿತ್ರಿಕ ಸ್ಥಳ ಮತ್ತು ಇನ್ನಿತರ ಗ್ರಾಮಗಳು ಇವುಗಳಲ್ಲಿ ಅಂತರವೇನು? ಕಲ್ಲು, ಮಣ್ಣು, ನೆಲ, ಮುಗಿಲು, ಮರ, ಮನೆ, ಜನ, ಗುಡಿಗುಂಡಾರ ಎಲ್ಲೆಡೆಯಲ್ಲಿ ನೋಡಲು ಸಿಕ್ಕುತ್ತವೆ. ಇಷ್ಟನ್ನು ಮಾತ್ರ ನೋಡಲಿಕ್ಕೆ ದೇಹಶ್ರಮ, ದ್ರವ್ಯ, ಕಾಲವನ್ನು ಅಷ್ಟು ದೂರ ಹೋಗಿ ವ್ಯಯಿಸುವ ಅಗತ್ಯವೇನು?

ಅವಸರದಿಂದ ಐತಿಹಾಸಿಕ ಸ್ಥಳಗಳನ್ನು ಅವಲೋಕಿಸುವುದು ಪ್ರಯೋಜನಕಾರಕವಲ್ಲ. ಸ್ವಲ್ಪ ಬಿಡುವನ್ನು ಮಾಡಿಕೊಂಡು ಅಧಿಕ ಅವಕಾಶದಿಂದ ಅವುಗಳನ್ನು ನೋಡುವುದು ಯುಕ್ತ. ಒಂದೊಂದು ಸ್ಥಳವನ್ನು ಸಂದರ್ಶಿಸುವ ಕಾಲವು ಆ ಆ ಸ್ಥಳದ ಸನ್ನಿವೇಶವನ್ನು ನೋಡಿ ನಿರ್ಧರಿಸಬೇಕಾಗುತ್ತದೆ. ಅದು ಹೇಗೆಂದರೆ, ಹಂಪೆಯನ್ನೂ ಮಳಖೇಡವನ್ನೂ ತನ್ನ ಯಾತ್ರಾಪಟ್ಟಿಯಲ್ಲಿ ಸೇರಿಸಿಕೊಂಡಿದ್ದ ಪ್ರಯಾಣಿಕನು ಅವೆರಡಕ್ಕೂ ಒಂದೇ ಕಾಲಪರಿಮಿತಿಯನ್ನು ಇಟ್ಟುಕೊಳ್ಳುವುದು ಸರಿಯಾಗಲಿಕ್ಕಿಲ್ಲ. ಇದಕ್ಕೆ ಕಾರಣ ಮಳಖೇಡದಲ್ಲಿ ಉಳಿದಿರುವ ಚಾರಿತ್ರಿಕ ಅವಶೇಷಗಳು ಅತ್ಯಲ್ಪ. ಈ ಸ್ಥಳವನ್ನು ಕೆಲವು ಗಂಟೆಗಳಲ್ಲಿ ನೋಡಿ ಮುಗಿಸಬಹುದು. ಅದಕ್ಕೆ ಪ್ರತಿಯಾಗಿ ಒಂದು ವಾರದ ವರೆಗೆ ಸುತ್ತಾಡಿದರೂ ಸಾಲದಷ್ಟು ಚಾರಿತ್ರಿಕ ಅವಶೇಷಗಳಿಂದ ಕಿಕ್ಕಿರಿದ ಸ್ಥಳ ಹಂಪೆ.

## ಮನನಪೂರ್ವಕ ಅವಲೋಕನ

ಮನನಪೂರ್ವಕವಾಗಿ ಚಾರಿತ್ರಿಕ ಸ್ಥಳಗಳನ್ನು ಅವಲೋಕಿಸಬೇಕು. ಕಣ್ಣುಬಿಟ್ಟು ಹೃದಯತೆರೆದು ನೋಡಿದರೆ ಅಲ್ಲಿನ ಒಂದೊಂದು ಪಾಳಿನಲ್ಲಿ ಆಳವಾದ ಸನ್ನಿವೇಶಗಳು ಅಡಕವಾಗಿದ್ದಂತೆ ಗೋಚರಿಸದಿರದು. ಒಂದು ಕಲ್ಲು, ಒಂದು ಗೋಡೆ, ಒಂದು ಆಕೃತಿ, ಒಂದು ದೇಗುಲ, ಒಂದು ಓಣಿ, ಒಂದು ಬೀದಿ ನೂರು ನೂರು ಸಂವತ್ಸರಗಳ ಆಚೆಯ ತಮ್ಮೆದೆ ಆದ ಕರುಣಕಥೆಯನ್ನು, ರೋಮಾಂಚಕಾರಕ ಘಟನೆಯನ್ನು ಮಾತಿಗಿಂತಲೂ ಮರ್ಮಭೇದಕವಾದ ಮೂಕಭಾಷೆಯಿಂದ ಉಸುರಿ ಹೇಳುತ್ತವೆ. ಇಂತಹ ಕಥೆಯನ್ನು, ಅಂತಹ ಘಟನೆಯನ್ನು ಭಾವದ ಕಣ್ಣಿನಿಂದ ಕಂಡು ತಿಳಿವಿನ ಕಿವಿಯಿಂದ ಕೇಳುವಂತಹ ಆಕಲನಶಕ್ತಿ ಸಂದರ್ಶಕನಲ್ಲಿ ಇರಬೇಕಾದುದು.

ಐತಿಹಾಸಿಕ ಸ್ಥಳಗಳ ಸಂದರ್ಶಕನು ಏನೇನನ್ನು ಅವಲೋಕಿಸಬೇಕು ಎಂಬುದನ್ನು ಆಲೋಚಿಸಿಕೊಂಡಿರುವುದು ಉತ್ತಮ. ಮೊದಲನೆಯದಾಗಿ, ಆತನು ನೋಡಬೇಕಾದುದು ಸ್ಥಳವಿನ್ಯಾಸ. ಅನೇಕ ಎಡೆಗಳಲ್ಲಿ ಒಂದೊಂದು ಸ್ಥಳದ ವಿಶಿಷ್ಟ ಪ್ರಾಕೃತಿಕ ರಚನೆಯ ಮೂಲಕ ಅದು ಅಂದಿನ ಚರಿತ್ರೆಯಲ್ಲಿ ಪ್ರಾಮುಖ್ಯ ಪಡೆದು ಅಭಿವೃದ್ಧಿಹೊಂದಲು ಅವಕಾಶ ಉಂಟಾಗಿರುತ್ತದೆ. ಎರಡನೆಯದಾಗಿ, ರಾಜಕೀಯ ಆಡಳಿತದ ಕುರುಹುಗಳು; ಅಂದರೆ ಕೋಟೆ, ಕೊತ್ತಳ, ಅರಮನೆ, ನೆಲಮನೆ, ಕಾರ್ಯಾಲಯ, ರಕ್ಷಾಸನ್ನಾಹ ಇತ್ಯಾದಿ. ಇಂತಹವು ವಿಧ್ವಂಸನ ಸತ್ರದಲ್ಲಿ ಹೆಚ್ಚಾಗಿ ಉಳಿದುಕೊಂಡಿರುವುದಿಲ್ಲ. ಆದರೂ ಕೆಲವೆಡೆ ದೊರೆಯುತ್ತವೆ. ಮರಾಟರು, ಮುಸಲ್ಮಾನರು, ಬ್ರಿಟಿಶರು ಇವರ ಕಾಲದ ಕುರುಹುಗಳು ಸ್ವಾಭಾವಿಕವಾಗಿ ಅಧಿಕ ಪ್ರಮಾಣದಲ್ಲಿ ಬಾಳಿವೆ.

ಮೂರನೆಯದಾಗಿ, ಕಲಾಕೃತಿಗಳು, ದೇವಾಲಯ, ಮಂಟಪ, ಶಾಲೆ, ಕಟ್ಟಡಗಳಲ್ಲಿ ಕಂಡರಿಸಿದ ವಿಗ್ರಹಗಳು, ಬಿಡಿ ವಿಗ್ರಹಗಳು, ವರ್ಣಚಿತ್ರಗಳು ಇತ್ಯಾದಿ. ಇವು ಹಲವೆಡೆಗಳಲ್ಲಿ ಸಿಕ್ಕುತ್ತವೆ. ಇವುಗಳನ್ನು ಎಷ್ಟೆಷ್ಟು ಸೂಕ್ಷ್ಮವಾಗಿ, ಕೂಲಂಕಷವಾಗಿ ಪರೀಕ್ಷಿಸುವುದು ಸಾಧ್ಯವೊ ಅಷ್ಟಷ್ಟು ಪ್ರಯೋಜನವಾಗುತ್ತದೆ. ಇವುಗಳನ್ನು ಆಳವಾಗಿ ಅಭ್ಯಸಿಸಿ ನಮ್ಮ ಸಂಸ್ಕೃತಿಯ ಅನೇಕ ಸುಂದರರೀತಿ ರಚನೆಗಳನ್ನು ಮನದಟ್ಟು ಮಾಡಿಕೊಳ್ಳಬಹುದು. ನಾಲ್ಕನೆಯದಾಗಿ, ವಿಶಿಷ್ಟ ಧಾರ್ಮಿಕ ವೈಲಕ್ಷಣ್ಯಗಳು. ಉದಾಹರಣೆಯಾಗಿ, ಬೌದ್ಧ ಇಲ್ಲವೆ ಜೈನ ಕಲಾಕೃತಿಗಳಿಗೆ ತಮ್ಮವೇ ಆದ ಕೆಲವು ಸಂಪ್ರದಾಯಗಳು ಇರುತ್ತವೆ. ಇಂಥ ಧಾರ್ಮಿಕತೆ ಕೆಲವೊಂದು ಸ್ಥಳಗಳ ಚಾರಿತ್ರಿಕತೆಯನ್ನು ರೂಪಿಸಲು ಕಾರಣವಾಗಿರುತ್ತವೆ. ಧರ್ಮವು ನಮ್ಮ ಜೀವನದ ಮೇಲೆ ಅತ್ಯಂತ ಪ್ರಭಾವ ಬೀರಿದ ಮಹಾಶಕ್ತಿ ಎಂಬ ಮಾತನ್ನು ನಾವು ಮರೆಯಲಿಕ್ಕಾಗದು. ಇತಿಹಾಸಲೋಕದಲ್ಲಿ ವಿಹರಿಸುವಾಗ ನಾನಾ ಧರ್ಮಮತಗಳು ನಮ್ಮ ಸಂಸ್ಕೃತಿಪ್ರವಾಹದ ವಿಸ್ತಾರವನ್ನೂ ಗಭೀರತೆಯನ್ನೂ ಹೆಚ್ಚಿಸಿದ ಹೊನಲುಗಳು ಎಂಬ ಭಾವ ನಮ್ಮ ಅಂತಃಕರಣದಲ್ಲಿ ಮೂಡಿ ನಿಲ್ಲಬೇಕು.

ಈ ವಿಧದ ಪರಿಜ್ಞಾನವನ್ನು ಇಟ್ಟುಕೊಂಡು ಚಾರಿತ್ರಿಕ ಸ್ಥಳಗಳನ್ನು ಸಂದರ್ಶಿಸಿದರೆ ನಮ್ಮ ಯಾತ್ರೆ ಯಶಸ್ವಿಯಾಗುತ್ತದೆ. ಈ ಮುಂದೆ, ಆರಂಭದಲ್ಲಿ ಸೂಚಿಸಿದ ಮೂರನೆಯ ಗುಂಪಿಗೆ ಸೇರಬಹುದಾದ, ಅಂದರೆ ಸಮಸ್ತ ಕರ್ನಾಟಕ ಮತ್ತು ಭಾರತದ ದೃಷ್ಟಿಯಿಂದ ಸಂಸ್ಮರಣೀಯವಾದ ಕೆಲವು ಐತಿಹಾಸಿಕ ಸ್ಥಳಗಳನ್ನು ಮಾತ್ರ ವರ್ಣಿಸುತ್ತ ಅವುಗಳ ಮೇಲ್ಮೆಯನ್ನು ಎತ್ತಿ ತೋರಿಸುವೆ. ಈ ಸ್ಥಳಗಳನ್ನು ಆಯ್ದುಕೊಳ್ಳುವಾಗ ಒಂದು ವ್ಯಾಪಕ ಮತ್ತು ಪ್ರಾತಿನಿಧಿಕ ದೃಷ್ಟಿಯನ್ನು ಇಟ್ಟುಕೊಂಡಿದ್ದೇನೆ. ಆದರೂ ಇದೊಂದು ಹಕ್ಕಿನೋಟ.

## ಬನವಾಸಿ

ಈ ಗ್ರಾಮ ಉತ್ತರಕನ್ನಡ ಜಿಲ್ಲೆಯ ಸಿ... ತಾಲೂಕಿನಲ್ಲಿದೆ. ಕರ್ನಾಟಕದ ಅತ್ಯಂತ ಪ್ರಾಚೀನ ಸ್ಥಳಗಳಲ್ಲಿ ಇದೊಂದು. ಇದರ ಪೂರ್ವದ ಹೆಸರು ವನವಾಸ ಎಂದರೆ ಕಾಡಿನಲ್ಲಿ ನಿರ್ಮಿತವಾದ ವಸತಿ. ವನವಾಸದ ಈಚೆಯ ರೂಪಗಳು ವನವಾಸಿ, ಬನವಾಸಿ. ಈ ಊರ ಚರಿತ್ರೆ ಏನಿಲ್ಲೆಂದರೂ ಇಪ್ಪತ್ತೆರಡು ಶತಮಾನ ಹಿಂದೆ ಹೋಗುತ್ತದೆ. ಇಲ್ಲಿ ಬೌದ್ಧ, ಜೈನ, ಹಿಂದುಮತೀಯ ಅವಶೇಷಗಳು ದೊರೆಯುತ್ತವೆ.

ಮೌರ್ಯಮಹಾರಾಜ ಅಶೋಕನು ಈ ಪ್ರದೇಶಕ್ಕೆ ಬೌದ್ಧಧರ್ಮೋಪದೇಶಕರನ್ನು ಕಳುಹಿದನು. ಅಂದಿನಿಂದ ಇದು ಬೌದ್ಧ ಅನುಯಾಯಿಗಳ ಬೀಡಾಗಿ ಪರಿಣಮಿಸಿರಬೇಕು. ಗುಂಟೂರು ಜಿಲ್ಲೆಯ ನಾಗಾರ್ಜುನಕೊಂಡದಲ್ಲಿ ದೊರೆತ ಇಕ್ಷ್ವಾಕು ರಾಜ...

...ನೂರನೆಯ ಶತಮಾನದ ಒಂದು ಶಾಸನದಲ್ಲಿ ಲಂಕಾ ದ್ವೀಪದ ಬೌದ್ಧ ಭಿಕ್ಷುಗಳು ಈ ಭಾಗವನ್ನು ಬೌದ್ಧ ಮತಕ್ಕೆ ಪರಿವರ್ತಿಸಿದರೆಂದು ಹೇಳಿದೆ. ಈ ವಂಶದ ಕೋದಬಲಿಸಿರಿ ಎಂಬ ರಾಜಪುತ್ರಿ, ಬನವಾಸಿಯ ಚುಟುಕುಲದ ರಾಜನನ್ನು ಮದುವೆಯಾಗಿದ್ದಳು. ಈ ಚುಟುಕುಲದ ಅರಸರು ಬೌದ್ಧ ಧರ್ಮದ ಕಡೆಗೆ ಒಲಿದಿದ್ದರು. ಈ ಮನೆತನದ ರಾಜಕುಮಾರಿ ಮಹಾಭೋಜ ಶಿವಸ್ಕಂಧ ನಾಗಶ್ರೀ ಒಂದು ಕೆರೆಯನ್ನೂ ನಾಗಪ್ರತಿಮೆಯನ್ನೂ ವಿಹಾರವನ್ನೂ ದಾನ ಮಾಡಿದಳು. ಈ ನಾಗವಿಗ್ರಹವನ್ನು ಇಂದಿಗೂ ಮಧುಕೇಶ್ವರ ದೇವಾಲಯದಲ್ಲಿ ಕಾಣಬಹುದು. ಈ ಪ್ರತಿಮೆಯ ಚೌಕಟ್ಟಿನ ಮೇಲೆ ಮೇಲಿನ ವಿಷಯವನ್ನು ವಿವರಿಸುವ, ಎರಡನೆಯ ಶತಮಾನದ ಬ್ರಾಹ್ಮೀ ಅಕ್ಷರದಲ್ಲಿ ಕೊರೆದ ಶಾಸನವಿದೆ. ಈ ನಾಗರಾಜ ಕರ್ನಾಟಕದಲ್ಲಿ ದೊರೆತ ಬಹು ಪ್ರಾಚೀನ ವಿಗ್ರಹವಾಗಿದೆ. ಬನವಾಸಿಯಲ್ಲಿ ಭೂಶೋಧನೆ ನಡೆಸಿದರೆ ಬೌದ್ಧಕಾಲದ ಪುರಾತನ ಅವಶೇಷಗಳು ದೊರೆಯಬಹುದು.

ಚುಟುಕುಲದ ಶಾತಕರ್ಣಿಗಳ ಅನಂತರ ಕದಂಬರ ರಾಜಧಾನಿಯಾಗುವ ಭಾಗ್ಯವು ಈ ಊರಿಗೆ ಒದಗಿತು. ಕದಂಬರ ಕಾಲದಿಂದ ಜಯಂತಿ, ವೈಜಯಂತಿ ಎಂಬ ನಾಮಾಂತರದಿಂದ ಈ ಊರು ಪ್ರಸಿದ್ಧಿ ಪಡೆಯಿತು. ಕದಂಬರು ಬನವಾಸಿಯ ಶ್ರೀ ಮಧುಕೇಶ್ವರದೇವನ ಭಕ್ತರು. ಈಚೆಯ ಅವರ ಶಾಸನಗಳಲ್ಲಿ " ಜಯಂತಿ ಮಧುಕೇಶ್ವರ ದೇವಲಬ್ಧ ವರಪ್ರಸಾದ" ಎಂಬುದಾಗಿ ವರ್ಣನೆ ಬರುತ್ತದೆ.

ಶ್ರೀ ಮಧುಕೇಶ್ವರನು ಬನವಾಸಿಯ ಅಧಿಷ್ಠಾನ ದೈವತ. ಮಧುಕೇಶ್ವರನ ವಿಶಾಲ ದೇವಾಲಯವು ಐತಿಹಾಸಿಕ ಯಾತ್ರಿಕನಿಗೆ ಆಕರ್ಷಣೆ ನೀಡುವ ಮುಖ್ಯವಸ್ತು. ಇಲ್ಲಿಯ ಕಲೆಯ ಸೊಬಗು ರಮಣೀಯವಾಗಿದೆ. ದೇವಾಲಯವು ಪ್ರಾಚೀನವಾಗಿದ್ದು ಕಾಲಕಾಲಕ್ಕೆ ಜೀರ್ಣೋದ್ಧಾರ, ನವನಿರ್ಮಾಣಗಳು ನಡೆದಂತಿದೆ. ಪೌರಾಣಿಕ ಆಖ್ಯಾಯಿಕೆಯಂತೆ ವಿಷ್ಣು ಮಧುದೈತ್ಯನನ್ನು ಸಂಹರಿಸಿ ಈ ಸ್ಥಳದಲ್ಲಿ ಲಿಂಗಪ್ರತಿಷ್ಠೆ ಮಾಡಿದನು. ಅದುವೇ ಮಧುಕೇಶ್ವರ ಲಿಂಗ; ಇಲ್ಲಿಯ ಮೂಲದೈವತ. ದೇವಾಲಯದಲ್ಲಿ ಸಂಹಾರಮೂರ್ತಿ ವಿಷ್ಣುವಿನ ವಿಗ್ರಹವಿದೆ. ಆತನು ಧರಿಸಿದ ಚಕ್ರದ ಭಂಗಿ ಸಾಮಾನ್ಯವಾಗಿರದೆ, ಒಂದು ವಿಶಿಷ್ಟ ರೀತಿಯದಿದೆ. ಇದಕ್ಕೆ ಪ್ರಯೋಗ ಮುದ್ರೆ ಎಂಬ ಹೆಸರು; ಚಕ್ರದ ಮೊನೆ ನೇರವಾಗಿ ಚಲಿಸಲು ಅಣಿಯಾದಂತಿದೆ.

ಕದಂಬರ ಆಳಿಕೆಯಲ್ಲಿ ಮಾತ್ರವಲ್ಲ, ಈಚೆಯ ಚಾಲುಕ್ಯರ, ವಿಜಯನಗರದ ರಾಜರ, ಅನಂತರ ಇದೇ ಪ್ರದೇಶದಲ್ಲಿ ಊರ್ಜಿತರಾದ ಸ್ವಾದಿಯ ಅರಸರ ಕಾಲದಲ್ಲಿ ಈ ಸ್ಥಳವು ಮಾನ್ಯತೆಯನ್ನು ಪಡೆಯಿತು. ಈ ಮಾತಿಗೆ ಅನೇಕ ಶಾಸನಗಳು ಸಾಕ್ಷಿಯಾಗಿನಿಂತಿವೆ. ಸುಪ್ರಸಿದ್ಧ ಚಾಲುಕ್ಯ ಚಕ್ರವರ್ತಿ ಆರನೆಯ ವಿಕ್ರಮಾದಿತ್ಯನ ಹಲವಾರು ಶಾಸನಗಳಲ್ಲಿ ಆತನು ಈ ನಗರಿಯಿಂದ ರಾಜ್ಯಭಾರ ಮಾಡುತ್ತಿದ್ದನೆಂದು ಉಕ್ತವಾಗಿರುವುದನ್ನು ನೋಡಿದರೆ ಈ ಊರು ಆತನಿಗೆ ಪ್ರೀತ್ಯಾಸ್ಪದವಾಗಿದ್ದಿತೆಂದು ತೋರುತ್ತದೆ. ಸ್ವಾದಿಯ ರಘುನಾಥ ನಾಯಕನು ಮಧುಕೇಶ್ವರನ ವಸಂತೋತ್ಸವದಲ್ಲಿ ಉಪಯೋಗಿಸಲೆಂದು ಮಾಡಿಸಿಕೊಟ್ಟ ಕಲ್ಲು ಮಂಚವು ಮನೋಹರವಾಗಿದ್ದು ಸಂದರ್ಶಕರ ಕುತೂಹಲವನ್ನು ಕೆರಳಿಸುತ್ತದೆ.

## ಬಾದಾಮಿ

ಗಜ ತುರಗ ರಥ ಪದಾತಿಗಳ ಸಂಚಲನ, ವೀರ ಯೋಧರ ವಿಜಯೋದ್ಗಾರ, ರಾಜಾಸ್ಥಾನದಲ್ಲಿನ ಗಭೀರ ಸಂವಾದ, ಚಕ್ರವರ್ತಿಗಳ ಮಹಾಘೋಷಣೆ ವಿದ್ವದ್‌ಗೋಷ್ಠಿ, ಕಲಾಸಂಮೇಲನ; ಸಹಸ್ರಾರು ವರ್ಷಗಳ ಆಚೆಯ ಇಂತಹ ನೂರಾರು ಸಂನಿವೇಶಗಳ ಚಲನಚಿತ್ರಗಳು ಭಾರತೀಯ ಚರಿತ್ರೆಯಲ್ಲಿ ಖ್ಯಾತಿವೆತ್ತ ಈ ಮಹಾನಗರವನ್ನು ಸಮೀಪಿಸಿದಂತೆ ಸಂದರ್ಶಕನ ಹೃದಯರಂಗದಲ್ಲಿ ನಾಟ್ಯವಾಡಲಾರಂಭಿಸುತ್ತವೆ. ಬಾದಾಮಿ ವಿಜಾಪುರ ಜಿಲ್ಲೆಯಲ್ಲಿ ತಾಲೂಕಿನ ಮುಖ್ಯಸ್ಥಳ.

ಪ್ರಕೃತಿದೇವಿ ಪ್ರಸನ್ನಳಾದಳು ಬಾದಾಮಿಯ ಮೇಲೆ. ಗಿರಿರಾಜಿಯ ಅಭೇದ್ಯತೆ, ದರೀಕಂದರಗಳ ಸುರಕ್ಷೆಯ ವರವನ್ನು ದಯಪಾಲಿಸಿದಳು. ಭದ್ರತೆಯೇ ಮೂರ್ತಿವೆತ್ತು ಭವ್ಯತೆಯೇ ರೂಪುಗೊಂಡು ಸುತ್ತುವರಿದು ಸಾಮ್ರಾಜ್ಯ ಸ್ಥಾಪಿಸಿದಂತಿದೆ ಬಾದಾಮಿಯ ಪರಿಸರ. ನಿಸರ್ಗದ ಈ ಸಾಮ್ರಾಜ್ಯವು ಪುರುಷಸಿಂಹರ ಸಾಮ್ರಾಜ್ಯದ ಮಾರ್ಗವನ್ನು ಸುಕರಗೊಳಿಸಿತು.

ಬಾದಾಮಿಯೆಂದರೆ ಚಲುಕ್ಯರು, ಚಲುಕ್ಯರೆಂದರೆ ಕರ್ನಾಟಕ. ಬಾದಾಮಿ ಚಲುಕ್ಯರ ರಾಜಧಾನಿ ಎಂದು ಉಸುರುವ ಸಾಮಾನ್ಯ ಶಬ್ದಸಮೂಹವು ಸಪ್ಪೆಯಾಗಿದೆ. ಬಾದಾಮಿ ಒಂದೂರಲ್ಲ, ಶಕ್ತಿ. ಬಾದಾಮಿ ಚಲುಕ್ಯರನ್ನು ಊರ್ಜಿತೋರ್ಜಿತ ಮಾಡಿತು, ಅಜೇಯರನ್ನಾಗಿಸಿತು. ಒಂದು ಜನಾಂಗವೆಂಬ ಚೈತನ್ಯವನ್ನು, ಮಹಾಜೀವನದ ಆದರ್ಶವನ್ನು, ಉನ್ನತ ವ್ಯಕ್ತಿತ್ವದ ಸಾಧನೆಯನ್ನು ಮೊದಲು ಬಾರಿ ಚಲುಕ್ಯರು ಕರ್ನಾಟಕಕ್ಕೆ ನೀಡಿದರು. ಕನ್ನಡ ಜನ, ಕನ್ನಡ ಕುಲ ಬಾದಾಮಿಯಿಂದ ಪಡೆದಷ್ಟು ಉಪಕಾರವನ್ನು ಬೇರಾವ ಪಟ್ಟಣದಿಂದಲೂ ಪಡೆದಿಲ್ಲ. ಕರ್ನಾಟಕದ ಘನತೆಯ ಮಹಾಸೌಧದ ಮೂಲಸ್ತಂಭ ಈ ವಾತಾಪಿನಗರ.

ಇಲ್ಲಿ ಕಾಲೂರಿದ ಒಂದನೆಯ ಪುಲಕೇಶಿ ಅಶ್ವಮೇಧ ಯಾಗವನ್ನು ನೆರವೇರಿಸಿ ಚಕ್ರಾಧಿಪತ್ಯದ



ಬಾದಾಮಿ ಕೋಟೆ ಮತ್ತು ಭೂತನಾಥೇಶ್ವರ ಮಂದಿರಗಳ ದೃಶ್ಯ

ಬೀಜಾರೋಪಣ ಮಾಡಿದನು. ಆತನ ಮೊಮ್ಮಗ ಪರಮೇಶ್ವರ ಎರಡನೆಯ ಪುಲಕೇಶಿ ಉತ್ತರ ದಕ್ಷಿಣ ಭಾರತದಲ್ಲಿ ವಿಜಯಗಳನ್ನು ಸಂಪಾದಿಸಿ ದಿಗಂತ ಕೀರ್ತಿಗೆ ಒಡೆಯನಾದನು. ಅನಂತರ ಒಂದನೆಯ ವಿಕ್ರಮಾದಿತ್ಯ, ವಿನಯಾದಿತ್ಯ, ವಿಜಯಾದಿತ್ಯ, ಎರಡನೆಯ ವಿಕ್ರಮಾದಿತ್ಯ ಇವರು ತಮ್ಮ ಸಾಹಸ ಪರಾಕ್ರಮಗಳಿಂದ ಕರ್ನಾಟಕದ ಜಯಭೇರಿ ನಿರಂತರ ಮೊಳಗುವಂತೆ ಮಾಡಿದರು.

ಬಾದಾಮಿಯನ್ನು ನಿಧಾನವಾಗಿ ನೋಡುವುದು ಉತ್ತಮ. ಪ್ರಾಚೀನತೆಯಲ್ಲಿಯೂ ವೈವಿಧ್ಯದಲ್ಲಿಯೂ ಇಲ್ಲಿಯ ಚಾರಿತ್ರಿಕ ಅವಶೇಷಗಳು ಮಹತ್ತರವಾಗಿವೆ. ನಮ್ಮ ಚರಿತ್ರೆಯಲ್ಲಿ ಹಂಪೆಯ ವೈಭವ ಒಂದು ಪರಿಯಾದರೆ ಬಾದಾಮಿಯ ಮೇಲ್ಮೆ ಇನ್ನೊಂದು ವಿಧ. ದುರ್ಭೇದ್ಯವಾದ ಪ್ರಾಚೀನ ಗಿರಿ ದುರ್ಗವೆಂದು ಬಾದಾಮಿಯ ಕೋಟೆ ಲಕ್ಷಣೀಯವಾಗಿದೆ. ಇದರ ವಿನ್ಯಾಸ, ರಚನೆ ಅಭ್ಯಾಸಾರ್ಹವಾದುವು. ಚಾಲುಕ್ಯರಿಂದ ವಿಜಯನಗರದ ರಾಜರ ವರೆಗೆ ಈ ಕೋಟೆ ಆಗಾಗ ಪುನರುಜ್ಜೀವನಗೊಂಡಿದೆ.

ಕೋಟೆಯ ಅನಂತರ ಮುಖ್ಯವಾಗಿ ನೋಡತಕ್ಕಂತಹವು ಕಲಾನಿರ್ಮಾಣಗಳು. ಇವು ನಾಲ್ಕುಗೆಯಾಗಿವೆ:- ಗುಹಾಂತರ್ದೇವಾಲಯಗಳು, ಕಟ್ಟಿದ ಗುಡಿಗಳು, ಮೂರ್ತಿಶಿಲ್ಪ, ವರ್ಣಚಿತ್ರ. ಬೆಟ್ಟವು ಮೇಣದಂತೆ ಬಸಿದು ಬಸದಿಯಾಗಿ, ಕಲೆಯ ವಾಸಸ್ಥಾನವಾಗಿ ನಿಂತಿರುವ ಮೇಣಬಸದಿ, ಕಲ್ಲಿನ ಅಥವಾ ಗುಹಾಂತರ್ದೇವಾಲಯಗಳು ಕರ್ನಾಟಕದ ಅತ್ಯಂತ ಪ್ರಾಚೀನ ಶಿಲ್ಪಕಲೆಯ ಅದ್ಭುತ ನಿದರ್ಶನವಾಗಿವೆ. ಜಂಬುಲಿಂಗಮಂದಿರ ಹಾಗೂ ಮಾಲಗಿತ್ತಿ ಶಿವಾಲಯ, ಇವು ಕಟ್ಟಿದ ಗುಡಿಗಳ ಪ್ರಾಚೀನ ಉದಾಹರಣೆಗಳು. ಮಲ್ಲಿಕಾರ್ಜುನ ದೇವಾಲಯ, ಭೂತನಾಥ ಆಲಯಗಳು, ವಿರುಪಾಕ್ಷ ಮಂದಿರ, ಇವು ಈಚೆಯ ಕಲ್ಯಾಣ ಚಾಲುಕ್ಯ ಕಾಲದಲ್ಲಿ ರಚಿತವಾದ ಪ್ರೇಕ್ಷಣೀಯ ಕಟ್ಟಡಗಳು. ಮೇಣಬಸದಿಗಳಲ್ಲಿಯೂ ಕಟ್ಟಿದ ಗುಡಿಗಳಲ್ಲಿಯೂ ವಿಪುಲವಾಗಿ ಗೋಚರಿಸುವ ವಿಗ್ರಹಗಳು ತಮ್ಮ ಆಕಾರವಿಶೇಷಗಳಿಂದ ಮೂರ್ತಿಶಿಲ್ಪವೇತ್ತರ ನಿರಂತರ ಕುತೂಹಲವನ್ನು ಕೆರಳಿಸುತ್ತವೆ. ಎರಡನೆಯ ಮತ್ತು ಮೂರನೆಯ ಗವಿಗಳಲ್ಲಿ ಅಸ್ಫುಟವಾದರೂ ಆಕರ್ಷಣೀಯವಾದ ಅತಿ ಪ್ರಾಚೀನ ವರ್ಣಚಿತ್ರ ಕಲೆಯ ಅವಶೇಷಗಳು ಅವಲೋಕನೀಯವಾಗಿವೆ. ಕರ್ನಾಟಕಸಂಗೀತವನ್ನು ವಾತಾಪಿಗಣಪತಿಯ ಸ್ತುತಿಯಿಂದ ಪ್ರಾರಂಭಿಸುವುದನ್ನು ನೋಡಿದರೆ ಬಾದಾಮಿ ಸಂಗೀತಕ್ಕೂ ತವರಾಗಿತ್ತೆಂದು ತೋರುತ್ತದೆ.

ಎರಡನೆಯ ಶತಮಾನದ ಗ್ರೀಕ ಲೇಖಕ ಟಾಲೆಮಿ ಬಾದಾಮಿಯನ್ನು 'ಬದಮೊಯಿ' ಎಂದು ಹೆಸರಿಸಿದ್ದಾನೆ. ಈ ಸ್ಥಳಕ್ಕೂ ವಾತಾಪಿ ದೈತ್ಯನಿಗೂ ಸಂಬಂಧವನ್ನು ಸ್ಥಾಪಿಸುವ ಪೌರಾಣಿಕ ಐತಿಹ್ಯವು ಅದಕ್ಕೂ ಪುರಾತನವಾಗಿರಬೇಕು. ಬೇರೊಂದು ವಿಧಾನದಿಂದ 'ಬಾದಾವಿ' ಈ ಹೆಸರಿನ ನಿಷ್ಪತ್ತಿಯನ್ನು ಸಾಧಿಸಲಾಗದ ಕಾರಣಕ್ಕಾಗಿ ಈ ಗ್ರಾಮದ ಮೂಲ ಹೆಸರು 'ವಾತಾಪಿ', ಅನಂತರ ಅದರ ಕನ್ನಡ ತದ್ಭವ 'ಬಾದಾವಿ', ಮುಂದೆ 'ಬಾದಾಮಿ' ಎಂಬೀ ಕ್ರಮಪರಿವರ್ತನ ಯುಕ್ತವಾಗಿ ತೋರುತ್ತದೆ. ಹೀಗೆ ಮೂಲ ಸಂಸ್ಕೃತದಿಂದ ಕನ್ನಡಕ್ಕೆ ತಿರುಗಿದ ಗ್ರಾಮನಾಮಗಳು ಬೇಕಾದಷ್ಟಿವೆ. ಉದಾಹರಣೆಗೆ ವನವಾಸ, ಮಾನ್ಯಖೇಟ, ಪಲಾಶಿಕಾ (ಹಲಶಿ), ಕಲ್ಯಾಣ, ಇತ್ಯಾದಿ.

ಬಾದಾಮಿಗೆ ಹೋದ ಯಾತ್ರಿಕನು ಅಲ್ಲಿಂದ ಹತ್ತಿರಿರುವ ಬನಶಂಕರಿ, ಮಹಾಕೂಟ, ಪಟ್ಟದಕಲ್, ಐಹೊಳೆ ಈ ಸ್ಥಳಗಳನ್ನು ಸಂದರ್ಶಿಸುವುದು ಮೇಲು. ಇವಾದರೂ ತಮ್ಮ ತಮ್ಮ ಪರಿಯಲ್ಲಿ ಚರಿತ್ರೆ, ಕಲೆ ಮತ್ತು ಧಾರ್ಮಿಕ ದೃಷ್ಟಿಯಿಂದ ಪ್ರೇಕ್ಷಣೀಯವಾಗಿವೆ.

## ಮಳಖೇಡ

ಈಗೊಂದು ಕುಗ್ರಾಮದಂತೆ ಗುಲಬರ್ಗ ಜಿಲ್ಲೆಯ ಸೇಡಂ ತಾಲೂಕಿನಲ್ಲಿ ಸೇರ್ಪಡೆಯಾಗಿರುವ ಈ ಊರು ಹಿಂದೆ ಭಾರತದಲ್ಲಿ ಮಾತ್ರವಲ್ಲ, ಪ್ರಪಂಚದಲ್ಲಿ ಖ್ಯಾತಿವೆತ್ತ ಬಲಾಢ್ಯ ರಾಷ್ಟ್ರಕೂಟ ಸಾಮ್ರಾಜ್ಯದ ಜೀವನಾಡಿಯಾಗಿ ಸ್ಫುರಿಸಿತು ಎಂದು ಹೇಳಿದರೆ ನಂಬಲಿಕ್ಕೆ ಕಷ್ಟವಾಗುತ್ತದೆ. ಏಕೆಂದರೆ ಇಲ್ಲಿ ಪ್ರಾಚೀನ ಅವಶೇಷಗಳು ವಿರಲವಾಗಿವೆ. ಎಲ್ಲೋರದ ಪ್ರಸಿದ್ಧಿಯನ್ನು ಬದಿಗಿರಿಸಿದರೆ ರಾಷ್ಟ್ರಕೂಟರು ಚಲುಕ್ಯರಂತೆ ಕಟ್ಟುಗಾರರೆಂದು ಹೆಸರು ಗಳಿಸಿಲ್ಲ. ಅವಶೇಷಗಳ ಅಭಾವಕ್ಕೆ ಇದೊಂದು ಕಾರಣವನ್ನು ಸೂಚಿಸಬಹುದು. ಆ ಮೇಲೆ ಅರಿಗಳ ಉಪಟಳ; ಅದಂತೂ ಇದ್ದೇ ಇದೆ.

ರಾಷ್ಟ್ರಕೂಟರ ನಾಮಾಂಕಿತ ರಾಜಧಾನಿ ಮಾನ್ಯಖೇಟವೇ ಇಂದಿನ ಮಳಖೇಡವೆಂದು ಸ್ಥಳೀಯ ಐತಿಹ್ಯಗಳು ಬಲವಾಗಿ ಪ್ರತಿಪಾದಿಸುತ್ತವೆ. ಈ ಐತಿಹ್ಯದಂತೆ ಮಳಖೇಡದಲ್ಲಿ ಆ ರಾಜರ ಪ್ರಾಸಾದಗಳು, ಸೇಡಂದಲ್ಲಿ ಶಾಸಕರ ಕೇಂದ್ರ ಕಾರ್ಯಾಲಯ, ನೀಲಹಳ್ಳಿ ಕೊಂಕನಳ್ಳಿಯಲ್ಲಿ ಬೊಕ್ಕಸ, ದಂಡೋಲಿಯಲ್ಲಿ ಸೇನಾಶಿಬಿರ ಇದ್ದುವು. ಇವು ಮಳಖೇಡದ ಪಕ್ಕದ ಗ್ರಾಮಗಳು. ಈ ಲೆಕ್ಕದಂತೆ ಆ ನಗರಿಯ ವಿಸ್ತೀರ್ಣ ೧೦ ಮೈಲಿಯಷ್ಟು ಆಗುತ್ತದೆ. ಜೈನ ಐತಿಹ್ಯಗಳು ಮೇಲಿನ ಅಭಿಪ್ರಾಯವನ್ನು ಅನುಮೋದಿಸುತ್ತವೆ.

ಮಳಖೇಡದ ಪಾಳಿನಲ್ಲಿ ನಿಂತು ರಾಷ್ಟ್ರಕೂಟರ ಭವ್ಯ ಚರಿತ್ರೆಯನ್ನು ನೆನೆದರೆ ಮೈ ನವಿರೇಳುತ್ತದೆ. ಈ ವಂಶದ ಧ್ರುವರಾಜ, ಆತನ ಮಗ ಮುಮ್ಮಡಿ ಗೋವಿಂದ, ಮುಂದೆ ಇಂದ್ರರಾಜ, ಇವರು ಜೈತ್ರಯಾತ್ರೆಗಳನ್ನು ಕೈಕೊಂಡು ಉತ್ತರ ಭಾರತದ ಚಕ್ರಾಧಿಪತ್ಯಕ್ಕಾಗಿ ಹೋರಾಡುತ್ತಿದ್ದ ಅತಿರಥ ಮಹಾರಥಿಗಳನ್ನು ನೆಲಕ್ಕುರುಳಿಸಿ ಎಂಟರಿಂದ ಹತ್ತನೆಯ ಶತಮಾನಗಳ ಅವಧಿಯಲ್ಲಿ ಒಂದು ನೂರು ವರ್ಷಗಳಿಗಿಂತ ಅಧಿಕಕಾಲ ಭಾರತದರಾಜಕೀಯದಲ್ಲಿ ಆಸೇತು ಹಿಮಾಚಲ ತಮ್ಮ ಅದ್ವಿತೀಯ ಪ್ರಭಾವವನ್ನು ಬೀರಿದರು. ಇಂತಹ ವಿಜಯಗಳಿಂದ ರಾಷ್ಟ್ರಕೂಟ ಚಕ್ರಾಧಿಪತ್ಯವು ಅಂದಿನ ಪ್ರಪಂಚದಲ್ಲಿ ಅಗ್ರಪಂಕ್ತಿಗೆ ಅರ್ಹವಾದ ನಾಲ್ಕು ಮಹಾ ಸಾಮ್ರಾಜ್ಯಗಳಲ್ಲಿ ಒಂದಾಗಿ ಕೀರ್ತಿವೆತ್ತಿತು.

ಚಾರಿತ್ರಿಕ ಸ್ಥಳಗಳ ಸಂದರ್ಶನವು ಅಲ್ಲಿನ ಕಲ್ಲು ಮಣ್ಣುಗಳ ಆಕಾರದ ಸಮೀಕ್ಷೆಯಾಗಿರದೆ, ಆ ಭೂಮಿಯಲ್ಲಿ ಚೈತನ್ಯದ ಚಿಲುಮೆಯಂತೆ ಹೊ… ಹೊಮ್ಮಿದ ಚಾರಿತ್ರಿಕ ಮಹಾವ್ಯಕ್ತಿಗಳ ಅಂತ… ಸ್ಫೂರ್ತಿಯ ಸಾಕ್ಷಾತ್ಕಾರವಾಗಿದೆ, ಎಂಬ ಮಾತ… ಮಳಖೇಡದಲ್ಲಿ ಮನವರಿಕೆಯಾದಷ್ಟು ಬೇರೆ ಕಡೆ ಆಗುವುದಿಲ್ಲ.



ಕಲ್ಯಾಣ : ಅಲ್ಲಮಪ್ರಭುದೇವರ ಸ್ಮಾರಕ ಮಂದಿರ

## ಕಲ್ಯಾಣ

ಭಾರತದ ಚಕ್ರೇಶ್ವರರಲ್ಲಿ ಅಗ್ರೇಸರರಾ…

ಚಾಲುಕ್ಯ ನರೇಂದ್ರರ ಮಹಾ ರಾಜಧಾನಿ ಮಹಾಕವಿ ಬಿಲ್ಹಣ, ಜ್ಞಾನಿವರ ವಿಜ್ಞಾನೇಶ್ವರ, ಪಂಡಿತರಾಜ ಸೋಮೇಶ್ವರಾದಿ ಗೀರ್ವಾಣ ಶಾರದೋಪಾಸಕರ ಸಾಧನಭೂಮಿ; ಕರ್ನಾಟಕ ಶಿಲ್ಪಕಲೆಯ ಪುರಸ್ಕಾರ ಸದನ; ಕನ್ನಡ ಸರಸತಿಯ ವಿಲಾಸಮಂದಿರ; ವಚನಕಾರ ವಚನಕಾರ್ತಿಯರ ಸ್ಫೂರ್ತಿಸ್ಥಾನ; ಗುಹಾತ್ಮಾ ಬಸವೇಶ್ವರರ ಅವತಾರಕ್ಷೇತ್ರ; ಹೀಗೆ ಒಂದೇ, ಎರಡೇ ಹಲವು ಪರಿಯಿಂದ ಪುಣ್ಯಸ್ಥಳವಾಗಿದೆ ಬೀದರ ಜಿಲ್ಲೆಯ ಹುಮನಾಬಾದ ತಾಲೂಕಿನಲ್ಲಿರುವ ಈ ಕಲ್ಯಾಣ ನಗರ.

ಕಲ್ಯಾಣದಲ್ಲಿ ಚಾಲುಕ್ಯಯುಗದ ರಾಜಕೀಯ ಅವಶೇಷಗಳು ಸಿಕ್ಕುವದಿಲ್ಲ. ವಿಧ್ವಂಸನ ಸತ್ರದಲ್ಲಿ ಹಾಳಾಗಿ ಹೋಗಿವೆ. ಅಳಿದುಳಿದುವು ಅಲ್ಲಲ್ಲಿ ಹುದುಗಿಕೊಂಡಿವೆ. ಅದಂತಿರಲಿ; ಅರ್ಧಮರ್ಧವೇ ಆಗಲಿ, ಒಂದು ದೇವಾಲಯವೂ ಸಿಕ್ಕುವುದಿಲ್ಲ. ದೇವಾಲಯದ ಬಿಡಿ ಅವಯವಗಳೂ ವಿಗ್ರಹಗಳೂ ಮಾತ್ರ ಚದರಿಹೋಗಿ ಅಲ್ಲಲ್ಲಿ ದೊರೆಯುತ್ತವೆ. ಇಂಥ ಕೆಲವನ್ನು ಆಯ್ದುತಂದು ಕೋಟೆಯ ಆವಾರದಲ್ಲಿ ಇರಿಸಿದ್ದಾರೆ. ಇಂದಿನ ಬಸವಭವನದ ಪಕ್ಕದಲ್ಲಿ ಬಿಜ್ಜಳನ ಅರಮನೆ ಇತ್ತೆಂದು ಹೇಳುವರು. ಅದೀಗ ಒಂದು ಬರಿ ಬಯಲು ದಿನ್ನೆ.

ಕಲ್ಯಾಣದ ನೆರೆಯ ಗ್ರಾಮ ನಾರಾಯಣಪುರದಲ್ಲಿ ಚಾಲುಕ್ಯಕಾಲದ ಎರಡು ರಮ್ಯ ದೇವಾಲಯಗಳು ಬೀಳು ದಸೆಯಲ್ಲಿ ಬಾಳಿವೆ. ಕಲ್ಯಾಣದಲ್ಲಿಯೂ ಪಕ್ಕದ ಪ್ರತಾಪಪುರದಲ್ಲಿಯೂ ಲಕ್ಷ್ಯಪೂರ್ವಕ ಅವಲೋಕಿಸಿದರೆ ಪೌರಾಣಿಕ ದೇವ ದಾನವರ ಸುಂದರ ವಿಗ್ರಹಗಳು ಕಡಿಮೆಯಲ್ಲದಷ್ಟು ದೊರೆಯುತ್ತವೆ. ಕಲ್ಯಾಣದ ಶಾಸನಗಳಲ್ಲಿ ಹಲವಾರು ದೇವಾಲಯಗಳ ನಿರ್ದೇಶಗಳು ಸಿಕ್ಕುತ್ತವೆ. ಇದೆಲ್ಲವನ್ನು ಪರಿಶೀಲಿಸಿದರೆ ಈ ಊರುಗಳೆಲ್ಲ ಚಾಲುಕ್ಯ ಶಿಲ್ಪಕಲೆಯ ಸೊಬಗಿನಿಂದ ರಾರಾಜಿಸುವ ಅನೇಕಾನೇಕ ದೇವಾಲಯಗಳಿಂದ ಅಲಂಕೃತವಾಗಿದ್ದುವು ಎಂಬ ವಿಷಯ ಸ್ಫುಟವಾಗುತ್ತದೆ.

ಕಲ್ಯಾಣದಲ್ಲಿ ವೀರಶೈವ ಕ್ರಾಂತಿಗೆ ಸಂಬಂಧಿಸಿದ ಸ್ಮಾರಕಗಳು— ಗವಿ ಗದ್ದುಗೆಗಳು, ಮಠ ಮಂದಿರಗಳು, ಇತ್ಯಾದಿ— ವಿಪುಲವಾಗಿ ದೊರಕುತ್ತವೆ. ಇವುಗಳ ವೀಕ್ಷಣದಿಂದ ಬಸವೇಶ್ವರ ಮತ್ತು ಆತನ ಸಮಸಾಮಯಿಕರ ಕಾರ್ಯರಂಗದ ದೃಶ್ಯಗಳು ಕಣ್ಣ ಮುಂದೆ ಬಂದು ನಿಲ್ಲುತ್ತವೆ. ಉದಾಹರಣೆಯಾಗಿ, ಪ್ರಭುದೇವರ ಗದ್ದುಗೆ, ಬಸವಣ್ಣನ ಮಹಮನೆಯೆಂಬ ಗವಿ, ಅಕ್ಕನಾಗಮ್ಮನ ಗವಿ, ಬಸವಣ್ಣನ ದಾನಶಾಲೆಯಾದ ಪರುಷಗಟ್ಟೆ, ರುದ್ರಮುನಿ ಗವಿ, ಶಿವಾನುಭವ ಮಂಟಪದ ಸ್ಥಳ, ಮಡಿವಾಳ ಮಾಚಿದೇವನ ಸ್ಮಾರಕ ಮಂದಿರ, ಇವು ಕಲ್ಯಾಣದ ಯಾತ್ರಿಕನನ್ನು ಪುಲಕಿತಗೊಳಿಸುವವು. ಈ ಸಂದರ್ಭದಲ್ಲಿ, ಎಂಟು ಮೈಲಿ ದೂರದಲ್ಲಿರುವ ಹರಳಯ್ಯನ ಗವಿ, ಹುಮನಬಾಬಾದ ಬಳಿಯ ಮೊಳಿಗೆ ಮಾರಯ್ಯನ ಗವಿ, ಇವಾದರೂ ಸಂದರ್ಶಕನ ಕಕ್ಷೆಯಲ್ಲಿ ಬರುವವು.



ಕೊಪ್ಪಳ: ಅಶೋಕನ ಶಾಸನವಿದ್ದ ಗುಡ್ಡದ ಭಾಗ

### ಕೊಪ್ಪಳ

ಮಾನವನು ಆತ್ಮಾಶೆಯನ್ನು ತ್ಯಜಿಸಿ, ಪಾಶವೀ ವೃತ್ತಿಯಿಂದ ಪರಾಙ್ಮುಖನಾಗುವ ವರೆಗೆ ಕ್ರಾಂತಿಕಾರಕ ಯುದ್ಧಗಳು ರಾಷ್ಟ್ರಗಳ, ಜನಾಂಗಗಳ ಚರಿತ್ರೆಯಲ್ಲಿ ಪ್ರಮುಖಸ್ಥಾನವನ್ನು ಪಡೆದಿರಬೇಕಾಗುತ್ತದೆ. ಕರ್ನಾಟಕದಲ್ಲಿ ಅನೇಕ ಘನ ಘೋರ ಸಂಗ್ರಾಮಗಳು ನಡೆದುಹೋಗಿದ್ದರೂ ಅವುಗಳ ಸ್ಥಲ ಕಾಲಗಳನ್ನು ನಿಶ್ಚಿತವಾಗಿ ಗೊತ್ತುಪಡಿಸುವ ಕಾರ್ಯದಲ್ಲಿ ಅನ್ವೇಷಕರು ಸಾಕಷ್ಟು ಯಶಸ್ವಿಯಾಗಿಲ್ಲ. ಉದಾಹರಣೆಯಾಗಿ, ರಾಯಚೂರು ಜಿಲ್ಲೆಯಲ್ಲಿ ತಾಲೂಕಿನ ಸ್ಥಳವಾದ ಕೊಪ್ಪಳ ಒಂದು ಮಹಾ ಯುದ್ಧದ ರಣಭೂಮಿಯಾಗಿದ್ದಿತು ಎಂಬ ವಿಷಯ ಎಷ್ಟು ಜನರಿಗೆ ಗೊತ್ತಿದೆ?

ಪಲ್ಲವರು, ಬಾದಾಮಿಯ ಚಾಲುಕ್ಯರು ಇವರ ಕಾಲದಿಂದ ಕರ್ನಾಟಕ, ತಮಿಳ.ದೇಶಗಳ ಮಧ್ಯದಲ್ಲಿ ಕಡು ವೈರವು ನಡೆದುಕೊಂಡು ಬಂದಿತ್ತು. ಅದು ಚೋಳರ, ಕಲ್ಯಾಣಚಾಲುಕ್ಯರ ಕಾಲದಲ್ಲಿ ಉಗ್ರಸ್ವರೂಪ ತಳೆಯಿತು. ಚೋಳರು ಎಡೆಬಿಡದೆ ದಂಡೆತ್ತಿಬಂದು ಕರ್ನಾಟಕವನ್ನು ರಸಾತಳಕ್ಕಿಳಿಸಲು ಹೆಣಗಾಡಿದರು. ಚಾಲುಕ್ಯರು ಚೋಳರ ದಾಳಿಗಳನ್ನು ಹಿಮ್ಮೆಟ್ಟಿಸಿ ಹಲವು ಗಂಡಾಂತರಗಳಿಂದ ಕನ್ನಡನಾಡನ್ನು ಕಾಪಾಡಿದರು. ಚೋಳ ರಾಜಾಧಿರಾಜನು ಚಾಲುಕ್ಯ ಒಂದನೆಯ ಸೋಮೇಶ್ವರನನ್ನು ಕೆಣಕಿದನು. ಈತನ ರಾಯಭಾರಿಗಳನ್ನು ಅವಮಾನಗೊಳಿಸಿ ರಣಕಹಳೆ ಊದಿದನು.

ಸೋಮೇಶ್ವರನು ಚೋಳರು ತುಂಗಭದ್ರೆಯನ್ನು ದಾಟಿ ಕರ್ನಾಟಕದ ಗಡಿಯಲ್ಲಿ ಕಾಲಿಕ್ಕುವುದನ್ನು ಇದಿರುನೋಡುತ್ತಿದ್ದನು. ಅಪಾರ ಸೈನ್ಯಗಳೆರಡು ಕೊಪ್ಪಳದ ಪಕ್ಕದಲ್ಲಿ ಹರಿಯುವ ಹಿರೇಹಳ್ಳದ ಬಯಲಲ್ಲಿ ಒಂದಕ್ಕೊಂದು ತಾಕಲಾಡಿದವು. ಸಂಗ್ರಾಮವು ಅತಿಘೋರವಾಗಿ ಮುಂದುವರಿಯಿತು. ಕೊನೆಗೆ ಸೋಮೇಶ್ವರನು ರಭಸದಿಂದ ಮುನ್ನುಗ್ಗಿ ಗಜಾರೂಢನಾದ ರಾಜಾಧಿರಾಜನನ್ನು ಇರಿದು ಉರುಳಿಸಿದನು.

ಕ್ರಿ. ಶ. ೧೦೫೪ ರಲ್ಲಿ ಸಂಭವಿಸಿದ ಈ ಸಮರವು ಕರ್ನಾಟಕದ, ಮಾತ್ರವಲ್ಲ, ದಕ್ಷಿಣಭಾರತದ ಚರಿತ್ರೆಯಲ್ಲಿ ಚಿರಸ್ಮರಣೀಯವಾಗಿದೆ. ಕೊಪ್ಪಳದ ರಣರಂಗಭೈರವಿ ಚೋಳರಿಗೆ ಉನ್ಮಾದದ ಕಹಿಫಲಗಳನ್ನು ಉಣಿಸಿದಳು. ಅವರ ಮೂರ್ಧಾಭಿಷಿಕ್ತ ಮಹಾರಾಜನ ಆಹುತಿ ತೆಗೆದುಕೊಂಡಳು. ಕನ್ನಡ ಜನವನ್ನು ಮೇಲಕ್ಕೆತ್ತಿದಳು.

ಇತಿಹಾಸದ ಯಾತ್ರಾರ್ಥಿ ಕೊಪ್ಪಳದ ಗುಡ್ಡದ ಸಾಲುಗಳಲ್ಲಿ ಸಂಚರಿಸುತ್ತ ಈ ಸಂಗ್ರಾಮದ ದೃಶ್ಯಗಳನ್ನು ತನ್ನ ಮನೋಭೂಮಿಕೆಯಲ್ಲಿ ಚಿತ್ರಿಸಿಕೊಳ್ಳಬಹುದು. ಯುದ್ಧದ ಗೊಡವೆ ತನಗೇಕೆ ಎನ್ನುವವನಿಗೆ ಅದೇ ಗಿರಿರಾಜಿಯಲ್ಲಿ ಶಾಂತಿಯ ನೆಲೆ, ತಪಸ್ಸಿನ ತಾಣಗಳು ಇದಿರಾಗುವವು. ಅದು ಹೇಗೆಂದರೆ ಒಂದು ಕಾಲದಲ್ಲಿ ಶ್ರವಣಬೆಳ್ಗೊಳದಂತೆ ಕೊಪ್ಪಳ ಜೈನರ ಪುಣ್ಯಕ್ಷೇತ್ರವಾಗಿತ್ತು. ಅದರ ಅವಶೇಷಗಳು ಅಲ್ಲಿ ಈಗಲೂ ಗೋಚರಿಸುವವು. ಕೊಪ್ಪಳದ ಗುಡ್ಡಗಳು ಅಶೋಕನ ಎರಡು ಶಾಸನಗಳಿಂದ ಅಲಂಕೃತವಾಗಿವೆ.

# ಕನ್ನಡ ಭಾಷಾ ಸಾಹಿತ್ಯಗಳ ಸೇವೆ

ಕನ್ನಡ ಪತ್ರಿಕೆಗಳಿಂದ ಅಥವಾ ಕನ್ನಡ ಪತ್ರಿಕಾಸಂಸ್ಥೆಯ ಮೂಲವಾಗಿ ಕನ್ನಡ ಭಾಷಾಭಿವೃದ್ಧಿಗೂ ಕನ್ನಡ ಸಾಹಿತ್ಯದ ಬೆಳವಣಿಗೆಗೂ ಏನಾದರೂ ಸಹಾಯವಾಗಿದೆಯೆ—ಎಂಬ ಪ್ರಶ್ನೆಗೆ 'ಆಗಿದೆ', 'ಆಗಿಲ್ಲ'—ಈ ರೀತಿಯಾಗಿ ಉತ್ತರಕೊಡುವುದು ಸರಿಯಲ್ಲ. ಕೊಂಚಮಟ್ಟಿಗೆ ವಿಚಾರಮಾಡಿ, ಸರಿಯಾದ ಕಾರಣಗಳನ್ನು ಮುಂದಿಟ್ಟು, 'ಉಪಕಾರವಾಗಿದೆ'; 'ಅಪಕಾರವಾಗಿದೆ'; 'ಉಪಕಾರವೂ ಇಲ್ಲ, ಅಪಕಾರವೂ ಇಲ್ಲ'—ಎಂಬದಾಗಿ ಹೇಳುವುದು ನ್ಯಾಯ, ಪ್ರಾಮಾಣಿಕತನ.

ಕನ್ನಡಭಾಷೆ ತನ್ನಷ್ಟಕ್ಕೆ ತಾನೆ ಬೆಳೆಯಲಿಲ್ಲ; ಕೃಷಿಯ ಫಲವಾಗಿ ಬೆಳವಣಿಗೆ ಹೊಂದಿದೆ. ಕನ್ನಡ ಸಾಹಿತ್ಯವಾದರೂ ನಾನಾ ಪ್ರಯೋಗಗಳ ಫಲ; ನಾನಾ ಕ್ರಿಯಾಪ್ರತಿಕ್ರಿಯೆಗಳ ಫಲ. ಯಾವ ಭಾಷೆಯ ಚರಿತ್ರೆಯನ್ನೇ ಓದಲಿ, ಯಾವ ಸಾಹಿತ್ಯದ ಚರಿತ್ರೆಯನ್ನೇ ನೋಡಲಿ, ಆ ಭಾಷೆಯ, ಆ ಸಾಹಿತ್ಯದ ಬೆಳವಣಿಗೆಗೆ ಕಾರಣಗಳು ಅನೇಕ. ಅವುಗಳಲ್ಲಿ ಪತ್ರಿಕೆಗಳೂ ಒಂದು ಕಾರಣ. ಕನ್ನಡ ನಾಡಿನಲ್ಲಿ ಪತ್ರಿಕೆಗಳ ಚರಿತ್ರೆ ಇತ್ತೀಚಿನದು. ಆ ಸಂಸ್ಥೆ ಆರಂಭವಾದುದೇ ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಲ್ಲಿ. ಈ ಅಲ್ಪ ಕಾಲಾವಧಿಯಲ್ಲಿ (ಸಾವಿರಾರು ವರ್ಷಗಳ ಕನ್ನಡಭಾಷಾ ಸಾಹಿತ್ಯಗಳ ಚರಿತ್ರೆಯೊಂದಿಗೆ ಹೋಲಿಸಿದಾಗ) ಕನ್ನಡ ಪತ್ರಿಕೆಗಳು ಕನ್ನಡ ಭಾಷೆಯನ್ನು ಬಳಸಿವೆ. ಲೇಖನಗಳನ್ನು ಬರೆದು, ಬರೆಸಿ, ಪ್ರಕಟಿಸಿವೆ, ಜ್ಞಾನ ಪ್ರಚಾರ ಮಾಡಿವೆ.

ಕನ್ನಡನಾಡಿನಲ್ಲಿ ಭಾಷೆ, ಸಾಹಿತ್ಯ, ಇತಿಹಾಸ, ಸಂಶೋಧನೆ, ಪ್ರಕಟನೆ,— ಈ ಕೆಲಸಗಳನ್ನೆಲ್ಲ ಆಧುನಿಕ ರೀತಿಯಲ್ಲಿ, ವ್ಯವಸಾಯ ಮಾಡಲಾರಂಭಿಸಿದವರು ಐರೋಪ್ಯರು, ಈಸಾಯಿ ಪಾದ್ರಿಗಳು. ಅವರು ಹಾಕಿಕೊಟ್ಟ ರೀತಿಯಲ್ಲೇ ವ್ಯವಸಾಯವನ್ನು ನಾನಾ ಕ್ಷೇತ್ರಗಳಲ್ಲಿ ದೇಶೀಯರು ಮುಂದುವರಿಸಿದರು. ವೃತ್ತಪತ್ರಿಕೆಗಳ ಮಾತನ್ನೆತ್ತಿದರೂ ಅಗ್ರತಾಂಬೂಲ ಅವರಿಗೇ ಸಲ್ಲಬೇಕು.

ಮಂಗಳೂರಲ್ಲಿ ಬಾಸೆಲ್ ಮಿಷನ್ನಿನವರು ಕನ್ನಡದಲ್ಲಿ ಮುದ್ರಣ ಕಲೆಯನ್ನು ಅಥವಾ ಕೈಗಾರಿಕೆಯನ್ನು ಆರಂಭಿಸಿದರು. ೧೮೪೩ ರಲ್ಲಿ 'ಕನ್ನಡ ಸಮಾಚಾರ'ವೆಂಬ ಪತ್ರಿಕೆಯನ್ನಾರಂಭಿಸಿದರು. ಹದಿನಾರುವರ್ಷಗಳ ಅನಂತರ, ೧೮೫೯ರಲ್ಲಿ ಲಂಡನ್ ಮಿಷನ್‌ನವರು 'ಅರುಣೋದಯ' ಪತ್ರಿಕೆಯನ್ನು ಬೆಂಗಳೂರಲ್ಲಾರಂಭಿಸಿದರು. ಅನಂತರ ದೇಶೀಯರು ಕನ್ನಡ ಪತ್ರಿಕೆಗಳನ್ನಾರಂಭಿಸಿದರು.

ಲೇಖಕರು: **ತಿರುಮಲೆ ತಾತಾಚಾರ್ಯಶರ್ಮ**, ಬೆಂಗಳೂರು

ಕನ್ನಡ ಪತ್ರಿಕೆಗಳು ಬಹು ಪ್ರಾಚೀನಕಾಲದಿಂದಲೂ ಕನ್ನಡ ಸಾಹಿತ್ಯಸೇವೆಯನ್ನು ಮಾಡುತ್ತ ಬಂದಿರುವವು. ಮೊದಲು ನಿಯತ ಕಾಲಿಕಗಳಲ್ಲಿ ವಿದ್ವಾಂಸರು, ಸಾಹಿತಿಗಳು ವಿವಿಧ ವಿಷಯಗಳ ಮೇಲೆ ಬರೆಯಲಾರಂಭಿಸಿದರು. ಇಂದು ದಿನಪತ್ರಿಕೆ-ವಾರಪತ್ರಿಕೆಗಳಿಂದ ಪ್ರಾರಂಭಿಸಿ ನಿಯತಕಾಲಿಕಗಳ ವರೆಗೂ ಪತ್ರಿಕೆಗಳು ನಾನಾ ರೀತಿಯಿಂದ ಸಾಹಿತ್ಯಸೇವೆಯನ್ನು ಮಾಡುತ್ತಿರುವವು. ಈ ಸಾಹಿತ್ಯಸೇವೆಯ ವಿಹಂಗಮ ನೋಟವನ್ನು ಲೇಖಕರು ಇಲ್ಲಿ ಒದಗಿಸಿರುವರು.

## ಮೊಟ್ಟಮೊದಲ ಪತ್ರಿಕೆಗಳು

ಬೆಂಗಳೂರಲ್ಲಿ ೧೮೫೯ ರಲ್ಲಿ ಮೊಟ್ಟಮೊದಲು 'ಮೈಸೂರು ವೃತ್ತಾಂತ ಬೋಧಿನೀ' ಎಂಬ ವಾರಪತ್ರಿಕೆ ಮೊದಲಾಯಿತು. ಆರೇಳು ವರ್ಷಗಳೊಳಗೇ (೧೮೬೫) 'ಕರ್ನಾಟಕ ಪ್ರಕಾಶಿಕಾ' ಅವತಾರ ಮಾಡಿತು. ಇವೆರಡೂ ಪತ್ರಿಕೆಗಳೂ ಭಾಷ್ಯಂ ಭಾಷ್ಯಾಚಾರ್ಯ, ದೀಕ್ಷಿತ ತಿರುಮಲಾಚಾರ್ಯ— ಇಬ್ಬರ ಹೆಸರುಗಳನ್ನೂ 'ಆಚಂದ್ರಾರ್ಕ ಸ್ಥಾಯಿ'ಯನ್ನಾಗಿ ಮಾಡಿವೆ. ಇಬ್ಬರೂ ಮಹಾ ವಿದ್ವಾಂಸರು. ಇಂಗ್ಲಿಷ್, ಸಂಸ್ಕೃತ, ಫಾರಸಿ, ಕನ್ನಡ, ತೆಲಗು, ಅರವ, ಮರಾಠಿ— ಇವೆಲ್ಲ ಭಾಷೆಗಳನ್ನೂ ಅಭ್ಯಾಸ ಮಾಡಿದವರು. ಸಂಸ್ಕೃತ, ಕನ್ನಡ, ತೆಲಗು-ಭಾಷಾಸಾಹಿತ್ಯಗಳ ಮೇಲೆ ಅವರಿಗಿದ್ದ 'ಪ್ರಭುತ್ವ' ತಲೆದೂಗಿಸುವಂತಹದು. ಇಷ್ಟು ಮಾತ್ರವಲ್ಲ ಈ ತಂದೆ-ಮಕ್ಕಳ ಮನೆಯೊಂದು 'ವಿದ್ಯಾಸ್ಥಾನ'ವೆನಿಸಿತ್ತು. ಅಲ್ಲಿ ಸೇರದ ವಿದ್ವಾಂಸರಿಲ್ಲ; ನಡೆಯದ ವಿಚಾರ ಚರ್ಚೆಇಲ್ಲ. ಇವರೆಲ್ಲರ ವಿದ್ವತ್ತು, ವಿಚಾರ, ಅನುಭವಗಳ ಫಲ ಈ ಪತ್ರಿಕೆಗಳಿಗೆ ಲಭ್ಯವಾಗಿತ್ತು.

'ಮೈಸೂರು ವೃತ್ತಾಂತ ಬೋಧಿನಿ'ಯ ಸಂಪಾದಕ ಭಾಷ್ಯಂ ಭಾಷ್ಯಾಚಾರ್ಯರು ಪತ್ರಿಕೆಯನ್ನಾರಂಭಿಸಿದಾಗ ಅವರು ಮಾಡಿದ ಪ್ರತಿಜ್ಞೆ ಹೀಗಿದೆ:

"ನಾವು ನಿಜವನ್ನು ನುಡಿಯುತ್ತೇವೆ; ನಿಜವನ್ನು ಕೇಳಲು ಅಪೇಕ್ಷಿಸುತ್ತೇವೆ. ಈ ಪ್ರತಿಜ್ಞೆಯಿಂದ ಅನ್ಯರು ನಿಜವನ್ನು ನುಡಿದಾರೆಂದು ಎದುರು ನೋಡುತ್ತೇವೆ. ಅದು ಅನ್ಯಥಾ ಆದರೆ ಅದು ಅನ್ಯರ ದೋಷವಾಗಿರುತ್ತದೆ. ಸ್ವ—ಪರ—ಅಭಿಪ್ರಾಯಗಳಿಗೆ ಭೇದವನ್ನು ತಿಳಿಯದ ಜಡಮತಿಗಳ ಮನೋವಿಕಾರವು ನಮಗೆ ಲಕ್ಷ್ಯದಲ್ಲಿರಲಾರದು. ಅವರು ಇತರರ ಅಪಹಾಸ್ಯದಿಂದ ನಾಚಿಕೊಂಡು ತಮ್ಮ ತಪ್ಪನ್ನು ತಿದ್ದಿಕೊಳ್ಳಲಿ."

ದೀಕ್ಷಿತ ತಿರುಮಲಾಚಾರ್ಯರು 'ಕರ್ನಾಟಕ ಪ್ರಕಾಶಿಕಾ' ಪತ್ರಿಕೆಯನ್ನು ಕನ್ನಡ ನಾಡಿನಲ್ಲಿ ಅಮರವನ್ನಾಗಿ ಮಾಡಿ ಹೋದರು. ಶ್ರೀ ಡಿ. ವಿ. ಗುಂಡಪ್ಪನವರಾದರೂ ಈ ಪತ್ರಿಕೆಯನ್ನೂ ಈ ಪತ್ರಿಕಾ ಸಂಪಾದಕರನ್ನೂ ಗೌರವ ಭಾವದಿಂದ, ಹೆಮ್ಮೆಯಿಂದ, ಸ್ಮರಿಸಿಕೊಳ್ಳುತ್ತಾರೆ. ಸ್ವರ್ಗವಾಸಿಗಳಾದ ವೆಂಕಟಕೃಷ್ಣಯ್ಯ, ಎಂ. ಎಸ್. ಪುಟ್ಟಣ್ಣ, ಎಂ. ಎ. ರಾಮರಾವ್, ಭಾರತಿ ಸಂಪಂಗಿರಾಮಯ್ಯ, ಮೊದಲಾದವರ ಬಾಯಿಂದ ಭಾಷ್ಯಾಚಾರ್ಯ-ತಿರುಮಲಾಚಾರ್ಯರ ವಿದ್ವತ್ತು, ದೂರದರ್ಶಿತ್ವ, ಧೈರ್ಯ, ದಕ್ಷತೆ, ದೇಶಭಕ್ತಿ, ಮೊದಲಾದ ಗುಣಗಳನ್ನು ಕುರಿತು ಕೇಳಿದ್ದೇನೆ. ನನ್ನ ಮಾತಾಮಹರು ಭಾಷ್ಯಾಚಾರ್ಯರ

ನೆರೆಮನೆಯವರು ; ಬಾಲ್ಯಸ್ನೇಹಿತರು. ಅವರ ಬಾಯಿಂದ ಭಾಷ್ಯಂ ಮನೆತನದವರೆಂತಹ 'ಜ್ಞಾನ ಸಂಯಮಧನ' ರೆಂಬುದನ್ನು ಕೇಳಿದ್ದೇನೆ. 'ಕರ್ನಾಟಕ ಪ್ರಕಾಶಿಕಾ' ಪತ್ರಿಕೆಯ ಅನೇಕ ಹಳೆಯ ಸಂಚಿಕೆಗಳ ಲೇಖನಗಳನ್ನು ಓದಿದ್ದೇನೆ. "ಹಲವು ಸಂಪಾದಕೀಯ ಲೇಖನಗಳನ್ನಾದರೂ ಆರಿಸಿ, ಪ್ರಕಟಿಸಿದರೆ, ಎಷ್ಟು ಚೆನ್ನಾಗಿದ್ದೀತು ; ಸಾಹಿತಿಗಳಿಗೂ ಪತ್ರಿಕಾವೃತ್ತಿಗಾರರಿಗೂ ಎಷ್ಟು ಸಹಾಯವಾದೀತು" ಎಂದುಕೊಂಡಿದ್ದೇನೆ. ಕನ್ನಡ ಪತ್ರಿಕೆಗಳು ಆರಂಭದೆಸೆಯಲ್ಲೇ, ಕನ್ನಡ ಭಾಷೆಗೂ ಕನ್ನಡ ಸಾಹಿತ್ಯಕ್ಕೂ ಎಂತಹ ಸೇವೆ ಸಲ್ಲಿಸಿವೆಯೆಂಬುದಾಗ ಸ್ಪಷ್ಟವಾಗುತ್ತದೆ.

## ಸಂಗೀತ ಸಾಹಿತ್ಯ ಪ್ರವೀಣರು

ಭಾರತೀ ಸಂಪಂಗಿ ರಾಮಯ್ಯನವರು ಭಾಷ್ಯಂ ಭಾಷ್ಯಾಚಾರ್ಯರನ್ನು ಕುರಿತು 'ವಿಶ್ವಕರ್ನಾಟಕ' ದಲ್ಲಿ (೧೯೩೨) ಬರೆದ ಲೇಖನದ ಈ ಭಾಗವನ್ನೆಷ್ಟು ಸಲ, ಎಷ್ಟು ಕಡೆ, ಎತ್ತಿಕೊಟ್ಟರೂ ಸಾಲದು.

"ಆ ಕಾಲದ ಪಂಡಿತ ಮಂಡಲಿಯಲ್ಲಿ ಪ್ರಮುಖರು ಮಾತ್ರವೇ ಅಲ್ಲ; ಸಂಗೀತ ಸಾಹಿತ್ಯ ಪ್ರವೀಣರು ಗೀರ್ವಾಣವಾಣಿಯ ಆಶುಕವಿ ಪುಂಗವರು ತಮ್ಮ ವೈದಿಕ ಲೌಕಿಕ ಪ್ರತಿಭೆಯಿಂದ ಪಂಡಿತ ಪಾಮರೋಭಯ ಲೋಕವನ್ನು ಮೆಚ್ಚಿಸುತ್ತಿದ್ದರು. ಸಾಮಾಜಿಕ, ನೈತಿಕ, ರಾಜಕೀಯ, ರಂಗಗಳಲ್ಲಿ ಆ ಕಾಲದ ಇವರ ಲೇಖನಗಳು, ಧೈರ್ಯೋತ್ಸಾಹಗಳು ಮೂರ್ತೀಭವಿಸಿ, ಖಂಡನ ಮಂಡನಗಳಿಂದ ತುಂಬಿದ್ದು, ಪ್ರಭು-ಪ್ರಜಾ ವರ್ಗಗಳೆರಡಕ್ಕೂ ಸಹಕಾರಿಯಾಗಿಯೇ ಇದ್ದುವು."

## ಅಂದಿನಿಂದ ಇಂದಿನ ವರೆಗೆ

'ಸ್ವದೇಶಾಭಿಮಾನಿ'ಯ ಶ್ರೀನಿವಾಸಯ್ಯಂಗಾರ್ಯ, 'ಭಾರತಿ', 'ಕರ್ನಾಟಕ' ಗಳ ಶ್ರೀ ಡಿ.ವಿ. ಗುಂಡಪ್ಪ, 'ವೃತ್ತಾಂತ ಚಿಂತಾಮಣಿ', 'ಸಾಧ್ವಿ' ಗಳ ವೆಂಕಟಕೃಷ್ಣಯ್ಯ, 'ಧನುರ್ಧಾರಿ'ಯ ಹರ್ಡೇಕರ ಮಂಜಪ್ಪ, 'ಮಧುರವಾಣಿ'ಯ ಹನುಮಾನದಾಸ್, 'ಜೀವನ'ದ ಶ್ರೀ ಮಾಸ್ತಿ ವೆಂಕಟೇಶಯ್ಯಂಗಾರ್ಯ, 'ಪ್ರಭುದ್ಧ ಕರ್ನಾಟಕ'ದ ಡಾ. ಎ. ಆರ್. ಕೃಷ್ಣಶಾಸ್ತ್ರಿ, 'ವಿಶ್ವವಾಣಿ'ಯ ಶ್ರೀ ಅ. ನ. ಕೃಷ್ಣರಾವ್, 'ಸ್ವತಂತ್ರ ಕರ್ನಾಟಕ', 'ಶರಣ ಸಂದೇಶ'ಗಳ ಪಂಡಿತರತ್ನ ಶ್ರೀ ಶಿವಮೂರ್ತಿ ಶಾಸ್ತ್ರಿ, 'ವಿಶ್ವಕರ್ನಾಟಕ'ದ ಶ್ರೀ ತಿ. ತಾ. ಶರ್ಮ, ಶ್ರೀ ಸಿದ್ಧವನಹಳ್ಳಿ ಕೃಷ್ಣಶರ್ಮ, 'ವೀರಕೇಸರಿ'ಯ ಶ್ರೀ ಸೀತಾರಾಮಶಾಸ್ತ್ರಿ, 'ತಾಯಿನಾಡು'ವಿನ ಶ್ರೀ ಪಿ. ಆರ್. ರಾಮಯ್ಯ—ಇವರೆಲ್ಲ ಪತ್ರಿಕಾವೃತ್ತಿಯನ್ನಾಶ್ರಯಿಸಿದರು. ಇಂತಹ ಸಾಹಿತಿಗಳು ವಿದ್ವಾಂಸರು, ಪತ್ರಿಕೆಗಳನ್ನು ನಡೆಸುವಾಗ ಕನ್ನಡಭಾಷೆ, ಕನ್ನಡ ಸಾಹಿತಿಗಳು ಅಭಿವೃದ್ಧಿ ಹೊಂದದೆ ಇರಲು ಸಾಧ್ಯವೇ ಇಲ್ಲ. ಈ ಸಂಪಾದಕರು ಮಾತ್ರವೇ ಅಲ್ಲ; ಒಂದೊಂದು ಪತ್ರಿಕೆಯ 'ಸಂಸಾರ' ದಲ್ಲೂ ಹಿರಿಯರೂ ಕಿರಿಯರೂ ಆದ ಹತ್ತಾರು ಮಂದಿ ಸಾಹಿತಿಗಳಿದ್ದರು. ಪತ್ರಿಕಾ ಕಾರ್ಯಾಲಯಗಳು ಹಿರಿಯರ ಪಾಲಿಗೆ 'ಕಾರ್ಯಸ್ಥಾನ'ಗಳಾದರೆ, ಕಿರಿಯರ ಪಾಲಿಗೆ 'ಗರಡಿ'ಗಳಾಗಿದ್ದುವು. ಮಹಾಕವಿಗಳೂ ನಾಟಕಕಾರರೂ ವಿಮರ್ಶಕರೂ ಸಂಶೋಧಕರೂ ಹಲವರು ಈ ಪತ್ರಿಕೆಗಳ ಮೂಲಕ ಕನ್ನಡಿಗರ ದೃಕ್ಪಥಕ್ಕೆ ಬಿದ್ದಿದ್ದಾರೆ. ಇಂದಿಗೂ 'ಪ್ರಜಾಮತ', 'ಪ್ರಜಾವಾಣಿ', 'ಜನಪ್ರಗತಿ', ಮೊದಲಾದ ಪತ್ರಿಕೆಗಳು ಪಾರಂಪರ್ಯವಾದ ಪದ್ಧತಿಯನ್ನನುಸರಿಸಿ, 'ಸಾಹಿತ್ಯಪುರವಣಿ'ಗಳನ್ನು ಹೊರಡಿಸುತ್ತಿವೆ. ಹಿರಿ-ಕಿರಿಯ ಸಾಹಿತಿಗಳನೇಕರ ಬೆನ್ನು ಚಪ್ಪರಿಸುತ್ತಿವೆ.

## ಉತ್ತರ ಕರ್ನಾಟಕದ ಕಡೆ ನೋಡಿ

೧೮೭೦ರ ಸುಮಾರಿನಲ್ಲಿ (ಕಲಾದಿಗಿ) ಹೊರಟ 'ಹಿತೇಚ್ಛು' ಕುರಿತು ಹೆಚ್ಚು ಗೊತ್ತಿಲ್ಲ. ಅದರ ಸಂಪಾದಕರು ಯಾರೋ; ಆ ಪತ್ರಿಕೆಯ ಹಿಂದೆ ಯಾರು ಯಾರಿದ್ದರೋ; ಇವುಗಳನ್ನು ತಿಳಿದುಕೊಳ್ಳಬೇಕಾದದ್ದು ಅವಶ್ಯಕ.

ಧಾರವಾಡದ ಕಡೆ ದೃಷ್ಟಿ ಬೀರಿದ ಕೂಡಲೆ ನನ್ನ ದೃಷ್ಟಿಗಾದರೂ ಎರಡು ಮೂರು ಪತ್ರಿಕೆಗಳು ಬೀಳುತ್ತವೆ. 'ವಿಜಯ' ಮೊದಲನೆಯ ಪತ್ರಿಕೆ. ಅದರ ಸಂಪಾದಕರಾಗಿದ್ದ ಅಣ್ಣಾಚಾರ್ಯ ಹೊಸಕೇರಿಯವರನ್ನು ನಾನು ನೋಡಿದ್ದಿಲ್ಲ. ನನ್ನ ಪರಮ ಮಿತ್ರರಾಗಿದ್ದ ಸ್ವರ್ಗವಾಸಿ ಮುದವೀಡು ಕೃಷ್ಣರಾಯರು ಅಣ್ಣಾಚಾರ್ಯರ ವ್ಯಕ್ತಿತ್ವ ಮತ್ತು ಚಾಣಾಕ್ಷತನದ ಪರಿಚಯವನ್ನು ಸಾಕಾದಷ್ಟು ಮಾಡಿಕೊಟ್ಟಿದ್ದಾರೆ. ಅವರ ಚಿತ್ರವನ್ನು ಒಳಗಣ್ಣಿಂದೆ ತಂದುಕೊಂಡಾಗಲೆಲ್ಲ "ಓಸ್ಸೂಲು ಗುರಿ ತಪ್ಪಿದರೇನಾಯಿತು ? ಕೈಪಿಡಿಯಿಂದಲೇ ಜಜ್ಜು" ಎಂದ ಡಾ. ಜಾನ್‌ಸನ್ನನ ನೆನಪಾಗುತ್ತದೆ. ಆ 'ನಾಗರಿಕ ಒರಟುತನ' ಕಂಡು !

'ಶುಭೋದಯ' ಸಂಪಾದಕರಾಗಿದ್ದ ಸ್ವರ್ಗವಾಸಿ ಕೆರೂರ ವಾಸುದೇವಾಚಾರ್ಯರು, ಕಥೆ, ಕಾದಂಬರಿ, ನಾಟಕ, ಪ್ರಬಂಧಗಳು, ಇವೇ ಮೊದಲಾದ ಸಾಹಿತ್ಯದ ನಾನಾ ಪ್ರಕಾರಗಳ ಪ್ರಯೋಗದಲ್ಲಿ ತಮ್ಮ ಕರ್ಮಕೌಶಲದ ಉದಾಹರಣೆಗಳನ್ನು ಬಿಟ್ಟುಹೋಗಿದ್ದಾರೆ. 'ಶುಭೋದಯ' ಪತ್ರಿಕೆಯ ಲೇಖನಗಳಲ್ಲಿ, ವಿದ್ಯಾಪ್ರೌಢಿಮೆ, ವಿಚಾರಶಕ್ತಿ, ವಕ್ರೋಕ್ತಿ, ಮೊದಲಾದ ಗುಣಗಳು ತುಂಬಿತುಳುಕಾಡುತ್ತವೆ. ಹಲವು ಪ್ರಬಂಧಗಳಾದರೂ ಅಡಿಸನ್, ಸ್ಟೀಲ್‌ರ ನೆನಪನ್ನುಂಟುಮಾಡುತ್ತವೆ.

'ಕರ್ನಾಟಕವೃತ್ತ ಮತ್ತು ಧನಂಜಯ' ದ ಮಾತು. ಆ ಮಾತೆಂದರೆ ಸ್ವರ್ಗವಾಸಿ ಮುದವೀಡು ಕೃಷ್ಣರಾಯರು! ಸಾಹಿತಿ, ಕಲಾವಿದ, ವಾಗ್ಮಿ, ದೇಶಭಕ್ತ—ಮೇಲಾಗಿ ಪತ್ರಿಕಾಕರ್ತ! ಒಂದು ಸಂದರ್ಭ ನನಗೀಗ ನೆನಪಿಗೆ ಬರುತ್ತದೆ. ಮೋಕ್ಷಗುಂಡಂ ವಿಶ್ವೇಶ್ವರಯ್ಯನವರ ಮೈಸೂರು ದಿವಾನಗಿರಿಯ ಕಾಲ. ಕನ್ನಡ ಸಾಹಿತ್ಯ ಪರಿಷತ್ತು ರೂಪುಗೊಳ್ಳುತ್ತಿದ್ದ

ವಿಚಾರಲೀಲಾ ತರಂಗ ಶ್ರೀ ಡಾ ಸ ಮ ಯ. ನಾನಾಗ ಮೈಸೂರು ಮಹಾರಾಜಾ ಕಾಲೇಜಿನಲ್ಲಿ ಓದುತ್ತಿದ್ದೆ. ರಂಗಾಚಾರ್ಲು ಸ್ಮಾರಕ ನಗರಭವನದಲ್ಲಿ ಒಂದು ದಿನ ಸಾರ್ವಜನಿಕ ಸಭೆ. ಸ್ವರ್ಗವಾಸಿ ಎಚ್. ವಿ. ನಂಜುಂಡಯ್ಯನವರು ಸಭಾಧ್ಯಕ್ಷರು ( ಇವರೆ ಸಾಹಿತ್ಯಪರಿಷತ್ತಿನ ಪ್ರಥಮಾಧ್ಯಕ್ಷರು ಮತ್ತು ಮೈಸೂರು ವಿಶ್ವವಿದ್ಯಾನಿಲಯದ ಪ್ರಥಮ ಸ್ಥಾನಪತಿಗಳು ). ಮುದವೀಡು ಕೃಷ್ಣರಾಯರು ಭಾಷಣಕಾರರು. ಸಭಾಂಗಣ ಕಿಕ್ಕಿರಿದು ತುಂಬಿದೆ. ರಾಯರು ಭಾಷಣ ಮುಗಿಸಿ, ಕೂಡಲಿಕ್ಕಿಲ್ಲ. ನಂಜುಂಡಯ್ಯನವರು ಝುಗ್ಗನೆದ್ದರು. ರಾಯರನ್ನು ಬಾಚಿ ತಬ್ಬಿಕೊಂಡರು.

“ ಕೃಷ್ಣರಾಯರ ಭಾಷಣ ಗಂಗಾ ಯಮುನಾ, ಸಂಗೀತ ಸಾಹಿತ್ಯಗಳ ಸಂಗಮ ! ಕರ್ನಾಟಕದ ವಾಸ್ತುಶಿಲ್ಪದಂತೆ; ಬೇಲೂರು ಹಳೇಬೀಡು, ಶ್ರವಣ ಬೆಳ್ಗೊಳದಂತೆ ‘ಅಣೋರಣೀಯಾನ್, ಮಹತೋ ಮಹೀಯಾನ್’ ಮಹಾತತ್ತ್ವವಾಹಿನಿ ಈ ಭಾಷಣ! ಎಂತಹ ದರ್ಶನಭಾಗ್ಯ ! ಏನು ಭವ್ಯ! ಏನು ದಿವ್ಯ ! ವಾಗಮೃತ ಅನಂತ ಧಾರೆಯಾಗಿ ಹರಿಯುತ್ತದೆ ! ”

ಅಂದು ಕೃಷ್ಣರಾಯರ ಪ್ರತಿಭೆಯನ್ನು ಕೊಂಡಾಡಿದರು! ಕಯ್ಯಲ್ಲಿ ಪುಸ್ತಕವಿಲ್ಲದೆ ರಾಯರು ಚುರಮುರಿಯವರ ‘ಶಾಕುಂತಳ’ವನ್ನೆಲ್ಲ ನನಗೆ ಕೇಳಿಸಿದ್ದಾರೆ! “ ಮರತೆಯಾಕಯ್ಯ ನಿನ್ನ ಮಾತೃಭೂಮಿಯ ” ಎಂಬ ಅವರ ಹಾಡನ್ನು ನಾನು ಮರೆಯಲು ಸಾಧ್ಯವೇ ಇಲ್ಲ.

‘ಕರ್ಮವೀರ’, ‘ಜಯಕರ್ನಾಟಕ’, ‘ಸಂಯುಕ್ತ ಕರ್ನಾಟಕ’, ಪತ್ರಿಕೆಗಳ ಹೆಸರುಗಳನ್ನುಚ್ಚರಿಸಿದ ಕೂಡಲೆ ಶ್ರೀ ಆಲೂರ ವೆಂಕಟರಾಯರು, ದಿವಂಗತ ಮೊಹರೆ ಹಣಮಂತರಾಯರು, ಶ್ರೀ ದಿವಾಕರ ರಂಗರಾಯರು, ಅವರ ಹಿಂದೆ ಹತ್ತಾರಲ್ಲ, ನೂರಾರು ಮಂದಿ ಕವಿಗಳು, ನಾಟಕಕಾರರು, ವಿಮರ್ಶಕರು, ರಾಜಕಾರಣಿಗಳು, ಶಾಸ್ತ್ರಕೋವಿದರು, ಕಲಾವಿದರು ಕಂಡುಬರುತ್ತಾರೆ. ‘ಕುಲ ಪುರೋಹಿತ’ರೆಂದು ಬಿರುದು ಪೊತ್ತ ಶ್ರೀ ಆಲೂರರ ಹೆಸರೇ ಕನ್ನಡ ನಾಡು-ನುಡಿಗಳ ಸೇವೆಗೆ ಪರ್ಯಾಯ ಪದ. ಶ್ರೀ ದಿವಾಕರ ರಾಯರ ದೇಶ ಸೇವೆ - ಭಾಷಾ ಸಾಹಿತ್ಯ ಸೇವೆಗಳು ಸಮಾನ ಗುಣ ಗೌರವಗಳಿಂದ ಕೂಡಿವೆ. ‘ಜಯಕರ್ನಾಟಕ’ವು ‘ಗೆಳೆಯರ ಗುಂಪಿ’ಗೆ ಕಾರಣವೊ, ‘ಗೆಳೆಯರ ಗುಂಪು’ ‘ಜಯಕರ್ನಾಟಕ’ಕ್ಕೆ ಕಾರಣವೋ ಹೇಳುವುದು ಸುಲಭವಲ್ಲ. ‘ಸಂಯುಕ್ತ ಕರ್ನಾಟಕ’ವು ಸಾಹಿತಿಗಳನೇಕರ ‘ರಂಗಸ್ಥಳ’ವೆನಿಸಿದೆ. ‘ಗ್ರಾಮಾಯಣ’ದ ರಾವಬಹದ್ದೂರರೇ ಅದರ ಸಂಪಾದಕ ರಂಗಭೂಮಿಯಲ್ಲಿದ್ದಾರೆ.

ಕೈಲಾಸವಾಸಿ ಬಸವನಾಳರ ಹೆಸರನ್ನು ಕೇಳದವರು ಯಾರು ? ಅವರು ‘ ಜಯ ಕರ್ನಾಟಕ’ದ ಸಂಪಾದಕರಾಗಿದ್ದರು ! ಬೆಟಗೇರಿ ಶ್ರೀ ಕೃಷ್ಣಶರ್ಮರು ‘ ಜಯಂತಿ ’ಯ ಸಂಪಾದಕರು. ಶ್ರೀ ವಿನೀತ ರಾಮಚಂದ್ರ ರಾಯರು ‘ ಪ್ರದೀಪ ’ ಸಂಪಾದಕರು! ಶ್ರೀ ಪಾಟೀಲ ಪುಟ್ಟಪ್ಪನವರು ‘ ಪ್ರಪಂಚ ’ದ ಸಂಪಾದಕರು !

## ಪಶ್ಚಿಮ ಕರಾವಳಿಯ ಕಡೆ

೧೮೪೩ ಸುಮಾರಿನಲ್ಲಿ ಮಂಗಳೂರಲ್ಲಿ ಹೊರಟ ‘ ಸತ್ಯದೀಪಿಕೆ’ಯಲ್ಲಿ ‘ ಹರಟೆ ಮಲ್ಲ’ನೊಬ್ಬ ಕಂಡುಬಂದ. ಸರಳ ಸುಂದರ ಭಾಷೆ; ಹಾಸ್ಯರಸದ ಹೊನಲು! ಅವನು ಮತ್ತಾರೂ ಅಲ್ಲ ‘ ಕವಿಶಿಷ್ಯ’ ! ಸ್ವರ್ಗವಾಸಿ ಪಂಜೆ ಮಂಗೇಶರಾವ್ ವಿಖ್ಯಾತ ಸಾಹಿತಿ, ಮದರಾಸು ಸರಕಾರದ ಹಿರಿಯ ಕನ್ನಡ ಭಾಷಾಂತರಕಾರರೂ ಆಗಿದ್ದ, ಸ್ವರ್ಗವಾಸಿ ಬೆಣಗಲ್ ರಾಮರಾಯರು ‘ ಸುವಾಸಿನಿ ’ಯ ಮೊದಲ ಸಂಪಾದಕರು ! ಆ ಪತ್ರಿಕೆಗೆ ಬರೆಯುತ್ತಿದ್ದವರು ಅಂತಿಂತಹವರಲ್ಲ—ಪಂಜೆ, ಉಳ್ಳಾಳ ಮಂಗೇಶರಾಯರು, ನಂದಳಿಕೆ, ಬಿ. ವೆಂಕಟಾಚಾರ್ಯರು, ನರಹರಯ್ಯ, ರೊದ್ದ ಶ್ರೀನಿವಾಸರಾಯರೇ ಮೊದಲಾದ ಕನ್ನಡ ನಾಡಿನ ಪ್ರಸಿದ್ಧ ಕೃತಿಕರ್ತರು.

ಉಡುಪಿಯ ‘ ಶ್ರೀಕೃಷ್ಣಸೂಕ್ತಿ’ ಯಂತೂ ಕನ್ನಡ ಭಾಷಾಸಾಹಿತ್ಯಲೋಕದ ಪ್ರತಿಭಾ ಸಂಪನ್ನರನ್ನೊಬ್ಬರನ್ನೂ ಬಿಡದೆ, ಆಕರ್ಷಿಸಿತು. ಇದಕ್ಕೆ ಸರಿಸಮಾನವಾಗಿ ನಿಂತ ಇನ್ನೊಂದು ಪತ್ರಿಕೆ ಇರಲಿಲ್ಲ ಆಗ. ಸ್ವರ್ಗವಾಸಿಗಳಾದ ಕರೋಡಿ ಸುಬ್ಬರಾಯರು, ಕಡೇಕಾರ ರಾಜಗೋಪಾಲಕೃಷ್ಣರಾಯರು ಅದರ ಸಂಪಾದಕರು. ಲೇಖಕಗಣದಲ್ಲಿ ರಾರಾಜಿಸುವ ರಸಋಷಿಗಳ ಪಟ್ಟಿ ಬಹಳ ದೊಡ್ಡದು. ಆ ಕಾಲದಲ್ಲಿ ಕನ್ನಡ ನಾಡಿನಲ್ಲೆಲ್ಲ ಯಾರು ಖ್ಯಾತಲೇಖಕರು, ವಿಮರ್ಶಕರು, ಎನಿಸಿದ್ದರು, ಅವರೆಲ್ಲ ಈ ಪತ್ರಿಕೆಗೆ ಬರೆಯುತ್ತಿದ್ದರು. “ ಶ್ರೀಕೃಷ್ಣ ಸೂಕ್ತಿ ” ಗೆ ಬರೆಯುವುದೇ ಒಂದು ‘ಮರ್ಯಾದೆ’ ! ಆ ಪತ್ರಿಕೆಯಲ್ಲಿ ಲೇಖನ ಪ್ರಕಟವಾದರೆ ಅದೇ ಒಂದು ‘ಭಾಗ್ಯ’! ಇದು ಆ ಪತ್ರಿಕೆಯ ಸ್ಥಾನ!

ಈ ಪತ್ರಿಕೆಗೆ ಸರಿಸಮವಾಗಿ ಸೇವೆ ಸಲ್ಲಿಸಿದ ಮತ್ತೊಂದು ಪತ್ರಿಕೆ ‘ ಕಂಠೀರವ ’. ಕನ್ನಡ ನಾಡಿನ ಪ್ರಸಿದ ವಿದ್ವಾಂಸರೆಲ್ಲ ಈ ಪತ್ರಿಕೆಗೆ ಬರೆಯುತ್ತಿದ್ದರು ‘ ರಾಷ್ಟ್ರಬಂಧು ’ ವಿನ ಕಡೆಗೆ ಶ್ರೀ ಕಡೆಂಗೋಡ್ಲು ಶಂಕರಭಟ್ಟರು ಅನೇಕ ಲೇಖಕರನ್ನು ಸೆಳೆದುಕೊಂಡುಬಿಟ್ಟರು. ಈಗ ‘ರಾಷ್ಟ್ರಮತ’ದ ಸೂತ್ರಗಳವರ ಕಯ್ಯಲ್ಲಿವೆ.

ಇಲ್ಲಿಗೇ ಈ ಕಥೆ ಮುಗಿಯಿತೆಂದು ಭಾವಿಸಲಾಗದು ‘ಯುಗಪುರುಷ’ದ ಶ್ರೀ ಅನಂತ ಪದ ನಾಭ ಉಡುಪ, ‘ಧನಂಜಯ’ದ ಶ್ರೀಮುಳಿಯ ಗೋವರ್ಧನರಾವ, ‘ಪ್ರೇಮ’ದ ಕೀರ್ತಿಶೇಷ ತಾರಾನಾಥ, ‘ನವಶಕ್ತಿ’ಯ ಶ್ರೀ ಬನ್ನಂಜೆ, ‘ಸತ್ಯಾಗ್ರಹಿ,’ ‘ಸ್ವತಂತ್ರಭಾರತ’ದ ಶ್ರೀ ರಾಮರಾಯ ಮಲ್ಯ, ‘ನವಭಾರತ’ದ ಶ್ರೀ ವಾಮನ್ ಕುಡ್ವ, ‘ಪ್ರಭಾತ’ದ ಶ್ರೀ ವಾಸುದೇವಶೆಣೈ ‘ಜನಶಕ್ತಿ’ಯ ಶ್ರೀ ಕುಳುಕುಂದ ಶಿವರಾವ, ‘ವಸಂತ’ದ ಶ್ರೀ ಶಿವರಾಮಕಾರಂತ, ಇನ್ನೂ ಅನೇಕ ಪತ್ರಿಕೆಗಳನ್ನೂ, ಅವುಗಳ ಸಂಪಾದಕರು, ಅವರ ಸಹಾಯಕರನ್ನೂ ನಾವು ಮರೆಯುವಹಾಗಿಲ್ಲ, ಕಾರವಾರ ಜಿಲ್ಲಾ ಪತ್ರಿಕೆಗಳ ಸೇವೆ, ಹೈದರಾಬಾದ್, ಕೊಡಗಿನ, ಪತ್ರಿಕೆಗಳ ಸೇವೆ ಕುರಿತು ಬರೆಯಲು ಈಗಾಗಲೇ ಲೇಖನ ದೀರ್ಘವಾದ ಕಾರಣ ಬಿಟ್ಟಿದ್ದೇನೆ.

## ಸಂದೇಹನಿವೃತ್ತಿಯಾಗಿರಬೇಕು

ಪತ್ರಿಕೆಗಳಿಂದ ಕನ್ನಡಭಾಷೆಯ ಬೆಳವಣಿಗೆಗೂ ಸಾಹಿತ್ಯದಪ್ರಯೋಗಾಭಿವೃದ್ಧಿಗಳಿಗೂ ಏನಾದರೂ ಉಪಕಾರವಾಗಿದೆಯೆ ಎಂಬದಾಗಿ ಸಂದೇಹಪಡುತ್ತಿದ್ದವರಿಗೆ ಈ ಲೇಖನದಿಂದ ಹಕ್ಕುಮುಟ್ಟಿಗೆ ಸಂದೇಹನಿವೃತ್ತಿಯಾಗಿರಬೇಕು. ಕನ್ನಡ ಪತ್ರಿಕೆಗಳನ್ನಾರಂಭಿಸಿದವರು ಎಂಕಸೀನು ನಾಣಗಳಲ್ಲ— ತಲೆದೂಗಿಸತಕ್ಕಂತಹ ಪ್ರತಿಭಾಸಂಪನ್ನರು, ಕವಿಗಳು, ವಿಮರ್ಶಕರು, ಸಂಶೋಧಕರು, ಇತಿಹಾಸಕಾರರು, ರಾಜಕಾರಣಿಗಳು, ಪತ್ರಿಕೆಗಳನ್ನು ಸ್ಥಾಪಿಸಿ, ನಡೆಸಿ, ಕೀರ್ತಿಗಳಿಸಿದ್ದಾರೆ. ಅಸಂಖ್ಯಾತ ವಿದ್ವಾಂಸಲೇಖಕರು ಅವುಗಳನ್ನು ಬೆಳೆಸಿದ್ದಾರೆ. ಕನ್ನಡ ಪತ್ರಿಕೆಗಳು ಒಂದು ಶತಮಾನದಿಂದ ಸಾಧಿಸಿರುವುದನ್ನು ನಿಕರವಾಗಿ, ಸಂಪೂರ್ಣವಾಗಿ, ತಿಳಿದುಕೊಂಡಾಗ ; ಅವುಗಳ ಸಂಪಾದಕರ ಯೋಗ್ಯತಾಸಿದ್ಧಿಗಳನ್ನು ಅರಿತುಕೊಂಡಾಗ,

“ ಕನ್ನಡ ಭಾಷಾಭಿವೃದ್ಧಿಗೂ ಕನ್ನಡ ಸಾಹಿತ್ಯ ಪ್ರಕಾರ-ಪ್ರಯೋಗಗಳಿಗೂ ಕನ್ನಡ ಪತ್ರಿಕೆಗಳಿಂದ ಮಹೋಪಕಾರವಾಗಿದೆ. ಅವುಗಳನ್ನು ನಡೆಸಿದ ಸಂಪಾದಕರನೇಕರು ಮಹಾ ಸಾಹಿತಿಗಳಾಗಿದ್ದು, ಅವರು ಪತ್ರಿಕೆಗಳಿಗೆ ಭವ್ಯ ಪರಂಪರೆಯನ್ನು ಕಲ್ಪಿಸಿದ್ದಾರೆ ”

ಎಂಬದಾಗಿ ಹೇಳದೆ ನಿಷ್ಪಕ್ಷಪಾತಿಗಳಿಗೆ ಬೇರೆ ದಾರಿಯೇ ಇಲ್ಲ.






ಜಾಗ್ರತ್,
ಸ್ವಪ್ನ,
ಸುಷುಪ್ತಿ.
ಅತಲ, ಸುತಲ, ಪಾತಾಳ !
ಎಂಥ ಕತ್ತಲು ಒಳಗೆ ಕನಸು ಕೂಡ ಇಲ್ಲ !
ಹೆಪ್ಪುಗಟ್ಟದ ಕಪ್ಪು—ಮೈಬೀಸಿ ಮಲಗಿತ್ತು—
—ಮೌನದಲಿ.
ಕಾಲ ಮೂರರ ಬೆರಕೆ
ಮೂಕ ಹರಕೆ !
ಉಸಿರುಗಟ್ಟದ ಬಸಿರುಬಟ್ಟಲ ತ್ರಾಣ :
ತಾಯಿ ಬಯಕೆಯನುಳಿಸಿ ನೀಗಬೇಕೆ ಪ್ರಾಣ ?
ಕಣ್ಣು ಪರದೆಯ ತೆರೆದು ಮರವಟ್ಟು ನಾ-ನಿಂತೆ !
ಇನ್ನು ನೆನಪಿದೆ ನನಗೆ :
ನಾಕಗರ್ಭದ ಉಸಿರು ಬಿಡದೆ ತಳಮಳಿಸಿತ್ತು;
ದಾನವತೆ ಹಿಂದೊಮ್ಮೆ ಇಂದ್ರಿಯವ ಜಯಿಸಿತ್ತು !
ಕಾಲನಿರ್ಮಿತಿ ತೊರೆದ;
ಗೊತ್ತುಗುರಿ ಇರದ;
ಕ್ರೂರದಾನವಕುಲದ
ಬಲಿಯ ಮುಷ್ಟಿಗ್ರಹಣ !
ಮೂರು ಲೋಕದ ಹರಣ
ಹಿಡಿದಿತ್ತು ಗ್ರಹಣ !

*   *   *

ಕನಸು !
ಕನಸು !
ಕನಸು !
ಕನಸಿನರಮನೆಯೊಳಗೆ ಮಲಗಿದ್ದೆ.
ಬಯಕೆ ಕಡಲಿನ ಮಥನ ನಡೆದಿರಲು ಎಡೆಬಿಡದೆ;
ಕಳ್ಳ ಮನಸಿನ ಜೇಡ, ಬೆಳ್ಳಿ ಹೊಳಪಿನ ಎಳೆಯ
ತೆಗೆ-ತೆಗೆದು; ಬಲೆಯೊಗೆದು; ಕುಳಿತಿರಲು—
—ಕದ್ದು

ನೆಲವಬೇಡಿದ ಪಾದ-ಹೆಡೆಯ ಆಡಿತು-
ತ್ಯಾಗಮುಕುಟದ ಮೇಲೆ!
ಮೂಡು-ಪಡುವಣದ ನೆಲದ ಅಂಚನು ತುಳಿದು !
ಬಲಿಯ ಬೇಡಿತು-ಬಲಿಯ!
ಬೇಸರಾಯಿತೆ ಮಗುವು-ಹೆತ್ತತಾಯಿಯ ತೊಡೆಗೆ ?
ಬಸಿರ ಉಡಿಗೆ !
ಏಳುಕಡಲಿನ ನೀರ ಮೆಟ್ಟಿಲನಿಳಿದು—
—ನೀ ಬಂದೆ.
ಓ, ತಂದೆ !
ಸು-ತಲ ಲೋಕಕೆಯೆಂದೆ.
ಹರಿಯ ಕರುಣೆಯಕೊಂಡೆ-ಕಳಚಿಕೊಂಡಿತೆ ಮುರಿದು ?
ದಾನದರ್ಘ್ಯವನೆರೆದು!

*   *   *

ಬೆಳಕು !
ಬೆಳಕು !
ಬೆಳಕು !
ಬೆಳಗಿನ ಜಿನುಗಲು-ಸ್ವಪ್ನ ಮುರಿಯಿತು !
ಬಾಲರವಿ ಹೊಂಗಿರಣ, ಮೂಡಣಾದ್ರಿಯನಿಳಿದು
ಕನಸು ಮೈಯಿನ ಬಾವಿಯ ಜೇನುಹನಿ ಎರೆದಿರಲು
ಮುಳ್ಳು ಬೇಲಿಯ ಮೇಲೆ ಮುಗ್ಧಭಾವದ ಮೊಗ್ಗು:—
ತಾಯಕರುಣೆಯ ನೆನೆದು, ನಗುತಿರಲು ಮೌನದಲಿ
ಕೂಗಿಕೊಂಡಿತು ಕೋಳಿ
ಪಂಚಾಂಗದ ಕಾಳಿ :—
“ ಕಾರ್ತಿಕದ ಮೊದಲದಿನ; ಎದ್ದೇಳಿ।.... ಎದ್ದೇಳಿ ! ”
ಹರಕೆ ಹೊರೆಯನು ಹೊತ್ತ ಭಕ್ತನಾವನೊ ಒಬ್ಬ-
ಗುಡಿಯ ಗಂಟೆಯ ಹೊಡೆದು—ಮಲಗಿದ್ದ ದೇವರನು—
—ಕೆಣಕುತಿದ್ದ !
ಊರ ಅಗಸೆಯ ಮುಂದೆ ಶಿಲೆಯಶಾಸನ ಭೇರಿ,
ಮೈಮರೆತು ಮಲಗಿತ್ತು-
ಕತೆಯ ಭಾರವ ಹೊತ್ತು.

—ರಾಘವೇಂದ್ರ

# ಇಳೆಗಿಳಿದು ಬಂದೆಯಾ . . . .

— ದ. ಲ. ಕೆರೂರ

ಇಳೆಗಿಳಿದು ಬಂದೆಯಾ
ನಾಕಲೋಕದ ಜೀವಿ
ಎಳೆನಗೆಯ ಪಸರಿಸುತೆ
ನಲಿವುದೇನಿದು ದೇವಿ

ಏನು ಗತಜನುಮದಾ
ರಸನಿಮಿಷದೈಸಿರಿಯೊ
ಬಾನುದ್ದ ದುಗುಡಗಳ
ನೀಗಿದಾ ಜಯಸಿರಿಯೊ

ಮುನ್ನ ಸಂಗ್ರಹಿಸಿರ್ದ
ಪುಣ್ಯಕೀರಿತ್ತೆಂದು
ನಿನ್ನನೀ ಲೋಕ ಮು-
ತ್ತೆಳೆದು ತಂದಿತ್ತೆಂದು.

ಮುನ್ನಲ್ಲಿಗೈದವರು
ನಿನ್ನಂತೆ ಸಾಗಿಬರೆ
ಸನ್ನುತಾಂಗಿಯೆ ನಾಕ
ವನ್ನಾರು ಸಾರುವರೆ ?

ಹುಸಿನಗೆಯೊ ಪಿಸುನಗೆಯೊ
ಮುಸಿನಗೆಯೊ ಮುಖದಲ್ಲಿ
ರೋಸಿಕೊಂಡಿರುವ ಮನ-
ಕೇಸು ಸಂತಸವಿಲ್ಲಿ

ನಿನ್ನ ನೀ ರಮಿಸುತ್ತ-
ಲಾಡುವದು ತರವೇನೆ
ಚೆನ್ನೆ, ನಿನಗೇಕೆನ್ನ
ಪೀಡಿಸುವ ಹಠವೇನೆ

ನೂರಾರು ಕೋಪಗಳ
ತಾಪಗಳ ನಂಜುಂಡು
ತೋರಿತೋರದ ಬೆಸನ
ಗಳನೆ ನೀಗಿಸಲೆಂದು

ಬಾರಿಬಾರಿಗೆ ಸೆಳೆವ
ಸಂಸಾರದಲಿ ಬೆಂದು
ತೋರೆ ದಾರಿಯನೆಂದು
ನಿಂದೆ ನಿನ್ನನು ಕಂಡು

ಹೀಗೆ ತೊಟ್ಟಿಲಲಿ ಕೈ-
ಕಾಲುಗಳನಾಡಿಸುತ
ಲೋಗರಾಲಾಪಗಳ-
ನೆಲ್ಲ ನೀನೇಡಿಸುತ

ಸುರಲೋಕದಿರವನ್ನೆ
ಮರುಮರಳಿ ಹಾರೈಸಿ
ಕಿರುನಗೆಯ ಸುಳಿಯಲ್ಲಿ
ತೋರು, ಕಣ್ಕೋರೈಸಿ

ಏರಾಟ ಹೋರಾಟ-
ಕೆಳಿದಿರುವ ಲೋಕದಲಿ
ಭೋರಾಟ ಚೀರಾಟ
ಗಳ ಮಿರಿದುರ್ಬಿನಲಿ

ಹೃತ್ತಾಪಹಾರಕವೆ
ನಿನ್ನ ಮಂದಸ್ಮಿತವು
ಮತ್ತಾಪಹಾರಕವು
ಮತ್ತೆಂಬೆನಿತು ದಿಟವು.

# ಚಲನ ಚಿತ್ರ ಮಂದಿರ



ಚಲನ ಚಿತ್ರಮಂದಿರ
ಏನು ಭವ್ಯ ಸುಂದರ!
ಸುತ್ತಲೆಲ್ಲ ನೀರಿದೆ.
ಮೇಲೆ ತಾರೆ ಬೆಳಗಿದೆ.

ಎಂದಿನಿಂದ ನಿಂತಿದೆ ?
ಯಾರು ಹೇಳುವಂತಿದೆ ?
ಎಲ್ಲಿ ವರೆಗೆ ನಿಲ್ವುದು ?
ಬಲ್ಲರಾರು ? ತಿಳಿಯದು.

ಒಳಗೆ ಇಣಿಕಿ ನೋಡಲು
ಸುತ್ತಲೆಲ್ಲ ಕತ್ತಲು.
ನಡುವೆ ಮಾತ್ರ ಬೆಳಕಿದೆ
ಅಲ್ಲಿ ಚಿತ್ರ ನಡೆದಿದೆ.

ಎಂಥ ಚಿತ್ರ ? ಏನು ಚಿತ್ರ ?
ಚಿತ್ರಗುಪ್ತ ಬಲ್ಲ ಮಾತ್ರ.
ಅದರ ಕಥೆಯು ಯಾವ ಕಥೆ ?
ಹುಟ್ಟುಸಾವುಗಳದೆ ಕಥೆ.

ಈ ಕಥೆಯ ಮೂಲವೆಲ್ಲಿ ?
ತಿಳಿದವರಾರದನು ಇಲ್ಲಿ ?
ಎಷ್ಟೊ ಇರುಳು ಸಂದರೂ
ಎಷ್ಟೊ ಜನರು ಬಂದರೂ

ಕಥೆಯು ಹಾಗೆ ನಡೆದಿದೆ
ಕೊನೆಯನಿನ್ನು ಕಾಣದೆ.
ಎಂದು ಅದರ ಕೊನೆಯು ? ಹೇಗೆ ?
ಬಿಡುವದೊಳಿತು ಇದನು ಹಾಗೇ.

'ಇದು ಹೀಗೇ !' ಎಂದು ಬಂಧು
ತನ್ನ ಎದೆಯ ತಟ್ಟಿಕೊಂಡು
ಇದರ ಆದಿ ಅಂತ್ಯಗಳನು
ಹೇಳುವವನು ಯಾವನು ?

ಆನೆ ಕಂಡ ಕುರುಡರಂತೆ
ಒಬ್ಬನೊಂದು ಪೇಳ್ವನು.
'ಜಗವು' ಎಂದು ಇದರ ಹೆಸರು
ತಿಳಿಯದಿಹುದು ಒಡೆಯರಾರು ?

ಜನವು ಮಾತ್ರ ನೆರೆದಿದೆ.
ಚಿತ್ರವೇನೊ ನಡೆದಿದೆ.
ತನ್ನ ಕೊನೆಯ ಕಾಣದೆ.
ಚಲನಚಿತ್ರ ಮಂದಿರ
ರುದ್ರ, ಭವ್ಯ, ಸುಂದರ!

— ಚಿದಂಬರಾನಂದ.

# ಎಂದಿನೊಲು ಚಂದ್ರ



೧

ಎಂದಿನೊಲು ಚಂದ್ರ ನಿನ್ನಂಗದಿಂದ
ತನಿಹಾಸ ಸೂಸು ಅಲ್ಲಿಂದಲೇ
ತಂಗದಿರಿನೊಡನೆ ತೆರೆಗೊಂಡು ಬರುವ
ಮಾಧುರಿಯು ಸವಿವೆವಿಲ್ಲಿಂದಲೇ

೨

ಎಂದೆಂದು ಈ ವಸುಂಧರೆಯ ಹೃದಯ
ಮಿಂದೇಳುತಿರಲಿ ರಸರಾಗದಿ
ಜಗಕಿಳಿದು ಜೊನ್ನದುಯ್ಯಾಲೆ ಲೀಲೆ
ಗೈಯುತ್ತಲಿರಲಿ ಸುಮ್ಮಾನದಿ

೩

ಬಿಟ್ಟು ರಾಕೆಟ್ಟು ಕಳುಹಿ ಸ್ಪುಟ್ನಿಕ್ಕು
ನಿನ್ನ ಮೇಲೆ ಮನೆ ಕಟ್ಟಲು
ಹೊರಟಿರುವದೇನೊ ಹವಣಿಕೆ ಪ್ರಯಾಣ
ಸರಿ, ಚಿತ್ರಕೇನು ?—ಬರಿ ಕತ್ತಲು

೪

ಅಲ್ಲೇನು ತಗ್ಗೊ—ಇನ್ನೇನು ತೆವರೊ ?
ಇನಿತೇಕೆ ಜೆವರು ಅದ ಕಾಣಲು ?
ಸಾಗಿದರೆ ಚಿತ್ತ ಸಂಸ್ಕರಣದತ್ತ
ಬಾಳಾಗದೇನು ಬೆಳುದಿಂಗಳು ?

೫

ನಾವಲ್ಲಿ ಬರಲು ತಾನೆಲ್ಲಿ ಭಾವ
ಅನುಭಾವದಮೃತ ಅಂತರ್ಯಕೆ ?
ಎಲ್ಲಿ ಭಾರತದ ಹುಣ್ಣಿಮೆಯ ಭಾಗ್ಯ ?
ಕಾವ್ಯವೆಲ್ಲಿ ಕಲ್ಪಾಂತಕೆ ?

೬

ಯಾವ ಸೂಕ್ಷ್ಮವೋ ಭಾವಚಕ್ಷುವನು
ಕೀಲಿಸಿಹುದು ನಿನ್ನಲ್ಲಿಯೇ
ನಾನು ಆ ಬಂಧದಲ್ಲಿ ಸ್ವಚ್ಛಂದ
ದಲ್ಲಿ ವಿಹರಿಸುವೆ ಇಲ್ಲಿಯೇ

೭

ತಾರೆಗಳ ನಡುವೆ ನೀನೇರಿ ಬರಲು
ಬುವಿ ಬಾನು ಎಲ್ಲ ಸೊಗದಾಗರ
ಕರಣಂಗಳನ್ನು ಕಿರಣಗಳು ಸೋಂಕೆ
ಉಕ್ಕುವುದು ಸಂತಸದ ಸಾಗರ

೮

ಒಂದೊಂದು, ನಿಲವಿಗೊಂದೊಂದು ಚೆಲುವು
ಹೊಸ ಹೊಸತು ಗೆಲುವು ಇರುಇರುಳಿಗೆ
ಬೆಳವಣಿಗೆಗೊಂದು ತಿಳಿರೂಹು ನೀನು
ಏಳಿಗೆಯ ಚಿಹ್ನ ತಿಳಿಗಣ್ಣಿಗೆ

೯

ಇಂತಿರಲಿ ಚಂದ್ರ ನಿನ್ನಿಂದ್ರಜಾಲ
ಎದೆ ತುಂಬಿ ನಿಲಲಿ ರಸಚಂದ್ರಿಕೆ
ಮಿಥ್ಯದಲಿ ಮಿಥ್ಯ ಜಡ ನನ್ನ ಸತ್ಯ
ರಸದೀಕ್ಷೆ ಬೇಕು ಸಜ್ಜೀವಕೆ

೧೦

ಎಂದಿನೊಲು ಚಂದ್ರ ನಿನ್ನಂದದಿಂದ
ಹೊಂಗನಸ ಹರಡು ಅಲ್ಲಿಂದಲೇ
ತಂಗದಿರಿನೊಡನೆ ಇಳಿದಿಳಿದು ಬರುವ
ಶುಚಿ ರುಚಿಯ ಕೊಳುವೆವಿಲ್ಲಿಂದಲೇ

—ಬಿ. ಎಸ್. ಕರ್ಕಿ

# ಎಲ್ಲಿ ಹೋದೆಯೆ ಷಟ್ಪದಿ?

೧

ನಮ್ಮ ಛಂದೋವನದಿ ಮೆರೆಯುವ
ಚಿಗಿತ ಮಾಮೇ ಷಟ್ಪದಿ
ಕಾವ್ಯಬಾನಿನೊಳೆಸೆವ ಕಾಮನ
ದಿವ್ಯ ಚಾಪವೆ ಷಟ್ಪದಿ
ಕನ್ನಡಾಂಬೆಯ ತಿಲಕವು
ಇದುವೆ ಮೇಣವಳಲಕವು
ನಮ್ಮ ಹೃದಯವನೆಲ್ಲ ಕಾಲದಿ
ಸೂರೆಗೈಯುವಳಾರಡಿ

೨

ಕವಿ ಕುಮಾರವ್ಯಾಸ ಲಕ್ಷ್ಮೀ—
—ಪತಿಗಳೆನ್ನುವ ಬ್ರಹ್ಮರು
ಷಟ್ಪದಿಗಳನು ಜರೆದು ಮೆರೆಯುವ
ದಿವ್ಯ ಷಟ್ಪದಿ ಸೃಜಿಸಲು
ಝೇಂಕರಿಸುತವು ಹರಡಲು
ನಿನದ ದೇಶದೊಳಿಡಿಯಲು
ನಾಡು ನಲಿಯಿತು ನಮ್ಮ ವದನದಿ
ಹಾಡು ಮೂಡಿತು ಕೂಡಲೇ

೩

ನಿನ್ನ ಪಡೆದಿಹ ನಮ್ಮ ಭಾಷಾ-
-ವನಿತೆ ಧನ್ಯಳು ಷಟ್ಪದಿ
ಕನ್ನಡಾಂಬೆಯ ಮುದ್ದು ಮಗಳೇ
ನಿನಗೆ ಸರಿಯಿಲ್ಲಿಳೆಯೊಳು
ನಿನ್ನ ರೂಪವೆ ರೂಪವು
ನಿನ್ನ ನಿನದವೆ ನಿನದವು
ಸ್ವರ್ಗಸುಖವನ್ನೀವ ನಿನ್ನನು
ಸವಿಯದವನೇ ಪಾಪಿಯು

೪

ಹಳ್ಳಿ ನಗರಗಳಲ್ಲಿ ಮೊಳಗಿತು
ನಿನ್ನ ನಿನದವು ಷಟ್ಪದಿ
ಇಂದು ಗುಂಜಾರವವು ಕೇಳದು
ನಮ್ಮ ನಾಡೊಳು ಷಟ್ಪದಿ
ಎಲ್ಲಿ ನೀನಿಂದಡಗಿಹೆ
ಎಂದು ನೀ ಮೈದೋರುವೆ
ಕಾಲಮಹಿಮಾವಶದಿ ಮರೆತೆವು
ಮನ್ನಿಸೆಮ್ಮನು ಷಟ್ಪದಿ

—ರಾ. ಸ. ಮುಳಗಿ

# ಮುಂಬಯಿಯಲ್ಲಿ ಸಂಜೆ

ವಿದ್ಯಾರ್ಥಿ:

ಶೀವ್ರ ಹೊರಟಿದ್ದ ಕಾಲೇಜಿನ ಹುಡುಗ
ನಡೆದರೂ ನಡೆ ಶೀರ ಓಟದಂತಿತ್ತು
ಚಣ್ಣವೋ ಚಲ್ಲಣವೋ ಪೇಂಟುನಗುತ್ತಿತ್ತು
ತ್ರಿಶಂಕು ಸ್ವರ್ಗದಲಿ, ಇಸ್ತ್ರಿ ಪಾಲೀಷುಗಳ ಮಧ್ಯದಲಿ



ಈಶ್ವರನೋ ಮನ್ಮಥನೋ,
ರತಿಪತಿಯುನರಗಿಸಿಕೊಂಡ ಮಸ್ತನಿವ
ಪಾಮೇಡ ಬ್ರಿಲಿಯಂಟಾಯ್ಸುಗಳದ್ವಂದ್ವದಲಿ—
ಮಾಟಾಗಿತ್ತು ತಲೆ ಶಿವನ ಜಟೆಗೂ ಮುಂದೆ
ಮೋರೆ ಬಿಡಿ, ಕದ್ದು ಬೀಡಿ ಸೇದುವವನಂತಿತ್ತು.
ಚೈನೀಸಿನರಿವೆಯು ಅಂಗಿ ಮುಂಬಯಿಯ ನಕ್ಷೆತೋರಿಸುತ್ತಿತ್ತು
ಪೇಂಟನೊಳಗಡೆ ಸೇರಿ.
ಓಡಿತ್ತು ಮನ ಪಾರ್ಕಿನಾಚೆಯ ಮರದಡಿಯಲ್ಲಿ
ಶಸ್ತ್ರವಿದ್ಯಾರ್ಥಿ ಅರ್ಜುನನಿಗೆ ಗುರಿ ಇಡಲು ಕಂಡುದೊಂದೇ ಹಕ್ಕಿ
ಅಸ್ತ್ರವಿದ್ಯೆಯ ಪ್ರಿಲಿಮಿನರಿ
ಎದೆ ಸೆಟೆದು ನಿಂತಿದ್ದ ಎಳೆ ಧನುರ್ಧಾರಿ.
ಇವನೆಡೆಗೆ ಓಡೋಡಿ ಬರುತಿತ್ತು ಪಾರ್ಕಿನ ದಾರಿ
ವೇಗವಾದರೂ ಅಗಾಗ ನಾಡಾಯಿಸುತಿತ್ತು ಕಲ್ಪನೆಯ ಗರಿಗೆದರಿ
ಕೊನೆಗೂ ಬಂತು ಅಜ್ಞಾತವಾಸ
ಪಾರ್ಕಿನ ಹಸಿರು ಮರದಡಿಯಲ್ಲಿ ಮಳೆ ಸುರಿಯಿತು
" ಹೆಲೋ ಮಾಯ್ ಡಿಯರ ಡಾರ್ಲಿಂಗ! "
" ಹೆಲೋ ಡಿಯರ್ ಸ್ವೀಟ ಇವನಿಂಗ! "
ಹದ ತಪ್ಪಿದ ಕೆಲವು ಎದೆ ತಪ್ಪಿದ ಕೆಲವು
ಮದನಪುರಿಯಿಂದ ಸ್ಪೇಶಲ್ ಬಂಡಿ ಬಂತು
ಕೈಬೆರಳು ಮೃದುವಾಗಿ ಮುಂಗುರುಳು ಸೋಲಿಟ್ಟಾಗ
ಸಕ್ಕುಬಿಟ್ಟಳು ಮುಗ್ಧೆ ಮೆಚ್ಚುವಂತೆ
ಹಲ್ಲು ಕಂಡವು ನುಚ್ಚು ಅಕ್ಕಿಯಂತೆ
ಭಾವ ಪರವಶನಾಗಿ ವೈಮರಿಶ ವಿದಾರ್ಥಿ

ಕವಿಯಾಗಿ ವಿಜ್ಞಾನಿಯಾಗಿ ಅಜ್ಞಾನಿಯಾಗಿ ವೈಮರಿಶ
ಪ್ರೇಮದ ತತ್ವಜ್ಞಾನ ಪಾರ್ಕಿನಲಿ ಇಳಿದಾಗ
ರಧಿಯು ಕೆಜ್ಯುಲಲ್ ಲೀವಬರೆದು ಆಫೀಸು ಬಿಟ್ಟಿದ್ದ

ವ್ಯವಸಾಯಿ :

ನಾಲ್ಕು ಮಂದಿ ಕೂಡಿದಲ್ಲಿ ಬೇಕೇಬೇಕು
ನಾಲ್ಕು ತಲೆ ನಾಲ್ಕುದಾರಿ, ಕಾಲಬದಲಾಗಿ ಈಗ —
ನಾಲ್ಕಕ್ಕೆ ಹತ್ತು ಹತ್ತಕ್ಕೆ ನಾಲ್ವತ್ತು
ಅಗಸನ ಕತ್ತೆ ದುಡಿದು ಬಂದಿತ್ತು
ಈ, ಹೊತ್ತು ಯಾರಿಗೂ ಇಲ್ಲ ಗಳಿಗೆ ನಿಲ್ಲಲು ಸುಸ್ತು
ಒಂಟಿ ಎತ್ತಿಗೂ ಗಾಡಿ ಕುದುರೆಗಾಡಿಗೂ ಸವಾರಿ
ಎಂಜನಿಗೂ ದೇಹ, ದೇಹಕ್ಕೊಂದು ಎಂಜಿನ್ನು
ಕಲ್ಲಿಗಿಟ್ಟರೂ ಸಾಯದವಗೊಂದು ' ಸಾಯುಕಲ್ಲು '
ಮಹಡಿ ಮಹಡಿಗೂ ಹೋಗಿ ಕಿವಿಹಿಂಡುವ ' ಗುಲ್ಲು '
ಇದು ಕಾರು, ಅದು ಟ್ಯಾಕ್ಸಿ, ಇನ್ನೊಂದು ಪರಿ
ಏನು ಗವಜು ಗಲಾಟಿ !
ನಡುವೆ ಇವನೊಬ್ಬ ಲರಕ್ ಎನ್ನುವ ಮೂಟಿ
ದೇಹಕ್ಕಿಂತಲೂ ದೊಡ್ಡ ಜೋಳಿಗೆಯೋ ಭಾರ
ಘುಸು ಘುಸು ಎಂದು ಬೆಂದಕಲ್ಲಿನ ಮೇಲೆ
ಖಾಖಿ ತೊಗಲಿನ ಪೋಲಿಸನವನಿಗೆ ಕಡ್ಡಾಯದ ಕವಾಯತ್ತು
ಇದ್ದ ಕಿರುಜಾಗದಲಿ ಇರುವೆಗೂ ಸಂಸಾರ



ಹೆಂಡತಿಯ ಕರಕರೆಗೆ ಬಿದ್ದು ಪೊಕಿಂಗಿನ ಚಟ ಹಿಡಿಸಿಕೊಂಡವನಿವ
ಆಫೀಸಬಿಟ್ಟಂಯ ಬಿಟ್ಟು ಹೋಟೇಲಿನಲಿ
ಚಹಕುಡಿದು ಒಂದಾಣೆಯಲಿ ತಲೆ ರಿಪೇರಿ ಮಾಡಿಸಿಕೊಂಡವನವ
ತಿಂಗಳಗೂಲಿ ಸಾಲದೇ ಕಂಡಲಿ ಪಾರ್ಟಟ್ಯಾಮು ದುಡಿದು
ಮನೆ ನಡೆಸುವ ಹದಿನೈದು ಮಕ್ಕಳ ಅಪ್ಪ......ಹೆಂಡರ ಗಂಡ
ಕತ್ತೆ ಮೆಯ್ದಲ್ಲಿ ಮತ್ತೆ ನೋಯ್ದು ಬರಿಗೈಯಲ್ಲಿ ಮರಳುವ ಒಬ್ಬನಿದ್ದ
ಹುಳ ಹುಪ್ಪಡಿಗಳು ಬುಸುಬುಸುಗೊಳುವ ಮಧ್ಯದಲಿ

ಕೈಸೋತ ಪೋಲೀಸನ ಮೇಲೆ ಕರುಣೆದೋರಲೋ ಏನೋ
ದಿಣಕರನು ಬಂದೊಂದು ಟ್ಯಾಕ್ಸಿಯು ಹಿಡಿದು
ವಿಶ್ರಾಂತಿಯ ಮನೆಗೆ ಪಡೆದು ಬಿಟ್ಟ

ವಿಲಾಸಿ :

ಉದ್ಯಾನದಲಿ ಜೋಕಾಲಿ ಅದೋ ತೂಗುತಿತ್ತು
ಎಲ್ಲವನೂ ಮರೆತಿತ್ತು ದೇಹ ಭಾರವ ಹೊತ್ತು
"ಹೇಳಲಾರೆನು ಹೇಳದುಳಿಯಲಾರೆನು" ಎಂದು
ಆಗಾಗ್ಗೆ ಲರಗುಡುತ್ತಿತ್ತು ಸೀಟಿನ ಹಲಿಗೆ
ಕಾಕಶ್ವಾಸ ಹಿಡಿದ ಅವು ಉಬ್ಬಸಪಡುತ್ತಿದ್ದವು
ಗಂಧ ಶ್ವಾಸದ ಗಾಳಿಸೋಂಕದ 'ನೈನಾ, ಮೈನಾ' ಅಲ್ಲಿದ್ದವು
ಹರೆಯ ಮೀರಿದ ಮೇಲೆ ಹಡೆದ
ಹತ್ತು ಮಕ್ಕಳ ತಾಯಿ ಕೃಶವಾದ ದೇಹದಲಿ ನಿಂತಿದ್ದವು.
ವರುಷಕ್ಕೊಮ್ಮೆ ವನಮಹೋತ್ಸವಕೆ ಅವರೆಲ್ಲ ಹುಟ್ಟುಹಬ್ಬ
ಮರದ ಕೆಳಗಡೆಗೆಲ್ಲ ತಂಪುಬಯಸಿದ್ದ ಜೋಡಿಗಳು
ಹರಿದು ಹಂಚಿದ್ದ ತೆರನಾಗಿ ಕುಳಿತಿದ್ದವು



ಬಂದಿರುವ ಮಕ್ಕಳು ಮಣ್ಣಿನಲಿ ಮನೆ ಕಟ್ಟುವಾಗ
ಮರದ ಮೇಲಿನ ಗುಬ್ಬಿ ನಗುತಿತ್ತು
ಬಣ್ಣ ಬಣ್ಣದ ಆಬಾಲ ವೃದ್ಧೆಯರಲ್ಲಿ ಪೈಪೋಟಿ ನಡೆಸಿದ್ದರು
ಸಮವ್ಯಸ್ತ ಜೋಡಿಗಳು ಜೀವನದ ತಿಜೋರಿ ಇದು
ಇದರ ಕೀಲಿಕೈ ಸೇರಿದುದು ಅವನ ಕೈ
ಗೊತ್ತಾದ ಬೀಗಕ್ಕೆ ಗೊತ್ತಾದ ಕೈ, ಸೈ ಇದು ರೂಢಿ
ಎಲ್ಲರಿಗೊಂದೇ ಬೇಕಾದುದಲ್ಲಿ
ಕೂಡಿನಲಿಯುವದು ನೆರೆಯುವದು
ಹಲ್ಲು ಮುಚ್ಚಿದ ಬಾವಿಯಂತೆ
ಹಲ್ಲು ಮುಚ್ಚಿದ ಬಾಯಿಗಳು ಹಲವು
ಕೈಗಡದ ನಗೆನಕ್ಕು ಜಾರಿ ಪಾರಾದವರು
ಚಿತ್ರವನೇ ಒತ್ತಿಟ್ಟು ಬತ್ತಿದ ವಿನೋದಕೆ ಜೋತು ಬಿದ್ದವರು
ನಾಡಿನಾಡಿನಲ್ಲಿಯೂ ಸಾಹೇಬರ ಧ್ವನಿ
ಉದ್ಯಾನವೂ ಕೊಡದೇ ಅದಕ್ಕೊಂದೇ ಮರುದನಿ
ದಿನದ ಹಳಸಿದ ಸುದ್ದಿ ಕಿವಿಮೂಸಿ ಬಂದಾಗ
ಗಂಟಲಕೆ ವಾಕರಿಕೆ ತುಂಬುತಿತ್ತು
'ಹಾಡಿದ್ದೇ ಹಾಡು ಕಿಸಬಾಯಿದಾಸ'
ಏನು ತಲೆ ನೋವೇ?
ಅನಾಸಿನ್ನೇ? ಎಸ್ಪ್ರೋವೇ?

ಎಂದು ಗಾಳಿ ಮೈ ಚುಚ್ಚುವಾಗ
ಪ್ರಭಾಕರನು ಮನೆಯತ್ತ ಕಾಲನೆಳೆದ

* * * *

ಲಿಪ್‌ಸ್ಟಿಕಿನವರೆಲ್ಲ ತಲೆಬಾಗಿದರು
ಮುಗುಳು ನಕ್ಕಿತು ಗಾಳಿ
ರಟ್ಟೆಮುರಿದವರೆಲ್ಲ ತಳಮಳಿಸಿ ಹಿಡಿದವೋ ಗುಡಗಿನ ದಾರಿ
ನಿತ್ಯದ ಬಾರಿ
ಹಗಲು ನಾಚಿತು ಬಲ್ಬುಗಳ ಬೆಳಕ ಕಂಡು
ಸದ್ದಿಲ್ಲದೇ ಮರೆಯಾಯಿತು
ಎದ್ದರು ಕೆಲವರು ಬಿದ್ದರು ಕೆಲವರು.

—ಸುಂದರ ನಾಡಕರ್ಣಿ



## ಉಪ್ಪು ನೀರು

ಜಗದ ಕಡಲನು ಸುತ್ತುತಿದೆ ಹಗಲಿರುಳ-ಹಡಗು
ನಿಮಿನಿಮಿಷದೊಂದು ತೆರೆತೆರೆವ ಅನಿಮಿಷ-ಮಿಣುಕು
ಗಾಳಿ-ಬಿರುಗಾಳಿ-ಸುಳಿ ಕರುಣೆ-ಕ್ರೌರ್ಯದ ತೊಡಕು
ರಟ್ಟೆ ಸೋತರು ಮತ್ತೆ ಹುಟ್ಟು ಹಾಕುವ ಬೆಡಗು

ಮೂಡ-ಪಡುವಣ ಮುಖಕೆ ರಕ್ತಚಿಮ್ಮುವ ಹೊತ್ತು
ಜೀವಜೀವದ ನೀರು ಪುಟಿದು ಸಾಗರವರಿದು
ಒಡಲ ಕಡೆವುದು ದಂಡೆಗಪ್ಪಳಿಸಿ ನೊರೆಯುವದು
ಹಿಮಗಿರಿ ತಿಮಿಂಗಿಲಗಳಜ್ಜಗಾವಲು ಸುತ್ತು!

ಮಳಲಿನಂಚಿಗೆ ಬಾಯಿಬಿಡುವ ಭಾವದ ಸಿಂಪು
ತಳದ ಕತ್ತಲಗವಿಯ ತೊಳೆವ ಜೀವದ ಮುತ್ತು
ನಡುವೆ ಅಪರಂಪಾರ-ಮುಳುಗಿ ಏಳುವ ಬದುಕು

ಸಂತತ ಸ್ವತಂತ್ರವಿದು ಯಾರೆ ಹೂಡಲಿ ಸಂಪು
ತಪ್ಪು ಯಾರದು?—ಎಲ್ಲ ಉಪ್ಪುನೀರಿಗೆ ಗೊತ್ತು
ಈ ಸರಕು ಬಂದರಿಗೆ ಒಯ್ದು ಹಿಗೆದರೆ ಸಾಕು

—ಚೆನ್ನವೀರ ಕಣವಿ

ಮಕ್ಕಳ ವಿಭಾಗ

# ಪ್ರಾಮಾಣಿಕ ಸೇವಕ


ಲೇಖಿಕೆ:
ಶಾಂತಲಾ ಬಿಳಂಜಿ
ಕಂಪಲಿ.


ವಿಜಯಪುರದಲ್ಲಿ ವಿಜಯವರ್ಮ ನೆಂಬ ರಾಜನು ರಾಜ್ಯಭಾರ ಮಾಡುತ್ತಿದ್ದನು. ರಾಜನು ಬಹಳ ಉದಾರಿಯೂ ಧರ್ಮಾತ್ಮನೂ ಆಗಿದ್ದನು. ಪ್ರಜೆಗಳನ್ನು ಮಕ್ಕಳಂತೆ ನೋಡಿಕೊಳ್ಳುತ್ತಿದ್ದನು. ತನ್ನ ಶೂರತನದಿಂದ ರಾಜ್ಯವನ್ನು ದಿನ-ದಿನಕ್ಕೆ ವಿಸ್ತರಿಸುತ್ತ ನಡೆದಿದ್ದನು. ಅಂತೆಯೇ ಬುದ್ಧಿವಂತಿಕೆಯಿಂದ ರಾಜ್ಯ ಸಹಿತ ಕಾಪಾಡುತ್ತಿದ್ದನು. ರಾಜ್ಯದ ಎಲ್ಲ ಕೆಲಸಗಳಿಗೂ ನಂಬಿಕೆಯ ಸೇವಕರನ್ನು ಆರಿಸಿ ನೇಮಿಸಿದ್ದನು.

ಕಾಲಕ್ರಮೇಣ ಕರುಣಾಳು ರಾಜನಿಂದಾಗಿ ಎಲ್ಲ ಕಡೆಗಳಲ್ಲೂ ಸುಖ-ಶಾಂತಿ ನೆಲೆಸಿದುವು. ಕೆಲಸವಿಲ್ಲದ ಅಧಿಕಾರಿಗಳಿಗೆ ಗರ್ವ ಉಂಟಾಯಿತು ಮತ್ತು ಧನದ ಲಾಲಸೆಯುಂಟಾಯಿತು. ಸ್ವಾರ್ಥಕ್ಕಾಗಿ ಅವರು ಜನರನ್ನು ಪೀಡಿಸಲಾರಂಭಿಸಿದರು. ರಾಜ್ಯದಲ್ಲಿ ಅಲ್ಲಲ್ಲಿ ಅನ್ಯಾಯದ ಹೊಗೆಯಾಡಲಾರಂಭಿಸಿತು. ಮೊದಲಲ್ಲಿ ಈ ವಿಷಯವು ರಾಜನಿಗೆ ತಿಳಿದಿರಲಿಲ್ಲ. ಒಂದು ದಿನ ಗುಪ್ತಚಾರರಿಂದ ಈ ಸಮಾಚಾರ ಕೇಳಿ ಅವನಿಗೆ ಆಶ್ಚರ್ಯವಾಯಿತು. ಕೂಡಲೇ ವೇಷ ಮರೆಯಿಸಿಕೊಂಡು ಹಗಲು ರಾತ್ರಿಯೆನ್ನದೆ ದೇಶದಲ್ಲೆಲ್ಲಾ ತಿರುಗಾಡಿದನು. ಅತ್ಯಾಚಾರದ ಮೂಲ ತಿಳಿದು ಸಂಕಟಪಟ್ಟನು. ಏಕೆಂದರೆ ದರಬಾರಿನ ಕೆಲ ಮುಖ್ಯ ಜನರು ಇದರಲ್ಲಿ ಸೇರಿದ್ದರು.

ದೊರೆಗೆ ಇದೊಂದು ಚಿಂತೆಯಾಯಿತು. ಆಹಾರದ ಕಡೆ ಗಮನವಿರಲಿಲ್ಲ. ಒಂದು ಆಲೋಚನೆ ಹೊಳೆಯಿತು: ಪ್ರಾಮಾಣಿಕ ವ್ಯಕ್ತಿಯನ್ನು ಶೋಧಿಸಿ, ಮುಖ್ಯಸ್ಥಾನಕ್ಕೆ ನೇಮಿಸಿ ಈ ಉಪಾಯದಿಂದ ದುರಾಶೆಯ ಜನರನ್ನು ಹೊರಗೆಳೆಯಬೇಕೆಂದು.

ರಾಜನು ತನ್ನ ಯೋಜನೆಯಂತೆ ಸೇವಕನನ್ನು ಶೋಧಿಸತೊಡಗಿದನು. ಅನೇಕ ಶೋಧನೆಗಳ ನಂತರ, ರಣಧೀರನೆಂಬ ಓರ್ವ ಸೇವಕನು ದೊರೆತನು. ರಣಧೀರನು ಬಹು ಕುರೂಪಿ. ಆದರೆ ಬಹಳ ಸೂಕ್ಷ್ಮಮತಿ, ಧೀರ ಮತ್ತು ಪ್ರಾಮಾಣಿಕ. ರಾಜನು ರಣಧೀರನಿಗೆ ಅಧಿಕಾರ ಕೊಟ್ಟು, ರಾಜ್ಯದ ಪ್ರಮುಖ ಕೆಲಸಗಳಿಗೆ ಮೇಲ್ವಿಚಾರಕನಾಗಿ ನೇಮಿಸಿದನು.

ವಂಚಕರಾದ ದರಬಾರಿಗಳಿಗೆ ಈ ಹೊಸ ಹುದ್ದೆಯು ಕಂಟಕವಾಯಿತು. ಕುರೂಪಿಯಾದ ಅಧಿಕಾರಿಗೆ ಪೂರ್ಣ ಅಧಿಕಾರ ಕೊಟ್ಟದ್ದರಿಂದ ರಾಜನು ತಮ್ಮನ್ನು ಅಪ್ರಾಮಾಣಿಕರೆಂದು ತಿಳಿದಿರುವನೆಂದೂ ಕೋಪವಾಯಿತು. ಅವರು ಯುಕ್ತಿ ಮಾಡಿ ಹೇಗಾದರೂ ರಣಧೀರನನ್ನು ಓಡಿಸಬೇಕೆಂದು ಆಲೋಚಿಸಿ, ಅವನ ಕಾರ್ಯಕ್ರಮಗಳಿಗೆ ಕೀಟಲೆ ಕೊಡಲಾರಂಭಿಸಿದರು. ಅಲ್ಲದೆ ಅವನ ಬಗ್ಗೆ ಇಲ್ಲಸಲ್ಲದ ಚಾಡಿಗಳನ್ನು ಸಹ ಹೇಳಲಾರಂಭಿಸಿದರು. ಗಣ್ಯ ಜನರ ಮುಖಾಂತರ ರಾಜನ ಕಿವಿಯ ವರೆಗೆ ಸುಳ್ಳು ಆರೋಪ ಹೋಗುವಂತೆ ಮಾಡಿದರು.

ರಾಜನಿಯಮದಂತೆ ಆರೋಪಗಳ ತೀರ್ಮಾನ ಆಗಲೇಬೇಕು. ಈ ಆರೋಪದಿಂದ ರಾಜನಿಗೆ ಬಹಳ ಸಂತೋಷವಾಯಿತು. ಈ ಆರೋಪದ ವೇಳೆಯಲ್ಲಿ ಎಲ್ಲರ ಗುಟ್ಟು ಬಯಲಿಗೆ ಬಂದು, ರಣಧೀರನ ಪ್ರಾಮಾಣಿಕತೆಯ ಪರೀಕ್ಷೆಯಾಗುತ್ತದೆ. 'ಅಧಿಕಾರ ಮದದಿಂದ ರಣಧೀರ ಬದಲಿಯಾಗಿದ್ದರೆ' ತಿಳಿಯುತ್ತದೆ. ಎಂದು, ಆಲೋಚನೆ ಮಾಡಿ ಸಭೆ ಸೇರಲು ಆಜ್ಞೆ ಮಾಡಿದನು.

ಸಭೆಯು ಕೂಡಿದೆ. ಎಲ್ಲ ಅಧಿಕಾರಿಗಳು ಸೇರಿದ್ದಾರೆ. ನಾಗರಿಕರು ಬಂದಿದ್ದಾರೆ. ವೇಳೆಗೆ ಸರಿಯಾಗಿ ರಾಜನು ಸಭೆಗೆ ಬಂದನು ಬರುವ ವೇಳೆಯಲ್ಲಿ ತನ್ನ ಕೊರಳಲ್ಲಿ ಅಪೂರ್ವ ಮಣಿಹಾರವನ್ನು ಧರಿಸಿಕೊಂಡು ಬಂದಿದ್ದನು. ಅದರ ದಾರವನ್ನು ಸಡಿಲಮಾಡಿಕೊಂಡು ಬಂದಿದ್ದನು. ಸಭೆಯ ವಂದನೆ ಸ್ವೀಕರಿಸುತ್ತಿದ್ದಾಗ, ಹಾರವು ಹರಿದು ಮುತ್ತು, ರತ್ನ ಕೆಳಗೆ ಬಿದ್ದುವು. ಕೂಡಲೇ ರಾಜನು "ಕೆಳಗೆ ಬಿದ್ದ ವಸ್ತುಗಳು ನಿಮ್ಮವೇ ಆಗಿವೆ. ಯಾರು ಬೇಕಾದರೂ ಆರಿಸಿಕೊಳ್ಳಿ" ಎಂದನು. ಕೂಡಲೇ ರಣಧೀರನನ್ನು ಬಿಟ್ಟು, ಉಳಿದ ಎಲ್ಲ ವಂಚಕ ದರಬಾರಿಗಳು ಮುತ್ತು, ರತ್ನಗಳನ್ನು ಆಯ್ದುಕೊಳ್ಳುತ್ತಾ ಜಗಳ ಮಾಡತೊಡ



ಗಿದರು. ಅಂತು ಎಲ್ಲವೂ ಮುಗಿಯಿತು. ರಾಜನು ಎಲ್ಲ ದರಬಾರಿಗಳಿಂದ ಅವರಿಗೆ ಸಿಕ್ಕ ಧನದ ಹೇಳಿಕೆಯನ್ನು ಪಡೆದನು. ನಂತರ ರಾಜನು ರಣಧೀರನನ್ನು ಕರೆದು ಕೇಳಿದನು ಅದಕ್ಕೆ ರಣಧೀರನು– "ರಾಜನ್ ನನಗೆ ಏನೂ ಸಿಕ್ಕಲಿಲ್ಲ; ನಾನು ಆರಿಸಲಿಲ್ಲ. ನನ್ನಗೆ ನಿಮ್ಮ ಜೀವವೇ ಅತುಲೈಶ್ವರ್ಯ ನಿಮ್ಮ ಪ್ರಾಣವೇ ನನ್ನ ಜೀವ. ಈ ನಶ್ವರದಿಂದ ನನಗೇನಾಗ ಬೇಕಾಗಿದೆ?" ಎಂದನು.

ರಾಜನು ಅವನ ಉದಾರತೆಯನ್ನು ಕೊಂಡಾಡಿ, ಧನವನ್ನು ಆರಿಸಿದ ಆ ವಂಚಕ ದರಬಾರಿಗಳನ್ನು ಕಂಡುಹಿಡಿದು, ಸೆರೆಮನೆಗೆ ಕಳಿಸಿದನು. ರಣಧೀರನನ್ನು ನಂತರ ತನ್ನ ಅಂಗರಕ್ಷಕನನ್ನಾಗಿ ನೇಮಿಸಿದನು.



# ಮಗು ಕಂಡ ಝೂ

೧

ಮುಂಬೈ ನಗರದಿ ಅಪ್ಪನ ಜೊತೆಯಲಿ
ನಾನೂ 'ಝೂ' ಕಂಡ್‌ಬಂದೆ
ಚಿತ್ರವಿಚಿತ್ರದ ಪ್ರಾಣಿಯ ಬಳಗಾ
ನೋಡುತ ನಾ ಬೆರಗಾದೆ

೨

ನೆರಮನೆ ರಂಗನ ತೆರದಲಿ ಮಂಗವು
ಅಣಕಿಸಿ ನನ್ನೆಡೆ ನೋಡಿತ್ತು
ಹಣಿಕಿ ಹಾಕಿರಲು ಸಂಗನ ತೆರದಲಿ
ಟೊಪ್ಪಿಗೆಯನ್ನೇ ಕಸಿದಿತ್ತು

೩

ಚಿಕ್ಕಮ್ಮನ ಗುಡುಗಿನ ಸಪ್ಪಳ
ಹುಲಿ ಪಂಜರದಲಿ ತೋರಿತ್ತು
ಪುಟ್ಟ ಕಿಸೆಗಳನು ಅಜ್ಜಿಯ ತೆರದಲಿ
ಕರಡಿಯು ಮುಸು ಮುಸು ಮೂಸಿತ್ತು

೪

ಬಿಳಿಯ ಕುದುರೆಗೋ ಬಟ್ಟೆಯ ಬರೆದು
ಮೊಹರಂ ಹುಲಿಯನು ಮಾಡಿಹರು
ಸುಳ್ಳೇ ಪಳ್ಳೇ ಝಿಬ್ರಾ ಎಂದು
ಅದಕ್ಕೆ ಹೆಸರನು ಕೊಟ್ಟಿಹರದು.

೫

ಉದ್ದ ಮೋರೆಯಾ 'ಜಿರಾಫ್' ನೋಡಿದೆ
ಒಂಟೆಗಿಂತಲೂ ಉದ್ದವಿದೆ
ಊರಿಗೆ ತರುತಲಿ ಏರಿದೆನಾದರೆ
'ವಿಲಾಯ್ತಿ ಹುಣಿಸೆ' ಕೈಯಲಿದೆ.

೬

ಕೂದಲು ಕೆದರಿದೆ ನೆರಮನೆ ಹೆಜ್ಜು
ದುರುದುರನೇ ನನ್‌ನೋಡಿದೊಲು
'ಸಿಂಹ'ವೆಂಬುವದು ನೋಡಿತು ಎನ್ನೆಡೆ
ಅದರ ಗಂಟನೇ ಕಸಿದಪೊಲು

೭

'ಜೊಚ್ಚಿಲು ಗಂಡಸು; ನನಗೋ ಒಂದಕೆ
ಅಪ್ಪನು ಸಮ್ಮತಿ ಕೊಡಲಿಲ್ಲ
ಅತ್ತೂ ಕರೆದೂ ಕೊನೆಯಲಿ ನಾನು—
ಆನೆ ಸವಾರಿಯ ಬಿಡಲಿಲ್ಲ.

—ಜಿ. ವಿ. ಕುಲಕರ್ಣಿ, ಎಂ. ಎ.
ಮುಂಬಯಿ

---

# ಚತುರ ಪ್ರಧಾನಿ ಅವಾಂಟಿ

ನಮ್ಮಲ್ಲಿಯ ಬೀರಬಲ್ಲನಂತೆಯೇ ಓರ್ವ ವಿಲಕ್ಷಣ, ಚತುರ ಪ್ರಧಾನನಾಗಿ ಹೋದ. ಅವನ ಹೆಸರು ಅವಾಂಟೀ. ಅವನು ಚೀನ ದೇಶದಲ್ಲಿಯ ರಹವಾಸಿ. ಈ ಚೀನಿ ರಹವಾಸಿಯ ಅನೇಕ ವಿನೋದೀ ಕಥೆಗಳು ಚೀನದಲ್ಲಿ ಪ್ರಚಲಿತವಿವೆ. ಅವುಗಳಲ್ಲಿಯ ಒಂದು ಚಿಕ್ಕ ಹಾಗೂ ರುಚಿಕರ ಪ್ರಸಂಗವನ್ನು ಕೇಳಿ—

ಒಮ್ಮೆ, ಬಾದಶಹನು ಅವಾಂಟೀಯನ್ನು ಕೇಳಿದನು— ಅವಾಂಟೀ ನೀತಿ ಹಾಗೂ ಸಂಪತ್ತು ಇವುಗಳಲ್ಲಿಯ ಯಾವದಾದರೊಂದನ್ನು ಆರಿಸಬೇಕಾದರೆ ನಿನಗೆ ಯಾವ ವಸ್ತು ಮನಸ್ಸಿಗೆ ಬರುವದು?. ಅವಾಂಟೀ ಸ್ವಲ್ಪ ತಲೆ ತುರಸಿಕೊಂಡು ಉತ್ತರಿಸಿದನು.

"ಮಹಾರಾಜ ನಾನು ನೀತಿಗಿಂತಲೂ ಧನ ಸಂಪತ್ತಿಯನ್ನೇ ಆರಿಸುವೆ."

"ಎಲಾ, ಇದೇನು ನೀನು ಹೇಳೋದು?" ಬಾದಶಹರು ಆಶ್ಚರ್ಯದಿಂದ ಉದ್ಗಾರ ತೆಗೆದು, "ನಾನು ಇಲ್ಲಿಯವರೆಗೆ ನಿನ್ನನ್ನು



ನನ್ನಕಿಂತಲೂ ಹೆಚ್ಚು ನೀತಿವಂತ ಎಂದು ತಿಳಿದಿದ್ದೆ. ಆದರೆ ಈಗ ನೋಡಲು, ನಿನಗೆ ನೀತಿಗಿಂತ ಧನದ-ಸಂಪತ್ತಿನ ಮಹತ್ವ ಹೆಚ್ಚಿಗೆ ಎನಿಸಬೇಕೇ! ಇದು ಆಶ್ಚರ್ಯ. ಒಂದು ಒಳ್ಳೆಯ ಕೆಲಸ ಮಾಡಬೇಕಾದರೆ ಅದಕ್ಕೆ ಧನವೇ ಉತ್ತಮ ಸಾಧನವೆಂಬುದಕ್ಕೆ ನಾನು ಒಪ್ಪುವೆ. ಆದರೆ ನೀತಿಯ ಮುಂದೆ ಧನವು ಒಂದು ಕವಡಿಗೆ ಸಮಾನ ಎಂದು ನನಗೆ ಅನಿಸುತ್ತದೆ. ಒಂದು ವೇಳೆ ನಿನ್ನ ಸ್ಥಳದಲ್ಲಿ ನಾನಿದ್ದರೆ ಧನಕ್ಕಿಂತಲೂ ನೀತಿಗೇ ನಾನು ಹೆಚ್ಚು ಮಹತ್ವ ಕೊಡುತ್ತಿದ್ದೆ."

"ಮಹಾರಾಜ, ನೀವೆನ್ನುವದು ನಿಜ!" ಅವಾಂಟೀ ಶಾಂತರೀತಿಯಿಂದ ಉತ್ತರಿಸಿದ. "ಯಾರ ಹತ್ತಿರ ಯಾವ ವಸ್ತುವಿನ ಅಭಾವವಿರುತ್ತದೆಯೋ, ಅವರಿಗೆ ಆ ವಸ್ತುವನ್ನು ದೊರಕಿಸುವ ಇಚ್ಛೆ ಇರುವದು ಸಹಜವೇ ಅಲ್ಲವೇ?"......

ಅವಾಂಟಿಯ ಉತ್ತರವನ್ನು ಕೇಳಿ ಬಾದಶಹನು ಆನಂದ ಪಟ್ಟು ಅವನಿಗೆ ದೊಡ್ಡ ಬಹುಮಾನ ಕೊಟ್ಟು ದುಡ್ಡಿನ ಅಭಾವವನ್ನು ದೂರಪಡಿಸಿದನು.

ರಾಘು ಮುಳಗುಂದ, ಮುಂಬಯಿ

# ಕಾಶ್ಮೀರದ ಮಕ್ಕಳು

ಕಾಶ್ಮೀರ ಮಕ್ಕಳಿಗೆ ತೊಂದರೆಯೆಂಬುದೇ ಗೊತ್ತಾಗುವುದಿಲ್ಲ. ಬಡತನದ ಕಾರಣ, ಕಾಶ್ಮೀರದ ಜನರು ಓದು-ಬರಹಗಳಲ್ಲಿ ಬಹಳ ಹಿಂದುಳಿದವರಾಗಿರುತ್ತಾರೆ, ನಿಜ. ಈಗ ಅಲ್ಲಿಯ ಸರಕಾರದವರು ಪುಕ್ಕಟೆ ಶಿಕ್ಷಣ ಕೊಡುವ ಯೋಜನೆಯನ್ನು ಸುರುವು ಮಾಡಿದ್ದಾರೆ. ಮಕ್ಕಳನ್ನು ಶಾಲೆಗೆ ಕಳಿಸಿಕೊಡುವುದು ಕಡ್ಡಾಯವಾಗಿದೆ. ಆದರೂ ಕೂಡಾ ಅಲ್ಲಿ ಶಾಲೆಗಳು ಈಗ ಬಹಳ ಕಡಿಮೆ ಇವೆ. ಅನೇಕ ಕಡೆ ಮಕ್ಕಳು ೪-೫ ಮೈಲು ಕಾಲು ನಡಿಗೆಯಿಂದಲೇ ಶಾಲೆಗೆ ಹೋಗುತ್ತಾರೆ. ಅಲ್ಲಿ ಶಾಲೆಗಳು ಬಯಲು ಜಾಗೆಯಲ್ಲಿಯೇ ನಡೆಯುತ್ತವೆ. ಬೇಸಿಗೆಯಲ್ಲಿ ಬಿಸಿಲು ಹೆಚ್ಚಿಗೆ ಇರದ್ದರಿಂದ ಬಯಲು ಜಾಗೆಗಳಲ್ಲಿ ಕಂಗೊಳಿಸುತ್ತಲಿರುವ ಶಾಲೆಗಳಿಗೆ ಮಕ್ಕಳು ಬಹಳ ಹುರುಪಿನಿಂದ ಹೋಗುತ್ತಾರೆ.

ಕಾಶ್ಮೀರದ ಮಕ್ಕಳು ಕಲಿಯದೆ ಇದ್ದರೂ ಶ್ರಮದ ಕೆಲಸವನ್ನು ತುಂಬ ಮನಸ್ಸಿನಿಂದ ಮಾಡುತ್ತಾರೆ. ಒಂದೊಂದು ದುಡ್ಡನ್ನು ವಿಚಾರಮಾಡಿ ತಿಳಿದುಕೊಂಡು ಖರ್ಚು ಮಾಡುತ್ತಾರೆ. ಸುಳ್ಳು ಹೇಳುವುದಿಲ್ಲ, ಕಳವು ಮಾಡುವುದಿಲ್ಲ, ತಮ್ಮ ತಾಯಿ–ತಂದೆಗಳ, ಮತ್ತು ದೊಡ್ಡವರು ಹೇಳಿದುದನ್ನು ಕೇಳುತ್ತಾರೆ. ತಮ್ಮ ಬಂಧು-ಭಗಿನಿಯರ ಮತ್ತು ಜೊತೆಗಾರರೊಡನೆ ಪ್ರೀತಿಯಿಂದ ಇರುತ್ತಾರೆ.

ಅಲ್ಲಿ ದಲ್ ಸರೋವರದಲ್ಲಿ ನೆಹರೂಪಾರ್ಕ ಎಂಬ ಹೆಸರಿನ ಒಂದು ಉಪವನ ಇದೆ; ಮತ್ತು ಅಲ್ಲಿ ಒಂದು ಉಪಾಹಾರ ಮಂದಿರವೂ ಇದೆ. ಆದರಂತೆಯೇ ಉಪವನದೊಳಗೆ ಸಿಮೆಂಟಿನ ಒಂದು ಚಿಕ್ಕ ಹೌದನ್ನು ಮಾಡಿದ್ದಾರೆ. ಅದಕ್ಕೆ ಒಳಗೆಲ್ಲ ಬಿಳಿಯ ಬಣ್ಣ ಬಳೆದಿದ್ದಾರೆ. ಅದು ನೋಡಲಿಕ್ಕೆ ಕನ್ನಡಿಯ ಹಾಗೆ ಸ್ವಚ್ಛ ಕಾಣುತ್ತದೆ. ಅಲ್ಲಿಗೆ ನೋಡಲಿಕ್ಕೆಂದು ಹೋದವರು ಮೋಜಿಗಾಗಿ ಒಂದಾಣೆಯನ್ನೋ ಎರಡಾಣೆಯನ್ನೋ ಅದರೊಳಗೆ ಒಗೆಯುತ್ತಾರೆ. ಮಕ್ಕಳು ನೀರೊಳಗೆ ಧುಮುಕಿ ಮುಳುಗಿ ಅದನ್ನು ತೆಗೆದುಕೊಂಡು ಮೇಲಕ್ಕೆ ಬರುತ್ತಾರೆ. ಆ ನಾಣ್ಯವನ್ನು ತಂದವರಿಗೇ ಅದು ಸಲ್ಲುತ್ತದೆ. ಜನರಿಗೆ ಅದೊಂದು ಮೋಜೆನಿಸಿ ಬಿಡುತ್ತದೆ. ಆದರೆ ಅಲ್ಲಿಯ ಮಕ್ಕಳಿಗೆ ದುಡ್ಡಿನ ಆಶೆಯು ಮಾತ್ರ ಹೆಚ್ಚು ಆಗುತ್ತದೆ.



ಅಲ್ಲಿಗೆ ಹೋದವರು ಒಬ್ಬರೊಬ್ಬರನ್ನು ನೋಡಿ ದುಡ್ಡು ಹಾಕುತ್ತಲೇ ಇರುತ್ತಾರೆ. ಮಕ್ಕಳು ಹೌದಿನೊಳಗೆ ಇಳಿಯಲಿಕ್ಕೆ ಭಯ ಪಡುವುದಿಲ್ಲ. ಧೈರ್ಯದಿಂದ ಇಳಿದು, ದುಡ್ಡನ್ನು ಮೇಲಕ್ಕೆ ತೆಗೆದುಕೊಂಡು ಬರುತ್ತಾರೆ. ಓದು ಬರಹಗಳ ಜೊತೆಯಲ್ಲಿಯೇ ಇಂತಹ ಹಣ ಗಳಿಸುವ ಕೆಲಸಗಳನ್ನು, ಅಲ್ಲಿಯ ಮಕ್ಕಳಿಗೆ ಮಾಡಬೇಕಾಗುತ್ತದೆ.

ತನ್ನ ಸೌಂದರ್ಯದ ಕಾರಣ ಕಾಶ್ಮೀರವು ಭೂಮಿಯ ಮೇಲಿನ ಸ್ವರ್ಗವೆಂದು ಕಾಶ್ಮೀರಿಗಳು ತಿಳಿಯುತ್ತಾರೆ. ಜಗತ್ತಿನ ಮೂಲೆ ಮೂಲೆಗಳಿಂದ ಜನರು ಇದನ್ನು ನೋಡಲಿಕ್ಕೆ ನಮ್ಮ ದೇಶಕ್ಕೆ ಬರುತ್ತಾರೆ. ಭಾರತದ ಗುಡ್ಡದ ಮೇಲಿನ ಜನರು ಸಾಮಾನ್ಯವಾಗಿ ಬಡವರು. ಅಂತೆಯೆ ಕಾಶ್ಮೀರದ ಜನರು ಕೂಡಾ ಬಹಳ ಬಡವರಿರುತ್ತಾರೆ. ಆದರೆ ಬಡವರಾದರೂ ವಿಶ್ವಾಸಪಾತ್ರರೂ ಸರಳ ಸ್ವಭಾವಿಗಳೂ ಸ್ವಾವಲಂಬಿಗಳೂ ಪರಿಶ್ರಮಪ್ರಿಯರೂ ಆಗಿರುತ್ತಾರೆ.

ನಮ್ಮ ಡೋಣಿಯ ಒಡೆಯನ ಮಗಳು ರಾಜಿಯನ್ನೇ ನೋಡಿರಿ. ಸಲ್ವರ ಸದರಾ ಧರಿಸಿ ಮತ್ತು ತಲೆಯ ಮೇಲೆ ಒಂದು ಕೆಂಪು ಮಖಮಲ್ ಬಟ್ಟೆಯನ್ನು ಹೊದ್ದುಕೊಂಡು ಬಂದರೆ ಎಷ್ಟು ಚಂದವಾಗಿ ಕಾಣುತ್ತಾಳೆ. ಗುಲಾಬಿ ಗಲ್ಲ ಉದ್ದ ಮೂಗು ದುಂಡಗಿನ ಮುಖ ಹೀಗೆ ಸಾದಾ ವೇಷದಲ್ಲಿದ್ದರೂ ಕೂಡಾ ಅಷ್ಟು ಚಲುವೆಯಾಗಿ ಕಾಣುತ್ತಾಳೆ. ಅದರಂತೆಯೆ ಅವಳ ಅಣ್ಣ ಶಬನಮ್ಮನು ಅವಳಷ್ಟೇ ಚಲುವ. ಯಾರಾದರೂ ಪ್ರವಾಸಿಕರು ಬಂದರೆ ಅವರನ್ನು ಊರು ತೋರಿಸಲಿಕ್ಕೆ ಕರೆದುಕೊಂಡು ಹೋಗುವದು, ಅವರಿಗೆ ತರಕಾರಿಗಳನ್ನು ತಂದುಕೊಡುವದು, ಮತ್ತೆ ಏನಾದರೂ ಕೆಲಸವನ್ನು ಮಾಡುವದು ಮತ್ತು ಮನೆಯಲ್ಲಿ ತಂದೆ ತಾಯಿಗೆ ಸಹಾಯವಾಗುವದು. ಇಂಥ ಕೆಲಸಗಳಿಂದ ಅಲ್ಲಿಯ ಮಕ್ಕಳಿಗೆ ಜೀವನವನ್ನು ನಡೆಸಬೇಕಾಗುತ್ತದೆ. ಆದರೆ ದೊಡ್ಡವರಾದ ಮೇಲೆ ಇವರು ತಂದೆ ತಾಯಿಗಳಿಂದ ಸ್ವತಂತ್ರರಾಗುತ್ತಾರೆ. ನಮ್ಮ ಡೋಣಿಯೊಡೆಯನ ಹಿರಿಯ ಮಗ ಸುಲ್ತಾನ ತಾಯಿ-ತಂದೆಗಳ ಸಂಗಡ ಯಾವದೋ ಕಾರಣದಿಂದ ಸಿಟ್ಟು ಮಾಡಿಕೊಂಡು ಮನೆ ಬಿಟ್ಟು ಹೋಗಿ, ಒಂದು ಹೋಟೆಲಿನಲ್ಲಿ ತಟ್ಟೆ ಬಟ್ಟಲುಗಳನ್ನು ತೊಳೆಯುವ ಕೆಲಸವನ್ನು ಮಾಡಿಕೊಂಡು ಅಲ್ಲಿಯೇ ಇರುತ್ತಿದ್ದನು. ಆದರೆ ಹೀಗೆ ಎಷ್ಟು ದಿವಸ

ಅವನನ್ನು ತಂದೆ-ತಾಯಿಗಳು ಇರಗೊಡುತ್ತಾರೆ? ಅವನನ್ನು ಉಪಾಯದಿಂದ ಕರಕೊಂಡು ಬಂದರು. ಅವನಿಗೆ ಮದುವೆಗಾಗಿ ಹೆಣ್ಣುಗೊತ್ತುಮಾಡಿದರು. ಮದುವೆಯೂ ಇಪ್ಪರಲ್ಲಿಯೇ ಆಗಿ ಅವನು ತನ್ನ ಹೊಣೆಯನ್ನು ಅರಿಯಬಹುದು.

ಕಾಶ್ಮೀರದ ಮಕ್ಕಳಲ್ಲಿ ಇನ್ನೂ ಕೆಲವು ವೈಶಿಷ್ಟ್ಯಗಳು ಇರುತ್ತವೆ. ಅವರು ಕೆಲಸದಲ್ಲಿ ತಮ್ಮ ತಾಯಿ-ತಂದೆಗಳಿಗೆ ಸಹಾಯ ಮಾಡುವದು ತಮ್ಮ ಕರ್ತವ್ಯವೆಂದು ತಿಳಿಯುತ್ತಾರೆ. ಅಂದ ಚಂದವಾದ ಗಾಲಿಚೆಗಳನ್ನು ಮತ್ತು ಶಾಲುಗಳನ್ನು ನೇಯುತ್ತಾರೆ. ಬೇರೆ ಕಸೂತಿಯ ಕೆಲಸವನ್ನು ಮತ್ತು ಚಿತ್ರ ತೆಗೆಯುವದನ್ನು ಮಾಡುತ್ತಾರೆ. ಪಶುಗಳನ್ನು ಮೇಯಿಸಲಿಕ್ಕೆಅಡವಿಗೆ ತೆಗೆದುಕೊಂಡು ಹೋಗುತ್ತಾರೆ ಸಿಕಾರಾ (ಅಲ್ಲಿಯ ಒಂದು ವಿಶಿಷ್ಟ ಡೋಣಿ) ದಲ್ಲಿಕೂಡಿಸಿಕೊಂಡು ಅಥವಾನಡೆದುಕೊಂಡು ಯಾತ್ರಿಕರಿಗೆ ನೋಡತಕ್ಕಂಥ ಸ್ಥಳಗಳನ್ನು ತೋರಿಸಲಿಕ್ಕೆ ಹೋಗುತ್ತಾರೆ. ಸಿಕಾರಾದಲ್ಲಿ ಕುಳಿತುಕೊಂಡು ಅಥವಾ ನಡೆದುಕೊಂಡು ಹಣ್ಣು ಹೂಗಳನ್ನು ಮತ್ತು ತರಕಾರಿಗಳನ್ನು ಮಾರುತ್ತಾರೆ. ನದಿಯೊಳಗೆ ಮತ್ತು ಝರಿಯೊಳಗೆ ಈಜುವದು, ಮೀನ ಹಿಡಿಯುವದು ಅವರಿಗೆ ಬಹಳ ಮೆಚ್ಚಿನ ಕೆಲಸ. ಅವರಿಗೆ ಎಲ್ಲಕ್ಕಿಂತ ಹೆಚ್ಚು ಸೇರುವ ಕಾರ್ಯವೆಂದರೆ ಪ್ರವಾಸಿಕರಿಗೆ ತಮ್ಮ ನಾಡಿನ ಸುಂದರ ಸ್ಥಳಗಳನ್ನು ತೋರಿಸುವದು.

ಕಾಶ್ಮೀರ ನೋಡಲಿಕ್ಕೆ ಹೋದ ಜನರು ಗುಲಮರ್ಗಕ್ಕೆ ಹೋಗುತ್ತಾರೆ. ದಲ್ ಸರೋವರವನ್ನು ನೋಡುತ್ತಾರೆ. ಮೊಗಲ ಉದ್ಯಾನಗಳಲ್ಲಿ ತಿರುಗಾಡುತ್ತಾರೆ. ಬೇರೆ ಅನೇಕ ಸ್ಥಳಗಳನ್ನು ನೋಡುತ್ತಾರೆ; ಆದರೆ ಚಿಕ್ಕ ವಯಸ್ಸಿನಲ್ಲಿಯೇ ಹಿಂದೂ ಧರ್ಮದ ಪುನರುತ್ಥಾಪನೆಯನ್ನು ಮಾಡಿದ ಆದ್ಯ ಜಗದ್ಗುರು ಶ್ರೀ ಶಂಕರಾಚಾರ್ಯರು ಕಟ್ಟಿಸಿದ ಶಿವಮಂದಿರವನ್ನು ನೋಡಬೇಕೆಂದು ಎಷ್ಟೋ ಜನರಿಗೆ ತೋಚುವುದಿಲ್ಲ. ಅದು ಅಲ್ಲಿಯೇ ಎರಡು ಮೈಲುಗಳ ಆಚೆಗಿರುತ್ತದೆ. ನಮಗೂ ಅದನ್ನು ನೋಡಬೇಕೆಂಬ ಬಲವಾದ ಆಶೆ. ಆದರೆ ನಮಗೆ ಅದರ ದಾರಿಯು ಗೊತ್ತಿರಲಿಲ್ಲ. ಇದನ್ನು ತಿಳಿದು ರಾಜಿಯು ನಮ್ಮ ಸಂಗಡ ಸಂತೋಷದಿಂದ ಬಂದಳು. ಹಾದಿಯಲ್ಲಿ ಕಲ್ಲು-ಮುಳ್ಳುಗಳಿದ್ದರೂ ನಾವು ೧,೦೦೦ ಅಡಿ ಎತ್ತರವನ್ನೇರಿ ಗುಡಿಯನ್ನು ತಲುಪಿದೆವು. ಅದರಲ್ಲಿ ಬೆಣಚುಕಲ್ಲಿನ ಭವ್ಯವಾದ ಈಶ್ವರಲಿಂಗವಿದೆ. ಗುಡಿಯ ಸುತ್ತಲೂ ತರತರದ ಹೂಗಳಿಂದ ತುಂಬಿದ ಗಿಡಬಳ್ಳಿಗಳ ಉದ್ಯಾನವಿದೆ. ಅದೊಂದು ರಮಣೀಯವಾದ ಸ್ಥಳ; ಮಂದಿರದಲ್ಲಿ ಪ್ರಶಾಂತವಾದ ವಾತಾವರಣ, ಇದೆಲ್ಲವನ್ನು ನೋಡಿ ನಮಗೆ ಬಹಳ ಸಂತೋಷವಾಯಿತು. ಅದಕ್ಕೂ ಹೆಚ್ಚಿನದೆಂದರೆ ನಮ್ಮನ್ನು ಕರೆದುಕೊಂಡು ಹೋದ ಆ ರಾಜಿಯ ಉತ್ಸಾಹ, ಕಲ್ಲು-ಮುಳ್ಳುಗಳೆನ್ನದೆ, ಬಿಸಿಲು-ಗಾಳಿಗಳೆನ್ನದೆ ನಮಗಿಂತ ಮುಂದೆಯೇ ನೆಗಿಯುತ್ತಿದ್ದಳು ಆ ರಾಜಿ. ಕಾಶ್ಮೀರ ಮಕ್ಕಳಿಗೆ ಎಷ್ಟು ಉತ್ಸಾಹವಿರುತ್ತದೆ ಯಾವದೊಂದು ಕಾರ್ಯದಲ್ಲಿ!

ಕಾಶ್ಮೀರ ಮಕ್ಕಳು ನಿಜವಾಗಿಯೂ ಸುವರ್ಣದಲ್ಲಿ ಸುಗಂಧವು ಬೆರೆತಂತೆ ಇರುತ್ತಾರೆ ನಿಸರ್ಗವು ಅವರನ್ನು ಸುಂದರರನ್ನಾಗಿ ಮಾಡಿದೆ. ಅವರು ಸ್ವಭಾವದಿಂದ ವಿಶ್ವಾಸಪಾತ್ರರೂ ಕಷ್ಟಜೀವಿಗಳೂ ಆಗಿದ್ದಾರೆ.

ಅಲ್ಲಿಯ ಹೆಣ್ಣು ಹುಡಿಗೆಯರೆಲ್ಲ ಈಜಲಿಕ್ಕೆ ಕಲಿತಿರುತ್ತಾರೆ. ಅವರಿಗೆ ಡೋಣಿಯನ್ನು ನಡೆಸಲಿಕ್ಕೂ ಬರುತ್ತದೆ. ಆದರೆ ಹೆಚ್ಚಾಗಿ ಅವರು ಅಡುಗೆ ಮತ್ತು ಮನೆಯ ಬೇರೆ ಕೆಲಸಗಳಲ್ಲಿ ತಮ್ಮ ತಾಯಂದಿರಿಗೆ ಸಹಾಯ ಮಾಡುತ್ತಾರೆ. ಅವರು ಮುಖಕ್ಕೆ ಪಡದೆಯನ್ನು ಇಡದಿದ್ದರೂ ತುಂಬ ನಾಚಿಕೊಳ್ಳುತ್ತಾರೆ. ಬೆಳ್ಳಿಯ ತರತರದ ವಸ್ತುಗಳನ್ನು ಧರಿಸಲಿಕ್ಕೆ ಅವರಿಗ ಅತ್ಯಂತ ಸಂತೋಷ. ಅದರ ಕಂಠವು ಬಹಳ ಮಧುರವಾಗಿರುತ್ತದೆ. ಅಂತೆಯೇಕಾಶ್ಮೀರದ ಇಂಪಾದಹಾಡುಗಳನ್ನು ಕೇಳಿದರೆ ಅಷ್ಟುಆನಂದವಾಗುತ್ತದೆ. ಬಯಲುನಾಡುಗಳಲ್ಲಿ ಅತಿಯಾಗಿ ಬಿಸಿಲು ಇದ್ದಾಗ್ಗೆ ಕಾಶ್ಮೀರದಲ್ಲಿ ಚಳಿ ಇರುತ್ತದೆ. ಅಂತೆಯೇ ಅಲ್ಲಿ ಯಾವಾಗಲೂ ಉಣ್ಣೆಯ ಬಟ್ಟೆಗಳನ್ನು ಹಾಕಿಕೊಳ್ಳಬೇಕಾಗುತ್ತದೆ. ಚಳಿಗಾಲದ ಸ್ಥಿತಿಯನ್ನಂತೂ ಕೇಳಲೇಕೂಡದು. ಆ ದಿವಸಗಳಲ್ಲಿ ಹಿಮಬೀಳುತ್ತದೆ. ವಿಪರೀತ ಚಳಿಯಲ್ಲಿಯೂ ಕೂಡ ಅಲ್ಲಿಯ ಜನರು ಭಯಪಡುವದಿಲ್ಲ. ಅವರು ತಮ್ಮ ಕೋಣೆಗಳಲ್ಲಿ ಸಣ್ಣಸಣ್ಣ ಅಗ್ಗಿಷ್ಟಿಗೆಗಳನ್ನು ಇಟ್ಟುಕೊಳ್ಳುತ್ತಾರೆ; ಮತ್ತು ತಮ್ಮ ಎಲ್ಲ ಕೆಲಸಗಳನ್ನು ಸುರಕ್ಷಿತವಾಗಿ ಸಾಗಿಸಿಕೊಂಡು ಹೋಗುತ್ತಾರೆ. ಅವರ ಸಾಹಸಪ್ರಿಯತೆ ಮತ್ತು ಕಷ್ಟಸಹಿಷ್ಣುತೆಗಳು ಅನುಕರಣೀಯವಾಗಿವೆ.

—ಸುಮಿತ್ರಾ ಪಾಟೀಲ (ದಿಲ್ಲಿ)

# ದೀಪಾವಳಿಗೆ ದಿವಾಳಿ

ಒಂದು ಹರಟೆ — [illegible]



ಬಜೆಟ್ಟು ತಿಂಗಳು ತಿಂಗಳಲ್ಲಿ ಹೆಚ್ಚಾಗುತ್ತ ಹೋಯಿತು. ಯಾವ ಉಗ್ರೋಪಾಯಗಳಿಗೂ ಬಗ್ಗದ್ದರಿಂದ ಮಡದಿ ತವರುಮನೆಗೆ ಹೋದರೆ ಉಳಿತಾಯವಾಗಬಹುದೇನೊ ಅನಿಸಿತು. ಆದರೆ ಅದು ಹಿಡಿತಕ್ಕೆ ಬರಲೇ ಇಲ್ಲ. ದೀಪಾವಳಿಯ ಹೊತ್ತಿಗೆ ದಿವಾಳಿಯಾಗುವದನ್ನು ತಪ್ಪಿಸಲು ಕೊನೆಗೂ ಒಂದು ಉಪಾಯ ದೊರೆಯಿತು. ನಿಮಗೂ ಸಾಧ್ಯವೇನೊ ನೋಡಿರಿ!

---

ನಮ್ಮ ಮನೆಯ ಬಜೆಟ್ಟು ತಿಂಗಳು ತಿಂಗಳಿಗೂ ಬುಡಮೇಲಾಗುತ್ತದೆ. 'ಎಲ್ಲಾ ನಿನ್ನಿಂದಲೆ' ಎಂದು ನನ್ನ ಆರೋಪ. 'ಎಲ್ಲಾ ನಿಮ್ಮಿಂದಲೆ' ಎಂದು ಆಕೆಯ ಪ್ರತ್ಯಾರೋಪ.

"ಬೇಡ ಎಂದರೂ ನಾಲ್ಕು ಜರೀ ಸೀರೆ ಉದ್ರಿ ತಂದೆ....ಬಕೆಟ್ಟೂ ಚೆಂಬೂ ಕೂಡ ಸ್ಟೀಲ್ ಪಾತ್ರ ಇರಲಿ ಅಂತ ಉದ್ರಿ ತಂದುಬಿಟ್ಟೆದ್ದೀ. ಸ್ಟೇನ್‌ಲೆಸ್, ಸ್ಟೇನಲೆಸ್ ಅಂತ ಬಡಿದುಕೊಳ್ಳತೀ. ನಮ್ಮಿಬ್ಬರ ಮನಸ್ಸು ಸ್ಟೇನಲೆಸ್‌ನಂತಿದ್ದರೆ ಸಾಲದೇನು?" ಇದು ನನ್ನ ಆರೋಪ.

"ಸಾಕು—ನಾಲ್ಕು ಸೀರೆ ಒಂದೆರಡು ಭಾಂಡಿ ಸೇರಿ ನೂರು ರೂಪಾಯಿಗೇನೂ ಹೆಚ್ಚೊದಿಲ್ಲ. ತಿಂಗಳಾ ಹತ್ತತ್ತು ರೂಪಾಯಿಯಲ್ಲಿ ನಾನು ಮನೆ ಖರ್ಚಿನಲ್ಲಿ ಉಳಿಸತೀನಿ."

"ಉಳಿಸತೀನಿ ಅಂದರೆ ಯಾತರಲ್ಲಿ ಉಳಿಸತಿ. ಹ್ಯಾಗೆ ಉಳಿಸುತೀ?"

"ಒಂದು ಪಾವು ಹಾಲು ಕಡಿಮೆ ಮಾಡತೀನಿ. ನೀವು ಸಿಗರೇಟು ಕಡಿಮೆ ಮಾಡ್ರಿ."

"ನಿನ್ನ ಸ್ಟೇನಲೆಸ್ ಉದ್ರೀಗೆ ನನ್ನ ಸಿಗಾರೆಟ್ ಯಾಕೆ ಖೋತಾ ಆಗಬೇಕು? ನಿನ್ನ ನಿತ್ಯದ ಮೈಸೂರುಮಲ್ಲಿಗೆಮಾಲೆಗೆ ಖೋತಾ ಹಾಕು.."

"ಮಲ್ಲಿಗೆಮಾಲೆ ನನ್ನೊಬ್ಬಳಿಗೇ ಏನು?"

ಆಕೆಯೂ ನಕ್ಕಳು. ನಾನೂ ನಕ್ಕೆ.

"ಸರಿ. ನನ್ನ ಸಿಗರೇಟಿಗೂ ಕೈಹಚ್ಚಬೇಡ ಹಾಗಾದರೆ. ಬೇಕಾದರೆ ದಿನದ ಕಾಯಿಪಲ್ಲೇದೊಳಗೆ ಕಡಿಮೆ ಮಾಡು. ನನಗೇನು ಒಂದು ಮೆಂತೆಯ ಹಿಟ್ಟು ಒಂದು ಉಪ್ಪಿನ ಕಾಯಿ ಆದರೆ ಸಾಕು."

ಅಂತೂ ಒಪ್ಪಂದವಾಯಿತು. ಭಾಂಡಿ, ಬಟ್ಟೆಯ ಉದ್ರಿ ಮುಟ್ಟುವ ವರೆಗೂ ಭಾನುವಾರದ ದೋಸೆ, ದಿನದ ಕಾಯಿ-ಪಲ್ಲೆ, ಜಾದಾ ಚಹಾ ಎಲ್ಲಾ ಲೋಪವಾದುವು.

ಹೀಗೆ ಕಾಲು ಚಾಚುವ ಹೊತ್ತಿಗೆ ಮನೆಯಲ್ಲಿ ಅತಿಥಿಗಳು.

ಒಬ್ಬರಲ್ಲ, ಇಬ್ಬರಲ್ಲ, ಮೂವರಲ್ಲ—ನಾಲ್ಕು ವರೆ ಜನ!

"ನೋಡ್ರಿ. ನಮ್ಮ ಬಳಗಾನೊ ನಿಮ್ಮ ಬಳಗಾನೊ ಇದು?" ಎಂದು ಮಾತಿಗೊಮ್ಮೆ ತಿವಿತಿವಿದು ಹೇಳುವಳು. ಸರಿ, ನಿತ್ಯವೂ ತರಕಾರಿ. ನಿತ್ಯವೂ ನಾಲ್ಕು ನಾಲ್ಕು ಸಲ ಚಹಾ—ತಿಂಡಿ. ಯಥಾ ಪ್ರಕಾರ ಕಿರಾಣಿ ಉದ್ದರಿಯ ಬಿಲ್ಲು ಗಗನಕ್ಕೇರತೊಡಗಿತು.




"ಈ ತಿಂಗಳು ಕಿರಾಣಿ ಉದ್ರಿ ಐವತ್ತು ರೂಪಾಯಿ ಹೆಚ್ಚಾಗಿದೆ. ಅದನ್ನು ಉಳಿಸಲಿಕ್ಕೇ ಬೇಕು" ನನ್ನಾಕೆಗೆ ಮತ್ತೆ ಉಗ್ರೋಪಾಯ ಕೈಕೊಳ್ಳಲು ಸೂಚಿಸಿದೆ.

"ಏನು ಮಾಡಬೇಕಂತೀರಿ?"

"ಒಂದು ಹೊತ್ತಿನ ಚಹಾ ಬಂದ್. ನಿತ್ಯವೂ ಬರಿ ಗೊಡ್ಡ ಸಾರು. ತೊಗರಿಬೇಳೆ ಬಂದ್. ಹಬ್ಬಕ್ಕೆ ಮಾತ್ರ ತುಪ್ಪ. ಆದುದರಿಂದ ಬೆಣ್ಣೆ ಬಂದ್. ಅಡಿಗೆ ಸಿಹಿ ಅಗತ್ಯವಿಲ್ಲ. ಬೆಲ್ಲ ಬಂದ್."

ನಾನೂ ನಕ್ಕೆ. ನನ್ನಾಕೆಯೂ ನಕ್ಕಳು. ಅಂತೂ ಉಗ್ರೋಪಾಯ ಕಾರ್ಯರೂಪಕ್ಕೆ ಬಂತು.

ಉಗ್ರೋಪಾಯ ಕಾರ್ಯರೂಪಕ್ಕೆ ಬಂದು ಒಂದು ವಾರ ಕೂಡ ದಾಟಿರಲಿಲ್ಲ. ನನಗೆ ಫ್ಲೂ. ನಮ್ಮಾಕೆಗೆ ಫ್ಲೂ. ಚಿರಂಜೀವರಿಬ್ಬರಿಗೆ ಚಳಿ ಜ್ವರ. ಸರತಿಯ ಮೇಲೆ ಸರತಿ. ಸರಿ. ಈ ಸಲ ವೈದ್ಯರ ಬಿಲ್ಲು ಐವತ್ತಕ್ಕೇರಿತು.

"ನೋಡ್ರಿ ಹೊಟ್ಟೆತುಂಬ ಆರೋಗ್ಯದ ಊಟವಿಲ್ಲದೆ ಬೇನೆ ಬಿದ್ದದ್ದಾಯಿತು. ಬೆಣ್ಣೆ, ಬೇಳೆ, ಬೆಲ್ಲ ಎಲ್ಲಾನೂ ಇರಲಿ." ನನಗೂ ಸರಿಯೆನಿಸಿತು ಅದು. ಅಂತೂ ಇತ್ತ ಕಿರಾಣಿ ಬಿಲ್ಲು, ಡಾಕ್ಟರರ ಬಿಲ್ಲು ಕೂಡಿಯೇ ಹೆಡೆಯೆತ್ತಿದ್ದವು. ಇನ್ನು ಬಜೆಟ್ ಬಾಯಿಮುಚ್ಚಿಸುವುದು ಹೇಗೆ? ವಿಚಾರಿಸಿದೆ. ರಾಜ್ಯಗಳ ಬಜೆಟ್ ಬಾಯ್ದೂಡದಿದ್ದರೆ ಕೇಂದ್ರಕ್ಕೆ ಮೊರೆ ಹೋಗುತ್ತವೆ. ಸರಿ ನಾವು?

ಪ್ರಶ್ನೆಗೆ ಉತ್ತರ ಹುಡುಕುವುದು ತೊಂದರೆಯಾಗಲಿಲ್ಲ. ಅಂದೇ ಸಂಜೆಗೆ ನಮ್ಮ ಮಾವಯ್ಯನವರಿಂದ ಪತ್ರ. ಮಗಳನ್ನು ಗೌರೀ ಪೂಜೆ, ರಾಯರ ಆರಾಧನೆ, ಗಣೇಶಚತುರ್ಥಿಗಳಿಗಾಗಿ ಕಳಿಸಿಕೊಡಬೇಕು ಎಂದು.

ನಮ್ಮಾಕೆ ನಮ್ಮ ಚಿಕ್ಕ ಚಿರಂಜೀವ ಇಬ್ಬರೂ ಹೊರಡುವುದು ನಿಶ್ಚಿತವಾಯಿತು. "ಅಂತೂ ನಿಮ್ಮ ಖರ್ಚಿನ ಉಳಿತಾಯ ನಡೆಯಲಿ. ಕೈಯಲ್ಲಿ ಸ್ವಲ್ಪ ಹಣದ ಉಳಿತಾಯ ಆಗುವ ವರೆಗೂ ನಾನು ತವರುಮನೆಯಲ್ಲೇ ಇರುತ್ತೇನೆ." ನನಗೂ ಈ ಉಪಾಯ ದೇವಪ್ರೇಷಿತ ಎನಿಸಿತು. ಸಂತೋಷದಿಂದ ಒಪ್ಪಿದೆ.

"ಮತ್ತೆ ನನಗೆ ಹೋಗಿಬರುವ ಗಾಡಿಹಾಸಲು ಕೈ ಖರ್ಚಿಗೆ?"

"ಆಂ?" ನಾನು ಬೆಚ್ಚಿಬಿದ್ದೆ.

"ಮತ್ತೆ?"

"ಅಲ್ಲಾ ತೌವರುಮನೆಗೆ ಹೋಗುತ್ತಿದ್ದಿಯಲ್ಲ!"

"ಹೋದರೆ?"

"ಹೋಗಲಿ. ಬರೋಮುಂದಾದರೂ ನಿಮ್ಮಪ್ಪ ಕೊಡಬೇಡವೆ? ಕೊಡಬೇಡವೆ ಏನು, ಕೊಟ್ಟೇ ಕೊಡುತ್ತಾನೆ."

ಅಂತೂ ಜಕೇರಿ ನಡೆಸು ನನ್ನಿಂದ ಐವತ್ತು ರೂಪಾಯಿಗಳನ್ನು ಬಿಚ್ಚಿಸಿದಳು. ನಿರ್ವಾಹವಿಲ್ಲದೆ ಸುಮ್ಮನಾದೆ.



"ಹಾಗಾದರೆ ದೀಪಾವಳಿ ಕೂಡಾ ಮುಗಿಸಿಕೊಂಡೇ ಬಂದುಬಿಡು."

"ದೀಪಾವಳಿ ಯಾಕೆ ಉಗಾದಿ ಕೂಡಾ ಮುಗಿಸಿಕೊಂಡೇ ಬರ್ತೀನಿ. ಕೂಡಲೆ ಕಳಿಸಿಕೊಡಬೇಕು—ಅಂತ ನೀವು ಪತ್ರಾ ಹಾಕದಿದ್ದರೆ ಸಾಕು." ನಾನೂ ನಕ್ಕೆ. ನಮ್ಮಾಕೆಯೂ ನಕ್ಕಳು.

ಅಂತೂ ಮಿರಜ ಪ್ಯಾಸೆಂಜರು ಸಂಜೆ ಏಳಕ್ಕೆ ಹೊರಟಿತು. ಮರುದಿನ ಬೆಳಿಗ್ಗೆ ಎದ್ದ ಕೂಡಲೆ ಲೆಕ್ಕಕ್ಕೆ ಆರಂಭ. ಈಗ ಕರ್ಜಗಿ ಮುಟ್ಟಿರಬೇಕು. ಈಗ ಸಂಶಿ ಮುಟ್ಟಿರಬೇಕು. ಈಗ ಕುಂದಗೋಳ, ಈಗ ಹುಬ್ಬಳ್ಳಿ ಮುಟ್ಟಿರಬೇಕು ಎಂದು. ಮನೆಯೆಲ್ಲ ಭಣಗುಡುತಿತ್ತು. ರಣಗುಡುತಿತ್ತು. ಮನೆಯಲ್ಲಿ ನಾನೂ ನಮ್ಮ ಹಿರಿಯ ಚಿರಂಜೀವ. ಅವನ ಪರೀಕ್ಷೆಯ ಸಿದ್ಧತೆ ಬೇರೆ. ನಾನೇ ಕೈ ಸುಟ್ಟುಕೊಂಡು ಒಂದು ಅನ್ನ ಇಳಿಸಿದೆ. ಹಿಂದಿನ ದಿನವೇ ಈಡಾಗಿ ಚಪಾತಿ ಮಾಡಿದ್ದಳು; ಸಂಜೆಗೆ ಕೂಡ ಬರಿ ಚಪಾತಿಯ ಮೇಲೇ ಸಾಗಿತು.

ಮರುದಿನವೂ ಅವೇ ಚಪಾತಿ. ಅಡಿಗೆ ಮಾಡಲು ಬೇಸರ ಬಂತು. ಆ ಮೇಲೆ ಖಾನಾವಳಿಯಿಂದ ಡಬ್ಬಿ ತರಿಸುವದಕ್ಕೆ ಆರಂಭ. ರಾತ್ರಿಯೆಲ್ಲಾ ತುಂಬಾ ಬೇಜಾರು. ನಿತ್ಯವೂ ಒಂದು ಸಿನಿಮಾ. ಒಬ್ಬನಿಗೇ ನಿದೆ ಬಾರದು. ನನ್ನ ಮಿತ್ರನಿಗೂ ಸಿನಿಮಾಕ್ಕೆ ಆಮಂತ್ರಣ. ಮನೆಯಲ್ಲಿ ಅವನದೂ ಚಿತ್ರಾವತಿ.

ಹದಿನೈದು ದಿನ ದಾಟಿರಲಿಲ್ಲ. ಖಾನಾವಳಿಯ ಬಿಲ್ಲು ಹೆದರಿಸತೊಡಗಿತು. ಕೈಯಲ್ಲಿ ಕಾಸು ಉಳಿಯಲಿಲ್ಲ. ಸಿನಿಮಾ ಸಿಗರೇಟಿಗೇ ಕಿಸೆ ಬರಿದಾಯಿತು. ವಿಚಾರಿಸಿದೆ. ಮನೆಯ ಖರ್ಚು ಉಳಿಸಬೇಕು ಎಂದರೆ ಇದೇನು ದೀಡಿದುಪ್ಪಟ್ಟು ಖರ್ಚು ಮೈ-ಮೇಲೆ ಬಂತಲ್ಲ? ಮುಂದೆ?

ಖಾನಾವಳಿ ಡಬ್ಬಿ ಬಂದು ಮಾಡಿ, ನಿತ್ಯವೂ ಬ್ರೆಡ್ಡು, ಹಣ್ಣು, ಹಾಲುಗಳಿಗೆ ಸುರುವಾಯಿತು. ಬೆಳಿಗ್ಗೆ ಒಂದನ್ನ. ಸಂಜೆ ಅದನ್ನೆ ಉಳಿಸಿಡುವುದು. ನಮ್ಮ ಹಿರಿಯ ಚಿರಂಜೀವ ಎಂಜಲು ಗೋಮಕ್ಕೂ ಬೇಸತ್ತು ಹೋದ.

"ಕಾಕಾ, ಹುಬ್ಬಳ್ಳಿಗೆ ಕಾಗದಾ ಹಾಕಿಬಿಡಪ್ಪಾ" ಎಂದು ಬಹಳ ದೈನ್ಯದಿಂದ ಹೇಳಿದ. ನನಗೂ ಅಷ್ಟೇ ಬೇಕಿತ್ತು. ತಾರೀಖು, ತಿಥಿ ಎಣಿಕೆಹಾಕಿದೆ. ನಮ್ಮಾಕೆ ತೌರಿಗೆ ಹೋಗಿ ಹದಿನೈದು ದಿನಗಳು ಕೂಡ ಆಗಿರಲಿಲ್ಲ. ಇರಲಿ. ಇಷ್ಟಕ್ಕೂ ಏನಾದರೂ ಉಳಿತಾಯ ಆಗಿದೆಯೊ ಎಂದು ಅಳತೆ ಹಾಕಿದೆ. ಖರ್ಚಿಗೆ ಕ್ಯಾಶ್ ಐವತ್ತು ರೂಪಾಯಿ, ಖಾನಾವಳಿ ಹನ್ನೆರಡು ದಿನಕ್ಕೆ ಮೂವತ್ತಾರು ರೂಪಾಯಿ, ಸಿನಿಮಾ ಸಿಗರೇಟು ಹದಿನೆಂಟು ರೂಪಾಯಿ— ಮಿತ್ರನ ಖರ್ಚೂ ಸೇರಿ. ಇದೇನು ಜಾಣತನ ಮಾಡಿದಂತಾಯಿತು? ಹೀಗೇ ಎರಡು ತಿಂಗಳು ಎಂದರೆ ದೀಪಾವಳಿಯ ಹೊತ್ತಿಗೆ ದಿವಾಳಿ ತೆಗೆಯಬೇಕಾದೀತು ಎಂದು ಕೊಂಡು ಎಕ್ಸಪ್ರೆಸ್ ಪತ್ರ ಹಾಕಿದೆ, ಜರೂರ ಕಳಿಸಬೇಕು ಎಂದು.



ಪತ್ರಕ್ಕೆ ಉತ್ತರವೇನೊ ಬಂತು. ಆಕೆ ಬರಲಿಲ್ಲ. ನವರಾತ್ರಿ ಆದರೂ ಮುಗಿಯಲಿ ಎಂದು ಮಾವಯ್ಯ ಬರೆದಿದ್ದರು. ನನಗೆ ಸ್ವಲ್ಪ ಸಿಟ್ಟೂ ಬಂತು. ಅವರಿಗೇ ನವರಾತ್ರಿಯಂತೆ. ನನಗೋ ಇಲ್ಲಿ ಶಿವರಾತ್ರಿ ನಡೆದಿದೆ.

ಈ ಸಲ ತಾರು ಕಳಿಸಿದೆ. ಉತ್ತರವೇನೋ ಬಂತು. ಆಕೆ ಮಾತ್ರ ಬರಲಿಲ್ಲ. ಕನಿಷ್ಠ ಗಣೇಶ್ಚ-ತುರ್ಥಿ ಆದರೂ ಮುಗಿಯಲಿ ಎಂದು. ನಾನು



ತಾಳ್ಮೆಗೆಟ್ಟೆ. ನಮ್ಮ ಚಿರಂಜೀವನನ್ನು ಕಳಿಸಬೇಕೆಂದೆ. ಆತ ಪರೀಕ್ಷೆ ಎಂದು ಗೊಣಗಿದ. ನನಗೂ ರಜೆ ಸಿಗುವಂತಿರಲಿಲ್ಲ. ನಮ್ಮ ಮಿತ್ರನೇನೋ ಒಪ್ಪಿಕೊಂಡ. ಅವನ ಕೈಗೆ ಮತ್ತೆ ಮೂವತ್ತು ರೂಪಾಯಿ ಬಡಿದು ಅಟ್ಟಿಹಾಕಿದೆ. ಆತ ಮೂವತ್ತು ರೂಪಾಯಿಗಳ ಖರ್ಚು ಮಾಡಿ ತಿರುಗಿಬಂದ, ಮೋರೆ ಒಣಗಿಸಿಕೊಂಡು.

'ಮುಂದಿನ ಶನಿವಾರ ಖಂಡಿತ ಬರತಾರಂತಪಾ', ಎಂದು ಹೇಳಿದ. ಅಷ್ಟೇ ಸಮಾಧಾನ ತಂದುಕೊಂಡು ಉಸುರ್ಗರೆದು ಸುಮ್ಮನಾದೆ.

ಅಂತೂ ನಮ್ಮಾಕೆ ಬಂದಳು. ಎಷ್ಟೇ ಕೋಪ. ತಾಪವೆನಿಸಿದರೂ ಆಕೆಯ ಮುಖ ನೋಡಿ ಏನೋ ಸಮಾಧಾನ. ನಾನೂ ನಕ್ಕೆ. ನಮ್ಮಾಕೆಯೂ ನಕ್ಕಳು.

ದೀಪಾವಳಿಯ ಮುನ್ನಾದಿನ. ಅಂದಿನ ವರೆಗೆ ನಮ್ಮ Austere measures ಎಲ್ಲಾ ಸಮಾ-ಲೋಚಿಸಿದೆವು. ಉಳಿತಾಯ, ಉಳಿತಾಯ ಎನ್ನುತ್ತ ಮೈಮೇಲೆ ಮುನ್ನೂರು ರೂಪಾಯಿಯ ಹೆಚ್ಚಿನ ಹೊರೆ? ಇನ್ನೇನು ಉಪಾಯ? ಗಳಿಕೆ ಕಡಿಮೆಯೆಂದು ಉಳಿತಾಯ ಮಾಡಹೋದರೆ ಆಗದು, ಸಾಲದು. ಗಳಿಕೆಯನ್ನೇ ಹೆಚ್ಚಿಸುವ ಪ್ರಯತ್ನ ಮಾಡಬೇಕು ಎಂದು ನಿರ್ಧರಿಸಿದೆ.

ದೀಪಾವಳಿಯ ಸಾಮಾನುಗಳ ಯಾದಿ ನಮ್ಮಾಕೆ ನನ್ನ ಕೈಗಿತ್ತಳು. ಮುನ್ನೂರಕ್ಕೆ ಸ್ವಲ್ಪ ಕಡಿಮೆ ಇತ್ತು. ಹೃದಯಸ್ತಂಭನವಾಗದಂತೆ ನೋಡಿಕೊಂಡೆ.

'ಗಳಿಕೆಯನ್ನೇ ಹೆಚ್ಚಿಸುವ ಪ್ರಯತ್ನ ಮಾಡಿರಲ್ಲ?' ಎಂದಳು. ನಮ್ಮಾಕೆ ನಕ್ಕಳು. ನಾನು ನಗಲಿಲ್ಲ.

ತೃತೀಯ ಪಂಚವಾರ್ಷಿಕ ಯೋಜನೆಯ ಕರಡು ಹೊರಬಿದಿತ್ತು. ಮೂರನೇ ಪಂಚವಾರ್ಷಿಕ ಯೋಜನೆಯ ಬಜೆಟ್ ಅಭ್ಯಾಸ ಮಾಡಿದೆ. ಡೆಫಿ-ಸಿಟ್ ಬಜೆಟ್, ಹೆಚ್ಚಿನ ಕರಗಳು ಅನಿವಾರ್ಯ, ಪರದೇಶಗಳಿಂದ ಆರ್ಥಿಕ ಸಹಾಯ ಅವಶ್ಯ, ಪ್ರಾಯಿಜಬಾಂಡ್ ಮೊದಲಾದ ರೀತ್ಯಾ ಸಾಲ ಎತ್ತುವ ಹಂಚಿಕೆ!

ಅಬ್ಬಾ! ಈ ಬಜೆಟ್ ಬಾಯ್ದೂಡಿಸುವುದೆಂದರೇನು ಕಡಿಮೆ ಸಾಹಸವೆ? ಮೂರು ತಿಂಗಳಲ್ಲಿ ಖರ್ಚು ಕಡಿಮೆ ಮಾಡಹೋಗಿ ಮುನ್ನೂರು ರೂಪಾಯಿ ಸಾಲದ ಶೂಲಕ್ಕೆ ಸಿಕ್ಕು ಒದ್ದಾಡುವ ನನಗೆ ಹತ್ತು ಸಾವಿರ ಕೋಟಿಯ ಬಜೆಟ್ ಬಾಯ್ದೂಡಿಸುವ ಬೃಹದ್ಯೋಜನೆಗೆ ಅಚ್ಚರಿಬಟ್ಟೆ.

ನಮ್ಮೀ ಪಂಚಮಾಸಿಕ ಪ್ರಪಂಚಯೋಜನೆಯ ಹಣೇಬರಹ ಏನಾಯಿತು ಎಂದು ತಿಳಿದುಕೊಳ್ಳಲು ನೀವು ಆತುರರಾಗಿರಬೇಕಷ್ಟೆ? ಏನೂ ಇಲ್ಲ. ಒಂದೇ ಯೋಚನೆ ಹುಡುಕಿದೆ. ನಮ್ಮ ಚಿರಂಜೀವನ ಪರೀಕ್ಷೆಯೂ ಮುಗಿದಿತ್ತು. ನನ್ನ ನಾಲ್ವತ್ತು ದಿನಗಳ ಸಾಧಿತ ರಜೆಯೂ ಮಂಜೂರಾಗಿತ್ತು. ದೀಪಾ-ವಳಿಯನ್ನು ಮಾವಯ್ಯನ ಮನೆಯಲ್ಲೇ ಆಚರಿಸುವುದೆಂದು ನಿರ್ಧರಿಸಿದೆವು. ನರಕಚತುರ್ದಶಿ ಬೆಳಿಗ್ಗೆ ಒಂಭತ್ತು ಗಂಟೆಗೆ ಮಿರಜ ಪಾಸೆಂಜರ್ ಹುಬ್ಬಳ್ಳಿ ನಿಲ್ದಾಣ ಸೇರಿತು. ಆಮಂತ್ರಣ ಕೊಟ್ಟ ಅಳಿಯ



ತನವಲ್ಲವಾದ್ದರಿಂದ ಸ್ಟೇಶನ್ನಿಗೆ ಯಾರೂ ಬಂದಿರಲಿಲ್ಲ. ದೂರ್ವಾಸರಂತೆ ಅಳಿಯದೇವರೇ ಮಾವನ ಮನೆಗೆ ಪತ್ನೀ-ಪುತ್ರ ಸಮೇತ ರೇಡ್ ಮಾಡಿದರೆಂದು ಬೇರೆ ಹೇಳಬೇಕೆ?

# ಸತ್ಯಾಗ್ರಹ ಮೀಮಾಂಸೆ

ಲೇಖಕರು: ಶ್ರೀ. ಸಿದ್ದವನಹಳ್ಳಿ ಕೃಷ್ಣಶರ್ಮ,
ಬೆಂಗಳೂರು

ಸತ್ಯಾಗ್ರಹ ಸಾಮೂಹಿಕ ಚಳವಳಿ ಅಲ್ಲ. ಯಾರನ್ನೂ ಆಗ್ರಹ ಪಡಿಸುವುದೂ ಇಲ್ಲ. ತನಗೆ ತಿಳಿದ ಸತ್ಯವನ್ನು ಬಿಡಲಾರದಂತೆ ನಡೆಯುವುದೇ ಅದು. ಮೂಲಭೂತವಾಗಿ ಇದು ಪ್ರಾರ್ಥನೆ. ಸತ್ಯಸಾಕ್ಷಾತ್ಕಾರದಲ್ಲಿ ಗಾಢಶ್ರದ್ಧೆ ಆತ್ಮತ್ಯಾಗಗಳ ಅನುಭವ ಸಿಗಬೇಕು. ಆಗಲೇ ಸತ್ಯಾಗ್ರಹ ಪರಿಪೂರ್ಣವಾಗಿ ಸಫಲವಾಗುವುದು.

ಸತ್ಯಾಗ್ರಹ ಎಂದರೆ ಸಾಮೂಹಿಕ ಚಳುವಳಿ ಎಂದು ಅನೇಕರು ತಿಳಿದಿದ್ದಾರೆ. ಸತ್ಯಾಗ್ರಹದಲ್ಲಿ ಸಂಖ್ಯೆ ಮುಖ್ಯವಲ್ಲ. ಸತ್ಯವೇ ಮುಖ್ಯ. ಆಗ್ರಹ ಎಂದರೆ ದಕ್ಷಿಣದವರಾದ ನಮಗೆ ಸಂಪೂರ್ಣವಾಗಿ ಅರ್ಥವಾಗುವುದಿಲ್ಲ. ಆಗ್ರಹ ಎಂದರೆ ಯಾರನ್ನೋ ಒತ್ತಾಯ ಮಾಡುವುದೂ ಅಲ್ಲ.

ಗೆಳೆಯರನ್ನು ಊಟಕ್ಕೆ ಬನ್ನಿ ನಮ್ಮ ಮನೆಗೆ ಎಂದು ಆಗ್ರಹಪೂರ್ವಕವಾಗಿ ಕರೆಯುತ್ತೇವಲ್ಲ, ಅಲ್ಲಿ ಬಲವಂತ ಮಾಡಿ ಎಂಬ ಅರ್ಥದಲ್ಲಿ ಆ ಶಬ್ದವನ್ನು ಬಳಸುತ್ತೇವೆ.

ಸತ್ಯಾಗ್ರಹದಲ್ಲಿ ಬೇರೆ ಯಾರನ್ನೋ ಬಲವಂತ ಮಾಡುವ ಮಾತೇ ಇಲ್ಲ. ನಮ್ಮನ್ನು ನಾವೇ ಬಲವಂತ ಮಾಡಿಕೊಳ್ಳುವದು.

ಸತ್ಯಾಗ್ರಹ ಒಂದು ಸತ್ಯಪ್ರತಿಜ್ಞೆ, ಸತ್ಯವ್ರತ.

ಹರಿಶ್ಚಂದ್ರ ಸತ್ಯವ್ರತಿಯಾಗಿ ನಡೆದನಲ್ಲ— ಯಾರ ವಿರುದ್ಧವಾಗಿ ನಡೆಯಿತು ಅವನ ಸತ್ಯಾಚರಣೆ? ಯಾರ ವಿರುದ್ಧವಾಗಿಯೂ ಅಲ್ಲ, ತನ್ನ ಸತ್ಯಪ್ರತಿಜ್ಞೆಯ ನಿರ್ವಹಣಕ್ಕಾಗಿ.

ಅದರ ಪರಿಣಾಮ ವಿಶ್ವಾಮಿತ್ರನಿಗೆ ಸೋಲಾಯಿತು. ಆದರೆ ವಿಶ್ವಾಮಿತ್ರನನ್ನು ಸೋಲಿಸುವ ಉದ್ದೇಶ ಹರಿಶ್ಚಂದ್ರನದಲ್ಲ.

ಪ್ರಹ್ಲಾದ ಪ್ರಥಮ ಸತ್ಯಾಗ್ರಹಿ ಎನ್ನುತ್ತಿದ್ದರು ಗಾಂಧೀಜಿ. ಪ್ರಲ್ಹಾದ ತನ್ನ ಸತ್ಯವನ್ನು ಬಿಡಲಿಲ್ಲ. ಏನು ಮಾಡಿದರೂ ಬಿಡಲಿಲ್ಲ. ಹಿರಣ್ಯಕಶಿಪುವಿನ ವಿರುದ್ಧವಾಗಿ ಅವನು ಸತ್ಯಾಗ್ರಹ ಮಾಡಿದನೆ? ತಾನು ನಂಬಿದ್ದ ಸತ್ಯವನ್ನು ಬಿಡಲು ಒಪ್ಪಲಿಲ್ಲ. ಅದಕ್ಕಾಗಿ ವಿಷವನ್ನೆ ಕುಡಿದ, ಚಿತ್ರಹಿಂಸೆಯನ್ನು ಅನುಭವಿಸಿದ.

ಆದರೂ ಅವನಿಗೆ ತನ್ನ ತಂದೆಯ ವಿರುದ್ಧವಾಗಿ ಏನೂ ಮಾಡುವ ಯೋಚನೆಯಿರಲಿಲ್ಲ. ದೇವರು ಇದ್ದಾನೆ ಎಂಬ ಸತ್ಯ ಅವನ ತಂದೆಯ ತಿಳಿವಳಿಕೆಗೆ ವಿರುದ್ಧವಾಗಿದ್ದಿರಬಹುದು.

## ಸತ್ಯಾಗ್ರಹವೇಕೆ?

ಅವನ ಸತ್ಯಾಗ್ರಹ ತಂದೆಯ ತಿಳಿವಳಿಕೆಯ ವಿರುದ್ಧವೂ ಅಲ್ಲ, ತಂದೆಯ ವಿರುದ್ಧವಂತೂ ಅಲ್ಲವೇ ಅಲ್ಲ, ತನಗೆ ತಿಳಿದ ಸತ್ಯವನ್ನು ಬಿಡಲಾರದ್ದಕ್ಕೆ.

ವಿನೋಬಾಜಿ ಹೇಳಿದಂತೆ— ಯಾವುದೋ ವಿಷಯವನ್ನು ಹಿಡಿದು ಯಾರ ವಿರುದ್ಧವಾಗಿ ಯಾದರೂ ಏನೇ ಮಾಡಿಬಿಡುವುದು ಸತ್ಯಾಗ್ರಹವಲ್ಲ.

'ಸತ್ಯಾಗ್ರಹ ಮಾಡುತ್ತೇವೆ ಎಂದ ಕೂಡಲೆ ಜನರ ಮನಸ್ಸಿನಲ್ಲಿ ತಪ್ಪು ಅಭಿಪ್ರಾಯವಾಗಬಾರದು. ಅಂಥವರ ಫಲ ಒಳ್ಳೆಯದು ಆಗದು. ಯಾರಿಗಾಗಿ ನಾವು ಸತ್ಯಾಗ್ರಹ ಮಾಡುತ್ತೇವೋ ಅವರ ಮನಸ್ಸಿನಲ್ಲಿ ಪ್ರೇಮಭಾವ ಹೊರಹೊಮ್ಮುವ ಬದಲು ವಿರೋಧಭಾವ ಹುಟ್ಟೀತು.'

ಸತ್ಯಾಗ್ರಹ ಬೆದರಿಕೆ ಆಗಬಾರದು. ಏನನ್ನೋ ಸಾಧಿಸಿಕೊಳ್ಳುವುದಕ್ಕೆ ಮಾಡಿದ ಉಪಾಯವಾಗಬಾರದು.

ಹಿಂದೆ ಸಂತೆಗಳಲ್ಲಿ ಮೊಂಡ ಫಕೀರರು ಎಂಬ ವರ್ಗದ ತಿರುಕರು ಬರುತ್ತಿದ್ದರು. ಕಾಸು ಕೊಡಿ, ಇಲ್ಲದಿದ್ದರೆ ಚಿತ್ರಹಿಂಸೆಮಾಡಿಕೊಳ್ಳುತ್ತೇವೆ ಎನ್ನುತ್ತಿದ್ದರು. ಮಾಡಿಕೊಳ್ಳುತ್ತಿದ್ದರು. ಬೇಸರಪಟ್ಟು ಜನ ಕಾಸುಕೊಟ್ಟು ತೊಲಗಿಸುವವರೆಗೂ- ಹಾಗೆ ಸತ್ಯಾಗ್ರಹ ಒಂದು ಕಾಟ ಆಗಬಾರದು.

'ಆಗ್ರಹ ಪೂರ್ವಕ ಸತ್ಯವನ್ನು ನಡಸಬೇಕು. ಅದರಿಂದ ನೆರೆಹೊರೆಯವರ ಹೃದಯ ಕರಗುತ್ತದೆ. ಈ ಹೃದಯಪರಿವರ್ತನೆಗೆ ಎಂಥ ತ್ಯಾಗವನ್ನಾದರೂ ಮಾಡಲು ಸಿದ್ಧವಾಗುವುದೇ ಸತ್ಯಾಗ್ರಹ.'

## ಸತ್ಯಾಗ್ರಹದ ಬಲ

ಸತ್ಯಾಗ್ರಹದ ಬಲ ಸಾಮೂಹಿಕತೆಯಲ್ಲಿ, ಸಂಖ್ಯೆಯಲ್ಲಿ ಇಲ್ಲ. 'ವಿಶುದ್ಧ ಸತ್ಯಾಗ್ರಹಿ ಒಬ್ಬನೇ ಒಬ್ಬ ಇದ್ದರೂ ಸಾಕು. ಅವನ ಪ್ರಭಾವ ಇಡೀ ಜಗತ್ತಿನ ಮೇಲೆ ಬಿದ್ದೀತು. ಇಡೀ ಜಗತ್ತಿನ ಹೃದಯ ಕರಗೀತು.

'ಆದರೆ ಒಂದು, ಅವನ ಹೃದಯದಲ್ಲಿ ಇಡೀ ಜಗತ್ತಿನ ಮೇಲೇ ಪ್ರೇಮ ಇರಬೇಕು. ಮಕ್ಕಳು ಕೆಟ್ಟ ದಾರಿ ತುಳಿದರೆ ತಾಯಿ ಉಪವಾಸ ಮಾಡುತ್ತಾಳೆ. ಉಪವಾಸ ಮಾಡಿ ಮಕ್ಕಳಿಗೆ ತಿಳಿಸುತ್ತಾಳೆ'.

'ಮಕ್ಕಳಿಗೆ ದುಃಖ ಕೊಡಳು. ತಾನೇ ದುಃಖಪಟ್ಟು ಮಕ್ಕಳಿಗೆ ತಿಳಿಸುತ್ತಾಳೆ. ಮಗು ಒಂದಲ್ಲ ಒಂದು ದಿನ ಒಳ್ಳೆಯ ದಾರಿಗೆ ಬರುತ್ತಾನೆಂಬ ವಿಶ್ವಾಸ ಆಕೆಯದು. ಎಷ್ಟೋಸಲ ನಿರಾಶೆಯಾದರೂ ಆಕೆಯ ಆಸೆ ಬಯಲಾಗದು.

'ಅಷ್ಟು ದೃಢ ಆಕೆಯ ವಿಶ್ವಾಸ.'

ಇಂಥ ಸತ್ಯಾಗ್ರಹದಲ್ಲಿ ಒತ್ತಾಯ ಇರಲು ಸಾಧ್ಯವೆ? ಸತ್ಯಾಗ್ರಹ ಉಗ್ರ ಆಗಲು ಸಾಧ್ಯವೆ? ಸತ್ಯಾಗ್ರಹದಲ್ಲಿ ಯಾರ ಮೇಲೂ ಯಾವ ಪ್ರಕಾರದ ಒತ್ತಾಯವೂ ಬೀಳಬಾರದು.

ಸತ್ಯಾಗ್ರಹ ಪ್ರಾಂಜಲಬುದ್ಧಿಯ ಪ್ರೇಮಲ ಹೃದಯದ ಪ್ರಾರ್ಥನೆ. ಸಕ್ರಿಯ ಪ್ರಾರ್ಥನೆ, ತ್ಯಾಗಮಯ ಪ್ರಾರ್ಥನೆ; ಕಟ್ಟ ಕಡೆಗೆ ಆತ್ಮಾಹುತಿಯ ಮೂಲಕ ಪ್ರಾರ್ಥನೆ.

ಪ್ರಾರ್ಥನೆಯಲ್ಲಿ ಒತ್ತಾಯವೇ? ವಿರೋಧವೆ? ವೈರವೇ? ನಿಷೇಧಾತ್ಮಕ Negative ಆದುದು ಪ್ರಾರ್ಥನೆಯೆ?

ಮೂಲಭೂತವಾದ ಈ ಮಾತು ಸಮಾಜಕ್ಕೆ ಅರ್ಥವಾಗದಿದ್ದರೆ ಎಲ್ಲ ಬಗೆಯ ಪ್ರತಿಭಟನೆ, ಚಳುವಳಿಗಳನ್ನೂ ಸತ್ಯಾಗ್ರಹ ಎನ್ನುವ ತಪ್ಪು ನಡೆಯುತ್ತದೆ.

## ಯಾರಿಂದ ಸತ್ಯಾಗ್ರಹ?

ಸತ್ಯಾಗ್ರಹ ಅಹಿಂಸಾವ್ರತಿಯ ದಾರಿ. ಹಿಂಸೆಯಲ್ಲಿ ಶ್ರದ್ಧೆ ಇರುವವರು ಸತ್ಯಾಗ್ರಹ

ಮಾಡಲಾರರು. ಅವರು ಮಾಡಿದ್ದು ಸತ್ಯಾಗ್ರಹ ಆಗುವುದೂ ಇಲ್ಲ.

ಬೇರೆ ಯಾವುದಾದರೂ ರೀತಿಯ ಚಳುವಳಿ ಆಗಬಹುದು. ಆಗ ಅದಕ್ಕೆ ಸಿಗಬೇಕಾದ ಬೆಲೆಯೂ ಬೇರೆಯೇ.

ಈ ಭೇದ ಬಹಳ ಸ್ಪಷ್ಟ ಎಂಬುದನ್ನು ವಿನೋಬಾ ಬಹಳ ಸರಸವಾಗಿ ತಿಳಿಸಿದ್ದಾರೆ. ತುಳಸೀರಾಮಾಯಣದ ಒಂದು ಪ್ರಸಂಗವನ್ನು ಉದಾಹರಿಸಿ ಈ ಮಾತನ್ನು ತೋರಿಸಿಕೊಟ್ಟಿದಾರೆ:

ಹನುಮಂತನಿಗೂ ಸುರಸೆಗೂ ತಿಕ್ಕಾಟವಾಯಿತು. ಸುರಸೆ ಹನುಮಂತನನ್ನು ನುಂಗಲು ಒಂದು ಯೋಜನದಗಲ ತನ್ನ ಬಾಯಿ ತೆರೆದಳು. ಅದನ್ನು ನೋಡಿ ಹನುಮಂತ ಎರಡು ಯೋಜನದಷ್ಟು ಬೆಳೆದ. ಆಗ ಸುರಸೆ ಎರಡು ಯೋಜನದಗಲ ಮಾಡಿದಳು ಬಾಯಿ. ಹನುಮಂತ ನಾಲ್ಕು ಯೋಜನ ಬೆಳೆದ. ಅವಳ ಬಾಯಿ ಎಂಟು ಯೋಜನವಾಯಿತು. ಹನುಮಂತ ಅದನ್ನು ನೋಡಿ ಹದಿನಾರು ಯೋಜನ ಬೆಳೆದ. ಅವಳ ಬಾಯಿ ೩೨ ಯೋಜನದಗಲವಾಯಿತು.

ಈ ರೀತಿ ಗುಣಾಕಾರ ಮಾಡುತ್ತ ಹೋದರೆ ಪ್ರಯೋಜನವಿಲ್ಲ ಎನಿಸಿತು ಹನುಮಂತನಿಗೆ. ೩೨ ರಿಂದ ೬೪, ೬೪ ರಿಂದ ೧೨೮—ಹೀಗೇ ಬೆಳೆದೀತು. ಕೊನೆಯೇ ಇಲ್ಲ. ನ್ಯೂಕ್ಲಿಯರ್ ಆಯುಧದ ವರೆಗೂ ಆಟಂ ಹೈಡ್ರೋಜನ್ ಬಾಂಬುಗಳ ವರೆಗೂ.

ಇದು ಪ್ರಯೋಜನವಿಲ್ಲವೆಂದು ಹನುಮಂತ ಅತ್ಯಂತ ಲಘುರೂಪವನ್ನು ತಳೆದ. ಸುರಸೆಯ ಬಾಯೊಳಗೇ ಹೊಕ್ಕು ಮೂಗಿನಿಂದ ಹೊರಗೆ ಬಂದ. ಹೀಗೆ ಮುಗಿಯಿತು ಆ ಕಥೆ.

ಹಿಂಸೆಯ ದಾರಿ ಮೊದಲು ಸ್ವಲ್ಪ ಒತ್ತಾಯ, ಚಿಲ್ಲರೆ ಕಿರುಕುಳ. ಅದು ಸಫಲವಾಗದಿದ್ದರೆ ಹೆಚ್ಚು ಒತ್ತಾಯ, ಹೆಚ್ಚು ಬಲಾತ್ಕಾರ. ಹೀಗೆ ತೀವ್ರ, ತೀವ್ರತರ, ತೀವ್ರತಮ ಆಗುತ್ತ ಹೋಗುತ್ತವೆ ಹಿಂಸೆಯ ರೀತಿ.

ಅಹಿಂಸೆಯಲ್ಲೂ ಅಷ್ಟೆ. ಮೊದಲು ಸೌಮ್ಯವಾಗಿ ಪ್ರಯತ್ನಿಸಬೇಕು. ಅದು ಸಫಲವಾಗದಿದ್ದರೆ ಸೌಮ್ಯತರ ಅಥವಾ ಹೆಚ್ಚು ಸೌಮ್ಯ; ಅಲ್ಲಿಗೂ ಆಗದಿದ್ದರೆ ಸೌಮ್ಯತಮ ಅಥವಾ ಇನ್ನೂ ಹೆಚ್ಚು ಸೌಮ್ಯ.

ವಿನೋಬಾ ಹೇಳಿದಂತೆ— ಸತ್ಯಾಗ್ರಹ ಹೊಮಿಯೋಪತಿ ಔಷಧದ ಹಾಗೆ. ಹೋಮಿಯೋಪತಿ ಔಷಧದಿಂದ ಕಾಯಿಲೆ ಗುಣವಾಗಬೇಕು. ಆಗದಿದ್ದರೆ ಚಿಂತೆಯಿಲ್ಲ, ಬೇರೆ ದುಷ್ಪರಿಣಾಮ ಆಗಬಾರದು.

ಇನ್ನೂ ಒಂದು: ಹೋಮಿಯೋಪತಿಯಲ್ಲಿ ಆದಷ್ಟು ಕಡಿಮೆ ಪ್ರಮಾಣದ ಔಷಧದಿಂದ ವ್ಯವಹಾರ. ಆ ಪ್ರಮಾಣ ಸಾಲದಿದ್ದರೆ ಹೆಚ್ಚು ಪ್ರಮಾಣ, ಮೊದಲು ಸೂಕ್ಷ್ಮ, ಆ ಮೇಲೆ ಸೂಕ್ಷ್ಮತರ, ಸೂಕ್ಷ್ಮತಮ.

## ಕೋಮಲ ರೂಪ

ಇನ್ನು ಮೇಲೆ ಸತ್ಯಾಗ್ರಹ ಬಹಳ ಸೂಕ್ಷ್ಮ ವಿಚಾರದ ಆಧಾರದಿಂದ ನಡೆಯಬೇಕೇ ಹೊರತು ದಬಾದುಬಿ ಆಗಬಾರದು. ಬಹಳ ಕೋಮಲವಾಗಿ ನಡೆಯಬೇಕು.

ಅಸ್ತ್ರ ಶಸ್ತ್ರಗಳ ಹೋಲಿಕೆಯನ್ನೆ ಕೊಡಬೇಕು ಎಂದರೆ ಸತ್ಯಾಗ್ರಹ ಸಿಪಾಯಿಯ ಕೈಯೊಳಗಿನ ಕತ್ತಿ-ಕೋವಿ ಅಲ್ಲ; ಡಾಕ್ಟರನ ಕೈಯೊಳಗಿನ ಚಾಕು-ಕತ್ತರಿ. ಎದುರು ಕಡೆಯವನಿಗೆ ಗಾಯ ಮಾಡಲಿಕ್ಕಲ್ಲ; ಅವನನ್ನು ಒಲಿಸಿ ಅವನನ್ನು ವಾಸಿಮಾಡಲಿಕ್ಕೆ.

ಸತ್ಯಾಗ್ರಹದ ಅರ್ಥ ಆಳಗಳನ್ನು ಅರಿತುಕೊಳ್ಳುವುದು ಈಗಂತೂ ಅತ್ಯಗತ್ಯವಾಗಿದೆ. ಪ್ರಜಾತಂತ್ರದಲ್ಲಿ ನ್ಯಾಯಕ್ಕಾಗಿಯೂ ಧರ್ಮಕ್ಕಾಗಿಯೂ ಕೂಡ ಹಿಂಸಾಮಾರ್ಗವನ್ನು ಅವಲಂಬಿಸಲಾಗದು. ಈಗಿನ ಕಾಲಕ್ಕೆ ಅದು ನಾಗರಿಕತನವೂ ಅಲ್ಲ, ಗತ್ಯತೆಯೂ ಅಲ್ಲ.

ಒಬ್ಬರಿಗೆ ನ್ಯಾಯವಾಗಿ ಕಂಡದ್ದು ಇನ್ನೊಬ್ಬರಿಗೆ ಅನ್ಯಾಯವಾಗಿ ಕಂಡಾಗ ಹಿಂದಿನ ಕಾಲದ ಹಾಗೆ ಇಬ್ಬರೂ ಯುದ್ಧಮಾಡಿ ಗೆದ್ದವನದೇ ನ್ಯಾಯ ಎಂದುಕೊಳ್ಳುವ ಕಾಲ ಈಗ ಇಲ್ಲ.

ಈಗ ಇಬ್ಬರಿಗೂ ನ್ಯಾಯ ಯಾವುದು ಎಂದು ತೋರಿಸಿಕೊಡಬಲ್ಲ ನಿಷ್ಪಕ್ಷರಾದ ತ್ರಯಸ್ಥರು ಸಿಗುತ್ತಾರೆ. ಅಂಥವರ ಎದುರಿಗೆ ಸಮಸ್ಯೆಯನ್ನು ಇಟ್ಟು ಅವರ ತೀರ್ಪನ್ನು ಪಡೆಯಬಹುದಾದ ಅನುಕೂಲವೂ ಇದೆ.

ಪ್ರಜಾತಂತ್ರದಲ್ಲಿ ಇಂಥ ಪಂಚಾಯತಿಯ ಪದ್ಧತಿ ಬಹಳ ಅಮೂಲ್ಯವಾದುದು. ಇದರಿಂದಲೇ ಎಷ್ಟೋ ಮಾತು ನಿರ್ಧಾರವಾಗಿ

ಹೋಗುತ್ತವೆ. ಬೇರೆ ಯಾವ ಕಾರ್ಯಕ್ರಮವೂ ಬೇಕಾಗುವುದಿಲ್ಲ.

ಇಂಥ ಪಂಚಾಯತಿಗೆ ಒಪ್ಪದ ಜನವೂ ಇರುತ್ತಾರೆ. ಒಪ್ಪಿದರೂ ಅದರ ತೀರ್ಪಿನಂತೆ ನಡೆದವರೂ ಉಂಟು. ಅಂಥ ಸಂದರ್ಭಗಳಲ್ಲಿ ಸತ್ಯಾಗ್ರಹ ಬೇಕಾಗಬಹುದು. ಆಗಲೂ ಸತ್ಯಾಗ್ರಹ ಇಂಥವೇ ರೂಪವನ್ನು ತಳೆದೀತು ಎನ್ನುವಹಾಗಿಲ್ಲ. ಆಯಾ ಸಂದರ್ಭಕ್ಕೆ ತಕ್ಕಂತೆ ಆಯಾ ವ್ಯಕ್ತಿಗಳ ಶಕ್ತಿ ಸ್ವಭಾವಗಳಿಗೆ ತಕ್ಕಂತೆ ಸತ್ಯಾಗ್ರಹದ ರೂಪ ಬದಲಾಗಬಹುದು.

## ಸಾಮೂಹಿಕ ರೂಪ

ಸಾಮೂಹಿಕವಾದಾಗ ಸತ್ಯಾಗ್ರಹ ಅಸಹಕಾರದ ರೂಪವನ್ನು ಹೇಗೆ ತಳೆಯುತ್ತದೆಯೋ ಅಮೇರಿಕಾದ ನೀಗ್ರೋಗಳು ಮಾಡಿ ತೋರಿಸಿದರು— ಮೊನ್ನೆ ಮೊನ್ನೆ.

ಅಲಬಾಮಾದಲ್ಲಿ ಊರಿನ ಬಸ್ಸುಗಳಲ್ಲಿ ನೀಗ್ರೋಗಳಿಗೆ ಬೇರೆ ಸ್ಥಳ, ಬಿಳಿಯರಿಗೇ ಬೇರೆ ಸ್ಥಳಮಾಡಿದ್ದರು. ನೀಗ್ರೋಗಳು ಕೀಳು, ತಮ್ಮ ಜೊತೆಯಲ್ಲಿ ಕೂಡಬಾರದು.

ಇದು ನೀಗ್ರೋಗಳಿಗೆ ಅವಮಾನವೆನಿಸಿತು. ಈ ಅವಮಾನವನ್ನು ಪ್ರತಿಭಟಿಸಬೇಕು ಎಂದರು ಅವರು. ಹೇಗೆ ಮಾಡಬೇಕು? ಬಸ್ಸುಗಳಲ್ಲಿ ತಮಗೆ ಸರಿಯಾದ ಸಮನಾದ ಸ್ಥಳವನ್ನು ಕೊಡುವವರೆಗೆ ನಾವು ಬಸ್ಸನ್ನೇ ಹತ್ತುವದಿಲ್ಲ ಎಂದರು.

ಸುಮ್ಮನೆ ಹೀಗೆಂದರಾಗಲಿಲ್ಲ. ಮಾರನೆ ದಿನದಿಂದ ಶಾಲೆ ಕಾಲೇಜುಗಳಿಗೆ, ಕಚೇರಿ ಕಾರಖಾನೆಗಳಿಗೆ, ಆಸ್ಪತ್ರೆ, ಅಂಗಡಿಗಳಿಗೆ ಹೋಗುವವರೆಲ್ಲರೂ ನಡೆದೇ ಹೋಗಬೇಕು. ದೊಡ್ಡವರು ಮಕ್ಕಳು, ಹೆಂಗಸರು ಹುಡುಗಿಯರು ಎಲ್ಲರೂ.

ಹಾಗೇ ಮಾಡಿದರು. ತಿಂಗಳು ಎರಡು ತಿಂಗಳು ಅಲಬಾಮಾದ ನಿಗ್ರೋಜನ ಬಸ್ಸು ಹತ್ತಲಿಲ್ಲ. ನಡೆದೇ ನಡೆದರು. ಬಸ್ಸಿನವರಿಗೆ ನಷ್ಟವಾಯಿತು. ಲೋಕದಲ್ಲಿ ಎಲ್ಲರೂ ಥೂ ಥೀ ಎಂದರು. ಅವರ ಮನಸ್ಸೂ ತಿರುಗಬೇಕಾಯಿತು. ತಮ್ಮ ನಡತೆ ತಪ್ಪು ಎಂದು ಅವರಿಗೇ ತಿಳಿಯಿತು.

ಆಮೇಲೆ ಆ ಊರಿನ ಬಸ್ಸುಗಳಲ್ಲಿ ಈ 'ಅಸ್ಪೃಶ್ಯತೆ' ಮಾಯವಾಯಿತು. ಮನುಷ್ಯರಲ್ಲಿ ಭೇದವಿಲ್ಲ, ಎಲ್ಲರೂ ಸಮಾನರು ಎಂಬ ಸತ್ಯವನ್ನು ಸ್ಥಾಪಿಸಿದರು.

## ವೈಯಕ್ತಿಕ ಸತ್ಯಾಗ್ರಹ

ವೈಯಕ್ತಿಕ ಸತ್ಯಾಗ್ರಹ ಒಮ್ಮೊಮ್ಮೆ ಉಪವಾಸದ ಸ್ವರೂಪವನ್ನು ತಳೆಯುತ್ತದೆ. ಅಂಥ ಪ್ರಸಂಗಗಳು ನಿತ್ಯಜೀವನದಲ್ಲಿ ಹಲವಾರು ಬರುತ್ತವೆ.

ನಮ್ಮ ಹುಡುಗ ಒಬ್ಬ ಕಾಲೇಜಿಗೆ ಹೋಗದೆ ತಪ್ಪಿಸಿಕೊಳ್ಳುತ್ತಿದ್ದ, ಚಕ್ಕರು ಹೊಡೆದು. ಒಂದು ದಿನವಾದರೆ ಏನೋ. ತಿಂಗಳುಗಟ್ಟಳೆ ಕಾಲೇಜು ತಪ್ಪಿಸಿದ. ಹಾಜರಾತಿಯ ಶೇಕಡಾ ಪೂರಾ ಕಡಿಮೆಯಾಯಿತು. ಸಾಕಷ್ಟು ಹಾಜರಾತಿ ಇಲ್ಲದೆ ಅವನು ಪರೀಕ್ಷೆಗೆ ಕಟ್ಟಲು ಸಾಧ್ಯವಿಲ್ಲ ಎನ್ನುವವರೆಗೂ ಬಂತು.

ಈ ಮಾತು ಅವರ ಮನೆಯಲ್ಲಿ ತಿಳಿದು ತಂದೆ ತಾಯಿ ಸಂಕಟಪಟ್ಟು ಹುಡುಗನಿಗೆ ಹಲವು ಪರಿಯಲ್ಲಿ ಬುದ್ಧಿ ಹೇಳಿದರು. ಹುಡುಗ ಹಾದಿಗೆ ಬರಲಿಲ್ಲ. ಶಿಕ್ಷಕರ ಕೈಯಲ್ಲಿ ಹೇಳಿಸಿದರು, ಆಪ್ತೇಷ್ಟರ ಕೈಯಲ್ಲಿ ಬುದ್ಧಿ ಹೇಳಿಸಿದರು. ಏನೂ ಲಾಭವಾಗಲಿಲ್ಲ.

ಇಷ್ಟು ಮಾಡಿಯೂ ಪ್ರಯೋಜನವಾಗಲಿಲ್ಲ ಎಂಬ ಸಂಕಟ ಹೆಚ್ಚಾಯಿತೇ ವಿನಾ ಹುಡುಗ ದಾರಿಗೆ ಬರಲಿಲ್ಲ.

ಈ ನೋವಿನಿಂದ ಅವನ ತಂದೆ ಉಪವಾಸ ಮಾಡಿದರು. ಹೀಗಾದರೂ ತಮ್ಮ ಸಂಕಟ ಅವನಿಗೆ ಅರ್ಥವಾದೀತೇನೋ, ಅವನ ಮನಸ್ಸು ಪರಿವರ್ತನವಾಗಿ ಬುದ್ಧಿ ಬಂದೀತೇನೋ ಎಂತ.

ತಂದೆ ತಾಯಿಗೆ ನೋವಾಗುತ್ತಿದೆ ತನ್ನ ನಡತೆಯಿಂದ ಎಂದು ಹುಡುಗನಿಗೆ ತಿಳಿಯದೆ? ಹುಡುಗ ಮಡ್ಡಿಯಲ್ಲ, ಜಾಣ. ಆದರೆ ಅವರ ನೋವು ಅವನಿಗೆ ತಗಲಲಿಲ್ಲ.

ಉಪವಾಸ ಮಾಡಿದಾಗ ಆ ಪ್ರತ್ಯಕ್ಷ ಕ್ಲೇಶ, ತನಗಾಗಿ ತಂದೆ ಎಷ್ಟು ಕ್ಲೇಶಪಡುತ್ತಿದ್ದಾರೆ ಎಂಬುದನ್ನು ಅವನಿಗೆ ತಿಳಿಸಿತು. ಆಗ ಅವನ ವಿವೇಕ ಎಚ್ಚರಗೊಂಡಿತು.

ಮುಂದೆ ಸರಿಯಾಗಿ ಕಾಲೇಜಿಗೆ ಹೋಗಲು ಒಪ್ಪಿದ, ಸಂಕಲ್ಪ ಮಾಡಿದ, ಹಾಗೇ ನಡೆಸಿದ. ಅಷ್ಟು ದಾರಿ ತಪ್ಪಿದ್ದವನು ಇಷ್ಟು ಬದಲಾದನಲ್ಲ ಎಂದು ಶಿಕ್ಷಕರು ಸಂತೋಷಪಡುವ ಹಾಗಾಯಿತು.

ಹೀಗೆ ಸತ್ಯಾಗ್ರಹ ಹಲವು ರೂಪಗಳಲ್ಲಿ ಹೊರಹೊಮ್ಮುತ್ತದೆ. ಯಾವುದೇ ರೂಪ ಇರಲಿ, ಸತ್ಯಾಗ್ರಹ ಮೂಲಭೂತವಾಗಿ ಪ್ರಾರ್ಥನೆ. ಹಿಂದಿನವರು ತಪಸ್ಸು ಮಾಡಿ ದೇವರನ್ನು ಸಾಕ್ಷಾತ್ಕಾರ ಮಾಡಿಕೊಳ್ಳುವುದರಲ್ಲಿ ಎಂಥ ಗಾಢ ಶ್ರದ್ಧೆ— ಆತ್ಮತ್ಯಾಗಗಳನ್ನು ಅನುಭವ ಮಾಡಿಕೊಳ್ಳುತ್ತಿದ್ದರೋ ಆ ಅನುಭವ ಆಗಬೇಕು ಸತ್ಯಾಗ್ರಹಿಗೆ ಸತ್ಯ ಸಾಕ್ಷಾತ್ಕಾರದಲ್ಲಿ.

ಆಗಲೇ ಸತ್ಯಾಗ್ರಹ ಸಂಪನ್ನ, ಸಫಲ, ಪರಿಪೂರ್ಣ.



# ಮಂಗಳಾರತಿ

ಲೇಖಕರು:
ಶ್ರೀ. ಜಿ. ಜಿ. ಹೆಗಡೆ,
ಹುಬ್ಬಳ್ಳಿ





ಮುಂಜಾನೆ ಹೆಂಡತಿ ಮಂಗಳಾರತಿ ಎಂದು ಹಾಡಿದಾಗ ತಾನು ಬರೆಯುತ್ತಿರುವ ನಾಟಕಕ್ಕೆ ಗೊಂದಲವಾಗಿ ಸ್ಫೂರ್ತಿ ಬರುತ್ತಿಲ್ಲವೆಂದು ಕೃಷ್ಣರಾಯ ಅವಳ ಮೇಲೆ ಕೋಪಿಸಿಕೊಂಡ. ಆದರೆ ಮಧ್ಯಾಹ್ನ ಬಂದ ಅವರ ಷಡ್ಡಕ ಮಾಧವರಾಯರ ಉಪದೇಶ ರೂಪದ ಮಂಗಳಾರತಿ ಎತ್ತಿದಾಗ ಅವನ ತತ್ತ್ವವನ್ನೇ ಒಪ್ಪಿಕೊಳ್ಳುವಾಗ ನಾಟಕದ ಸುಳಹೂ ಅವನಿಗೆ ಸಿಕ್ಕಿತು; ಅದೆಲ್ಲ ಯಾರ ತಂತ್ರವೆಂಬ ಸುಳುವೂ ಸಿಕ್ಕಿತು. ದೀಪಾವಳಿಯ ಸಂದರ್ಭದ ಈ ನಾಟಕ ಓದಿ ನೀವೂ ಆನಂದಿಸುವಿರಿ.

( ಕೃಷ್ಣರಾಯನ ಮನೆ, ಆ ಚಾಳಿನ ಐದು ಮನೆಗಳಲ್ಲಿ ಈತನದು ನಡುವಿನದು. ಎರಡೇ ಕೋಣೆಗಳ ಮನೆ ಅದು. ಮುಂದಿನ ಕೋಣೆಯಲ್ಲಿ ಕೃಷ್ಣರಾಯ ಸಿಗರೇಟು ಸೇದುತ್ತ ಬರೆಯಲು ಕುಳಿತಿದ್ದಾನೆ. ಮೇಜಿನ ಮೇಲೆ ಕಾಗದಗಳು ಹರಡಿವೆ. ಕೈಲಿ ಪೆನ್ ಹಿಡಿದು ಕೃಷ್ಣರಾಯ ಯೋಚಿಸುತ್ತಿದ್ದಾನೆ. ಹಿಂದಿನ ಕೋಣೆಯಲ್ಲಿ ಅವನ ಹೆಂಡತಿ ರಾಧಾ ಕೆಲಸದಲ್ಲಿ ತೊಡಗಿರುವದು ಪಾತ್ರೆಗಳ ಸಪ್ಪಳದಿಂದ ತಿಳಿಯುತ್ತದೆ. ಕೆಲಸ ಮಾಡುತ್ತಾ ರಾಧಾ ಮೆಲುದನಿಯಲ್ಲಿ ಹಾಡುತ್ತಿದ್ದಾಳೆ. ಅವಳು ಗುಣಗುತ್ತಿರುವದು ಕೃಷ್ಣರಾಯನಿಗೆ ಕೇಳಿಸುತ್ತಿದೆಯೆ ವಿನಾ ಶಬ್ದಗಳು ಸ್ಪಷ್ಟವಾಗಿ ಕೇಳಿಸುವದಿಲ್ಲ. ಕೊನೆಯ " ಮಂಗಳಾರತಿ " ಎಂಬ ಶಬ್ದ ಮಾತ್ರ ಅವನ ಕಿವಿಗೆ ಬೀಳುತ್ತದೆ.)

ಕೃಷ್ಣರಾಯ : ( ಏನು ಬರೆಯಬೇಕೆಂದು ಹೊಳೆಯದೆ ತನ್ನಷ್ಟಕ್ಕೆ ಸಿಡಿಮಿಡಿಗೊಂಡಿರುತ್ತಾನೆ. ತುಸು ಸಿಟ್ಟಿನಿಂದಲೆ ) ಏನು? ಮಂಗಳಾರತಿ? ಯಾತಕ್ಕೆ? ಯಾರಿಗೆ? ಏನೇ ಬೆಳಗ್ಗೆ ಏಳು ಪುರಸತ್ತಿಲ್ದೆ ಯಾರಿಗೆ ಮಂಗಳಾರತಿ ಮಾಡ್ಲಿಕ್ಕೆ ಹೊರಟೀದಿ? ಮೊದಲೇ ನೂರೆಂಟು ತಾಪತ್ರಯದಿಂದ ನನಗೆ ಸ್ಫೂರ್ತಿ ಬರವಲ್ದು. ಈ ಸುಡಗಾಡು ಚಾಳಿನೊಳಗೆ ಮಧ್ಯರಾತ್ರಿಯಾದ್ರೂ ಗದ್ದಲ ನಿಂದ್ರೂದಿಲ್ಲ. ಯಾವಾಗ ಶಾಂತ ಮನಸ್ಸಿನಿಂದ ವಿಚಾರ ಮಾಡ್ಬೇಕು? ಏನೋ ಬೆಳಿಗ್ಗೆ-ಇನ್ನೂ ಅಷ್ಟು ಗದ್ದಲ ಶುರೂ ಆಗಿಲ್ಲ. ಒಂದು ನಾಲ್ಕು ಸಾಲಾದ್ರೂ ಬರೆಯೋಣ ಅಂದ್ರೆ, ನೀ ಶುರೂ ಮಾಡೀದಿ ಮಂಗಳಾರತೀನ್ನ. ಪಾಪ ಗಂಡ ಅತ್ತಲಾಗ ಆಫೀಸಿನೊಳಗೂ ಬರೀತಾನ, ಇತ್ತಲಾಗ ಮನಿಯೊಳಗೂ ಬರೀತಾನ ಅಂಬೂ ಕನಿಕರ ಇದ್ದಿದ್ರೆ: ಯಾರ ಯಾರೀಗೆ ಮಂಗಳಾರತಿ ಎತ್ತೂದನ್ನ ಬಿಟ್ಟು ಲಗೂನೆ ನನಗ ಒಂದಿಷ್ಟು ಚಾ ಮಾಡಿ ತಂದುಕೊಟ್ಟು ಸಹಾಯ ಮಾಡ್ತಿದ್ಧಿ. ಗೊತ್ತದ ನಿನಗ. ಗಂಡನ ಕಿಸೇಲಿ ರೊಕ್ಕ ಝಣ ಝಣ ಅಂತಿದ್ರೆ . . . . .

ರಾಧಾ : ಒಂದಿಷ್ಟು ಕಾಫೀ ಮಾಡಿ ಕೊಡ್ಲೇನು? ಚಾದ ಬದ್ಲಿ.

ಕೃಷ್ಣ : ಅಂ ! ಯಾಕೆ? ಚಾ ಪುಡಿ ಇಲ್ಲೇನು?

ರಾಧಾ : ಊಂಹುಂ. ನಿಮಗ ತುಸಾ ಪಿತ್ಥ ಕೆರಳಿದ್ದಾಂಗ ಕಾಣಿಸ್ತು. ಅದಕ ಚಾ ಕುಡದ್ರೆ, ಮತ್ತಿಷ್ಟು ಹೆಚ್ಚಾದೀತಂತ.

ಕೃಷ್ಣ : ಏ ಏ ! ಏನದು ಹಾಂಗಂದ್ರ . . .

ರಾಧಾ : ಮತ್ತೇನು ? ನಾ ನನ್ನಷ್ಟಕ್ಕೆ ಏನೋ ಹಾಡಕೋತ ಕೆಲಸಾ ಮಾಡ್ತಿದ್ರೆ ನೀವು ಏನೇನೊ ತಿಳಕೊಂಡು, ಏನೇನೋ ಮಾತಾಡ್ಲಿಕ್ಕೆ ಹತ್ತಿದ್ರಿ. ನಿಮಗೆ ಸ್ಫೂರ್ತಿ ಬರದಿದ್ರೆ ನನ್ನವ್ಯಾಲೆ ಯಾಕೆ ಸಿಟ್ಟು ನಿಮ್ದು ? ಇವ್ರ ಬಂದೀತು. ಹೋದವಗ, ಬಂದವಗ ಬರಲಿಕ್ಕೆ ಸ್ಫೂರ್ತಿ ಏನೂ ನೆಗಡಿ ಅಲ್ಲ.

ಕೃಷ್ಣ : ವ್ಹಾ ! ವ್ಹಾ ! ಭೇಷ್. ಭೇಷ್. ಸ್ಫೂರ್ತಿ ಏನೂ ನೆಗಡಿ ಅಲ್ಲ. ಇವಕ್ಕೇ ಅನ್ನೂದು ಕವಿಕಲ್ಪನಾ, ಸ್ಫೂರ್ತಿ ಅಂತ. ಭಲೆ ! ಕವಿ ಹೆಂಡ್ತಿಯಾಗಲಿಕ್ಕೆ ಭಾಳ ಯೋಗ್ಯ ಇದ್ದಿ ನೀ. ಅಲ್ಲೆ, ನೀ ಇಷ್ಟ ಶಾಣ್ಯಾಕಿ. ನಾ ಬರಿಯುವ ಮುಂದೆ ನನಗೆ ತ್ರಾಸ ಕೊಡ್ಬಾರ್ದು ಅನ್ನೂದು ತಿಳಿಯುದಿಲ್ಲೇನು ?

ರಾಧಾ— ನಾ ಎಲ್ಲಿ ತ್ರಾಸ ಕೊಟ್ಟೇನಿ ? ಯಾವಾಗ ಕೊಟ್ಟೇನಿ ? ನೀವು ಬರೀಲಿಕ್ಕೆ ಕೂತರೆ ನಾ ಮುಂದೀ ಮನೀಗೆ ಹೋಗಿ ಕೂಡ್ಲೇನು ? ಹಾಂಗಿದ್ರೆ ಹೇಳ್ರಿ.

ಕೃಷ್ಣ : ಛೆ ! ಛೆ ! ಹಾಂಗಲ್ಲ. ಆದರೆ ಗಟ್ಟಿಯಾಗಿ ಮಾತಾಡಬಾರ್ದು ಗದ್ದಲ ಮಾಡಬಾರ್ದು ಅಂದೆ. ನೋಡು. ದೀಪಾವಳಿ ಸಮೀಪ ಬಂತು. ಹೊಸ ಅರವಿ, ಹಬ್ಬದ ಸಾಮಾನು ಅಂತ ಹಣಾ ಬ್ಯಾಡ ? ಏನೊ ಒಂದೆರಡು ಕಥಿ, ಒಂದೆರಡು ನಾಟಕಾ, ಒಂದೆರಡು ಕವಿತಾ ಲೇಖ— ಏನಾದರೂ ಬರದು ನಾಲ್ಕಾರು ವಿಶೇಷ ಸಂಚಿಕೆಗೆ ಕಳಿಸಿದ್ರೆ ಒಂದಿಷ್ಟು ರೊಕ್ಕ ಬಂದೀತು.

ರಾಧಾ : ಗೊತ್ತದ ಬಿಡ್ರಿ. ಬರದು ಕಳಸುವವರಿಗೆಲ್ಲಾ ರೊಕ್ಕ ಸಿಗ್ತಿದ್ರೆ.



ಕೃಷ್ಣ : ಎಲ್ಲರಿಗೂ ಸಿಗದಿದ್ರೂ ನನಗೆ ಸಿಗತದ. ಅಲ್ಲ. ನಾ ಅಂದ್ರೆ ಒಂದ ಸ್ವಲ್ಪ ಎಸ್ಟಾಬ್ಲಿಶ್ಡ್ ರೈಟರ್ ಆಗೀನಿ ಅನ್ನು. ಒಬ್ಬಿಬ್ರು ಸಂಪಾದಕರು ಈ ಸಲ ನಿಮ್ದೇ ನಾಟಕ ಬೇಕು ಅಂತ ಹೇಳ್ಯಾರ. ಹೇಳೂದು ಹೇಳಿದ್ರು. ಒಂದಿಷ್ಟು ಮೊದಲೇ ಹೇಳಿದ್ರೆ ಛಲೋ ಆಗ್ತಿತ್ತು. ನಾಟಕ ಬರಿಯೂದಂದ್ರೆ ಎಷ್ಟ ಕಷ್ಟ ಅನ್ನೂದು ಇವರಿಗೇನು ಗೊತ್ತು ? ಆರ್ಡರ್ ಕೊಟ್ಟ ಕೂಡ್ಲೆ ಮಾಣಿ, ಸಿಂಗಲ್ ಚಾ ಎದುರೀಗೆ ತಂದಿಡೂಹಾಂಗ, ಹೇಳಿದ ಇಪ್ಪತ್ನಾಕು ತಾಸಿನೊಳಗೆ ನಾಟಕ ಬರದು ಕೊಡ್ರಿ ಅಂತಾರ. ಇಲ್ಲಾ ಅನ್ಲಿಕ್ಕೂ ಬರೂದಿಲ್ಲ. ಬರೂ ರೊಕ್ಕ ತಪ್ಪುದ ಅನ್ನೂದ ಒಂದು, ಮತ್ತೆ " ಅವೆಂಥಾ ನಾಟಕಕಾರನ್ರಿ. ಒಂದ ಏಕಾಂಕ ಬರ್ದು ಕೊಡೂದು ಆಗಿಲ್ಲ " ಅಂತಾ ಟೀಕಾ ಮಾಡ್ಸಿಕೊಳ್ಳೂದು ಬ್ಯಾರೆ.

ರಾಧಾ : ( ಹೊರಗಿನ ಕೋಣೆಗೆ ಬಂದು ) ತಗೊಳ್ರಿ ಚಾ. ಅಂಪಹಾಂಗ ದೀಪಾವಳಿಗೆ ಇನ್ನು ಹತ್ತೇದಿನ ಉಳೀತು. ನಾವೂ ನೀವೂ ಕೂಡೇ ಹೋಗೋಣ. ಹೌದೊ ಅಲ್ಲೊ ? ಎಂದು ಹೊರಡೋಣ ? ರಜೆ ಅರ್ಜಿ ಕೊಟ್ಟಿರೋ ಇಲ್ಲೊ ?

ಕೃಷ್ಣ : ಹೋಗೋದು ? ಎಲ್ಲಿಗೆ ಹೋಗೂದು ?

ರಾಧಾ : ಹಬ್ಬಕ್ಕೆ ಮತ್ತೆಲ್ಲಿ ಹೋಗ್ತಾರೆ ? ಲಗ್ನ ಆದ ಮೇಲೆ ಇದೇ ಮೊದಲನೇ ದೀಪಾವಳಿ ಹಬ್ಬ ಅನ್ನೂದು ನೆನಪಿಲ್ಲೇನು ? ಅಪ್ಪನ ಪತ್ರ ಬಂದದ " ಬರ್ರೀ " ಅಂತ. ನೀವು ನೋಡೀರಲ್ಲ, ಎಷ್ಟ ಪ್ರೀತಿಲೆ ಎಷ್ಟ ಆಗ್ರಹ ಮಾಡಿ ಬರವಾರ ಅಂಬೂದನ್ನ. ಖರೇ ಅಂದ್ರ ಉಪಾಯ ಇಲ್ಲಾಂತ ಮಾವಂದಿರು ಅಳಿಯಂದರೀಗೆ " ಹಬ್ಬಕ್ಕೆ ಬರ್ರಿ " ಅಂತ ಬರೀತಿರ್ತಾರ. ಆದರೆ ಅಪ್ಪನ ಪತ್ರ ಹಾಂಗಿಲ್ಲ. ಅದರ ಪ್ರತಿಯೊಂದು ಅಕ್ಷರದೊಳಗೂ . . . .

ಕೃಷ್ಣ : ಸಾಕು ಬಿಡು. ಹೆಚ್ಚು ವರ್ಣನಾ ಮಾಡಬ್ಯಾಡ. ಗೊತ್ತದ ನಿಮ್ಮ ಅಪ್ಪನ ಪತ್ರದೊಳಗ ಯಾಕೆ ಅಷ್ಟ ಪ್ರೀತಿ, ಅಷ್ಟು ಆಗ್ರಹ ಅನ್ನೂದು. ವರದಕ್ಷಿಣೆನೇ ಬ್ಯಾಡಂತಂದಳಿಯ ದೀಪಾವಳಿಯೊಳಗ ಏನ ಕೇಳ್ತಾನ ? ಏನೂ ಕೇಳೂದಿಲ್ಲ ಅನ್ನೊ ನಂಬಿಗೆ ಇರೂದರಿಂದಲೇ ಬರದಾರ ತಿಳೀತೇನು ? ನಾನೂ ಎಲ್ಲಾ ಅಳಿಯಂದಿರ ಹಾಂಗೆ ಇದ್ದಿದ್ರೆ.

ರಾಧಾ : ಏನಾದರೂ ಕಲ್ಪಿಸಿಕೊಂಡು ಹೇಳಬ್ಯಾಡ್ರಿ. ನೀವಾಗೇ ಬ್ಯಾಡ ಅಂದ್ರಿ ಅಂತ ಅಪ್ಪ ವರದಕ್ಷಿಣೀ ಕೊಡ್ಲಿಲ್ಲ. ನೀವು ಬೇಕು ಅಂದಿದ್ರೆ ಕೊಟ್ಟೇ ಕೊಡ್ತಿದ್ದ. ಮತ್ತೇನೂ ತಗೊಳ್ಳದಿದ್ರ ಇಲ್ಲ. ಒಂದು ರಿಷ್ಟವಾಚಾದ್ರೂ ತಗೋಳ್ರಿ ಅಂತ ಅಪ್ಪ ಎಷ್ಟು ಹೇಳಿದ್ರೂ ನೀವು ಕೇಳಲಿಲ್ಲ. ಲಗ್ನ ಆದವ್ಯಾಲೆ ನನ್ನ ಹತ್ರ ಹೇಳಿದ್ರಿ "ರಾಧಾ, ಎಲ್ಲಾ ಅಳಿಯಂದಿರ ಹಾಂಗೆ ನನ್ನೂ ತಿಳಕೊಂಡಿದ್ರು ನಿನ್ನ ಅಪ್ಪ. ನಾ ಒಂದೇ ಮಾತಿನವ. ಬ್ಯಾಡಾ ಅಂದವ್ಯಾಲೆ ಬ್ಯಾಡ. ಸಾವಿರಗಟ್ಟಲೆ ರೂಪಾಯನೇ ಬ್ಯಾಡ ಅಂತ ಅಂದಂವ ಒಂದು ರಿಸ್ಟ-ವಾಚ್‌ಗೆ ಮರಳಾಗ್ತೇನೇನು ? ನೋಡು. ಹ್ಯಾಂಗೂ ದೀಪಾವಳಿ ಹಬ್ಬಕ್ಕೆ ಕರವೇ ಕರೀತಾರ. ಆಗ ನನ್ನ ಕೈಗೆ ಅಗದೀ ಫಸ್ಟ-ಕ್ಲಾಸ್ ವೆಸ್ಟ್ ಎಂಡ್ ಗೋಲ್ಡ್ ವಾಚ್ ಕಟ್ಟಿಕೊಂಡೇ ಹೋಗಿ ನಿಮ್ಮ ಅಳಿಯ ತನಗೆ ಬೇಕಾದ್ದನ್ನು ತಾನೇ ದುಡಕೊಂಡು ಸಂಪಾದಿಸಿಕೊಳ್ತಾನೆ, ಮುಂದೀ ಕಡಿಂದ ಇಸಕೊಂಬೂದಿಲ್ಲ ಅಂತ ನಿಮ್ಮ ಅಪ್ಪಗೆ ತೋರಿಸಿಕೊಡ್ತೇನಿ" ಅಂತ ಅಂದ್ರಿ. ಆದ್ರೆ ದೀಪಾವಳಿ ಹಬ್ಬ ಬಂತು, ಅಪ್ಪನ ಪತ್ರಾನೂ ಬಂತು. ಫಸ್ಟಕ್ಲಾಸ್ ಇಲ್ಲ, ಥರ್ಡ ಕ್ಲಾಸ್ ವಾಚೂ ನಿಮ್ಮ ಕೈಗೆ ಬರ್ಲಿಲ್ಲ.

**ಕೃಷ್ಣ :** ನಾಲ್ಕುದಿನಾ ತಡಾ ಆದ್ರೆ ಏನಾತು? ಬಂದೇ ಬರ್ತದ. ನನ್ನ "ಮೊದಲನೇ ಹೆಂಡತಿ" ನಾಟಕಾನ್ನ "ಮಹಿಷಾಸುರ ಪ್ರಸನ್ನ ಸಂಗೀತ ನಾಟಕ ಮಂಡಳಿ" ಮೂಲಕ ತಗೋತೇನಿ ಅಂತ ಅಂದಾನ. ಆ ನಾಟಕ ಕೊಟ್ಟೆ ಅಂದ್ರೆ............

**ರಾಧಾ :** ಸ s s ರ್ರಿ.

**ಕೃಷ್ಣ :** ಏನ ಸ s s ರ್ರಿ.

**ರಾಧಾ :** ಮತ್ತೇನು? ಶ್ರೀ ಸರಸ್ವತೀ ಪ್ರಸನ್ನ, ಮೊದಲನೇ ಹೆಂಡತಿ ಮೂರಂಕಿನ ನಾಟಕ. ಲೇಖಕರು... ಅಂತ ನೀವು ಬರದು ಆರೆಂಟು ತಿಂಗಳಾದ್ರೂ ಆಗಿರಬೇಕು. ಮುಂದೆ ಒಂದಕ್ಷರ ಬರೀ- ಲಿಲ್ಲ. ನಾಟಕ ಕಂಪನಿ ಅಂದ್ರೆ ಇಂದು ಇತ್ತು, ನಾಳೆ ಇಲ್ಲ ಅನ್ನೂ ಪರಿಸ್ಥಿತೀನೇ ಹೆಚ್ಚು. ನಿಮ್ಮ ನಾಟಕ ತಯಾರಾಗೂವರೊಳಗೆ ನಿಮ್ಮ ನಾಟಕ ಕಂಪನಿ ಬದಕಿರತದೋ ಇಲ್ಲೋ.

**ಕೃಷ್ಣ :** ಅದಿಲ್ಲದಿದ್ರೆ ಮತ್ತೊಂದು ಕಂಪನೀಗೆ ಕೊಟ್ಟರಾತು. ಚರಿ- ಪಾರಣ್ಯದ ಪಕ್ಷಿಗೇನು? ಒಂದು ತರು ಗೊಡ್ಡಾಗಲ್ ಫಲಂತೀವಿದಾ ಮತ್ತೊಂದು ಮರ ಹುಟ್ಟೇ ಹುಟ್ತದ.

**ರಾಧಾ :** ಹುಟ್ಟಲಿ. ಮರಹುಟ್ಟಿ ಫಲ ನಿಮಗೆ ಸಿಗ್ಲಿ. ಯಾರು ಬ್ಯಾಡ ಅಂದವ್ರು! ಆದರೆ ಕನಸಿನೊಳಗೆ ಮಂಡಗೀ ತಿಂದ್ರ ಗೋದಿ ಲೆಕ್ಕ ಕೊಡವ್ರು ಯಾರು ಅಂದ ಹಾಂಗ ಅದ ನಿಮ್ದು.

**ಕೃಷ್ಣ :** ಏ ರಾಧಾ, ನಾನೇ ಹಗಲೆಲ್ಲಾ ಅನ್ನೂ ಮಾತನ್ನ ತಿರುಗಿ ಅಂದು ನಿನ್ನ ಶ್ಯಾಣೇತನ ಪ್ರದರ್ಶಿಸಬ್ಯಾಡ. ನೀ ಬೇಕೂ ಅನ್ನೂ ದಿರಲಿ, ಬ್ಯಾಡ ಅಂದ್ರೂ ಪ್ರಯತ್ನಪಟ್ಟವಗ ಫಲ ಸಿಕ್ಕೇ ಸಿಗ್ತದ.

**ರಾಧಾ :** ಹೋಗಲಿ ಬಿಡ್ರಿ. ನಾವು ಎಂದು ಹೊರಡೋಣ ಹೇಳ್ರಿ.

**ಕೃಷ್ಣ :** ನಾ ಬರೂದಿಲ್ಲ. ಬೇಕಾದ್ರೆ ನೀ ಹೋಗಿಬಾ.

**ರಾಧಾ :** ಭೇಷಾತು. ಇದೇನ ಈಗ ಅಂದ್ರಿ ಸಾವಿರದೊಳಗಿನ ಒಂದ ಮಾತು ಅಂದ್ರಿ. ಮೊದಲನೇ ದೀಪಾವಳಿ. ಮಾವನ ಮನೆಗೆ ಹೋಗಬೇಕಾದವರು ನೀವು. ನೀವು ಬರದೆ ನಾ ಹೋಗಲ್ಯಾ? ನೋಡಿದವರು ಏನಂದಾರು? ಕೇಳಿದವರಿಗೆ ಏನ ಹೇಳಲಿ? ನಾ ಲೇಖಕ, ನಾಟಕಕಾರ, ಕವಿ ಅಂತ ಇನ್ನೂ ಏನೇನೊ ಅಂದು ಕೊಂಡು ಅಭಿಮಾನ ಪಡ್ತೀರಿ. ರವಿ ಕಾಣದ್ದು ಕವಿ ಕಾಣ್ತಾನ, ಕವಿ ಮಾತು ಅಂತಾ ಅಂದ್ರೆ ಅನುಭವದ, ಜ್ಞಾನದ ವ್ಯವಹಾರದ ಮುತ್ತು ಅಂತ ಅಂತಿರ್ತೀರಿ. ಈಗ ಗೊತ್ತಾತ ನಿಮ್ಮ ಬಂಡವಳ.

**ಕೃಷ್ಣ :** ನೋಡು. ಬೆಳಗ್ಗೆ ಎದ್ದಕೂಡ್ಲೆ ವಾದ ಹಾಕ್ಕೋತ ಕೂಡ ಬ್ಯಾಡ. ನನಗೆ ಮಾವನಿಂದ ಉಡಗೊರೆ ಪಡಿಯು ಆಶೆ ಏನೂ ಇಲ್ಲ. ನಾ ಬರೂದಿಲ್ಲ. ಮತ್ತೆ ನನಗೆ ಲೇಖ, ನಾಟಕ ಅಂತ ಬರಿಯು ಕೆಲಸ ಬಹಳ ಅದೆ. ನನ್ನ ಪ್ರತಿನಿಧಿಯಾಗಿ ನೀನು.

**ರಾಧಾ :** ಪ್ರತನಿಧೀನ್ನ, ಸುದ್ದಿಗಾರನ್ನ ಕಳಿಸಲಿಕ್ಕೆ ಅದೇನು ನಿಮ್ಮ ಪತ್ರಿಕಾಪರಿಷತ್ತ ಅಲ್ಲ. ಮಾವನ ಮನೇಲಿ ಪ್ರತಿನಿಧಿ ಗ್ರಿತಿನಿಧಿ ನಡಿಯುವದಿಲ್ಲ. ಈ ವರ್ಷದೊಳಗೆ ನೀವು ನಾಟಕಾ ಬರ್ದು, ಲೇಖ ಬರ್ದುಗಳಿಸಿದ್ದು ನನಗೆ ಗೊತ್ತದ. ಬಂದದ್ದು ಬಂದದ್ದು ಅದೇ ಒಂದ ಹತ್ತರೂಪಾಯಿ ಚೆಕ್ ಹೌದಲ್ಲೊ.

**ಕೃಷ್ಣ :** ಅದು ನನ್ನ- ಯಾಕೆ ಎಲ್ಲಾ ಲೇಖಕರ ದುರ್ದೈವಾನೇ ಅದು. ಯಾವ ಸಂಪಾದಕನ ನೋಡ್ಲಿ, ಲೇಖ ಸ್ವತಂತ್ರ ಇರ ಬೇಕು, ನಾಟಕ ಸ್ವತಂತ್ರ ಇರಬೇಕು ಹೊಸ ವಿಚಾರ, ಅನುಭವ ಇರಬೇಕು ಅಂತಾನ. ಏನು ಹಾಂಗಂದ್ರ! ಎಲ್ಲಾ ಗೊತ್ತಿರ ಬೇಕಾದ ಸಂಪಾದಕರು ಹೀಂಗಂದ್ರ. ಹೀಂಗಂತಾ ಹೋದ್ರೆ ಎಲ್ಲಾ ಲೇಖಕರೂ ಪೆನ್-ಸನ್ಯಾಸ ಹಿಡೀಬೇಕಾದೀತು. ಕೆಲವಂ ಬಲ್ಲವ ರಿಂದ ಕಲಿತು, ಕೆಲವಂ ಶಾಸ್ತ್ರಂಗಳಂ ಓದುತಾ, ಕೆಲವಂ ಸಜ್ಜನ ಸಂಗದಿಂದಲರಿಯಲ್ ಅನ್ನೋದು ಗೊತ್ತಿಲ್ಲೇನು ಇವರಿಗೆ! ಜಗ ತ್ತಿನ ಎಲ್ಲಾ ಅನುಭವಾ, ಎಲ್ಲಾ ವಿಚಾರ ಒಬ್ಬಗ ಹ್ಯಾಂಗ ಬರ್ಬೇಕು? ಅವನಿಂದ ಇಂವ, ಇವನಿಂದ ಅಂವಾ ಹೀಂಗ ಕೊಟ್ಟೂ ತಗೊಂಡು ಮಾಡಿದ್ರೇನೆ ಸಾಹಿತ್ಯ: ನಿರ್ಮಾಣ ಆಗ್ತದ. ಓರಿಜಿನಲ್ ಓರೀಜಿನಲ್ ಅಂತ ಬಡಕೋತ ಇವರು ನನ್ನ ನಾಟಕ ಎಲ್ಲಾ, ಲೇಖಾನೆಲ್ಲಾ ಸಾಭಾರ ಪರತ ಕಳಿಸಿದ್ರೆ ನಾ ಏನ ಮಾಡ್ಲಿ? ಮಜಾ ಏನಂದಿ, ತಿರಗಿ ಬಂದವೆಲ್ಲ ಖರೇ ಅಂದ್ರ ಇದ್ದದ್ದೊರೊಳಗೆ ಓರಿಜಿನಲ್ ಇದ್ವು. ಆ ಹತ್ತು ರೂಪಾಯಿ ಚೆಕ್‌ನ ಏಕಾಂಕ, ಸರಳ ಬ್ಯಾರೆ ಕಡಿಂದ ಕದ್ದದ್ದು.

**ರಾಧಾ :** ಅಂದ ಮ್ಯಾಲೆ ಯಾಕೆ ಸುಳ್ಳೇ ತಲೆ ಕೆಡಿಸಿಕೊಂಡು ಬರೀ ತೀರಿ? ನಿಮ್ಮ ಆ ಹತ್ತು ರೂಪಾಯಿ ಬರೂದರೊಳಗೆ ಏನಿ ಲ್ಲೆಂದ್ರೂ ನೀವು ಉಪಯೋಗಿಸಿದ ಕಾಗದಾ ಮಶಿ, ಸ್ಟಾಂಪು, ಕಾರ್ಡು, ಸುಟ್ಟುಸಿಗರೇಟು, ಕುಡಿದ ಚಾ ಅಂತ ಐವತ್ತು ರೂಪಾಯಿಯಾದ್ರೂ ಹಾಳಾಗಿರ್ಬೇಕು. ಈ ಸರಳ ಲಾಭಹಾನೀ ಲೆಕ್ಕಾನೂ ತಿಳಿದಿದ್ರೆ ಸಂಸಾರ ಹ್ಯಾಂಗ ಸಾಗೀತು?

**ಕೃಷ್ಣ :** ತಿಳಿತದ. ನೋಡು. ಹುಟ್ಟಿದ ಕೂಡ್ಲೆ ಮನುಷ್ಯ ನಡಿತಾ- ನೇನು? ಮಾತಾಡತಾನೇನು? ಹಾಂಗೇ ಬರೀಲಿಕ್ಕೆ ಹತ್ತಿದ ಕೂಡ್ಲೆ ಯಶಸ್ಸು ಹಣ ಹ್ಯಾಂಗಬಂದೀತು? ಇನ್ನೊಂದು ನಾಲ್ಕ ವರ್ಷ ಆತು ಅಂದ್ರೆ, ನಾ ಬರದದ್ದೆಲ್ಲ ಸಾಹಿತ್ಯ ಆಗಿ ಬಿಡ್ತದ. ಎಂಥದ್ದೇ ಇರ್ಲಿ ನೂರ ನೂರಿಪ್ಪತ್ತು, ಪುಟದ ಸಂಭಾಷಣೆ ಬರದ್ರ ಸಾಕು, ಕನ್ನಡ ಭಾಷೆಯ ಶ್ರೇಷ್ಠ ನಾಟಕ, ೪೦೦-೫೦೦ ಪುಟದ ಕಥೆ

ಬರದ್ರ ಉತ್ತಮ ಕಾದಂಬರಿ ಅಂತ ಆಗಿ ಬಿಡ್ತದ. ಅಲ್ಲೀವರೆಗೆ ಕಾಯ್ಬೇಕು ಅಷ್ಟೇ. ನಾನು ಹ್ಯಾಂಗೂ ಪೇಪರಿನವ. ಪೇಪರಮಂದಿ ಕೂಡ ಪರಿಚಯ, ಸ್ನೇಹ, ಇನ್‌ಫ್ಲುಯೆನ್ಸ್ ಅದ. ನನ್ನ ಪುಸ್ತಕದ ವಿಮರ್ಶೆ ಮಾಡುವಾಗ ಅವರು ಹ್ಯಾಂಗೂ ಹೊಗಳಿಯೇ ಹೊಗಳ್ತಾರ.

ರಾಧಾ : ಆಗಲಿ ಆಗಲಿ. ದೊಡ್ಡ ನಾಟಕಕಾರನ ಹೆಂಡತಿ ಆಗೊ-ದಂದ್ರೆ ನನಗೂ ಭೂಷಣವೇ. ಆದ್ರೆ ಅಲ್ಲೀವರೆಗೆ ಹ್ಯಾಂಗೇ ಅಂತ? ನೀವು ಎಂ. ಎ. ಫಸ್ಟ ಕ್ಲಾಸ್ ಆದವ್ರು ಒಂದು ಛಲೋ ಸರಕಾರೀ ನೋಕರಿ ಹಿಡಿಯೂದು ಬಿಟ್ಟು ಮಹಾ ಸಾಹಿತಿಯಾಗ್ತೇನೆ ಅಂತ ಪೇಪರಿನ ನೋಕರಿ ಹಿಡದ್ರಿ.

ಪೋಷ್ಟಮನ್ : (ಹೊರಗಿಂದ) ರಾಯ್ರು, ಎಕ್ಸಪ್ರೆಸ್ ಪತ್ರ ಅದ.

ಕೃಷ್ಣ : ಹೋಗು ಹೋಗು. ಸಹಿಮಾಡಿ ತಗೊಂಡು ಬಾ. (ರಾಧಾ ಹೋಗುವಳು ತನ್ನಷ್ಟಕ್ಕೆ) ಬಹುಶಃ 'ಕನ್ನಡಧೀರ' ಪತ್ರಿಕಾ ಸಂಪಾದಕರದ್ದಿರಬೇಕು. ಲೇಖ ಕಳಸ್ರಿ ಅಂತ ಇವರು ತರಾತುರಿ ಮಾಡ್ತಾರಲ್ಲ, ಹಾಗೇ ರೊಕ್ಕ ಕಳಸಲಿಕ್ಕೆ ತರಾತುರಿ ಮಾಡ್ತಿದ್ರೆ ನಮ್ಮಂಥವ್ರು ಚಾಳಿನ ಎರಡು ಕೋಣೆ ಮನೇಲಿ ಯಾಕೆ ಇರಬೇಕಾಗ್ತಿತ್ತು? (ರಾಧಾ ಬರುವಳು) ತಾ ಯಾವದದು? ಆ ಸಂಪಾದಕರದೇ....

ರಾಧಾ : ಆ ಸಂಪಾದಕರ ಹೆಸರು ಹೇಳುವಷ್ಟು ಸಲ ದೇವರ ಹೆಸರು ತಗೊಂಡ್ರೆ ಮೋಕ್ಷ ಆದ್ರೂ ಸಿಕ್ಕೀತು. ಈ ಹವ್ಯಾಸ ಬ್ಯಾಡ ನಮಗೆ, ಮರ್ಯಾದೆಯಿಂದ ಜೀವನ ಮಾಡೂ ಹಾದಿ ನೋಡೋಣ ಅಂತ, ಹೋಗಲಿ ಬಿಡ್ರಿ. ಎಷ್ಟು ಹೇಳಿದರೂ ಅಷ್ಟೇ. ಕೋಣನ ಮುಂದೆ ಕಿನ್ನರಿ ಬಾರಿಸಿದ ಹಾಂಗೇ... (ಪತ್ರ ಕೊಡುವಳು)

ಕೃಷ್ಣ : ಏ ಏ. ಸರಳ ಗಂಡಗ ಕೋಣ ಅಂದ್ಬಿಟ್ಟೆಯಲ್ಲ. ನಿನಗೆಷ್ಟು ಧೈರ್ಯಾನೇ?

ರಾಧಾ : ಏನ ಮಾಡ್ಲಿ? ದಿನಾ ಮುಂಜಾನೆ ಇಂದ ರಾತ್ರೀ ವರೆಗೆ ನಿಮ್ಮ ಉಪಮಾ, ವರ್ಣನಾ ಕೇಳಿ ಕೇಳಿ ಎಲ್ಲಾ ಬಾಯಿ ಪಾಠ ಆಗಿ ಹೋಗ್ಯದ. ಕನಸಿನೊಳಗೆ ಮಾತಾಡಿದ್ರೂ ಅವೇ ಬರ್ತಾವ. ಓದಿದಿರೇನು ಪತ್ರಾನ! ಏನಂತಾರ ನಿಮ್ಮ ಷಡ್ಡಕಾ.

ಕೃಷ್ಣ : (ಪತ್ರ ಓದಿ) ಎಲಾ! ಘಾತಾತು. ರಾಧಾ. ನಿನ್ನ ಅಕ್ಕ ಮತ್ತು ಅವಳ ಗಂಡ ಇಂದೇ ಮಧ್ಯಾಹ್ನ ೧೨ ಘಂಟೇಗೆ ಇಲ್ಲೀಗೆ ಬರ್ತಾರಂತ. "ನಾವೂ ಮಾವನ ಮನೇಗೆ ಹಬ್ಬಕ್ಕೆ ಹೊಂಟೇವಿ. ಎಲ್ಲಾ ಕೂಡೇ ಹೋಗೋಣ ಅಂತ ಮೊದಲು ನಿಮ್ಮಲ್ಲೀಗೆ ಒರ್ತೇವೆ. ತಯಾರಾಗ್ರಿರಿ. ನಾಳೇನೇ ಹೊರಡೂದು" ಅಂತ ಬರದಾರ.

ರಾಧಾ : ಭೇಷಾತು. ನಿಮ್ಮ ಮುಂದೆ ವಾದಾ ಹಾಕಿ ನಿಮ್ಮನ್ನೂ ಒಪ್ಪಸೂ ಕಷ್ಟ ನನಗೆ ತಪ್ಪು.

ಕೃಷ್ಣ : ಅಂದ್ರೆ, ಅವರು ಹೇಳಿದ ಕೂಡ್ಲೆ ನಾ ಹೊರಟು ಬಿಡ್ತೇನೆ ಅಂತ ತಿಳದಿಯೇನು?

ರಾಧಾ : ನೋಡೋಣಂತೆ.

ಕೃಷ್ಣ : ನೋಡೋಣಂತೆ. ನಿಜವಾದ ಸಾಹಿತಿ ಯಾವ ಆಶೆ, ಯಾವ ಭಯ, ಯಾವ ಆಗ್ರಹಗಳಿಗೂ ಬಲಿಯಾಗೂದಿಲ್ಲ ಅಂತ ಸೆರಗೀಗೆ ಗಂಟು ಹಾಕಿಕೊ.

ರಾಧಾ : ಹಾಕೊಂಡೆ ನೋಡ್ರಿ. ನಾಳೆನೇ ಇವನ್ನ ಬಿಚ್ಚಲಿಕ್ಕೆ ಬರ್ತದ ಅನ್ನೂ ಖಾತ್ರಿ ನನಗದ.

ಕೃಷ್ಣ : ನೋಡೋಣಂತೆ.

**ರಾಧಾ :** ನೋಡೋಣಂತೆ. ಒಂಬತ್ತು ಆಗಿಹೋತು. ಹ್ಯಾಂಗೂ ನಿಮಗಿಂದು ರಾತ್ರೀ ಪಾಳಿ. ಲಗೂ ಸ್ನಾನಾ ಮಾಡಿ. ಸ್ಟೇಶನ್ನಿಗೆ ಹೋಗಿ ಅವರನ್ನ ಕರಕೊಂಡು ಬರ್‍ರಿ. ಅಷ್ಟರೊಳಗ ಅಡಗಿ ಆಗಿರ್‍ತದ. ಎಲ್ಲಾರೂ ಒಟ್ಟೇ ಊಟಾ . . . .

**ಕೃಷ್ಣ :** ಆತು ಈವತ್ತಿನಮಟ್ಟಿಗಂತೂ ನನ್ನ ನಾಟಕ . . . .

**ರಾಧಾ :** ಇರಲಿ ಬಿಡ್ರಿ. ಇಷ್ಟದಿನ ಇದ್ದಹಾಗೆ ನಿಮ್ಮ ನಾಟಕ ಈವತ್ತು ಒಂದು ದಿನವಾದರೂ ಇರ್‍ಲಿ ನಿಮ್ಮ ತಲೇಲಿ. ಏಳ್ರಿ ಇನ್ನು.

( ಒಳಗೆ ಹೋಗುವಳು. )

**ಕೃಷ್ಣ :** (ಸ್ವ) ಮೆನಿ ಎ ಪ್ಲಾವರಈಚ್ ಬಾರ್ನ್ ಟು ಬ್ಲಶ್ ಅನ್‌ಸೀನ್. ಇಂಥಾ ಸಂಸಾರ, ಇಂಥ ಪರಿಸ್ಥಿತಿ ಇದ್ದ ಮೇಲೆ ಇಲ್ಲಿ ಖಾಲೀ ಕೂಡ್ರುವದರಾಗ ಅದೇನಾಶ್ಚರ್ಯ? ಸ್ಟೇಶನ್ನಿಗೆ ಹೋಗೂದೇ ಛಲೋ. ಮೋಹನರಾಯ್ರಿಗೆ ನಮ್ಮ ಪರಿಸ್ಥಿತಿ ಎಲ್ಲಾ ಹೇಳಿ ನಾ ಬರೂದಿಲ್ಲ ಅಂತ ಹೇಳಿಡೂದು ಛಲೋ. ಇಲ್ಲಾಂತ ಅಂದ್ರ ಈಕಿ, ಇವಳ ಅಕ್ಕ, ಇವಳ ಅಕ್ಕನ ಗಂಡ— ಮೂರೂ ಮಂದಿ ಕೂಡಿ ನನ್ನ ಬಾಯಿ ಮುಚ್ಚಿಸಿ ನಾ ಹೊರಡುವ್ಹಾಂಗೆ ಮಾಡಿ ಬಿಟ್ಟಾರು. ದೆಟ್ ಮಸ್ಟ ನಾಟ್ ಬಿ. ಈ ಸಲ ಒಂದು ನಾಲ್ಕಾರು ದೀಪಾವಳಿ ಸಂಚಿಕೆಗಳಲ್ಲಾದ್ರೂ ನನ್ನ ಲೇಖ, ನಾಟಕ ಬಂದ್ರ ಒಂದಿಷ್ಟು ಹೆಸರು ಟಿಕಾಸೀತು. ತಡೆದು ನಿಂತ ಮನೇ ಭಾಡಿಗೇಲಿ ಒಂದಿಷ್ಟಾದರೂ ಪೇಡ್ ಆದೀತು. (ಪ್ರ) ರಾಧಾ ನೀರ ಕಾದಾವೋ ಇಲ್ಲೋ. ಲಗೂನೆ ಸ್ನಾನಾ ಮಾಡಿ ಸ್ಟೇಶನ್ನಿಗೆ ಹೋಗಿ ಬರ್‍ತೇನೆ.

( ೨ )

( ಅಂದೇ ಮಧ್ಯಾಹ್ನ. ಕೃಷ್ಣರಾಯ, ರಾಧಾಳ ಅಕ್ಕನ ಗಂಡ ಮಾಧವ ರಾಯ ಇಬ್ಬರೂ ಚಹ ಕುಡಿಯುತ್ತ ಕುಳಿತಿದ್ದಾರೆ. )

**ಮಾಧವ :** ಪಸಂದ ಊಟಾಯಿತು, ನಿದ್ದಿ ಆತು. ಪ್ರವಾಸದ ತ್ರಾಸೆಲ್ಲ ಹಾರಿಹೊತು. ಕೃಷ್ಣರಾಯಾ ನೋಡು ಇಂಥಾ ಹೊತ್ತಿನೊಳಗೆ ನನಗ ಬದುಕಿರೂದಲ್ಲಿ ಭಾಳಸುಖ ಅನಸ್ತದ. ಮನುಷ್ಯ ಆಗಿ ಹುಟ್ಟಿ ಬಂದಮ್ಯಾಲೆ, ಹೊಟ್ಟೆ ಬಟ್ಟೆ ತಾಪತ್ರ ಇರಬಾರ್‍ದು, ಮನಸೂಪ್ಪುವಂಥ ಹೆಂಡ್ತಿ ಇರಬೇಕು, ಒಂದು ಒಳ್ಳೆ ನಾಲ್ಕ ಜನಾ ಫ್ರೆಂಡ್ಸು ಮತ್ತೆ ಬಂದಾಗ ಹೋದಾಗ ಆದರಾತಿಥ್ಯ ಮಾಡೋ ನಿಮ್ಮಂಥ ಬೀಗರಿರಬೇಕು, ಅಂದ್ರೇನಪಾ ಮನುಷ್ಯ ಸುಖಿಯಾಗಿ ಬಿಡ್ತಾನ. ನಾವು ಸೀದಾ ಹೋಗದೆ ಇಲ್ಲಿ ಬಂದದ್ದು ಛಲೋ ಆತು.

**ಕೃಷ್ಣ :** ಹೌದೌದು. ಈವತ್ತು ನೀವು ಬರದಿದ್ರ ದಿನದ ಹಾಂಗ ಬರೇ ಸಾರೂ ಅನ್ನ ಭಕ್ಕರಿ ಉಣ್ತಿದ್ವೆ. ನೀವು ಬಂದ್ರಿ, ನಮ್ಮ ರಾಣೀ ಸಾಹೇಬರು ಖೀರು ಪುರಿ ಬಡಿಸಿದ್ರು. ಅಂದಮ್ಯಾಲೆ ನೀವು ಬಂದದ್ದು ಛಲೋ ಆಗ್ಲಿಲ್ಲ ಅಂತ ನಾ ಅಂದ್ರೆ.

( ಒಳಗಿನ ಖೋಲಿಯಲ್ಲಿರುವ ರಾಧ ಮತ್ತು ಆವಳ ಅಕ್ಕ ವಿಮಲೆಗೆ ಈ ಮಾತು ಕೇಳಿಸುವುದು. )

**ವಿಮಲೆ :** ಹೌದೇನೇ ರಾಧಾ? ಕೃಷ್ಣರಾಯರಿಗೆ ಯಾವಾಗಲೂ ನೀ ಬರೆ ಅನ್ನಸಾರು ತಿನಸತಿಯೇನು! ಆದಿತ್ಯವಾರ ಹ್ಯಾಂಗೂ ಸೂಟಿ ಇರ್‍ತದ. ಆಫೀಸಿನ ಅವಸರ ಇರೂದಿಲ್ಲ. ಆ ದಿನಾ ಏನಾರ ವಿಶೇಷ ಮಾಡ್ಬೇಕು. ಸಂಜೆ ಹೊತ್ತು ಸಿನೇಮಾಕ್ಕೆ, ವಾಕಿಂಗಿಗೆ ಹೋಗಬೇಕು. ಅಂದರೆ.

**ರಾಧಾ :** ಏನಕ್ಕಾ, ನೀನೂ ನಂದೇತಪ್ಪು ಅನ್ನುವವರ ಹಾಗೆ ಮಾತಾಡಿ ಬಿಟ್ಟಿಯಲ್ಲ! ನನಗೆ ಅಷ್ಟೂ ತಿಳಿಯೂದಿಲ್ಲೇನು? ನಾ ಏನಾದ್ರೂ ವಿಶೇಷ ಮಾಡಿದ್ರೆ, ಇವರೇ "ಯಾಕೆ? ಈವತ್ತು ಯಾವ ಹಬ್ಬ? ರಾಧಾ, ನಾವು ಶ್ರೀಮಂತರಲ್ಲ. ದಿನಮಾನ ಕಠಿಣ ಅವ. ಸಾಮಾನು ಬಹಾಳ ತುಟ್ಟಿಯಾಗ್ಯಾವ. ಹಬ್ಬದ ದಿವಸ ಏನೋ ಪರಂಪರಾ ನಡೆದು ಬಂದದ ಅಂತ ಏನಾದ್ರೂ ಒಂದಿಷ್ಟು ಸೀ ಮಾಡಬೇಕೆ ವಿನಾ ಹೀಂಗೆ ಹಗಲೆಲ್ಲಾ ನಮ್ಮಂಥವ್ರು ಮಾಡ್ಬಾರ್ದು" ಅಂತಾರ.

**ಮಾಧವ :** ಹೌದೇನೊ ಕೃಷ್ಣರಾಯಾ? ಊಟಕ್ಕೂ ಖರ್ಚ ಮಾಡ್ಬಾರದು ಅಂತ ಅಂದ್ರ, ಅಂದ್ರೇನಪಾ, ನೀನೂ ಭಾಳ ಚಿಕ್ಕೂ ಅಂತ ಕಾಣಸ್ತದ.

**ಕೃಷ್ಣ :** (ದೇಶಾವರಿ ನಗುತ್ತ) ಹ್ಹ-ಹ್ಹ- ಅಂಹಂ. ಹಾಂಗಲ್ಲ ಹಾಂಗಲ್ಲ. ಮನುಷ್ಯ ಮಿತವ್ಯಯಿಯಾಗ್ಬೇಕು, ಬಾಯಿ ಚಾಪಲ್ಯ ಇರ್ಬಾರ್ದು ಅಂತ ನನ್ನ ಅಭಿಪ್ರಾಯ. ಮನುಷ್ಯ ಅಂದರೇನ್ರಿ – ಚಟಕ್ಕೆ ಭಾಳ ಲಗೂನೆ ಗುಲಾಮ ಆಗಿಬಿಡ್ತಾನೆ. ಪ್ರತಿ ಆದಿತ್ಯವಾರ ಕಜ್ಜಾಯ ತಿನ್ನೂ ಚಟ............

**ಮಾಧವ :** ಓ! ಮರ್ತೇ ಹೋಗಿತ್ತು. ನೀನು ಲೇಖಕ ಅನ್ನೂದು. ನಿನ್ನ ಹತ್ರ ಮಾತಿಗೇನು ಕಡಿಮೆ? ಲೇಖಕರು ನೀವು ನೂರಾರು ಪುಸ್ತಕ ಓದಿರ್ತೀರಿ. ಯಾರದಾದ್ರೂ ಪ್ರಶ್ನೆಗೆ ಯಾವದಾದ್ರೂ ಪುಸ್ತಕದೊಳಗಿನ ಉದ್ಧಾದ ಮಾತು ಉರಳಿಸಿ ಉತ್ತರ ಕೊಟ್ಟು ಬಿಡ್ತೀರಿ. ಆದ್ರೆ ಸತ್ಯ ಅಂದ್ರೇನ್ರಪಾ, ಜಗತ್ತಿನ ವ್ಯವಹಾರ ಬ್ಯಾರೇನೇ ಇರ್‍ತದ. ತಿನ್ನಬಾರ್ದು, ಉಣ್ಣಬಾರ್ದು, ಮಜಾ ಮಾಡಬಾರ್ದು ಅಂದ್ರ ಮನುಷ್ಯ ಯಾಕೆ ಹುಟ್ಟಬೇಕು? ಅಂ? ನಾಲಿಗೆ ಚಾಪಲ್ಯ ಬ್ಯಾಡ, ಕಣ್ಣಿನ ಚಾಪಲ್ಯ ಬ್ಯಾಡ, ಅದು ಬ್ಯಾಡಾ, ಇದು ಬ್ಯಾಡ. ಅಂದಮ್ಯಾಲೆ ಅಂದ್ರೇನ್ರಪಾ, ಇಷ್ಟೆಲ್ಲ ಬಂಧನಹಾಕ್ಕೊಂಡು ಬದುಕೂದಕ್ಕಿಂತ ಕುತ್ತಿಗೀಗೆ ಉರ್ಲಹಾಕ್ಕೊಂಡು ಪ್ರಾಣಬಿಡೂದು ಛಲೋ.

**ಕೃಷ್ಣ :** ಊಂಹುಂ. ನಾ ಹಾಂಗ ಅನ್ನಲಿಲ್ರಿ. ಜೀವನದೊಳಗೆ ಒಂದು ಪ್ರಿನ್ಸಿಪಲ್ ಇರ್ಬೇಕು ಅಂತ............

---

## ರಿಷಾವಾಲಾ ಬೇಕು!




**ವಿಮಲೆ :** ವಾರಕ್ಕೊಮ್ಮೆ ಕಜ್ಜಾಯಮಾಡಿ ತಿನ್ನೂದಕ್ಕೂ ಪ್ರಿನ್ಸಿಪಲ್ಲಿಗೂ ಏನು ಸಂಬಂಧ ಅಂತೇನಿ?

**ರಾಧಾ :** ಅಕ್ಕಾ, ಇವರ ಪ್ರಿನ್ಸಿಪಲ್ ಅದೊಂದೇ ಅಲ್ಲ. ಇನ್ನೂ ಭಾಳ ಭಾಳ ಅವ. ಲಗ್ನದಾಗ ನೋಡಿದ್ಯೋ ಇಲ್ಲೋ.

**ಮಾಧವ :** ನೋಡೇವಿ ನೋಡೇವಿ. ಪ್ರಿನ್ಸಿಪಲ್ ಅಂತ ಈ ಕೃಷ್ಣರಾಯ ವರದಕ್ಷಿಣೆ ತಗೊಳ್ಳಲಿಲ್ಲ. ಇವನ ಪ್ರಿನ್ಸಿಪಲ್ ಗದ್ದಲದಲ್ಲಿ ನಮ್ಮ ಇಂಟರೆಸ್ಟ್ ಹೋಗಿಬಿಟ್ತು.

**ಕೃಷ್ಣ :** ಅಂ?

**ಮಾಧವ :** ಹೌದು. ಅಂದ್ರೇನಪ್ಪಾ, ನೀನು ವರದಕ್ಷಿಣೆ ಹೋಗ್ಲಿ, ಇತರ ಉಡುಗರೇನೂ ಬ್ಯಾಡ ಅಂತ ಹಟ ಹಿಡಿದಬಿಟ್ಟಿ. ನಾವೇನೊ ಲೆಕ್ಕ ಹಾಕಿದ್ವಿ, ಅಂದ್ರೇನಪ್ಪಾ, ನಮ್ಮ ಲೆಕ್ಕದೊಳಗೆ, ನಮ್ಮ ಡಬಲ್ ಡಿಗ್ರೀಗೆ ವರದಕ್ಷಿಣೆ ಕಡಿಮೆ ಅಂತ ನಮಗನಿಸಿತ್ತು. ಆದರೆ ಒಂದ ಕಡೆ ನಮ್ಮಪ್ಪ ಒಪ್ಪಿಕೊಂಡ ಬಿಟ್ಟಿದ್ದ. ಮತ್ತೊಂದ ಕಡೆ ಈಕೀ ಮುಖಾನೂ ನಮ್ಮ ಮನಸನ್ನವಶಮಾಡಿಕೊಂಡ್ಬಿಟ್ಟಿತ್ತು. ಭಾಳ ಜಗ್ಗಿ ಹಿಡಿದ್ರ ಹಗ್ಗಾನೇ ಹರದ ಹೋದೀತು. ಅಂತ ಮೊದಲು ಏನೂ ಮಾತಾಡಿದ್ದಿಲ್ಲ. ಲಗ್ನದಲ್ಲಿ ಎಷ್ಟಾದ್ರೂ ಮದು ಮಗನಿಗೇ ಮಹತ್ವ ಇರ್‍ತದ. ಆಗ ಹೊತ್ತ ಸಾಧಿಸಿ ಇನ್ನೊಂದಿಷ್ಟು ವಸೂಲು ಮಾಡ್ಬೇಕು ಅಂತ ಲೆಕ್ಕ ಹಾಕಿದ್ದೆ. ಆದ್ರೆ-ನಮ್ಮ ನಶೀಬ. ಜೋಡು ಲಗ್ನಾತು ನಮ್ಮ ಲೆಕ್ಕ ಮುಳಗಿತು. ಕೃಷ್ಣರಾಯ ವರ ದಕ್ಷಿಣೆ ಸುದ್ದಾ ಬ್ಯಾಡಂತಂದ ಮ್ಯಾಲೆ ವರದಕ್ಷಿಣೆ ತಗೊಂಡ ನಾವು ಮತ್ತೂ ಕೇಳಿದ್ರೆ ಭಾಳ ಸುಮಾರಾದೀತ ಅಂತ ಸುಮ್ಮನಿರ ಬೇಕಾತು.

**ಕೃಷ್ಣ :** ಹೀಂಗೇನು? ಅಂದ್ರೆ ನನ್ನಿಂದ ನಿಮಗೆ?

**ಮಾಧವ :** ಲುಕ್ಸಾನು ಆತು ಖರೆ. ಆದರೆ ಮನುಷ್ಯ ಅಂದ್ಮೇಲೆ ಲುಕ್ಸಾನು, ಲಾಭ ಇದ್ದದ್ದೇ. ಆದರೇನು? ನಮಗೆ ದೇವರು ಬುದ್ಧಿ ಕೊಟ್ಟಾನೊ ಇಲ್ಲೊ? ಆ ಬುದ್ಧೀನ ಉಪಯೋಗಿಸಿಕೊಂಡು ಅಂದ್ರೇನ್ರಪಾ, ಈ ಕೆಲಸಕ್ಕೆ ಬಾರದ ಪ್ರಿನ್ಸಿಪಲ್ಲು, ತತ್ತ್ವ, ಧ್ಯೇಯ ಅಂತ ಮಬ್ಬಿಗೆ ಬಿದ್ದು ಯಾವಾಗಲೂ ಲುಕ್ಸಾನಿನ ಮಾರ್ಗಾನೇ ಹಿಡೀಬಾರ್ದು. ಮೊದಲೇ ಹಣಾ. ಅಂದ್ರ ಎಲ್ಲೆ ಲಕ್ಷಕೊಬ್ಬ ನನ್ನ ಬಿಟ್ರೆ ಉಳಿದವು ಕೈಗೆ ಬರೂದಿಲ್ಲ. ಬರೂದಿಲ್ಲ ಅಂತಿರ್‍ತದ. ಅಂಥಾದ್ದರೊಳಗೆ ತಾನಾಗೇ ಸಿಗ್ತಿರುವಾಗ, ಅದೂ ಹಕ್ಕಿನಿಂದ ಸಿಗ್ತಿರುವಾಗ ಬ್ಯಾಡ ಅನ್ನೂದು ಮೂರ್ಖತನ ಅಂತ ನನ್ನ ಅಭಿ ಪ್ರಾಯ ಅಂದ್ರೇನ್ರಪಾ, ಸಿದ್ಧಾಂತ ಅನ್ರಿ ಬೇಕಾದ್ರೆ,

**ಕೃಷ್ಣ :** ಹಕ್ಕು?

**ಮಾಧವ :** ಹೌದು, ಮಾವನ ಹತ್ತರ ಇಸಗೊಳ್ಳೂ ಹಕ್ಕು ಅಳಿಯಗ ಇದ್ದೇ ಇರ್‍ತದ.

**ಕೃಷ್ಣ :** ನನಗೆ ಯಾಕೋ ಇದು ಹಕ್ಕು ಅನಸೂದಿಲ್ಲ. ನನ್ನ ಕೇಳಿ ದರೆ ಇದು ಸುಲಿಗೆ ಅಂತೇನಿ.

**ಮಾಧವ :** ನಿನ್ನ ಕೇಳಿದ್ರೆ ಹೌದಲ್ಲೊ? ಯಾರು ಕೇಳ್ತಾರ ನಿನ್ನ? ಕಾಲೇಜಿನಿಗೊಳಗಿದ್ದಾಗಿನಿಂದ ನೋಡಲಿಕ್ಕೆ ಹತ್ತೇನಿ. ನೀ ಏನ ನಿನ್ನ ಹುಚ್ಚು ಬಿಡವಲ್ಲಿ. ಲಗ್ನದ ವ್ಯಾಳ್ಯೇಕ್ಕ ಎಷ್ಟ ಹೇಳಿದೆ ನಿನಗ? ವರದಕ್ಷಿಣೆ ಬಿಡಬ್ಯಾಡ ಅಂತ! ಕೇಳಿದಿಯಾ? ನೌಕರಿ ಹಿಡಿಯೂ ಸಮಯದಲ್ಲಿ ನನ್ನ ಹಾಗೆ ಪಿ. ಡಬ್ಳ್ಯೂ. ಡಿ. ಗೆ ಬಾರೋ ಅಂತ

ಅಂದೆ. ನೀ ಕೇಳಲಿಲ್ಲ. ಪ್ರಿನ್ಸಿಪಲ್, ಸಾಹಿತ್ಯ, ಸೇವೆ ಅಂತ ಪೇಪರಿನ ಕೆಲಸಕ್ಕೆ ಸೇರಿಕೊಂಡಿ.

**ಕೃಷ್ಣ :** ಏನ ತಪ್ಪಾತು ? ಮನುಷ್ಯ ಆಗಿ ಹುಟ್ಟಿ ಪಶು ಜೀವನ ಬಾಳಬಾರ್ದು. ಬರೇ ಹೊಟ್ಟೆಬಟ್ಟೆ......

**ಮಾಧವ :** ಕೇಳೇನಿ ಬಿಡಪ್ಪಾ ಇವನ್ನೆಲ್ಲಾ? ಪಶು ಜೀವನ ಬ್ಯಾಡಅಂತ ಅಂದ ನೀನು ಈಗೇನು ಮಹಾ ಮನುಷ್ಯ ಜೀವನ ನಡಸ್ತಾ ಇದ್ದಿ ಹೇಳು. ವಾರಕ್ಕೊಮ್ಮೆ ಸೀ ಊಟ ಮಾಡೂ ಯೋಗ್ಯತೆ ಇಲ್ಲದವ, ನೀ ತಿರಸ್ಕಾರದಿಂದ ನೋಡುವಂಥಾ ಪಶು ಕೂಡ ಇರ್ಲಿಕ್ಕೆ ಅಯೋಗ್ಯ ಆದಂಥಾ ಮನೀ ಒಳಗೆ ಇರಬೇಕಾಗಿ ಬಂದದ. ಸತ್ತ ಮ್ಯಾಲೆ ಹೆಂಡರು ಮಕ್ಕಳೀಗೆ ದೇವ್ರನೇ ಗತಿಮಾಡಿ ಹೋಗುವಂಥಾವಾ ಮನುಷ್ಯರ ಲೆಕ್ಕದೊಳಗೆ ಬರ್ತಾನೇನೂ, ಎಲ್ಲೋ ಇರೂದೂ, ಹ್ಯಾಂಗೋ ಇರೂದು, ಬರೇ ದುಡಿಯುದು ಅಂದ್ರೇನಪಾ, ಇವೆಲ್ಲಾ ಪಶು ಲಕ್ಷಣ ಅಂತ ನಾನಂತೂ ಹೇಳ್ತೇನಿ.

**ಕೃಷ್ಣ :** ಇರಲಿಕ್ಕಿಲ್ಲ. ನನಗೆ ಬೇಕಾದಷ್ಟು ದುಡ್ಡು ಸಿಗಲಿಕ್ಕಿಲ್ಲ. ಆದ್ರ ನನ್ನ ಹೆಸರು . . . .

**ಮಾಧವ :** ಹುಚ್ಚು. ಬರೇ ಹುಚ್ಚೋ ಇದು ಕೃಷ್ಣರಾಯ. ಇನ್ನಾದರೂ ಮನುಷ್ಯ ಆಗು. ಉತ್ತಿಷ್ಠತ ಜಾಗ್ರತ ಅಂತ ಸ್ವಾಮಿ ವಿವೇಕಾನಂದರು ಹೇಳ್ಯಾರ. ಅವರಿಗಿಂತಾ ದೊಡ್ಡವ ಕೃಷ್ಣಪರಮಾತ್ಮ ಅವನ ಹೆಸರು ಇಟ್ಟುಕೊಂಡ ನೀನು ಕಣ್ಣಿದ್ದೂ ಕುರುಡ ಆಗಬ್ಯಾಡ ಇನ್ನಮ್ಯಾಲೆ ಮಕ್ಕುಮರಿ ಆಗಿ ನಿನ್ನ ಸಂಸಾರ ಬೆಳೀತದ. ಅವರ ವಿಚಾರ ನೀನು ಮಾಡ್ಬೇಕು. ಅವರಿಗೊಂದು ಇರ್ಲಿಕ್ಕೆ ಮನೀ ನಾದ್ರೂ ಮಾಡಿ ಹೋಗೂದು ನಿನ್ನ ಧರ್ಮ. ನಿನ್ನ ನೋಕರಿಯೊಳಗೆ ಪೆನ್ಶನ್ ಸಿಗೂದಿಲ್ಲ. ನೀ ರಿಟಾಯರ ಆದಮ್ಯಾಲೆ ವರ್ಷೋಪ್ಪತ್ತಾದ್ರೂ ಹೊಟ್ಟಿ ಚಿಂತಿ ತಪ್ಪೂ ಹಾಂಗೆ ವ್ಯವಸ್ಥಾ ಮಾಡಿಕೊ. ಹೊಟ್ಟೆತುಂಬೂದು ಹೆಸರಿನಿಂದಲ್ಲ, ಅನ್ನದಿಂದ. ನಾಲ್ಕು ಮಂದಿ ಇದ್ದ ಹಾಂಗ ಇರ್ಬೇಕಪಾ, ಕೃಷ್ಣರಾಯಾ, ಎಲ್ಲಾರೂ ಕಾಳೀದಾಸ ಆಗ್ಬೇಕು ಅಂದ್ರ, ಹ್ಯಾಂಗಾದೀತು ?

**ರಾಧಾ :** ಕೇಳ್ರಿ, ಅವರ ಮಾತಾದ್ರೂ ಕೇಳ್ರಿ. ನಾ ಹೇಳಿದ್ರ

**ವಿಮಲಾ :** ಹೌದು.

**ಮಾಧವ :** ಇಂವ ಏನ ಬಂದಾ ದೊಡ್ಡ ಉಪದೇಶ ಮಾಡ್ಲಿಕ್ಕೆ ಅಂತ ತಿಳಕೋಬ್ಯಾಡ. ಸಿಟ್ಟಾಗಬ್ಯಾಡ. ನೀ ನೋಕರಿ ಮಾಡ್ಲಿಕ್ಕೆ ಹತ್ತಿ ಮೂರು ವರ್ಷ ಆತು. ನಾ ನೋಕರಿ ಮಾಡ್ಲಿಕ್ಕೆ ಹತ್ತಿ ಎರಡು ವರ್ಷ ಆತು. ನೀನು ಏನೇನು, ಎಷ್ಟುಗಳಿಸೀದಿ ಹೇಳು. ಹೆಸರಂತಿಯಾ, ನಿನ್ನ ಚಾಳನವರಿಗಾದ್ರೂ ಸರಿಯಾಗಿ ಗೊತ್ತದೇನು, ಪರೀಕ್ಷಾ ಮಾಡಿ ನೋಡು. ನೀ ಚಾ ಕುಡಿಸಿದಾಗ ನಿನ್ನ ನಾಟಕ ಛಲೋ ಅನ್ನವರ ಮಬ್ಬಿಗೆ ಬೀಳಬ್ಯಾಡ. ಏನಾದ್ರೂ ಪ್ರಯೋಜನವಾಗುವಂಥ ನೋಕರಿ ಹಿಡಿ. ಏನ್ರಿ ಸಬ್ ಎಡಿಟರ್ರೇ ಅಂತ ಕರೆಸಿಕೊಳ್ಳೂದಕ್ಕಿಂತ ಏನ್ರೀ ಸಾವಕಾರ್ರೇ ಅನಿಸಿಕೊಳ್ಳುವವ ಈ ಜಗತ್ತಿನಲ್ಲಿ ಧನ್ಯ. ಧನ್ಯನಾಗೂ ಕೆಲಸ ಮಾಡ್ಬೇಕಪಾ ಕೃಷ್ಣರಾಯಾ.

**ಕೃಷ್ಣ :** ಯಾಕೆ ಪ್ರಯೋಜನ ಇಲ್ಲ ? ಪೇಪರಿನ ನೋಕರಿ ಅಂದ್ರ ಕೆಟ್ಟ ಏನು ? ದೊಡ್ಡ ದೊಡ್ಡವರ ಪರಿಚಯ ಆಗ್ತದ. ಸಾಹಿತಿ ಅಂತ ಹೆಸರಾದ್ರ ಅಜರಾಮರ ಕೀರ್ತಿ . . . .

**ಮಾಧವ :** ಹೌದೌದು. ಕುಬೇರನ ಹೆಸರು ಎಷ್ಟ ಮಂದೀಗೆ ಗೊತ್ತದನೋ ಅಷ್ಟು ಕಾಳಿದಾಸನ ಹೆಸರು ಗೊತ್ತದೇನು ? ಗರ್ವನರ ಬಂದ್ರ ಪತ್ರಿಕಾ ಪರಿಷತ್ತು ಅಂತ ನಿಮ್ಮನ್ನೆಲ್ಲಾ ಕರದೊಯ್ದು ಅವರ ಭೆಟ್ಟಿ ಮಾಡಸ್ತಾರ. " ದಿಸ್ ಈಜ್ ಮಿ. ಕೃಷ್ಣರಾವ್, ಸಬ್ ಎಡಿಟರ್ " ಅಂತ ಅಂತಾರ. ನೀನು " ಹ್ವಿ–ಹ್ವಿ–ಹ್ವಿ " ಅಂತ ಬಾಯಿ ಅಗಲಿಸಿ ಹಲ್ಲ ಕಿರೀತಿ. ಗರ್ವನರ " ಏನ ಬೆಪ್ಪ ಇದ್ದಾನ ಇವಾ " ಅನ್ನೂ ತನ್ನ ಅಭಿಪ್ರಾಯಾನ ಬಾಯಿಂದ ಹೇಳಲಾರದ್ದಕ್ಕ ತುಟಿ ಅಂಚಿನೊಳಗೇ ನಕ್ಕಹಾಂಗ ಮಾಡಿ ನೀ ಮುಂದೆ ಮಾಡಿದ ಕೈಯನ್ನ ಪೂಜೆ ಪುರಸ್ಕಾರದ ಹೊತ್ತಿನಲ್ಲಿ ಹೆಂಡತಿ ಗಂಡನ ಹಸ್ತ ಸ್ಪರ್ಶಮಾಡಿದ್ಹಾಂಗ ಮುಟ್ಟಿ ಅಲಗಾಡಿಸಿದ್ಹಾಂಗ ಮಾಡ್ತಾನ. ಅಲ್ಲೀಗೆ ಮುಗೀತು ನಿಮ್ಮ ಪರಿಚಯ. ಅದರಿಂದೇನಾದ್ರೂ ಫಾಯ್ದೆ ? ಕೇಳಬ್ಯಾಡ. ಅಂದ್ರೇನ್ರಪಾ, ಸಾಹಿತಿಗಳ ಹೆಸರು, ಪೋಜಿಶನ್ನು ಅಂದ್ರೆ . . .

**ಕೃಷ್ಣ :** ನೀವು ಹೀಂಗೆಲ್ಲಾ ವಾದಿಸಲಿಕ್ಕೆ ಹತ್ತಿದ್ರೆ ನಾನಾದ್ರೂ ಏನ ಹೇಳಲಿ ?

**ಮಾಧವ :** ಏನೂ ಹೇಳಬ್ಯಾಡ. ಹೇಳಿದ್ದು ಸುಮ್ಮನೆ ಕೇಳಿಕೋ. ಅಂದ್ರೇನ್ರಪಾ, ನೀನು ನನ್ನ ಫ್ರೆಂಡು. ಮೇಲಾಗಿ ನನ್ನ ಹೆಂಡತೀ ತಂಗೀ ಗಂಡ. ಹೀಂಗ ಡಬಲ್ ರಿಲೇಶನ್ ಆಗಿಬಿಟ್ಟದ. ನಿನ್ನ ಕಾಳಜಿ ನಾವಲ್ದೆ ಮತ್ಯಾರು ಮಾಡ್ಬೇಕು ?

**ರಾಧಾ :** ಹೌದು. ಇನ್ನೊಬ್ಬರಾಗಿದ್ರೆ . . .

**ಕೃಷ್ಣ :** ನೀ ಸುಮ್ಮನಿರು.

**ಮಾಧವ :** ಹಂ ಹಂ ! ಸಂಸಾರದೊಳಗೆ ಆಗಾಗ ಹೆಂಡ್ತೀ ಮಾತು ಕೇಳ್ತಾ ಇರಬೇಕಾಗತದ. ಸಾಹಿತಿ ತಾನು, ತಾ ಹೇಳಬೇಕಾದ ಮಾತು ಇಂವ ಹೇಳ್ತಾನ, ನನ್ನ ಹಕ್ಕು ಕಸಕೊಂಡಾ ಅಂತ ಬೇಸರ ಮಾಡಿಕೊಳ್ಳಬೇಡ ಮತ್ತೆ. ಅಂದ್ರೇನ್ರಪಾ ತಾನಾಗಿ ಬರೂ ರೊಕ್ಕ ಹ್ಯಾಂಗ ಬಿಡಬಾರದೂ ಹಾಂಗೆ ಒಟ್ಟು ಛಲೋ ಮಾಡು, ವ್ಯವಹಾರದ ಮಾತು, ಬದಕೂ ಮಾತು, ಯಾರ ಬಾಯಿಂದಬಂದ್ರೂ ತಗೊಂಡುಬಿಡಬೇಕು. ಅಂದ ಹಾಂಗೆ, ಮುಖ್ಯ ಮಾತುಹೇಳ್ತೇನಿ. ಖರೇ ಅಂದ್ರ, ನಾವು ಇಲ್ಲೀಗೆ ಬಂದದ್ದು ಈ ಮಾತ ಹೇಳ್ಲಿಕ್ಕೇನೇ ಅಂತ. ಇಲ್ಲಾಂತಂದ್ರ ನೀ ಪ್ರಿನ್ಸಿಪಲ್ ಅಂದಕೋತ ನಮ್ಮ ಮಾತು ಕೆಡಸಿಬಿಟ್ಟಿ ಅಂತ ತಿಳದು ಬರ್ಬೇಕಾತು. ವರದಕ್ಷಿಣೀ ಹಣ ಐದುಸಾವಿರ ರೂಪಾಯಿಗೆ ನನ್ನಗಳಿಕೆ; ಅಂದ್ರೇನ್ರಪಾ, ಸಂಬಳದ್ದಲ್ಲ ಗಿಂಬಳದ್ದು— ಯಾರಿಗೂ ಪಬ್ಲಿಕ್ ಮಾಡಬ್ಯಾಡ. ನಮ್ಮ ಖಾತೇದಾಗ ಸಂಬಳಕ್ಕಿಂತಲೂ ಗಿಂಬಳದ್ದೆ ಪ್ರಸ್ಥ ಹೆಚ್ಚು–ನನ್ನ ಗಳಿಕೆ–ಗಿಳಿಕೆ ಈ ಎರಡು ವರ್ಷದೊಳಗೇ ಗಳಿಸಿದ್ದು ಇದು— ನನ್ನ ಗಳಿಕೆ ಹಣ ನಾಲ್ಕುಸಾವಿರ ರೂಪಾಯಿ ಕೂಡಿಸಿ ಪ್ಲಾಟ್ ಕೊಂಡು ಮನೇ ಕಟ್ಟಿಸಲಿಕ್ಕೆ ಹತ್ತೇನಿ. ನೀನೂ ಹಾಂಗೇಮಾಡು. ನಾ ನಮ್ಮ ರಾಜೀಸಾಹೇಬರ ಮುಖಾಂತರ ಮಾವಗೆ ಎಲ್ಲಾ ತಿಳಿಸಿ ಹೇಳ್ತೇನೆ. ನೀ ಮಾತ್ರ ಒಲ್ಲೆನ್ನಬ್ಯಾಡ.

**ಕೃಷ್ಣ :** ಆದರೆ.

**ಮಾಧವ :** ಕೃಷ್ಣರಾಯಾ, ನಿನ್ನ ಹೊಟ್ಟೆ-ಬಟ್ಟೆ-ವಸತಿ ಏರ್ಪಾಡು ಮಾಡಿಕೊಂಡು ಆಮ್ಯಾಲೆ ಪ್ರಿನ್ಸಿಪಲ್ಲು, ಲಿಟ್ರೇಚರು, ಅಂತ ಹವ್ಯಾಸಕ್ಕೆ ಬೀಳು ಬೇಕಾದರೆ. ಏನ ಸಾಹಿತಿಗಳಪ್ಪ ನೀವು ಅಂತೇನಿ. ಒಂದು ಸಣ್ಣ ಮಾತು, ಅಂದ್ರೆನ್ರಪಾ. ದೊಡ್ಡ ದೊಡ್ಡ ಮಾತು ಹೇಳೂ ಮಬ್ಬಿನೊಳಗೆ ಸಣ್ಣಸಣ್ಣ ಮಾತು ಮರ್ತಬಿಡ್ತೀರಿ. ನಿನ್ನ ಹತ್ತರ ರೊಕ್ಕ ಇತ್ತೂ ಅಂದ್ರೆ ನೀ ಬರದ ಪುಸ್ತಕ ಭರಾಭರಾ

ಪ್ರಿಂಟಮಾಡಿ ನೀ ದೊಡ್ಡ ಸಾಹಿತಿ ಅನ್ನಿಸಿಕೊಳ್ಳಬಹುದು. ಅದಕ್ಕೆ ಮೊದ್ಲು ಲಕ್ಷ್ಮೀನ್ನ ಪ್ರಸನ್ನ ಮಾಡೂ ಹಾದಿ ಹಿಡಿ. ಆ ಮ್ಯಾಲೆ ಸರಸ್ವತಿ ಪ್ರಸನ್ನ ಆಗೇ ಆಗ್ತಾಳ.

**ರಾಧಾ :** ನಾನೂ ಹಾಗೇ ಹೇಳಿದೆ. ಆದರೆ ಲಕ್ಷ್ಮಿಗೂ ಸರಸ್ವತಿಗೂ ಕೂಡಿ ಬರೂದಿಲ್ಲಂತ.

**ಮಾಧವ :** ಬರದಿದ್ರ ಜೋರಲೆ ಬರಸಬೇಕು. ಕೃಷ್ಣರಾಯಾ, ನೀ ಹಣಗಳಸೂ ಹೊತ್ತಿಗೆ ನಿನ್ನ ಸಾಹಿತ್ಯ ಎಲ್ಲ ಕರಗೋದೀತು ಅಂತ ಹೆದರಿಕೆ ಇದ್ರ, ಅದಕ್ಕೂ ಉಪಾಯ ಹೇಳಟ್ವಿರ್ತೇನಿ. ಕೇಳಿಕೋ ನಾವು ಪ್ರಿನ್ಸಿಪಲ್‌ನವರಲ್ಲ, ಪ್ರಾಕ್ಟಿಕಲ್ ಮಂದಿ. ಸಾಹಿತ್ಯ ಕರಗಿದ್ರೂ ಹಣ ಇರ್ತದಲ್ಲ. ಯಾವನಾದ್ರೂ ಪ್ರಿನ್ಸಿಪಲ್ ಅಂತ ಮಬ್ಬಿನೊಳಗೆ ಬರೀತಿರ್‍ತಾನಲ್ಲ– ಅವರಿಗೆ ಯಾವಾಗಲೂ ಅಡಚಣಿ ಇದ್ದೇ ಇರ್‍ತದ–ರೊಕ್ಕ ಕೊಟ್ಟು ಅಂಥವರಿಂದ ಪುಸ್ತಕ ಬರ್‍ಸಿ ನಮ್ಮ ಹೆಸರು ಹಾಕಿಸಿಕೊಂಡು ಬಿಟ್ರಾತು.

**ಕೃಷ್ಣ :** ಛೆ! ಛೆ! ಭಾರೀ

**ಮಾಧವ :** ಛೆ ಛೇ ನೂ ಇಲ್ಲ. ಛಿ ಛೀ ನೂ ಇಲ್ಲ. ನಾ ಎಲ್ಲಾ ಪ್ಲಾನ್ ಹಾಕ್ಕೊಂಡೇ ಬಂದೀನಿ. ನಮ್ಮ ಮಾವ ಏನೂ ಪೋಕಳ ಆಸಾಮಿ ಇಲ್ಲ. ನನ್ನ ಹಾಂಗೇ ಪ್ರಾಕ್ಟಿಕಲ್ ಹಾದೀ ಹಿಡಿದು ನಮ್ಮಂಥ ನಾಲ್ಕಾರು ಅಳಿಯಂದಿರಿಗೆ ಸಾಕಷ್ಟು ದಕ್ಷಣಿ ಕೊಡೂಶಕ್ತಿ ಪಡೆದ್ವರಿದ್ದಾರೆ. ನಿನಗೊಂದು ಮನೀ ವ್ಯವಸ್ಥಾ ಮಾಡಿಸಿ ಕೊಡ್ತೇನಿ. ನೀ ಬರೀ ನಮ್ಮ ಸಂಗಡ ಬಾ. ಸುಮ್ಮನಿರು. ಲಗ್ನದ ಸಂದರ್ಭ ಕಳಕೊಂಡಹಾಂಗ ದೀಪಾವಳಿ ಸುಮುಹೂರ್ತನೂ ಕಳಕೊಳ್ಳಬ್ಯಾಡ.

**ವಿಮಲಾ :** ಬರ್‍ತಾರ, ಸುಮ್ಮನಿರ್‍ತಾರ, ನಿಮ್ದೂ ಭಾರೀ ಆತು. ರಾಧಾ, ಯಾರಾರೂ ತುಸು ಮೆತ್ತಗಿನವ್ರು ಸಿಕ್ರೂ ಅಂದ್ರೆ ಇವರ ಲೆಕ್ಚರು ಮುಗಿಯೂದೇ ಇಲ್ಲ. ಏನ್ರಿ, ಐದು ಹೊಡೀಲಿಕ್ಕೆ ಬಂತು. ಏಳ್ರಿ, ಒಂದಿಷ್ಟು ಸಾಮಾನು ತಗೊಳ್ಳೋದು ಅದ. ಬಸ್ಸಿನ ಸೀಟೂ ರಿಝರ್ವ ಮಾಡಿಸಿಕೊಂಡು ಬಂದ್ರ ಛಲೋ.

**ಮಾಧವ :** ಹೌದು. ಕೃಷ್ಣರಾಯಾ, ನಾವು ಅಷ್ಟು ಹೋಗಿ ಬರ್‍ತೇನಿ, ನೀನೂ ಆಫೀಸಿಗೆ ಹೋಗಿ ರಜಾದ್ದು ವ್ಯವಸ್ಥೆ ಮಾಡಿಕೊಂಡು ಬಂದುಬಿಡು. ಏನೇ ನಿನ್ನ ತಯಾರಿ ಆಗ್ಲಿಕ್ಕೆ ಇನ್ನೂ ತಡಾ ಇದ್ರ-

**ವಿಮಲಾ :** ಚಾ ಬೇಕು ಹೌದಲ್ಲೊ.. ಎನಿಲ್ಲ, ನೀವು ನಿಮ್ಮ ಸಡ್ಡಕಗ ಉಪದೇಶ ಮಾಡುವಾಗ ನಾ ತಯಾರಾಗೇ ಕೂತೇನಿ. ಏಳ್ರಿನ್ನು.

**ಮಾಧವ :** ಎದ್ದೆ. ನಿನ್ನ ತಂಗೀಗೆ ನಾಳೆ ಮುಂಜಾನೇನೇ ಹೊರಡು ವ್ಯವಸ್ಥಾ ಮಾಡ್ಲಿಕ್ಕೆ ಹೇಳಿಬಿಡು.

**ವಿಮಲಾ :** ಹೇಳೇನಿ.

**ಮಾಧವ :** ನಡಿ ಹಾಗಾದ್ರೆ. ( ಮಾಧವ, ವಿಮಲಾ ಹೋಗುವರು )

**ರಾಧಾ :** ಒಂದೇ ಟ್ರಂಕು ಸಾಕಲ್ಲ. ದೊಡ್ಡು ತಗೊಂಡುಬಿಟ್ರೆ ಅದರೊಳಗೆ ಇಬ್ಬರದೂ

**ಕೃಷ್ಣ :** ನಂದಿನ್ನೂ ಯಾವದೂ

**ರಾಧಾ :** ಹುಚ್ಚರ್‍ಹಾಂಗ ಮಾಡಬ್ಯಾಡ್ರಿ. ಬರೂದಿಲ್ಲಾಂತ ಮಂಗಳಾರತಿ

**ಕೃಷ್ಣ :** ಆಗಿಹೋತಲ್ಲ ಈಗ ಮಂಗಳಾರತಿ. ಅಲ್ಲೇ, ಇಂಥ ಮುಂಜಾನೆ ಎಂಥಾ ಸುಮುಹೂರ್ತದೊಳಗೆ ಮಂಗಳಾರತಿ ಅಂತ ಹಾಡು ಹೇಳಿದೆಯೊ ಏನೊ? ನನಗೆ ಸ್ಫೂರ್ತಿನೇ ಬರಲಿಲ್ಲ. ನಾಟಕ ಬರಿಯೂದು ಆಗ್ಲಿಲ್ಲ. ಈ ಸಡ್ಡಕ ಮಹಾಶಯರು ಬಂದ್ರು. ನಾ ಎಂ. ಎ. ಫಸ್ಟ ಕ್ಲಾಸ, ಇವರು ಎಂ. ಎ. ಥರ್ಡ ಕ್ಲಾಸ, ಇವ್ರು ನನಗೆ ಉಪದೇಶ ಮಾಡಿದ್ರು ನಾ ಬದಕಲಿಕ್ಕೆ ನಾಲಾಯಖ ಅಂತ ಜಜ್ಜಮೆಂಟ ಹೇಳಿ ಪಸಂದ ಜೋಡಬತ್ತಿ ಮಂಗಳಾರತಿ ಮಾಡಿದ್ರು.

**ರಾಧಾ :** ಮಾಡಿಸಿಕೊಳ್ಳಲಿಕ್ಕೆ ನಿಂತರೆ ಯಾರು ಬಿಡ್ತಾರ?

**ಕೃಷ್ಣ :** ಹೌದು. ನಿಂತಕೊಂಡ ಹಾಂಗೇ ಆಗ್ಯದ. ಇನ್ನು ಮಾವನ ಮನೆಗೆ ಹೋದೆ ಅಂದ್ರ ಬರಿಯೂದರ ಅವಸ್ಥೆ ಮುಗಧಂಗಾತು. ಸಂಪಾದಕರಿಂದ ಮಂಗಳಾರತಿ ಮಾಡ್ಸಿಕೊಳ್ಳೂದು ಹಸೇಲಿ ಬರದ್ಹಾಂಗಾತು.

**ರಾಧಾ :** ಯಾಕೆ ಸುಳ್ಳೆ ಕೆಟ್ಟ ಅನಿಸಿಕೊಳ್ತೀರಿ. ಅವ್ರೇನೂ ನಿಮ್ಮ ಕೆಟ್ಟದ್ದಕ್ಕೂ ಹೇಳ್ಲಿಲ್ಲ. ಸಂಸಾರ ಮಾಡೂ ರೀತೀ ಹೇಳಿಕೊಟ್ರು. ನನ್ನ ಮಾತು ಕೇಳ್ಲಿಲ್ಲ. ಅವರದಾದ್ರೂ ಕೇಳ್ರಿ. ನೀವೇನೂ ಚಿಂತಿ ಮಾಡಬ್ಯಾಡ್ರಿ. ಇವಳೀಗ ಬರೇ ರೊಕ್ಕದ್ದೇ ಚಿಂತೆ ಗಂಡನ ಚಿಂತೆ ಇಲ್ಲ ಅಂತ ನೀವು ತಿಳಕೊಂಡೀರಿ, ನನಗೆ ಗೊತ್ತದ. ಆದ್ರ ಖರೇ ಅಂದ್ರು, ನನ್ನಕೊರಳಾಣೆ ಹಾಂಗೇನಿಲ್ಲ. ನೀವು ಅಲ್ಲಿಗೆ ಬಂದಮ್ಯಾಲೆ ನಿಮಗೆ ಒಂದಿಷ್ಟೂ ತ್ರಾಸು ಆಗದ್ಹಾಂಗ ನೋಡಿಕೊಳ್ತೇನೆ. ಇಡೀ ದಿನ ಬರೀರಿ. ಏನ ಮಾತು ಬಂದ್ರೂ ರಾಧಾನ್ನ ಕೇಳ್ರಿ, ಮಾಧವರಾಯ್ರನ್ನ ಕೇಳ್ರಿ. ನನಗೆ ನಾಟಕ ಬರಿಯೂದದ, ಚಿಲ್ಲರೆ ವ್ಯವಹಾರ ಮಾತಾಡ್ಲಿಕ್ಕೆ ಪುರಸತ್ತಿಲ್ಲ ಅಂದಬಿಡ್ರಿ· ನಾವೆಲ್ಲ ನೋಡಿಕೋತೇವಿ. ಆತೋ ಇಲ್ಲೊ. ಏಳ್ರಿನ್ನು. ಹೋಗಿ ರಜಾದ್ದ ವ್ಯವಸ್ಥೆ ಮಾಡಿಕೊಂಡ ಬರ್‍ರಿ.

**ಕೃಷ್ಣ :** ಆತು. ಬರ್‍ತೇನೆ. ನಾ ಒಬ್ಬಾಂವಾ. ನೀವು ಮೂರು ಮಂದಿ. ನಿಮ್ಮ ಎದುರು ನಾ ಟಿಕಾಯಸೂದಾದ್ರೂ ಹ್ಯಾಗೆ?

**ರಾಧಾ :** ಮಾಧವರಾಯ್ರು ಅಂದ ಹಾಂಗೆ ನಡೀದೀದ್ರ ನೀವು ನಾಳೆ ಇಡೀ ಜಗತ್ತಿನ ಕೂಡ ಹೋರಾಡಬೇಕಾದೀತು. ರೊಕ್ಕ ಇದ್ದಿಲ್ಲ ಅಂತ ಅಂದ್ರ.

**ಕೃಷ್ಣ :** ಗೊತ್ತದ ಬಿಡು. ನಾನೂ ಅಂಥಾ ಮಾತು ಎಷ್ಟೋ ಸಲ ಬರದೇನಿ. ಆಗಲಿ. ನೀವಂದಂತೇನೇ ಆಗ್ಲಿ. ಮಂಗಳಾರತಿ ಮಾಡಿಕೊಳ್ಳಲಿಕ್ಕೆ ನಿಂತೇನಿ ಅಂತ ನೀನೂ ಹೇಳ್ಬಿಟ್ಟಿ. ಮಾಡ್ಸಿಕೊಳ್ಳೂದೇ ಆದ್ರೆ ನಮ್ಮ ಜನರಿಂದಲೇ ಆಗ್ಲಿ. ಹೊರಗಿನ ಮಂದೀ ಕೂಡ ಮಾಡಿಸಿಕೊಂಡು ಮತ್ತಿಷ್ಟು ಫಜೀತಿ ಆಗೂದು ಬ್ಯಾಡ. ಹಂ, ವ್ಹಾ! ಭೇಷ್ ಕೆಟ್ಟದ್ದರೊಳಗೂ ಛಲೋ ಇರ್‍ತದ ಅನ್ನೂ ಮಾತು ಸುಳ್ಳಲ್ಲ. ರಾಧಾ, ಬಂತು ಸ್ಫೂರ್ತಿ ಬಂತು· ಲಗೂ ಒಂದಿಷ್ಟು ಚಾ ಮಾಡು. ಒಂದು ನಾಟಕದ ಸ್ಕೆಚ್ ಹಾಕೇ ಆಫೀಸಿಗೆ ಹೋಗಿ ಬರ್‍ತೇನಿ. ಮಂಗಳಾರತಿ! ವ್ಹಾ ಜೀವನದೊಳಗೆ ಪ್ರಾಕ್ಟಿಕಲ್ ಆಗಿರದ ಮನುಷ್ಯ ಹೆಜ್ಜೆ ಹೆಜ್ಜೆಗೂ ಮಂಗಳಾರತಿ ಮಾಡ್ಸಿಕೊಳ್ಳಬೇಕಾಗ್ತದ. ಸಾಹಿತಿಗಳ ಪ್ರಿನ್ಸಿಪಲ್ಲು ತತ್ತ್ವಕ್ಕಿಂತಲೂ ಮಾಧವರಾಯರಂಥ ಕಾರಕೂನರ ಪ್ರಿನ್ಸಿಪಲ್ಲು-ಅಸಲೇ ಖರೇ. ಅವರಪ್ಪಕ್ಕೆ ಬಡ್ಡೀ ಬರ್‍ತದ, ನಮ್ಮದಕ್ಕೆ-ನಮ್ಮದಕ್ಕೆ-ನಮ್ಮದಕ್ಕೆ!

**ರಾಧಾ :** ಏನಾದ್ರೂ ಬರ್‍ಲಿ. ಬಿಡ್ಲಿ ನೋಡ್ರಿ, ನಾ 'ಮಂಗಳಾರತಿ' ಅಂತ ಹಾಡಿದ್ದು ಕೆಟ್ಟ ಆತು ಅಂದಬಿಟ್ರಿ. ಈಗ? ನಿಮಗ ಸಾಹಿತಿಯಾಗಲಿಕ್ಕೆ ಅದೇ ಸ್ಫೂರ್ತಿ ಕೊಟ್ಟಿತು. ಹೆಂಡತಿ ಸಹಾಯ ಇಲ್ಲದಿದ್ದರೆ ಗಂಡಾ ಅಂಬೂ ಪ್ರಾಣಿ ಬದಕೂದೇ ಇಲ್ಲ. ನನ್ನ ಮಾತು ನೀವು ಕಿವೀಗೆ ಹಾಕ್ಕೊಳ್ಳುದಿಲ್ಲ ಅಂತ ನಾನೇ ಅಕ್ಕಗ ಮತ್ತು . . . .

**ಕೃಷ್ಣ :** ಅಂ! ನೀನೇ ಬರದು ಅವ್ರನ್ನ ಕರಸಿದೆಯಾ! ಸರಿ, ಸರಿ. ನನ್ನ ಬುದ್ಧಿಗೆ ಇಷ್ಟೂ ಹೊಳೀಲಿಲ್ಲ. ಒಮ್ಮಿಂದೊಮ್ಮೆ ಮಾಧವರಾಯ್ರೀಗೆ ನನ್ನ ಕಲ್ಯಾಣ ಮಾಡೂ ಹುರುಪು ಯಾಕೆ ಬಂತು

ಅನ್ನೂದಕ್ಕೆ ಕಾರಣ ತಿಳೀತು. ಥೂತ್ ಇಷ್ಟೂ ತಿಳೀಲಿಲ್ಲ. ನನಗೆ. ಅಂದಮ್ಯಾಲೆ ನಾ ಸಾಹಿತಿಯಾಗಲಿಕ್ಕೆ ನಾಲಾಯಖೇ ಸರಿ. ರಾಧಾ, ಇನ್ನಮ್ಯಾಲೆ

ರಾಧಾ : ಛೆ! ಛೆ! ಮಾಡಬ್ಯಾಡ್ರಿ, ಪ್ರತಿಜ್ಞಾ ಮಾಡಬ್ಯಾಡ್ರಿ. ಸಂಸಾರ ಮಾಡವ್ರು ಯಾವ ಪ್ರತಿಜ್ಞಾನೂ ಮಾಡ್ಬಾರ್ದು. ನಡಸೂದು ಆಗೂದಿಲ್ಲ. ಖರೇ ಅಂದ್ರೆ ನೀವು ಭಾಳ ಛಲೋ ಬರೀತೀರಿ. ನಿಮ್ಮ ನಾಟಕ ಓದಿ ತೋರಿಸಿದಾಗ ಹೆಣ್ಣುಮಕ್ಕಳೆಲ್ಲಾ "ರಾಧಾಬಾಯಿಗಂಡ ಭಾಳ ಶ್ಯಾಣ್ಯಾರು. ನಮ್ಮವ್ರೀಗೆ ಇಂಥದ್ದು ಬರಿಯೂದಿರ್ಲಿ, ಓದಿ ತಿಳಿಕೊಳ್ಳಿಕ್ಕೂ ಬರದೂಲ್ಲ" ಅಂತ ನಿಮ್ಮನ್ನ ಹೊಗಳ್ತಾರ. ಆಗ ನನಗೆಷ್ಟು ಅಭಿಮಾನ ಬರ್‍ತದ ಅಂತೀರಿ. ನೀವು ಬರಿಯೂದು ಬಿಡಬ್ಯಾಡ್ರಿ. ಆದರ ಆ ಮಬ್ಬಿನೊಳಗೆ ರೊಕ್ಕ ಮರೀಬ್ಯಾಡ್ರಿ ಅಂತ ಅಷ್ಟೇ ನಾನನ್ನೂದು.

ಕೃಷ್ಣ : ಸರಿ. ಸರಿ. ಆಗ್ಲಿ. ಇನ್ನಮ್ಯಾಲೆ ನೀ ಅಂದಂತೇ ಆಗ್ಲಿ. ಹ್ಯಾಂಗೂ ಮಾವನ ಮನೇಲಿ ಬರೀಲಿಕ್ಕೆ ವ್ಯವಸ್ಥಾ ಮಾಡಿಕೊಡ್ತೇನಿ ಅಂದೀಯಲ್ಲ. ಈಗ ಆಫೀಸಿಗೆ ಹೋಗಿ ಬಂದಬಿಡ್ತೇನೆ

ರಾಧಾ : ೧೫ ದಿನದ ರಜಾನೇ ತಗೊಂಡು ಬಿಡ್ರಿ. ಅಂ! ಹೊರಟೇಬಿಟ್ರಲ್ಲ? ಚಾ ಮಾಡೂ ಅಂದದ್ದು ಮರ್‍ತರೇನು? ಈಗ ಸೋಸಿ ಕೊಡ್ತೇನೆ. ಕುಡದು ಹೋಗ್ರಿ. ಚಾ ಕುಡಿಯದೆ ಹೋದ್ರೆ ಮತ್ತೆ ಏನಾದರೂ ತಪ್ಪ ಮಾತು ಬಾಯಿಂದ ಬಂದು ಅಲ್ಲೀನೂ ಮಂಗಳಾರತಿ ಮಾಡಿಸಿಕೊಂಡೀರಿ. ಇಲ್ಲೇ ಬರ್‍ತೀರೊ, ಹೊರಗೇ ತಂದ ಕೊಡಲೋ?

ಕೃಷ್ಣ : ಅಲ್ಲೇ ಬರ್‍ತೇನೆ, ಮ್ಹಾರಾಯಳೇ.

ಸೂಚನೆ:— ಈ ಏಕಾಂಕವನ್ನು ಅಭಿನಯಿಸಲು ೧೦ ರೂಪಾಯಿಗಳ ಗೌರವ ಧನ ಕಳಿಸಿ ಲೇಖಕರ ಪೂರ್ವ ಸಮ್ಮತಿಯನ್ನು ಪಡೆದುಕೊಳ್ಳಬೇಕು.

ಜ್ಯೋತಿಷಿ: ಶ್ರೀ ಕೃಷ್ಣಶಾಸ್ತ್ರಿ ಭಿಡೆ
ಭವಿಷ್ಯ ಕಥನ ಕಾರ್ಯಾಲಯ,
ಮನೆ ನಂ. ೨೮೮೦ ಪೋಲೀಸ ಸ್ಟೇಶನ್ ಎದುರಿಗೆ
ಖಡೇಬಜಾರ್, ಬೆಳಗಾವಿ

# ★ ವರ್ಷ ಭವಿಷ್ಯ ★

**ಶಕೆ ೧೮೮೨ ಕಾರ್ತಿಕ ಶುದ್ಧ ೧ ಶುಕ್ರವಾರದಿಂದ ಶಕೆ ೧೮೮೩ ಆಶ್ವಿನ ಬ|| ೩೦ ಬುಧವಾರ ವರೆಗಿನ ಅಂದರೆ ೨೧ ಅಕ್ಟೋಬರ, ೧೯೬೦ ರಿಂದ ೧೯೬೧ ನವಂಬರ ೮ ರ ವರೆಗೆ.**

( ಈ ದೀಪಾವಳಿಯಿಂದ ಮುಂದಿನ ದೀಪಾವಳಿಯ ವರೆಗೆ )

**ಸೂಚನೆ:—** ಈ ವರ್ಷದಲ್ಲಿ ಬೇರೆ ಬೇರೆ ಗ್ರಹಗಳು ಆಯಾ ರಾಶಿಯುವರ ಮೇಲೆ ಯಾವ ಒಳಿತು ಕೆಟ್ಟ ಪರಿಣಾಮಗಳನ್ನುಂಟು ಮಾಡುವವೆಂಬದನ್ನು ಸಂಕಲಿತ ರೀತಿಯಿಂದ ಇಲ್ಲಿ ಭವಿಷ್ಯವನ್ನು ಹೇಳಲಾಗಿದೆ. ಇದನ್ನೋದಿ ತಮ್ಮ ಭವಿಷ್ಯ ಫಲಗಳ ಅಂದಾಜು ಬಹುಶಃ ಎಲ್ಲರಿಗೆ ಆಗಬಹುದು.

ವಾಸ್ತವಿಕವಾಗಿ ಪ್ರತಿಯೊಬ್ಬನ ಭವಿಷ್ಯವನ್ನು ಅವನ ಜನ್ಮಕುಂಡಲಿಯಿಂದ ವಿಚಾರಿಸಿದ್ದಾದರೆ ಅದು ಪೂರ್ಣವಾಗಿ ಕೂಡಿ ಬರುತ್ತದೆ. ಆದರೂ ಈ ಭವಿಷ್ಯವನ್ನು ನೋಡಿದರೆ ಈ ವರ್ಷದಲ್ಲಿ ಸುಖದುಃಖಗಳ ವಾತಾವರಣದ ಕಲ್ಪನೆ ಬರುವದರಲ್ಲಿ ಸಂದೇಹವಿಲ್ಲ. ವಾಚಕರು ಈ ಭವಿಷ್ಯವನ್ನು ಮನನಪೂರ್ವಕವಾಗಿ ಮತ್ತು ಜನ್ಮರಾಶಿಗನುಸಾರವಾಗಿ ಜನ್ಮ ಲಗ್ನಕ್ಕನುಲಕ್ಷಿಸಿಯೂ ಓದಿಕೊಂಡು ಅದರಂತೆ ನಡೆದದ್ದಾದರೆ ಅಶುಭ ಫಲಗಳ ಬಗ್ಗೆ ಬಹಳಷ್ಟು-ಜಾಗ್ರತೆಯಿಂದ ಇರಬಹುದಾಗಿದೆ. ಅದೇ ರೀತಿ ಶುಭಫಲ ಪ್ರಾಪ್ತವಾಗುವಾಗ ಹೆಚ್ಚು ಉತ್ಸಾಹದಿಂದ ಪ್ರಯತ್ನಮಾಡಲು ಅವಕಾಶ ದೊರೆಯುವದು ಎಂಬುದು ಸುನಿಶ್ಚಿತವಾಗಿದೆ.

ಪುರುಷರಂತೆ ಸ್ತ್ರೀಯರಿಗೂ ಸಾಧಾರಣವಾಗಿ ಅದೇ ರೀತಿ ಫಲಗಳು ದೊರೆಯುವವು. ಆದರೂ ದೈಹಿಕ ಭೇದದ ತಾರತಮ್ಯವನ್ನು ಲಕ್ಷ್ಯದಲ್ಲಿಟ್ಟುಕೊಳ್ಳಬೇಕಾದುದು ಅವಶ್ಯವೆಂದು ಪ್ರತ್ಯೇಕ ಹೇಳಬೇಕಿಲ್ಲ.

## ಮೇಷ

ಈ ರಾಶಿಯವರಿಗೆ ಈ ವರ್ಷ ಮೊದಲಿನ ನಾಲ್ಕು ತಿಂಗಳು ಬಹಳ ಉತ್ತಮ. ಆದರೆ ಅನಂತರ ಸ್ವಲ್ಪ ದಗದಗಿಯದಾಗಿದ್ದರೂ ಈ ವರ್ಷ ಬಹಳಮಟ್ಟಿಗೆ ಪ್ರಗತಿಪರವಾಗಿಯೇ ಇದೆ.

ಈ ರಾಶಿಯ ಜನರ ಆರೋಗ್ಯ ಒಟ್ಟಾರೆ ಉತ್ತಮ. ಆದರೆ ಜೂನ್ ೧೯ ರಿಂದ ಅಗಷ್ಟ ೮ ಮತ್ತು ನವಂಬರ ೫ ರಿಂದ ಮುಂದೆ ಅಲ್ಪಸ್ವಲ್ಪ ಕಾಯಿಲೆಯ ಅಂಜಿಕೆ ಇದೆ. ವಿಶೇಷತಃ ಹೊಟ್ಟೆನೋವು, ಕಿಡ್ನಿಯ ಉಪದ್ರವದ ಯೋಗವಿದೆ. ಉಳಿದ ವಿಷಯಗಳಲ್ಲಿ ಆವಶ್ಯಕ ವಸ್ತುಗಳಿಂದ ದೇಹಸುಖ ಚೆನ್ನಾಗಿ ಸಿಕ್ಕುವದು. ಮನಸ್ಸಿನಲ್ಲಿ ರೂಪಿಸಿದ ಯೋಜನೆಗಳು ವ್ಯವಸ್ಥಿತವಾಗಿ ಕಾರ್ಯಕಾರಿಯಾಗುವ ಅನುಕೂಲ ಸ್ಥಿತಿ ಅನಾಯಾಸವಾಗಿ ನಿರ್ಮಾಣವಾಗುವದು. ಸಮಾಧಾನದ ನಿಟ್ಟುಸಿರು ಬಿಡುವ ವಿಶೇಷ ಘಟನೆಗಳು ವಿಶೇಷತಃ ಫೆಬ್ರುವರಿ ೧ ರಿಂದ ಜುಲೈ ೨೫ ರ ಅವಧಿಯಲ್ಲಿ ಖಾತ್ರಿಯಿಂದ ಸಂಭವಿಸುವವು.

ಹೆಂಡತಿಯ ಆರೋಗ್ಯ ಮಾತ್ರ ಈ ವರ್ಷ ಬಹಳಷ್ಟು ಸಮಾಧಾನಕಾರಕವಿಲ್ಲದಿದ್ದರೂ ಅಷ್ಟು ಕೆಟ್ಟೂ ಇರುವದಿಲ್ಲ. ನೆಗಡಿ, ಕೆಮ್ಮು, ಕಿವಿನೋವು ಇಂಥ ಕಿರುಕಳ ಉಪದ್ರವ ಅಲ್ಪ ಸ್ವಲ್ಪ ಆಗಹತ್ತುವವು. ೨೬-೪-೧೯೬೧ ರಿಂದ ೧೯-೬-೬೧ರ ವರೆಗೆ ನಿಮ್ಮಿಬ್ಬರಲ್ಲಿ ಮನೆತನದ ಸಂಬಂಧದಲ್ಲಿ ವಾಗ್ಯುದ್ಧ ನಡೆಯುವದು. ಇನ್ನುಳಿದ ಸಮಯದಲ್ಲಿ ಪರಸ್ಪರರಲ್ಲಿ ಒಳ್ಳೆ ಮತೈಕ್ಯವುಳಿಯುವದು. ಆದರೆ ತಾರೀಖು ೨೦-೧೧-೬೦ ರಿಂದ ೬-೨-೬೧ ರ ವರೆಗೆ ನೀವು ಇಲ್ಲವೆ ಅವಳು ಗ್ರಾಮಾಂತರ ಹೋಗುವುದರಿಂದ ಸಹವಾಸಸುಖಕ್ಕೆ ವ್ಯತ್ಯಯ ಬರುವ ಸಂಭವವಿದೆ. ಪ್ರತಿಯೊಂದು ಕೆಲಸದಲ್ಲಿ ಅವಳು ಸ್ವಲ್ಪ ಹೆಚ್ಚುವೆಚ್ಚ ಮಾಡಬೇಕೆಂದು ಬಗೆಯುವಳು. ಆದರೂ ಇತರ ರೀತಿಯಿಂದ ಸಾಂಸಾರಿಕ ವಾತಾವರಣ ಆನಂದದಲ್ಲಿಯೇ ಬಹಳ ಅವಧಿಯ ವರೆಗೆ ಉಳಿಯುವದು.

ನಿಮ್ಮ ಮಕ್ಕಳ ಮದುವೆ ಮಾತು ಎದ್ದಿದ್ದರೆ ಫೆಬ್ರುವರಿ ೧೦ ರೊಳಗಾಗಿ ಎಷ್ಟು ಸುಲಭವಾಗಿ ಆಗುವದೋ ಅಷ್ಟು ಮುಂದೆ ಆಗುವದಿಲ್ಲ. ಮುಂದೆ ಕೂಡಿ ಬರುವದೇ ಕಠಿಣ. ಕೂಡಿ ಬಂದರೂ ಉಭಯ ಪಕ್ಷದವರು ಲಗ್ನದ ತಯಾರಿ ನಡೆಸಿದ್ದರೂ ಅನಪೇಕ್ಷಿತವಾಗಿ ಅನೇಕ ಅಡಚಣೆಗಳು ಬರುವವು. ಸೊಸೆ ಇಲ್ಲವೆ ಅಳಿಯ ನಿಮ್ಮ ದೃಷ್ಟಿಯಿಂದ ಅನುರೂಪರೇ ಇರುವರು. ಆದರೆ ಜನರೇನೊ ಹೆಸರಿಡುವರು. ಅದರಿಂದ ಮನಸ್ಸಿನಲ್ಲಿ ಒಂದು ಬಗೆಯ ಶಲ್ಯ ಚುಚ್ಚಿದಂತೆನಿಸುವದು. ಮಕ್ಕಳ ಉನ್ನತಿಗೆ ಈ ವರ್ಷ ಬಹಳ ಅನುಕೂಲ. ವಿಶೇಷವಾಗಿ ಫೆಬ್ರುವರಿ ೧ ರಿಂದ ಜುಲೈ ೨೪ ರ ವರೆಗಿನ ಕಾಲ ಹೆಚ್ಚು ಅನುಕೂಲ. ಆದರೆ ಅವರಲ್ಲಿ ಕೆಲವರ ನಡೆವಳಿಕೆ ಮಾತ್ರ ನಿಮ್ಮ ಮನಸ್ಸಿಗೆ ಒಗ್ಗಲಿಕ್ಕಿಲ್ಲ ಇಷ್ಟೇ. ಆದರೆ ಪ್ರತ್ಯಕ್ಷ ಪ್ರಮಾದವನ್ನು ಮಾತ್ರ ಯಾರೂ ಮಾಡುವದಿಲ್ಲ. ಅವರಲ್ಲಿ ಒಬ್ಬರು ಬಹಳ ದೂರ ಸ್ಥಲಾಂತರ ಮಾಡುವದರಿಂದ ಕೆಲದಿನ ಮನಸ್ಸು ಬಹಳ ಅಸ್ವಸ್ಥ ಉಳಿಯುವದು. ಅಲ್ಲಿ ಅವನ ಹೆಸರು ಒಳ್ಳೆ ಪ್ರಸಿದ್ಧಿಗೆ ಬಂದು ಇಷ್ಟಾರ್ಥವು ಸಿದ್ಧಿಸುವದರಿಂದ ನಿಮಗೆ ಮನಸ್ಸಿನಲ್ಲಿ ಅಭಿಮಾನ ಮತ್ತು ಉತ್ಸಾಹವೆನಿಸುವದು. ಅವರಲ್ಲಿ ಒಬ್ಬನಿಗೆ ಡಿಸೆಂಬರ ೧೫ ರಿಂದ ಜನೆವರಿ ೧೩ ಮತ್ತು ಮಾರ್ಚ ೧೪ ರಿಂದ ಎಪ್ರಿಲ ೧೪ ರ ಅವಧಿಯಲ್ಲಿ ಸ್ವಲ್ಪ ಶರೀರ ಕ್ಲೇಶವಾಗುವ ಅಂಜಿಕೆ ಮಾತ್ರ ಬಹಳಿದೆ.

ನೋಕರಿ ಇಲ್ಲವೆ ಧಂದೆದೃಷ್ಟಿಯಿಂದ ಈ ವರ್ಷ ಬಹಳ ಉತ್ತಮವಿದೆ. ನೋಕರಿ ಇದ್ದವರಿಗೆ ಫೆಬ್ರುಅರಿ ೧೦ ರಿಂದ ವಿಶೇಷ ಉತ್ತಮವಿದೆ. ಅನೇಕರಿಗೆ ಜುಲೈ ೨೫ ರ ವರೆಗೆ ಮೇಲಿನ ಗ್ರೇಡು ನಿಶ್ಚಿತವಾಗಿ ದೊರೆಯು

ವುದು. ಆದರೆ ಅಲ್ಲಿಯು ವರೆಗೆ ವರಿಷ್ಠರ ಮರ್ಜಿ ಇದ್ದಷ್ಟೂ ಮುಂದೆ ಉಳಿಯುವದಿಲ್ಲ. ನೋಕರಿ ಬದಲಿಯಾಗುವದಿದ್ದರೆ ಬಹಳ ದೂರಪ್ರಾಂತದಲ್ಲಿ ಇಲ್ಲವೆ ಊರಿಗೆ ಆಗುವುದರಿಂದ ಮೊದಮೊದಲು ಬಹಳ ಕಠಿಣಹೋಗುವದು. ಆದರೆ ಕೆಲಸದ ದೃಷ್ಟಿಯಿಂದ ಮತ್ತು ಪ್ರಾಪಂಚಿಕ ಸುಖಸೌಕರ್ಯದ ದೃಷ್ಟಿಯಿಂದ ಹೊಸ ಸ್ಥಳವು ಮೊದಲಿನಕಿಂತ ಹೆಚ್ಚು ಅನುಕೂಲವೆನಿಸುವದು. ವ್ಯಾಪಾರಸ್ಥರಿಗೆ ಇಲ್ಲವೆ ಸ್ವತಂತ್ರ ಧಂದೆ ಮಾಡುವವರಿಗೆ ಫೆಬ್ರುಅರಿ ೧ ರಿಂದ ಮತ್ತು ಜುಲೈ ೨೫ ರಿಂದ ಮುಂದಿನ ಕಾಲ ಹೆಚ್ಚು ಉತ್ಕರ್ಷದ್ದೆನಿಸುವುದು. ಈ ಅವಧಿಯಲ್ಲಿ ಅಶಕ್ಯವೆನಿಸಿದ ಕೆಲ ಸೌಕರ್ಯಗಳು ಅಲ್ಪಾಯಾಸದಿಂದ ಸಾಧ್ಯವಾಗುವವು. ಅವುಗಳಲ್ಲಿ ಅಂದಾಜು ಮೀರಿ ಲಾಭವಾಗುವುದು. ಕೈಕೆಳಗಿನ ನೋಕರರು ಕಾರ್ಯತತ್ಪರರಾಗಿದ್ದುಕೊಂಡು ಆದರದಿಂದ ಮತ್ತು ಪ್ರಾಮಾಣಿಕ ರೀತಿಯಿಂದ ವರ್ತಿಸುವರು. ಆದರೆ ಹಳಬರಲ್ಲಿ ಒಬ್ಬನು ಎಪ್ರಿಲ ೨೬ ರಿಂದ ಜೂನ ೧೯ ರ ಅವಧಿಯಲ್ಲಿ ನೋಕರಿ ಬಿಟ್ಟು ಹೋಗುವನು. ಮತ್ತೊಬ್ಬನು ಅಗಸ್ಟ ೮ ರಿಂದ ಸಪ್ಟಂಬರ ೨೩ರ ಅವಧಿಯಲ್ಲಿ ಯಾವದೊಂದು ಅಪಘಾತದಿಂದ ಇಲ್ಲವೆ ಹೃದಯಕ್ರಿಯೆ ನಿಲ್ಲುವಂತಹ ಆಕಸ್ಮಿಕ ಕಾರಣಗಳಿಂದ ದಿವಂಗತನಾಗುವ ಸಂಭವವಿದೆ. ಮೊದಲಿಗಿಂತ ಈ ವರ್ಷ ಪತ್ತು ಮತ್ತು ಪ್ರತಿಷ್ಠೆ ಹೆಚ್ಚಿದರೂ ಮೇ ತಿಂಗಳಲ್ಲೇ ಈ ವಿಷಯದಲ್ಲಿ ಬಹಳ ಸಂಶಯದ್ದಾಗಿ ಪರಿಣಮಿಸುವುದು. ಜನ್ಮಕುಂಡಲಿಯಲ್ಲಿಯೂ ಗ್ರಹಮಾನದ ಪರಿಣಾಮವಾಗಿ ಸ್ವಲ್ಪ ಹೆಚ್ಚುಕಡಿಮೆ ಪ್ರಮಾಣದಲ್ಲಿ ಸ್ಥಾವರಜಂಗಮ ಸಂಗ್ರಹದ ಯೋಗವೂ ಕೆಲಮಟ್ಟಿಗೆ ಕೆಲವರಿಗೆ ಇದೆ. ಎಪ್ರಿಲ ೨೬ ರಿಂದ ಜೂನ ೧೯ ರ ಮಧ್ಯದಲ್ಲಿ ಸಮೀಪದ ಆಪ್ತರೊಡನೆ ಸ್ವಲ್ಪ ವಿಮನಸ್ಕತೆಯಾದರೂ ಉಳಿದೆಲ್ಲ ಅವಧಿ ಬಹಳ ಚೆನ್ನಾಗಿರುವದು. ವಾಹನಸುಖ ತುಂಬ ದೊರೆಯುವದು. ಸ್ಥಾವರ ಉತ್ಪನ್ನವಿದ್ದವರಿಗೆ ಒಂದು ಆಣೆ ಹೆಚ್ಚಿಗೆ ಬರುವದು. ಫೆಬ್ರುಅರಿ ೧೦ ರ ಮೊದಲು ಸಮೀಪದ ಇಲ್ಲವೆ ದೂರದ ತೀರ್ಥಯಾತ್ರೆ ನಿಶ್ಚಯವಾಗಿ ಸಂಭವಿಸುವದು. ಬಹಳಷ್ಟು ಕಾಲವನ್ನು ಪರೋಪಕಾರದಲ್ಲಿ ಮತ್ತು ಪರಮಾರ್ಥಚಿಂತನೆಯಲ್ಲಿ ಕಳೆಯುವಿರಿ. ಅನೇಕ ಸ್ವಪ್ನಗಳು ಶುಭ ಮತ್ತು ಭಾವೀಸೂಚಕವಾದಂತಹವುಗಳು. ಮಿತ್ರಸುಖ ಅನುಕೂಲವೇ. ಆದರೆ ಅವರಲ್ಲಿ ಬಹುತರ ಜನರಿಗೆ ಫೆಬ್ರುಅರಿ ೧ ರಿಂದ ಜುಲೈ ೨೫ ರಕಾಲ ಒಂದಿಲ್ಲೊಂದು ಬಗೆಯ ತೊಂದರೆ ಉತ್ಪನ್ನ ಮಾಡುವಂತಹದಾಗಿದೆ.

ದಾವೆ ಫಿರ್ಯಾದಿ ಇಲ್ಲವೆ ಖಾಸಗಿ ಸ್ಪರ್ಧೆಯಲ್ಲಿ ಫೆಬ್ರುಅರಿ ೧೦ ರ ವರೆಗೆ ನಿಮಗೆ ಮತ್ತು ಅನಂತರ ಪ್ರತಿಪಕ್ಷಿಗಳಿಗೆ ಯಶಸ್ಸು ದೊರೆವ ವರ್ಷವಿದಾಗಿದ್ದರೆ ಅಗಸ್ಟ ೮ ರಿಂದ ಸಪ್ಟಂಬರ ೨೩ ರ ವರೆಗೆ ಪ್ರತಿಪಕ್ಷಿಗೆ ಪರಭಾರೆ ಯಾವದೊಂದು ದೊಡ್ಡ ಆಪತ್ತಿಯಿಂದ ಅಪರಿಮಿತ ಹಾನಿಯಾಗುವ ಸಂಭವವಿದೆ.

ಈ ರಾಶಿಯ ಸ್ತ್ರೀಯರು ಹಡೆಯುವವರಿದ್ದರೆ ಅವರು ಸುಖಕರವಾಗಿ ಪ್ರಸೂತರಾಗದಿದ್ದರೂ ಫೆಬ್ರುವರಿ ೧೦ ರ ವರೆಗೆ ಹಡಿಯುವವರಿಗೆ ಅಷ್ಟೊಂದು ಕಷ್ಟವಾಗಲಾರದು. ಮತ್ತು ಬಹುಶಃ ಪುತ್ರರತ್ನ ಹುಟ್ಟುವದು. ಆದರೆ ಗಂಡುಮಗುವೇ ಹುಟ್ಟಲಿ ಹೆಣ್ಣೇ ಹುಟ್ಟಲಿ ದೀಪಾವಳಿಯ ವರೆಗೆ ಮಾತ್ರ ಅದು ಅಶಕ್ತವೇ ಉಳಿಯುವದು.

ಯಾವ ವಿದ್ಯಾರ್ಥಿಗಳ ಪರೀಕ್ಷೆ ಫೆಬ್ರುಅರಿ ೧೦ ರ ವರೆಗೆ ಮತ್ತು ಮುಂದೆ ಎಪ್ರಿಲ ೧೪ ರಿಂದ ಮೇ ೧೫ ಇಲ್ಲವೆ ಜೂನ ೧೪ ರಿಂದ ಜುಲೈ ೧೬ ಮತ್ತು ಅಕ್ಟೋಬರ ೧೭ ರ ನಂತರ ಆಗುವದೊ ಅವರು ಖಾತ್ರಿಯಿಂದ ಯಶಸ್ವಿಯಾಗುವರು. ಇಷ್ಟೇ ಅಲ್ಲ, ಫೆಬ್ರುಅರಿಯೊಳಗಾಗಿ ಪರೀಕ್ಷೆ ಕಟ್ಟುವವರಿಗೆ ವರ್ಗವೂ ಸಿಕ್ಕುವದು.

## ವೃಷಭ

ಒಟ್ಟಿಗೆ ಈ ವರ್ಷ ಈ ರಾಶಿಯವರಿಗೆ ಫೆಬ್ರುಅರಿ ವರೆಗೆ ಬಹಳ ತೊಂದರೆಯ ಕಾಲವಿದ್ದರೂ ಅನಂತರ ಅದರ ವೇಗ ಬಹಳಷ್ಟು ಕಡಿಮೆಯಾಗುವದೆಂಬುದನ್ನು ನಿಶ್ಚಿತವಾಗಿ ತಿಳಿಯಿರಿ.

ಈ ರಾಶಿಯವರ ಆರೋಗ್ಯ ಫೆಬ್ರುಅರಿ ೧ ರ ವರೆಗೆ ಮತ್ತು ಜುಲೈ ೨೫ ರ ನಂತರ ಇರಬೇಕಾದಷ್ಟು ಅನುಕೂಲ ಉಳಿಯುವದಿಲ್ಲ. ಆದರೆ ಗಂಡಾಂತರದ ಅಂಜಿಕೆ ಮಾತ್ರ ಸ್ವಲ್ಪೂ ಇರುವುದಿಲ್ಲ. ಮಹಾಮೃತ್ಯುಂಜಯ ಜಪವನ್ನು ೧೧೦೦೦, ಶನಿಯ ಜಪ ೨೩೦೦೦ ಮತ್ತು ಗುರುಜಪ ೧೯೦೦೦ ಮಾಡಿಬಿಟ್ಟರೆ ಅಷ್ಟೊಂದು ಕಷ್ಟವೆನಿಸುವದಿಲ್ಲ. ಉಳಿದ ವಿಷಯಗಳಲ್ಲಿ ದೇಹಸುಖ ಸಾಧಾರಣವೆ. ಆಪ್ತರು ಮತ್ತು ನೆರೆಯವರು ಮೇಲಿಂದ ಮೇಲೆ ಏನಾದರು ನೆವತೆಗೆದು ಬಡಿದಾಟ ಮಾಡುವರು. ಪ್ರಾಪಂಚಿಕ ತೊಂದರೆಯೂ ಬಹಳ ವಿಷಯಗಳಲ್ಲಿ ಬರುವದು. ಅನೇಕರ ಕಣ್ಣು ಕೆಡುವವು. ಹಲವರಿಗೆ ಗ್ಯಾಸ ಉಪದ್ರವವಾಗುವದು. ಮನೆಯಲ್ಲಿಯ ಬಹುತರ ಬಳಗ ನಿಮ್ಮ ವಿರುದ್ಧ ವರ್ತಿಸುವಂತಿದೆ. ಮನೆಯಲ್ಲಿ ಕೂಡಿಸಿಟ್ಟದ್ದ ಸಂಗ್ರಹವನ್ನೆಲ್ಲ ಮನಬಂದಂತೆ ಹಾಳುಮಾಡಿ ಬಿಡುವರು.

ಸ್ತ್ರೀಸುಖ ಮಾತ್ರ ಈ ವರ್ಷ ಚೆನ್ನಾಗಿ ಸಿಕ್ಕುವದು. ಆದರೆ ಬಹುತರ ಕೆಲಸಗಳಲ್ಲಿ ಅವಳ ಮತ ನಿಮ್ಮ ವಿರುದ್ಧವೆ. ಪ್ರತಿಯೊಂದು ವಿಷಯದಲ್ಲಿ ಅವಳ ಮಾತು ಮತ್ತು ವರ್ತನೆ ರೋಷಯುಕ್ತವೆನಿಸುವದು. ಅವಳ ಆರೋಗ್ಯ ಎಪ್ರಿಲ ೨೬ ರ ವರೆಗೆ ಮತ್ತು ಸಪ್ಟಂಬರ ೨೩ ರಿಂದ ನವಂಬರ ವರೆಗೆ ಅಷ್ಟೊಂದು ಅನುಕೂಲವುಳಿಯುವದಿಲ್ಲ. ರೊಟ್ಟೆನೋವು ಇಲ್ಲವೆ ದಮ್ಮು, ಕೆಮ್ಮು ಇಂಥ ಉಪದ್ರವವಾಗುವ ಸಂಭವವಿದೆ. ಒಂದು ವೇಳೆ ಇನ್ನೂ ನಿಮ್ಮ ಮದುವೆ ಆಗಿರದಿದ್ದರೆ ಮತ್ತು ಈ ಸಲ ಮಾಡಿಕೊಳ್ಳುವದಿದ್ದರೆ ಫೆಬ್ರುಅರಿ ೧೦ರ ವರೆಗೆ ಅದರ ಆಸೆಯನ್ನೇ ಬಿಟ್ಟುಬಿಡಿರಿ. ಮುಂದೆ ಯೋಗವೇನೋ ಸ್ವಲ್ಪ ಇದ್ದರೂ ಮದುವೆ ಆಗುವವರೆಗೆ ಹದಿನೆಂಟು ಅಡಚಣಿ ಬರುವವು. ಒಮ್ಮೆ ಹೇಗೊ ಮದುವೆಯಾದರೂ ಮುಂದೆ ಒಂದು ವರ್ಷದವರೆಗಾದರೂ ಪತಿಪತ್ನಿಯರಲ್ಲಿ ಅಷ್ಟೊಂದು ಪ್ರೇಮವು ಉಳಿಯುವದಿಲ್ಲ. ಅವಳ ತವರುಮನೆಯವರೊಡನೆಯೂ ಒಂದೆರಡು ಸಲ ವಾಗ್ಯುದ್ಧ ನಡೆಯುವದು.

ನಿಮ್ಮ ಮಕ್ಕಳ ಮದುವೆ ಈ ಸಲ ಮಾಡುವದಿದ್ದರೆ ಅದಕ್ಕೆ ಮಾತ್ರ ಫೆಬ್ರುಅರಿ ೧೦ ರ ನಂತರ ಉತ್ತಮ ಬಾಶಿಂಗಬಲ ಬರುವದರಿಂದ ಅಷ್ಟೊಂದು ಹೆಚ್ಚು ಪ್ರಯತ್ನ ಮಾಡದೆ ಕೂಡಿಬರುವದು ಮತ್ತು ಗೊತ್ತುಮಾಡಿದ ದಿನವೇ ಲಗ್ನ ಆಗಿಯೂ ಬಿಡುವದು. ಸೊಸೆ ಅಥವಾ ಅಳಿಯ ರೂಪದಿಂದ ಸಾಮಾನ್ಯ ಪ್ರತಿಯವರಾಗಿದರೂ ಗುಣದಿಂದ ಉತ್ತಮ ಮತ್ತು ದೈವದಿಂದ ಅತ್ಯಂತ ಶ್ರೇಷ್ಠರಾಗಿರುವರು. ಮಕ್ಕಳ ಉನ್ನತಿಗೆ ಈ ವರ್ಷ ಬಹಳ ಅನುಕೂಲ. ಅದೂ ಮೇಲೆ ಹೇಳಿದ ತಾರೀಖಿನಿಂದಲೆ. ಅವರಲ್ಲಿ ಒಬ್ಬಿಬ್ಬರು ದೂರ ಪ್ರಾಂತಕ್ಕೆ ಹೋಗುವರು. ವಿದ್ಯಾರ್ಥಿಗಳಾಗಿದ್ದವರು ತಮ್ಮ ತಮ್ಮ ವಾರ್ಷಿಕ ಪರೀಕ್ಷೆಯಲ್ಲಿ ಒಳ್ಳೆ ಗುಣ ಪಡೆದು ಪಾಸಾಗುವರು. ಆದರೆ ಅವರಲ್ಲಿ ಬಹುತರ ಜನರು ನಿಮ್ಮನ್ನು ಕೇಳದೆ ಮನಸ್ವೀ ನಡೆಯುವರು ಮತ್ತು ನಾಲ್ಕು ಮಂದಿಯಲ್ಲಿ ನೀವು ಅವರಿಗಾಗಿ ಅಪಮಾನವನ್ನು ಸಹಿಸಬೇಕಾಗುವದು. ಅವರು ನಿಮ್ಮ ನಿರ್ಭರ್ತ್ಸನೆಯನ್ನೂ ಮಾಡುವರು.

ಧಂದೆ-ಕೂಲಿಯ ದೃಷ್ಟಿಯಿಂದ ಈ ವರ್ಷ ನಿಮಗೆ ಅನುಕೂಲವೆ. ಫೆಬ್ರುಅರಿ ೧೦ರ ವರೆಗೆ ಗುಪ್ತ ಇಲ್ಲವೆ ಅಕಸ್ಮಿಕ ಲಾಭವೂ ಆಗುವದು. ಮುಂದಿನ ಅವಧಿಯಲ್ಲಿಯಂತೂ ನಿಮ್ಮ ಮುಖ್ಯ ಉದ್ಯೋಗದಲ್ಲಿ ಒಳ್ಳೆ ಪ್ರಗತಿಯಾಗುವದು. ನೋಕರರಿಗೆ ಎಪ್ರಿಲ್ ೨೬ ರಿಂದ ಜೂನ ೧೯, ಇಲ್ಲವೆ ಸಪ್ಟಂಬರ ೨೩ ರಿಂದ

ನವಂಬರ ೫ ರ ಅವಧಿಯಲ್ಲಿ ಮೇಲಿನ ಗ್ರೇಡು ಸಿಕ್ಕುವ ಸಂಭವವೂ ಇದೆ. ಬದಲಿಯಾದರೆ ಕೆಲಸದ ದೃಷ್ಟಿಯಿಂದ ಅತ್ಯಂತ ದಗದಗಿಯು ಮತ್ತು ವಸತಿಯು ದೃಷ್ಟಿಯಿಂದ ಅತ್ಯಂತ ಅನನುಕೂಲ ಸ್ಥಳಕ್ಕೆ ಆಗುವದು. ಮತ್ತು ವರಿಷ್ಠರ ತೊಂದರೆ ಸದಾ ಎನಿಸುವದು. ವ್ಯಾಪಾರಿಗಳ ಇಲ್ಲವೆ ಸ್ವತಂತ್ರ ಉದ್ಯೋಗ ಮಾಡುವವರಿಗೂ ಇದೇ ಬಗೆಯ ಅನುಭವ ಬರುವದು. ಅಂದರೆ ದ್ರವ್ಯ ಲಾಭ ಸಾಕಷು ದೊರೆತರೂ ಉದ್ಯೋಗದಲ್ಲಿ ಬಹಳ ಸ್ಪರ್ಧೆಯನ್ನೆದುರಿಸಬೇಕಾಗುವದು. ಗಿರಾಕಿಗಳ ಇಲ್ಲವೆ ಆಶ್ರಯದಾತರಿಗೆ ವಸ್ತುವಿನ ಇಲ್ಲವೆ ಪ್ರಾಮಾಣಿಕತೆಯ ಖಾತ್ರಿಮಾಡಿ ಕೊಡಬೇಕಾಗುವದು. ಆದರೂ ಅವರು ಇನ್ನೂ ಸಂಶಯವನ್ನೇ ತಾಳುವರು. ಆದರಲ್ಲಿಯೂ ಡಿಸೆಂಬರ ೩ ರಿಂದ ೨೨, ಜನೆವರಿ ೧ ರಿಂದ ೨೯, ಎಪ್ರಿಲ ೪ ರಿಂದ ೨೧, ಮೇ ೬ ರಿಂದ ಜುಲೈ ೨೯ ಮತ್ತು ಸಪ್ಟಂಬರ ೧ ರಿಂದ ೨೦ ಈ ಅವಧಿಯೂ ಬಹಳ ಸಮಾಧಾನದ್ದು ಮತ್ತು ಅನುಕೂಲವಾಗಿ ಪರಿಣಮಿಸುವದು. ಲೋಕಮತ ಬಹಳ ಅನುಕೂಲವಾಗುವುದು. ಹೊಸ ಸ್ಥಾವರ ಜಂಗಮ ಸಂಗ್ರಹವಂತೂ ಆಗುವದಿಲ್ಲ ಇದ್ದದ್ದೇ ಕೆಲಮಟ್ಟಿಗೆ ಕಡಮೆ ಆಗುವದು ಸ್ಥಾವರ ಉತ್ಪನ್ನ ಸುಸೂತ್ರಉಡಿಯಲ್ಲಿ ಬೀಳುವದಿಲ್ಲ. ವಾಹನಗಳಿಂದ ಸುಖದ ಬದಲು ತೊಂದರೆಯೇ ಎನಿಸುವದು ಕೈಕೆಳಗಿನವರು ವಿನಮ್ರರಾಗಿ ವರ್ತಿಸದೆ ದುರಭಿಮಾನದಿಂದಲೇ ನಡೆಯುವರು. ಮತ್ತು ಮೇಲಿಂದ ಮೇಲೆ ಏನಾದರೊಂದು ಕೆಟ್ಟಮಾತೆ ಆಡುತ್ತನಡೆಯುವರು. ಆದರೂ ಇದೆಲ್ಲ ತೊಂದರೆ ೯ನೇ ಗುರು ಬಂದಮೇಲೆ ಅಂದರೆ ಫೆಬ್ರುಅರಿ ೧೦ ರಿಂದ ಕ್ರಮಶಃ ಕಡಮೆಯಾಗುವದು. ಎಪ್ರಿಲ ೨೬ರ ನಂತರ ಯಾವದೊಂದು ಯಾತ್ರೆ ಮಾಡುವಿರಿ. ಅದಾಗದಿದ್ದರೆಮನೋಧೈರ್ಯವನ್ನುಂಟುಮಾಡುವಂಥ ಯಾವನೊಬ್ಬ ಪಾರಮಾರ್ಥಿಕ ವ್ಯಕ್ತಿಯ ಸಹವಾಸವಂತೂನಿಶ್ಚಯವಾಗಿ ಲಭಿಸುವದು. ಮಿತ್ರಸುಖ ಬಹಳ ಅನುಕೂಲ. ಆಪ್ತರು ಮತ್ತು ಮನೆಯವರಿಗಿಂತ ಅವರ ಸಹಾಯ ಮತ್ತು ಸಲಹೆ ಹೆಚ್ಚು ಉಪಯುಕ್ತವೆನಿಸುವದು. ಮತ್ತು ಅವರಲ್ಲಿ ಬಹುತರ ಜನರಿಗೆ ಈ ವರ್ಷ ಬಹಳ ಸುಖದ್ದು ಮತ್ತು ಉತ್ಕರ್ಷದ್ದು ಎನಿಸುವದು. ಫೆಬ್ರುಅರಿ ನಂತರ ನಿಮ್ಮ ಧರ್ಮನಿಷ್ಠೆ ಹೆಚ್ಚುವದು ಮತು ಒಂದೆರಡು ವಿಶಿಷ್ಟ ಧಾರ್ಮಿಕ ಕೆಲಸಗಳನ್ನು ಮಾಡುವಿರಿ.

ದಾವೆ ಖಟಲೆ ಇಲ್ಲವೆ ಖಾಸಗಿ ಸ್ಪರ್ಧೆಯಲ್ಲಿ ನವಂಬರ ೨೦ ರಿಂದ ಫೆಬ್ರುಅರಿ ೭ ರ ಅವಧಿಯಲ್ಲಿ ಮಹತ್ವದ ಒಂದು ಕೆಲಸದಲ್ಲಾದರೂ ನಿಮ್ಮ ಮನಸ್ಸಿನ ವಿರುದ್ಧವಾಗಿ ಬಹಳ ಧಕ್ಕೆ ಕೊಡುವ ಯೋಗವಿದ್ದರೂ ಎಪ್ರಿಲ ೨೬ ರಿಂದ ಜೂನ ೧೯ ಮತ್ತು ಸಪ್ಟಂಬರ ೨೩ ರಿಂದ ನವಂಬರ ೫ರ ವರೆಗೆ ಆಗುವ ತೀರ್ಪುಗಳೆಲ್ಲ ನಿಮಗೆ ಅನುಕೂಲವೆ. ಆದರೂ ಶತ್ರುಗಳ ಜೋರು ಕಡಿಮೆಯಾಗದೆ ಮೊದಲಿನಷ್ಟೆ ಉಳಿಯುವದು. ನಿಮ್ಮ ಜನರೇ ಒಳಗಿಂದೊಳಗೆ ಅವರಿಗೆ ಫಿತೂರ ಆಗುವರು.

ಫೆಬ್ರುಅರಿ ೧೦ ರ ನಂತರ ಹಡೆಯುವ ಸ್ತ್ರೀಯರಿಗೆ ಸ್ವಲ್ಪವೂ ಕಷ್ಟವಾಗದೆ ಬಾಳಂತಿತನವೂ ಸುಖದ್ದೆನಿಸುವದು. ಮಕ್ಕಳೂ ಒಳ್ಳೇ ನಿರೋಗಿ ಉಳಿಯುವರು. ಅಗಷ್ಟ ೪ ರಿಂದ ಸಪ್ಟೆಂಬರ ೨೩ ರ ವರೆಗೆ ಹುಟ್ಟುವ ಮಕ್ಕಳ ಆರೋಗ್ಯ ಮಾತ್ರ ಚೆನ್ನಾಗಿ ಉಳಿಯುವದಿಲ್ಲ. ಬಹುತರ ಸ್ತ್ರೀಯರಿಗೆ ಕನ್ಯಾರತ್ನವೇ ಹುಟ್ಟುವ ಯೋಗವಿದೆ.

ಫೆಬ್ರುಅರಿ ೧೦ ರ ನಂತರ ಪರೀಕ್ಷೆಯಾಗುವ ವಿದ್ಯಾರ್ಥಿಗಳು ಖಾತ್ರಿಯಿಂದ ಯಶಸ್ವಿಯಾಗುವರು. ಆದರೆ ಜನೆವರಿ ೨೯ ರಿಂದ ಎಪ್ರಿಲ ೪ ರ ಮಧ್ಯಂತರ ಅವಧಿಯಲ್ಲಿ ಪರೀಕ್ಷೆಗೆ ಕಟ್ಟುವವರು ಬಹುತರವಾಗಿ ವರ್ಗವನ್ನು ಸಂಪಾದಿಸುವರು.

# ಮಿಥುನ

ಒಟ್ಟಿಗೆ ಈ ವರ್ಷ ನಿಮ್ಮ ಬಹುತರ ಕೆಲಸ ಕಾರ್ಯಗಳು ಕಷ್ಟಸಾಧ್ಯವಾಗಿದ್ದರೂ ಯಶಸ್ಸು ನಿಶ್ಚಿತವಾಗಿ ದೊರೆಯುವದೆಂದು ತಿಳಿಯಬೇಕು.

ಈ ರಾಶಿಯ ಜನರ ಆರೋಗ್ಯ ಫೆಬ್ರುಅರಿಯಿಂದ ಅನುಕೂಲವುಳಿಯುವದಿಲ್ಲ ಮತ್ತು ಅದಕ್ಕೂ ಮೊದಲು ಒಂದು ಅಪಘಾತದ ಅಂಜಿಕೆಯೂ ಇದೆ. ನಿಮಗಾಗುವ ಬೇನೆ ಪ್ರಸಿದ್ಧ ವೈದ್ಯರು ಮತ್ತು ಡಾಕ್ಟರರಿಗೂ ಕೂಡ ಗೊತ್ತಾಗುವದಿಲ್ಲ. ಬಹುತರ ಜನರಿಗೆ ಗ್ಯಾಸಾಗುವದು, ಮೊಳಕಾಲು ನೋವು, ಬೆನ್ನು ನೋವು ಮೊದಲಾದ ಉಪದ್ರವವಾಗುವದು. ಫೆಬ್ರುಅರಿಯಿಂದ ಗುರು ಮತ್ತು ಶನಿ ಇಬ್ಬರೂ ಅಷ್ಟಮಸ್ಥಾನದಲ್ಲಿ ಬರುವದರಿಂದ ಹೀಗಾಗುವದು. ಆದರೆ ಶನಿಯು ಅಷ್ಟಮೇಶನಾಗಿರುವದರಿಂದ ಗಂಡಾಂತರದ ಅಂಜಿಕೆ ಇಲ್ಲವೇ ಇಲ್ಲ. ಆದರೆ ವಿಶೇಷ ಕಷ್ಟವಾಗಬಾರದೆಂದು ಶನಿಯು ೨೩ ಸಾವಿರ ಮತ್ತು ಗುರುವಿನ ೧೯ ಸಾವಿರ ಜಪಮಾಡಿ ಯಥಾಶಕ್ತಿ ಎಳ್ಳು ಮತ್ತು ಕಡ್ಲೆಬೇಳೆ ದಾನಮಾಡಬೇಕು.

ಉಳಿದ ವಿಷಯಗಳಲ್ಲಿ ಮಾತ್ರ ದೇಹಸುಖ ಉತ್ತಮ ಮತ್ತು ತೃತೀಯ ರಾಹುವಿನಿಂದ ಮನಸ್ಸು ಸದಾ ಹುರುಪಿನಲ್ಲಿರುವದು ಬುದ್ಧಿ ತಿಳಿಯಾಗಿರುವದು. ತರ್ಕ ಶಕ್ತಿ ಹೆಚ್ಚುವದು ಮತ್ತು ಯೋಚಿಸಿದಂತೆ ಅನೇಕ ಮಾತು ಪೂರ್ಣ ಸುಖಪ್ರದವಾಗಿ ಪರಿಣಮಿಸುವವು.

ಹೆಂಡತಿಯ ಆರೋಗ್ಯಕ್ಕೆ ಈ ವರ್ಷ ಬಹಳ ಅನುಕೂಲವಿರುವದು. ಆದರೆ ಜುಲೈ ೨೫ ರಿಂದ ಸಪ್ಟಂಬರ ೨೩ ರ ಅವಧಿಯಲ್ಲಿ ಅವಳಿಗೆ ಸ್ವಲ್ಪ ಕ್ಲೇಶವಾಗುವ ಸಂಭವವಿದೆ. ಉಭಯತರಲ್ಲಿ ಒಳ್ಳೇ ಪ್ರೇಮ ಮತ್ತು ಮತ್ಯೈಕ್ಯವುಳಿಯುವುದು. ಆದರೆ ನವಂಬರ ೯ ರ ವರೆಗೆ ಮತ್ತು ಡಿಸೆಂಬರು ೪ ರಿಂದ ೩೦, ಜೂನ ೨೯ ರಿಂದ ಜುಲೈ ೨೭ ಮತ್ತು ಅಕ್ಟೋಬರ ೧೧ ರಿಂದ ನವಂಬರ ೫ ಈ ಅವಧಿಯಲ್ಲಿ ನೀವು ಇಲ್ಲವೆ ಅವಳು ಗ್ರಾಮಾಂತರ ಹೋಗುವದರಿಂದ ಇಲ್ಲವೆ ಯಾವದೊಂದು ನಿರುಪದ್ರವಿ ಆದರೆ ಅಪರಿಹಾರ್ಯಕಾರಣಕ್ಕಾಗಿ ಸಹವಾಸ ಸುಖ ದೊರೆಯಲಾರದು. ಒಂದು ವೇಳೆ ಇನ್ನೂ ನಿಮ್ಮ ಮದುವೆಯಾಗಿರದಿದ್ದರೆ ಮತ್ತು ಈ ವರ್ಷವೇ ಮಾಡಿಕೊಳ್ಳುವದಿದ್ದರೆ ಫೆಬ್ರುಅರಿ ೧೦ರ ವರೆಗೆ ಬಾಶಿಂಗಬಲ ವಿಶೇಷವಿದೆ. ಅನಂತರ ಒಂದು ವೇಳೆ ಕೂಡಿ ಬಂದರೂ ಪ್ರಯತ್ನ ಮತ್ತು ತೊಂದರೆ ಬಹಳ ಸಹಿಸಬೇಕಾಗುವದು. ಆದರೆ ವಿವಾಹಯಾವಾಗ ಆದರೂ ವಧು ಇಲ್ಲವೆ ವರ ಅನುರೂಪರೇ ಆಗಿರುವರು. ಮತ್ತು ಬೀಗರು ನಿಮ್ಮಕ್ಕಿಂತ ಹೆಚ್ಚು ಸಧನರಾಗಿರುವರು. ಆದರೆ ವಧು ಇಲ್ಲವೆ ವರನ ಒಂದು ಕಣ್ಣು ಮೆಳ್ಳ ಇರುವ ಸಂಭವವಿದೆ.

ಅದರಂತೆ ಮಕ್ಕಳ ವಿವಾಹ ಈ ವರುಷ ಮಾಡುವದಿದ್ದರೆ ಅದಕ್ಕೂ ಫೆಬ್ರುಅರಿ ವರೆಗೆ ಬಾಶಿಂಗ ಬಲ ಹೆಚ್ಚಾಗಿ ಇದೆ. ಮುಂದೆ ಮಾತ್ರ ಅಷ್ಟೊಂದು ಇರುವದಿಲ್ಲ. ಮಗಳ ಮದುವೆ ಮಾಡುವದಿದ್ದರೆ ಪ್ರಯತ್ನವೆಲ್ಲ ನಿರರ್ಥಕವೆನಿಸುವದು. ಸೊಸೆ ಇಲ್ಲವೆ ಅಳಿಯ ಮಾತ್ರ ಮನಸ್ಸಿಗೆ ಒಗ್ಗುವಂಥವರು, ಜಾಣರು, ರೂಪಸಂಪನ್ನ ಮತ್ತು ಸುದೈವಿಗಳು, ಸುಶೀಲರಿರುವರು. ಮಕ್ಕಳ ಉತ್ಕರ್ಷಕ್ಕೆ ಈ ವರ್ಷ ಬಹಳ ಅನುಕೂಲವಿದೆ. ವಿಶೇಷವಾಗಿ ನವಂಬರ ೯ ರಿಂದ ಡಿಸೆಂಬರ ೪, ಡಿಸೆಂಬರ ೩೦ ರಿಂದ ಜನೆವರಿ ೨೭, ಮೇ ೨೯ ರಿಂದ ಜೂನ ೨೯ ಮತ್ತು ಜುಲೈ ೨೭ ರಿಂದ ಅಕ್ಟೋಬರ ೧೧ ರ ಅವಧಿಯಲ್ಲಿ ಮಾತ್ರ ಅವರಿಂದ ದೊರೆಯುವ ಸುಖ ಲೌಕಿಕ ದೃಷ್ಟಿಯಿಂದ ಚನ್ನಾಗಿದ್ದರೂ ಒಳಗೊಳಗೆ ಅಷ್ಟೊಂದು ಚೆನ್ನಾಗಿರುವದಿಲ್ಲ.

ಧಂದೆ ಕೂಲಿಯು ದೃಷ್ಟಿಯಿಂದ ಫೆಬ್ರುಅರಿ ೧ ರ ವರೆಗೆ ಮತ್ತು ಜುಲೈ ೨೫ ರ ನಂತರ ಎಷ್ಟೊಂದು ಅನುಕೂಲವಿರುವದೊ ಅಷ್ಟು ಫೆಬ್ರುಅರಿಯಿಂದ ಜುಲೈ ಈ ಅವಧಿಯಲ್ಲಿ ಇರುವದಿಲ್ಲ. ನೌಕರರಿಗಂತೂ ಈ ಕಾಲ ಬಹಳ ತೊಂದರೆಯದು. ವರಿಷ್ಠರು ನಿರರ್ಥಕವಾಗಿ ಛಲಿಸುವರು. ಬದಲಿಯಾದರೆ ಅನನುಕೂಲ ಸ್ಥಳಕ್ಕೆ ಆಗುವದು. ಕೈಕೆಳಗಿನವರು ಅಪ್ರಾಮಾಣಿಕ ರೀತಿಯಿಂದ ವರ್ತಿಸುವರು. ಯಾವ

ದೊಂದು ಬಲೆಯನ್ನು ಬೀಸಿ ಅದರಲ್ಲಿ ಕೆಡಹುವ ಪ್ರಯತ್ನವನ್ನು ಮಾಡುವರು. ನಿಮ್ಮ ಹಕ್ಕು ಇದ್ದರೂ ನಿಮಗೆ ಮೇಲಿನ ಗ್ರೇಡು ದೊರೆಯದೆ ನಿಮ್ಮ ದ್ವೇಷಿಕನಿಗೆ ಸಿಕ್ಕುವದು. ಇಂಥ ಕಷ್ಟಗಳೂ ಬರುವವು. ಈ ಅವಧಿಯನ್ನು ಬಿಟ್ಟು ಉಳಿದ ಅವಧಿ ಮಾತ್ರ ಅನುಕೂಲ. ವ್ಯಾಪಾರಸ್ಥರು ಇಲ್ಲವೆ ಸ್ವತಃ ಉದ್ಯೋಗ ಮಾಡುವವರಿಗೆ ಜುಲೈ ೨೫ ರಿಂದ ಮುಂದಿನ ಕಾಲ ಬಹಳ ಪ್ರಗತಿಯದು. ಅನೇಕರಿಗೆ ಸಟ್ಟಾದಲ್ಲಿ ಇಲ್ಲವೆ ಲಾಟರಿ, ಒಗಟು, ರೇಸು ಮುಂತಾದ್ದರಲ್ಲಿ ಆಕಸ್ಮಿಕ ಲಾಭ ಬಹಳಾಗುವದು. ಅಷ್ಟಮ ಶನಿ ಗುಪ್ತ ಲಾಭಕ್ಕೆ ಬಹಳ ಕಾರಕನಿರುವನು. ಅದರಂತೆ ಅಷ್ಟಮಗುರು ಮಾತ್ರ ನಿರರ್ಥಕ ವೆಚ್ಚಕ್ಕೆ ಕಾರಕನಾಗಿರುವನು. ಒಟ್ಟಾರೆ ಆಯ ಮತ್ತು ವ್ಯಯ ಅಷ್ಟೇ ಉಳಿಯುವದು. ಸ್ಥಾವರ ಜಂಗಮ ಸಂಗ್ರಹದಲ್ಲಿ ಹೊಸ ಸಂಗ್ರಹದ ಸಂಭವ ಕಡಮೆ ಇದ್ದರೂ ಇದ್ದದ್ದು ಕಡಿಮೆಯಂತೂ ಆಗುವದೇ ಇಲ್ಲ. ಅಷ್ಟಮಗುರುವಿನ ಪರಿಣಾಮವಾಗಿ ಆಪ್ತರಲ್ಲಿ ಕೆಲವರು ಬಹಳ ಉತ್ಕರ್ಷ ಹೊಂದುವರು. ಆದರೆ ನಿಮ್ಮೊಡನೆ ಮಾತ್ರ ಚೆನ್ನಾಗಿ ನಡೆದುಕೊಳ್ಳುವದಿಲ್ಲ. ಮಿತ್ರಸುಖ ಉತ್ತಮ. ಆಗಾಗ ಪೂಜ್ಯ ಜನರ ಸಹವಾಸ ಲಭಿಸುವದು. ಯಾತ್ರೆಯ ಯೋಗ ಕಡಮೆಯೇ. ಆದರೆ ಧಾರ್ಮಿಕ ಕೃತ್ಯ ಮತ್ತು ದೇವೀಉಪಾಸನೆ ಬಹಳ. ಅನೇಕ ಸ್ವಪ್ನಗಳು ಶುಭ ಮತ್ತು ಭಾವೀಸೂಚಕವಾಗಿರುವವು. ಸ್ಥಾವರ ಉತ್ಪನ್ನ ಅನುಕೂಲವಾಗುವದು. ಆದರೆ ಸಪ್ಟಂಬರ ೨೩ ರಿಂದ ನವಂಬರ ೫ರ ಅವಧಿಯಲ್ಲಿ ಸ್ಥಾವರದಲ್ಲಿ ನಿಸರ್ಗಕೋಪದಿಂದ ಸ್ವಲ್ಪ ಹಾನಿಯಾಗುವದು.

ಜನೆವರಿ ಮುಗಿಯುವದರೊಳಗಾಗಿ ಈ ರಾಶಿಯ ಸ್ತ್ರೀಯರು ಹಡೆಯುವವರಿದ್ದರೆ ಅತಿ ಸುಲಭವಾಗಿ ಹಡೆಯುವರು ಮತ್ತು ಗಂಡು ಮಗುವನ್ನೇ ಹಡೆಯುವರು. ಫೆಬ್ರುಅರಿ ನಂತರ ಹಡೆಯುವವರಿಗೆ ಅಷ್ಟೊಂದು ಕಷ್ಟದ ಅಂಜಿಕೆಯಿಲ್ಲದಿದ್ದರೂ ಪ್ರಸೂತಿ ಕಾಲದ ಅಂದಾಜು ಬಹಳ ತಪ್ಪುವದು ಮತ್ತು ಬಹುಶಃ ಕನ್ಯಾರತ್ನವೇ ಜನಿಸುವದು.

ಫೆಬ್ರುಅರಿ ೧೦ ಕ್ಕಿಂತ ಮೊದಲು ಮತ್ತು ಅನಂತರ ಮೇ ೨೯ ರಿಂದ ಜೂನ ೨೯, ಜುಲೈ ೨೭ ರಿಂದ ಸಪ್ಟೆಂಬರ ೧೭ ಮತ್ತು ನವೆಂಬರ ೫ ರ ನಂತರ ಯಾವ ವಿದ್ಯಾರ್ಥಿಗಳ ಪರೀಕ್ಷೆಯಾಗುವದೊ ಅವರು ಖಾತ್ರಿಯಿಂದ ತೇರ್ಗಡೆ ಹೊಂದುವರು. ಇಷ್ಟೇ ಅಲ್ಲ ಫೆಬ್ರುಅರಿ ೧೦ ರೊಳಗೆ ಪರೀಕ್ಷೆಯಾದವರು ಪ್ರಥಮ ಇಲ್ಲವೆ ದ್ವಿತೀಯ ವರ್ಗದಲ್ಲಿ ಪಾಸಾಗುವರು.

ಅದರಂತೆ ನಿಮ್ಮ ಮಕ್ಕಳಲ್ಲಿ ಯಾರದಾದರೂ ಮದುವೆ ಮಾಡುವದಿದ್ದರೆ ಇಡಿ ವರ್ಷ ಮಧ್ಯಮ ಬಾಶಿಂಗಬಲವಿರುವದರಿಂದ ಕೂಡಿಬರುವದಕ್ಕೆ ವಿಲಂಬವಾಗುವದು; ತೊಂದರೆಯು ಆಗುವದು. ಅಂದಾಜಿಗಿಂತ ಒಂದು ಒಂದೂವರಿ ಪಟ್ಟು ಹೆಚ್ಚು ವೆಚ್ಚವಾಗುವದು. ಆದರೆ ಸ್ಥಳ ಬಹಳ ಅನುಕೂಲ ದೊರೆಯುವದು. ಸೊಸೆ ಇಲ್ಲವೆ ಅಳಿಯ ಮನಸ್ಸಿಗೆ ಒಗ್ಗುವಂತಹರು ದೊರೆಯುವರು. ವಿಶೇಷವಾಗಿ ಎಪ್ರಿಲ ೨೬ ರಿಂದ ಆಗಸ್ಟ ೮ ರ ವರೆಗಿನ ಕಾಲವು ವಿವಾಹಕ್ಕೆ ಅನುಕೂಲ. ಅವರ ಉತ್ಕರ್ಷಕ್ಕೂ ಎಪ್ರಿಲ ೨೬ ರ ನಂತರವೇ ಅನುಕೂಲವಿದೆ. ಅವರ ಆರೋಗ್ಯ ಈ ಕಾಲದಲ್ಲಿ ಅನುಕೂಲವಾಗಿದ್ದರೂ ನವಂಬರ ೨೦ ರಿಂದ ಜುಲೈ ೭ ರ ವರೆಗೆ ಯಾವದೊಂದು ಸಣ್ಣ ದೊಡ್ಡ ಅಪಘಾತದ ಅಂಜಿಕೆ ಇದೆ. ಅಂತೆಯೇ ಈ ಅವಧಿಯಲ್ಲಿ ಅವರು ತಾವೇ ಯಾವ ವಾಹನವನ್ನೂ ನಡೆಸಬಾರದು. ಅವರದು ನಿಮ್ಮದು ಬಹಳಷ್ಟು ಕೂಡಿ ನಡೆಯುವದಿಲ್ಲ. ಒಬ್ಬನಂತೂ ಬೇಕೆಂತಲೇ ವಿಲಕ್ಷಣ ತೊಂದರೆ ಕೊಡುವನು.

ಧಂದೆ ಕೂಲಿಯ ದೃಷ್ಟಿಯಿಂದ ನೋಕರರು ಮತ್ತು ಸ್ವತಂತ್ರ ಧಂದೆಯವರಿಗೆ ಫೆಬ್ರುಅರಿ ೧೦ ರಿಂದ ಹಾನಿಯ ಅಂಜಿಕೆ ಇಲ್ಲದಿದ್ದರೂ ಎಪ್ರಿಲ ೨೬ ರ ನಂತರವೇ ಲಾಭವಾಗಹತ್ತುವದು. ಜೂನ ೧೯ ರಿಂದ ಸಪ್ಟಂಬರ ೨೩ ರ ವರೆಗೆ ಅದು ಅಂದಾಜಿಗಿಂತ ಹೆಚ್ಚಾಗುವದು. ಫೆಬ್ರುಅರಿಗಿಂತ ಮೊದಲು ಬದಲಿಯಾದರೆ ಅದು ಬಹಳ ಅನಾನುಕೂಲ ಸ್ಥಳಕ್ಕೆ ಆಗುವದು ನಿಜ. ಆದರೆ ಕಾಯಂವಾದ ಇಲ್ಲವೇ ತಾತ್ಪೂರ್ತಿಕ ಗ್ರೇಡು ಖಾತ್ರಿಯಿಂದ ಸಿಗುವುದು. ಆದರೆ ಫೆಬ್ರುಅರಿ ನಂತರ ಬದಲಿಯಾದರೆ ಅದು ಸುಖಕರ ಸ್ಥಳಕ್ಕಾಗುವದು. ಆದರೆ ಮೇಲಿನ ಗ್ರೇಡು ಸಿಕ್ಕುವ ಸಂಭವ ಕಡಿಮೆ. ಅದರಂತೆ ನೋಕರರಿಗೆ ಜೂನ ೧೯ ರ ವರೆಗೆ ಗೊತ್ತಿಲ್ಲದ ಕೆಲಸವನ್ನು ಮಾಡಬೇಕಾದ ಪ್ರಸಂಗ ಬರುವದು. ಅವುಗಳಲ್ಲಿ ಸ್ವಾಭಾವಿಕವಾಗಿ ತಪ್ಪುತಡಿಗಳಾಗುವವು. ಇವನ್ನೆಲ್ಲ ಬೇಕಂತಲೆ ಮಾಡಿದಿರೆಂದು ವರಿಷ್ಠರು ಅಸಂತುಷ್ಟರಾಗುವ ಸಂಭವವಿದೆ. ಕೈಕೆಳಗಿನ ನೋಕರರು ನಿಮ್ಮ ಕೆಲಸದಲ್ಲಿ ಸಹಕರಿಸದೆ ತೊಂದರೆ ಕೊಡುವರು. ವ್ಯಾಪಾರಸ್ಥರಿಗೆ ಇಲ್ಲವೆ ಸ್ವತಂತ್ರ ಉದ್ಯೋಗ ಮಾಡುವವರಿಗೆ ನವಂಬರ ೨೦ ರಿಂದ ಫೆಬ್ರುಅರಿ ೭ ರ ವರೆಗೆ ಬಹಳಷ್ಟು ಹೊಡೆತ ಬೀಳುವ ಅಂಜಿಕೆಯಿದೆ. ಆದರೆ ಎಪ್ರಿಲ ೨೬ ರಿಂದ ಮುಂದೆ ಹಿಂದಿನ ಹಾನಿಯು ಕ್ರಮಶಃ ತುಂಬಿಬರುವದು. ಮತ್ತು ಆಗಸ್ಟ ೮ ರ ನಂತರದ ಕಾಲವು ಬಹಳ ಅನುಕೂಲ ಪರಿಣಮಿಸಿ ನಾಲ್ಕು ದುಡ್ಡೂ ಕೂಡಿ ಹಾಕುವಿರಿ. ಡಿಸೆಂಬರ ೧೫ ರಿಂದ ಜನೆವರಿ ೧೩ ವರೆಗೆ ಅನೇಕರಿಗೆ

## ಕರ್ಕ

ಒಟ್ಟಾರೆ ಈ ವರ್ಷ ನಿಮ್ಮ ಯಾವ ಸಣ್ಣ ದೊಡ್ಡ ಆಕಾಂಕ್ಷೆಗಳು ವಿಶೇಷ ಕಷ್ಟ ಮತ್ತು ಕಠಿಣವಾದ ತಪಶ್ಚರ್ಯದಿಂದಲೆ ಸಾಧ್ಯವಾಗುವವು.

ಈ ರಾಶಿಯವರ ಆರೋಗ್ಯ ಫೆಬ್ರುಅರಿ ೧೦ ರಿಂದ ಜುಲೈ ೨೫ ರ ವರೆಗೆ ಎಷ್ಟು ಅನುಕೂಲವಾಗಿರುತ್ತದೆಯೋ ಅಷ್ಟು ಉಳಿದ ವೇಳೆಯಲ್ಲಿ ಉಳಿಯಲಾರದು. ಅನೇಕರಿಗೆ ಪಿಶಾಚಿಬಾಧೆ, ಹಿಸ್ಟೇರಿಯಾ ಇಲ್ಲವೆ ನ್ಯೂರಿನಿಯಾದಂತಹ ತೀವ್ರ ತಿಳಿಯದಿದ್ದಂತಹ ಬೇನೆ ಮತ್ತು ಯಾವದೊಂದು ಕ್ಲೇಶವಾಗುವ ಅಂಜಿಕೆ ಇದೆ. ಅಲ್ಲದೆ ಪ್ರಾರಂಭದಿಂದಲೂ ಎಪ್ರಿಲ ೨೬ ರ ವರೆಗೆ ಕಾಲು ಉರಿಯಹತ್ತುವದು ಇಲ್ಲವೆ ಮೇ-ಲಿಂದಮೇಲೆ ಹೊಡೆಯ ಹತ್ತುವದು. ಇತರ ವಿಷಯಗಳಲ್ಲಿ ದೇಹಸುಖ ಫೆಬ್ರುಅರಿ ೧೦ ರ ನಂತರ ಸ್ವಲ್ಪ ಅನುಕೂಲವೆನಿಸಿದರೂ ಪ್ರಾಪಂ-ಚಿಕ ಸುಖ ಮನಸ್ಸಿನಂತೆ ಎಂದೂ ದೊರೆಯಲಾರದು. ಗೃಹಕಲಹ ಬಹಳ ಮತ್ತು ಯಾರ ಮಚ್ಚಿಯೂ ಅವರ ಕಾಲಲ್ಲಿ ಎಂದೂ ಉಳಿಯುವದಿಲ್ಲ. ಕುಟುಂಬದಲ್ಲಿಯ ಪ್ರತಿಯೊ-ಬ್ಬರು ಮನಬಂದಂತೆ ವರ್ತಿಸುವರು ಮತ್ತು ಮನಬಂದಂತೆ ಹಣವನ್ನು ವೆಚ್ಚಮಾಡುವರು.

ಸ್ತ್ರೀ ಸುಖಕ್ಕೆ ಮಾತ್ರ ಫೆಬ್ರುಅರಿಯಿಂದ ಈ ವರ್ಷ ಬಹಳ ಅನುಕೂಲವಿದೆ. ಆದರೂ ಜುಲೈ ೨೫ರ ನಂತರ ಅದರಲ್ಲಿ ಏನಾದರೊಂದು ಗೊ-ತ್ತಿದ್ದ ಇಲ್ಲವೆ ಅನಪೇಕ್ಷಿತ ಅಡಚಣಿ ಮೇಲಿಂದ ಮೇಲೆ ಬರಹತ್ತುವದು. ಆದರೂ ಉಭಯತರ ಪ್ರೇಮ ಮತ್ತೈಕ್ಯ ಅನುಕೂಲವುಳಿಯುವುದು. ಒಂದು ವೇಳೆ ನಿಮ್ಮ ಮದುವೆ ಇನ್ನು ಆಗಿರದಿದ್ದರೆ ಅದು ಫೆಬ್ರುಅರಿ ೧೦ ರಿಂದ ಜುಲೈ ೨೫ ರ ವರೆಗೆ ಖಾತ್ರಿಯಿಂದ ಮತ್ತು ಅಲ್ಪಾಯಾಸದಿಂದಆಗುವದು. ಮತ್ತುವಧು ಇಲ್ಲವೆ ವರ ನಿಮ್ಮ ಪರಿಚಿತದವರೇ ಆಗಿರುವರು. ಕನಿಷ್ಟ ಪರಸ್ಪರರು ಅನೇಕ ಸಲ ನೋಡಿದವರಂತೂ ಆಗಿರುವರು. ಆದರೆ ಎಪ್ರಿಲ ೨೬ಕ್ಕಿಂತ ಮೊದಲು ಯಾರ ಲಗ್ನವಾಗುವದೊ ಅವರಿಗೆ ಮದುವೆಯ ವೆಚ್ಚ ಬಹಳ ಬರುವದು ಮತ್ತು ವಧು ಇಲ್ಲವೆ ವರ ಮೊಂಡಮೂಗಿನವರು ಅಥವಾ ಕಣ್ಣಿಗೆ ಕನ್ನಡಕ ಹಾಕಿಕೊಳ್ಳುವವರು ಇರುವ ಸಂಭವವಿದೆ. ವಿವಾಹದ ಸಮಯದಲ್ಲಿ ಅನಪೇಕ್ಷಿತ ಅಡಚಣಿ ಬರುವ ಸಂಭವವಿದ್ದುದರಿಂದ ವಿವಾಹದ ದಿನಗಳನ್ನು ಹಿಂದೆ ಮುಂದೆ ದೂಡಬೇಕಾಗುವದು.

ಟ್ಯಾಕ್ಸ್, ಲಾಯಿಸೆನ್ಸ ಬಗ್ಗೆ ಸರಕಾರದಿಂದ ಬಹಳ ತೊಂದರೆ ಅನುಭವಿಸಬೇಕಾಗುವದು. ಹೊಸ ಸ್ಥಾವರ ಜಂಗಮ ಸಂಗ್ರಹವಂತೂ ಇಲ್ಲವೇ ಇಲ್ಲ; ಇದ್ದುದರಲ್ಲಿಯೂ ಕರಗುವ ಅಂಜಿಕೆಯಿದೆ. ಜನೆವರಿ ನಂತರ ಕೆಲವೊಂದು ಧಾರ್ಮಿಕ ಇಲ್ಲವೆ ಮಂಗಳ ಕಾರ್ಯಗಳಾಗುವವು. ಆದರಲ್ಲಿ ವೆಚ್ಚವನ್ನು ಪ್ರಮಾಣಮೀರಿ ಮಾಡಬೇಕಾಗುವುದು. ಯಾತ್ರೆಯ ವಿಚಾರ ಬಂದರೂ ಅದು ಸಂಭವಿಸುವದಿಲ್ಲ. ಅಡಚಣೆ ಮನೋಭಂಗ, ದುಃಸ್ವಪ್ನ ಅಪಶಕುನಗಳಿಂದ ಮನಸ್ಸು ಚಂಚಲವಾಗುವ ಸಂಭವ ಅನೇಕ ಸಲ ಬರುವದು. ಅತ್ತೆಯ ಮನೆಯವರೊಡನೆ, ತಾಯಿ ತಂದೆ ಬಂಧುಗಳೊಡನೆ ಕ್ಷುಲ್ಲಕ ಕಾರಣಗಳಿಗಾಗಿ ವಿತುಷ್ಟಿ. ಸ್ಥಾವರ ಉತ್ಪನ್ನ ಇರುವವರಿಗೆ ಬೆಳೆ ಅನುಕೂಲ ಬಂದರೂ ಅದು ಉಡಿಯಲ್ಲಿ ಬೀಳುವದಿಲ್ಲ. ಒಟ್ಟಾರೆ ಈ ವರ್ಷ ಅನೇಕ ವಿಷಯಗಳಲ್ಲಿ ಬಾಯಿ ಮುಚ್ಚಿಕೊಂಡು ಸ್ವಸ್ಥ ಕೂಡುವುದೇ ಒಳಿತು.

ದಾವೆ ಖಟ್ಲೆ ಇಲ್ಲವೆ ಖಾಸಗಿ ಸ್ಪರ್ಧೆಯಲ್ಲಿ ಜುಲೈ ೨೫ ರ ವರೆಗೆ ಬಹಳ ತೊಂದರೆಯಾಗಿ ಅಪಯಶಸ್ಸು ಬರುವ ಅಂಜಿಕೆಯಿದೆ. ಆದರೆ ಅನಂತರ ಮಾತ್ರ ಬಹುತರ ಕೆಲಸಗಳಲ್ಲಿ ಪ್ರಚಂಡ ಯಶಸ್ಸು ಸಿಕ್ಕುವದು. ಮತ್ತು ಪ್ರತಿಪಕ್ಷಿಗಳಿಗೆ ಒಳ್ಳೇ ಪರಾಜಯವಾಗುವದು.

ಈ ವರ್ಷ ಹಡೆಯುವ ಸ್ತ್ರೀಯರಿಗೆ ಬಹುಶಃ ಕನ್ಯಾರತ್ನವೇ ಹುಟ್ಟುವದು. ಎಪ್ರಿಲ ೨೬ ರ ನಂತರವೇ ಸುಲಭ ಪ್ರಸೂತಿಯಾಗುವ ವಿಶೇಷಯೋಗವಿದೆ. ಆದರೂ ಹುಟ್ಟುವ ಮಗು ಒಂದು ವರ್ಷದವರೆಗಾದರೂ ಅಶಕ್ತವೇ ಉಳಿಯುವದು.

ಎಪ್ರಿಲ್ ೨೬ ರ ನಂತರ ಪರೀಕ್ಷೆ ಕಟ್ಟುವ ವಿದ್ಯಾರ್ಥಿಗಳು ಖಾತ್ರಿಯಿಂದ ಪಾಸಾಗುವರು. ಮತ್ತು ಯಾರ ಪರೀಕ್ಷೆ ಫೆಬ್ರುಅರಿ ೧೦ ರಿಂದ ಮೇಲಿನ ತಾರೀಖಿನೊಳಗಾಗಿ ಆಗುವದಿದೆಯೋ ಮತ್ತು ಯಾರ ಜನ್ಮಕುಂಡಲಿಯಲ್ಲಿ ಗುರು ಪಂಚಮ, ನವಮ, ಏಕಾದಶ ಅಥವಾ ಪ್ರಥಮ ಸ್ಥಾನದಲ್ಲಿ ಮೂಲತಃ ಇರುವನೊ ಅಥವಾ ನಿದಾನ ಆ ಕಾಲಕ್ಕೆ ಗೋಚರಿಯಾಗಿ ಬಂದಿದ್ದರೆ ಅವರೂ ಪಾಸಾಗುವದು ಶಕ್ಯವಿದೆ.

ವ್ಯತ್ಯಯ ಬರಲಾರದು. ಅದಷ್ಟೊಂದು ನಿರುಪದ್ರವಿಯಾಗಿರುವದು.

ಆದರಂತೆ ಮಕ್ಕಳ ವಿವಾಹವನ್ನು ಈ ಸಲ ಮಾಡುವದಿದ್ದರೆ ಫೆಬ್ರುಅರಿ ವರೆಗೆ ಮಧ್ಯಮ. ಆದರೆ ಮುಂದೆ ಜುಲೈ ಕೊನೆಯ ವರೆಗೆ ಉತ್ತಮ ಬಾಸಿಂಗ ಬಲವಿದೆ. ಸೊಸೆ ಇಲ್ಲವೆ ಅಳಿಯ ಬಹಳ ಮಟ್ಟಿಗೆ ಮನಸ್ಸಿಗೆ ಬರುವರೆಂದೇನಲ್ಲ. ಆದರೆ ಅವರು ಪರಸ್ಪರ ಅನುರಕ್ತರಾಗಿರುವದರಿಂದ ವಿವಾಹ ಮಾಡುವದು ಕ್ರಮಪ್ರಾಪ್ತವಾಗುವದು. ಫೆಬ್ರುಅರಿಗಿಂತ ಮೊದಲು ಅವರ ವಿವಾಹವಾಗುವದು. ಅವರ ಕಾರ್ಯ ಸಮಾರಂಭ ನಿಮ್ಮ ಮನಸ್ಸಿಗೆ ಸರ್ವಥಾ ಬರುವದಿಲ್ಲ. ಅನೇಕ ತಪ್ಪು ತಿಳಿವಳಿಕೆಯ ಪ್ರಸಂಗಗಳು ಬರುವವು. ಆದರೆ ಅಳಿಯ ಇಲ್ಲವೆ ಸೊಸೆ ಜಾಣ ಮತ್ತು ರೂಪದಿಂದ ಮಧ್ಯಮವಿದ್ದರೂ ದೈವದಿಂದ ಉತ್ತಮ ಇರುವರು. ಈ ಬಗೆಯ ಅನುಭವ ನಿಮಗೆ ಬರುವದು. ಈ ವರ್ಷವಿಡೀ ಅವರ ಉತ್ಕರ್ಷಕ್ಕೆ ಅನುಕೂಲವಿದೆ. ವಿಶೇಷವಾಗಿ ಜೂನ ೧೯ ರಿಂದ ನವಂಬರ ೫ ರ ವರೆಗೆ ಖಾತ್ರಿಯಿಂದ ಆಗುವ ಯೋಗವಿದೆ. ಆದರೆ ಅವರಲ್ಲಿ ಕೆಲವರು ಫೆಬ್ರುಅರಿಯಿಂದ ಜುಲೈ ವರೆಗೆ ನಿಮ್ಮ ಮನಸ್ಸಿಗೆ ಕಷ್ಟವಾಗುವಂತೆ ವರ್ತಿಸುವರು. ಅವರು ಈ ವರ್ಷ ಆರೋಗ್ಯದಿಂದಿದ್ದರೂ ನವಂಬರ ೩೦ ರಿಂದ ಫೆಬ್ರುಅರಿ ೭ ರ ವರೆಗೆ ಅವರಿಗೆ ಯಾವದೊಂದು ಅಪಘಾತದಿಂದ ಸ್ವಲ್ಪ ತ್ರಾಸವಾಗುವ ಸಂಭವವಿದೆ.

ಧಂದೆ ಕೂಲಿಯವರಿಗೆ ಈ ವರ್ಷ ಯಾವಾಗಲೂ ಅನುಕೂಲ. ವಿಶೇಷವಾಗಿ ಎಪ್ರಿಲ ೨೬ ರ ವರೆಗೆ ಮತ್ತು ಅನಂತರ ಜೂನ ೧೯ ರಿಂದ ಆಗಷ್ಟ ೮ ಮತ್ತು ಸಪ್ಟಂಬರ ೨೩ ರಿಂದ ನವಂಬರ ೫ ಈ ಕಾಲ ಬಹಳ ಉತ್ಕರ್ಷದ್ದಾಗಿ ಪರಿಣಮಿಸುವದು. ನೌಕರರಿಗೆ ಈ ಅವಧಿಯಲ್ಲಿ ಖಾತ್ರಿಯಿಂದ ಅನುಕೂಲವಾಗುವದು. ವರಿಷ್ಠರು ಯಾವಾಗಲೂ ಸಂತುಷ್ಟರಾಗಿರುವರು. ಅನೇಕರಿಗೆ ಅವರು ಸಮೀಪದ ಆಪ್ತರು ಇಲ್ಲವೆ ಬಾಲ್ಯ ಸ್ನೇಹಿತರು ಇರುವ ಸಂಭವವೂ ಇದೆ. ಬದಲಿಯಾದರೆ ಅನುಕೂಲ ಸ್ಥಳಕ್ಕೆ. ಆದರೆ ಪ್ರವಾಸದ ದೃಷ್ಟಿಯಿಂದ ಅದು ಅನನುಕೂಲವೆನಿಸಬಹುದು. ಮನೆತನದ ಅಡಚಣೆ ಇಲ್ಲವೆ ಅನನುಕೂಲ ಪರಿಸ್ಥಿತಿಯಲ್ಲಿ ಹರ್ಗವಾಗುವ ಸಂಭವವಿದೆ. ವ್ಯಾಪಾರಸ್ಥರು ಇಲ್ಲವೆ ಸ್ವತಂತ್ರ ಧಂದೆಯವರಿಗೆ ಎಪ್ರಿಲ ೨೬ ರ ವರೆಗೆ ಅನಂತರ ಜೂನ ೧೯ ರಿಂದ ಸಪ್ಟಂಬರ ೨೩ ರ ವರೆಗೆ ತುಂಬ ದ್ರವ್ಯಲಾಭವಾಗಿ ಧಂದೆಯೂ ಬಹಳ ಹೆಚ್ಚುವದು. ಮತ್ತು ಫೆಬ್ರುಅರಿಯಿಂದ ಜುಲೈ ವರೆಗೆ ಪತ್ತು ಪ್ರತಿಷ್ಠೆ ಹೆಚ್ಚುವದು. ಅನೇಕ ಘಟನೆಗಳು ನಡೆಯುವವು. ಆದರಿಂದ ನಿಮ್ಮ ಪ್ರಸಿದ್ಧಿಯೂ ಆಗುವದು. ಪ್ರತ್ಯಕ್ಷ ಲಾಭಕ್ಕೆ

## ಸಿಂಹ

ಒಟ್ಟಿಗೆ ಈ ವರುಷ ಈ ರಾಶಿಯವರಿಗೆ ಪ್ರಾಪಂಚಿಕ ದೃಷ್ಟಿಯಿಂದ ಸಾಧಾರಣ ಸಮಾಧಾನಕರವಿದೆ; ಆದರೆ ಆರ್ಥಿಕ ದೃಷ್ಟಿಯಿಂದ ಮಾತ್ರ ಬಹಳ ಅನುಕೂಲವಾಗಿ ಪರಿಣಮಿಸುವದು. ಇದನ್ನು ನಿಶ್ಚಿತವೆಂದು ತಿಳಿಯಬೇಕು.

ಈ ರಾಶಿಯವರ ಆರೋಗ್ಯ ಇಡೀ ವರ್ಷ ಅನುಕೂಲವಾಗಿದ್ದರೂ ಬ್ಲಡ್‌ಪ್ರೆಶ್ಯರ ಇರುವವರಿಗೆ ಫೆಬ್ರುಅರಿ ೧೨ ರಿಂದ ಮಾರ್ಚ್‌ದ ಮತ್ತು ಆಗಸ್ಟ ೧೬ ರಿಂದ ಸಪ್ಟಂಬರ ೧೬ ಈ ಅವಧಿಯಲ್ಲಿ ಅಲ್ಪಸ್ವಲ್ಪ ತೊಂದರೆಯಾಗಬಹುದು. ಅದರಂತೆ ಎಪ್ರಿಲ ೨೬ ರಿಂದ ಜೂನ ೧೯ರ ಅವಧಿಯಲ್ಲಿ ಅನೇಕರಿಗೆ ಹೃದಯವಿಕಾರವೂ ಆಗುವ ಸಂಭವವಿದೆ. ಆದುದರಿಂದ ೫೦ ವರ್ಷಕ್ಕಿಂತ ಹೆಚ್ಚು ವಯಸ್ಸಾದವರು ಜುಲೈ ೨೫ ರಿಂದ ಮುಂದೆ ಶಕ್ಯವಾದಷ್ಟು ರಾತ್ರಿಯ ಊಟ ಬಿಟ್ಟುಕೊಡಬೇಕು. ಇದುವೇ ಹಿತಕರ. ಇಲ್ಲದಿದ್ದರೆ ಅಪಚನದ ತೊಂದರೆಯಾದರೂ ಆಗುವದು. ಅವಾಂತರ ವಿಷಯಗಳಲ್ಲಿ ಫೆಬ್ರುಅರಿ ೧೦ ರ ವರೆಗೆ ಹೆಚ್ಚು ಅನುಕೂಲವಿದೆ. ಅನಂತರ ಬಹಳ ವಿಷಯಗಳಲ್ಲಿ ಮೇಲಿಂದ ಮೇಲೆ ಮನೋಭಂಗವಾಗುವದು. ಸ್ವಭಾವದಲ್ಲಿಯೂ ಬದಲಾವಣೆಯಾಗಿ ಸಣ್ಣ ಸಣ್ಣ ವಿಷಯಗಳಲ್ಲಿಯೂ ಹೆಚ್ಚು ಚಿಕಿತ್ಸೆ ಮಾಡುತ್ತ ಕೂಡ್ರಬೇಕಾಗುವದು. ಸ್ತ್ರೀ ಸುಖಕ್ಕೂ ಈ ವರ್ಷ ಫೆಬ್ರುಅರಿಯಿಂದ ಜುಲೈ ಕೊನೆಯವರೆಗೆ ಅಷ್ಟೊಂದು ಅನುಕೂಲವಿಲ್ಲ. ಅವಳಿಗೆ ದಿನವೂ ತೊಂದರೆ ಕೊಡುವಂಥ ವಾತದ ವಿಕಾರವಾಗುವದು. ಉಳಿದ ಅವಧಿಯಲ್ಲಿ ಮಾತ್ರ ಅವಳು ಚೆನ್ನಾಗಿ ಉಳಿಯುವಳು. ಮತ್ತು ಪರಸ್ಪರರಲ್ಲಿ ಅಭಿಮಾನ ಆದರವುಳಿಯುವವು. ಆದರೆ ಅನೇಕ ಮಾತುಗಳಲ್ಲಿ ಮತಭೇದದಿಂದ ಅನೇಕಸಲ ವಾಗ್ಯುದ್ಧಗಳೂ ಆಗುವವು. ಪ್ರಾಪಂಚಿಕ ಸುಖ ಸರ್ವಸಾಧಾರಣ ಅನುಕೂಲ. ಆದರೆ ಇಬ್ಬರ ರುಚಿಯೂ ತೀರ ಭಿನ್ನ ಭಿನ್ನವಾಗಿರುವದರಿಂದ ನಿಜವಾದ ಆನಂದದ ಅಭಾವವೇ ಎನಿಸುವದು. ಅದರಲ್ಲಿಯೂ ಜನೆವರಿ ೧೦ ರ ವರೆಗೆ ಮತ್ತು ಅನಂತರ ಎಪ್ರಿಲ ೪ ರಿಂದ ೨೧, ಮೇ ೬ ರಿಂದ ಜುಲೈ ೨೯ ಮತ್ತು ಸಪ್ಟಂಬರ ೧ ರಿಂದ ಅಕ್ಟೋಬರ ೨೪ ರ ವರೆಗಿನ ಅವಧಿಯು ಪ್ರಾಪಂಚಿಕ ದೃಷ್ಟಿಯಿಂದ ವಿಶೇಷ ಸಮಾಧಾನದ್ದೆನಿಸುವದು. ಒಂದು ವೇಳೆ ಇನ್ನೂ ನಿಮ್ಮ ಮದುವೆಯೋ ಆಗಿರದಿದ್ದರೆ ಅದು ಫೆಬ್ರುಅರಿ ೧೦ ರೊಳಗಾಗಿ ಆಗುವದಕ್ಕೆ ಬಾಸಿಂಗಬಲ ವಿಶೇಷವಿದೆ. ಆದರೂ ಅದು ಕೂಡಿ ಬರುವುದಕ್ಕೆ ಮತ್ತು ಅನಂತರ ಆಗಲಿಕ್ಕೆ ಅನೇಕ ಅನಪೇಕ್ಷಿತ ಅಡಚಣೆಗಳು ಬರುವವು. ವಧು ಇಲ್ಲವೆ ವರ ಅನುರೂಪ ಇರುವರಾದರೆ ಅವರಲ್ಲಿ ಅಪೇಕ್ಷಿತ ವ್ಯಕ್ತಿಗೆ ಶಾರೀರಿಕ ಅವಯವದಲ್ಲಿ ಏನಾದರೂ 'ಜನ್ಮತಃವ್ಯಂಗ' ವಿರುವ ಸಂಭವವಿದೆ. ಆದರೆ ಅದರಿಂದ ದಿನಚರ್ಯೆಗೆ ಯಾವ ರೀತಿಯಿಂದಲೂ

ಡಿಸೆಂಬರ ೩ ರ ವರೆಗೆ ಮತ್ತು ಅನಂತರ ಡಿಸೆಂಬರ ೨೨ ರಿಂದ ಜನೆವರಿ ೧೦, ಜನೆವರಿ ೨೯ ರಿಂದ ಎಪ್ರಿಲ ೪, ಎಪ್ರಿಲ ೨೧ ರಿಂದ ಮೇ ೬, ಮೇ ೨೪ ರಿಂದ ಜುಲೈ ೨೯ ಮತ್ತು ಸಪ್ಟೆಂಬರ ೧ ರಿಂದ ನವಂಬರ ೮ ಈ ಅವಧಿ ಬಹಳ ಅನುಕೂಲದ್ದಾಗುವದು. ಸ್ಥಾವರ ಉತ್ಪನ್ನ ಇದ್ದವರಿಗೆ ಅದು ಸರಿಯಾಗಿ ದೊರೆಯುವದು. ಆಪ್ತರು ಮತ್ತು ನೆರೆಯುವರಿಂದ ಕೂಡಿ ನಡೆಯುವಿರಿ. ವಾಹನ ಸುಖ ಚೆನ್ನಾಗಿ ದೊರೆಯುವದು. ಹಳೆ ವಾಹನ ಮಾರಿ ಹೊಸದನ್ನು ಕೊಳ್ಳುವಿರಿ. ಮಿತ್ರಸುಖ ಅನುಕೂಲ ಹೊಸ ಹೊಸ ಮಾದರಿಯ ಅನೇಕ ಉಚ್ಚ ವಸ್ತುಗಳನ್ನು ಸಂಗ್ರಹಿಸುವಿರಿ. ಮಹತ್ವದ ಲೇಖನ ಕೆಲಸ ಮನಸ್ಸಿನಂತೆ ಆಗುವವು. ಫೆಬ್ರುಅರಿ ೧೦ ಕ್ಕಿಂತ ಮೊದಲು ಒಂದು ಯಾತ್ರೆಯೂ ಘಟಿಸಬಹುದು. ಅನಂತರ ಲೋಕಹಿತದ ಕೆಲಸಗಳಲ್ಲಿ ಸತ್ಕಾಲ ಕಳೆಯುವಿರಿ.

ದಾವೆ ಖಟ್ಲೆ ಖಾಸಗಿ ಸ್ಪರ್ಧೆಗಳಲ್ಲಿ ಫೆಬ್ರು-ಅರಿ ೧ ರಿಂದ ಜುಲೈ ೨೫ ರ ಅವಧಿಯಲ್ಲಿ ಎರಡು ಮೂರು ಒಳ್ಳೆ ಯಶಸ್ವಿಯಾಗಿ ಶತ್ರು ಇಲ್ಲವೆ ವಿರೋಧಿಗಳು ಪೂರ್ಣ ಪರಾಜಿತರಾಗುವರು. ಆದರೆ ನವಂಬರ ೨೦ ರಿಂದ ಫೆಬ್ರು-ಅರಿ ೭ರ ವರೆಗೆ ಒಂದೆರಡು ಕೆಲಸದಲ್ಲಿ ಅಪಯಶಸ್ಸು ದೊರೆವ ಅಂಜಿಕೆಯಿದೆ.

ಜುಲೈ ೨೫ ಕ್ಕಿಂತ ಮೊದಲು ಹಡೆಯುವ ಈ ರಾಸಿಯ ಸ್ತ್ರೀಯರ ಪ್ರಸೂತಿ ಕಷ್ಟವಿಲ್ಲದೆ ಆಗಿ ಬಹುಶಃ ಪುತ್ರರತ್ನವನ್ನೆ ಹಡೆಯುವರು. ಆದರೆ ಜುಲೈ ನಂತರ ಹಡೆದರೆ ಪ್ರಸೂತಿ ಸ್ವಲ್ಪ ಕಷ್ಟವಾಗುವದು ಮತ್ತು ಕನ್ಯಾರತ್ನವನ್ನೇ ಹಡೆಯುವರು. ಆದರೆ ಅನೇಕರಿಗೆ ಅವಳಿ ಜವಳಿ, ಒಂದು ಹೆಣ್ಣು ಒಂದು ಗಂಡು ಹೀಗೆ ಎರಡು ಮಕ್ಕಳು ಹುಟ್ಟುವ ಸಂಭವವಿದೆ.

ಜುಲೈ ೨೫ ಕ್ಕಿಂತ ಮೊದಲು ಪರೀಕ್ಷೆ ಕಟ್ಟುವ ವಿದ್ಯಾರ್ಥಿಗಳು ಖಾತ್ರಿಯಿಂದ ಯಶಸ್ವಿಯಾಗುವರು ಮತ್ತು ಎಪ್ರಿಲ ೧೩ ರಿಂದ ಮೇ೧೩ರ ಅವಧಿಯಲ್ಲಿ ಪರೀಕ್ಷೆಕಟ್ಟುವವರು ಬಹುಶಃ ವರ್ಗವನು ಸಂಪಾದಿಸುವರು.

ವದು ಮತ್ತು ಗೊತ್ತುಮಾಡಿದ ೮-೧೦ ದಿನಗಳಲ್ಲಿಯೇ ಮದುವೆ ನಿಶ್ಚಿತವಾಗಿ ಆಗುವದು. ಸೊಸೆ ಇಲ್ಲವೆ ಅಳಿಯ ಮೊದಲು ಕೆಲದಿನ ಬಹಳಷ್ಟು ಪ್ರೇಮಳ ಸ್ವಭಾವದವರು ಎನಿಸುವರು. ಆದರೆ ಜುಲೈ ನಂತರ ಈ ಸ್ವಭಾವ ಬಹಳಷ್ಟು ಕಡಿಮೆಯೆನಿಸುವದು. ಮಕ್ಕಳ ಉತ್ಕರ್ಷಕ್ಕೆ ಕೂಡ ಫೆಬ್ರುಅರಿಯಿಂದ ಜುಲೈ ವರೆಗಿನ ಕಾಲವು ಅತ್ಯಂತ ಅನುಕೂಲವಿರುವದು. ಅವರವರ ದೈವದಂತೆ ಅವರವರ ಉತ್ಕರ್ಷವಾಗುವದು. ಮತ್ತು ಅವರದೂ ನಿಮ್ಮದೂ ಚನ್ನಾಗಿ ಕೂಡಿ ನಡೆಯುವದು.

ಧಂದೆ ಮತ್ತು ಕೂಲಿಯುವರಿಗೆ ನವಂಬರ ೨೦ ರಿಂದ ಫೆಬ್ರುಅರಿ ೭ರ ವರೆಗಿನ ಕಾಲವು ವಿಲಕ್ಷಣ ಮತ್ತು ಅಸಹ್ಯ ತೊಂದರೆಯದು. ಆದರೆ ಉಳಿದಕಾಲ ಬಹಳ ಉತ್ತಮ. ಫೆಬ್ರುಅರಿ ೧೦ ರಿಂದ ಅದು ಹೆಚ್ಚು ಹಿತದ್ದು. ಮತ್ತು ಉತ್ಕರ್ಷದ್ದಾಗಿ ಪರಿಣಮಿಸುವದು. ನೋಕರರಿಗೆ ಮೇ ೨೯ ರಿಂದ ಜೂನ ೨೯ ಇಲ್ಲವೆ ಆಗಸ್ಟ ೨೩ ರಿಂದ ಸಪ್ಟಂಬರ ೧೭ ಈ ಅವಧಿಯಲ್ಲಿ ಮೇಲಿನ ಗ್ರೇಡು ಅವಶ್ಯವಾಗಿ ದೊರೆಯುವದು. ಆದರೆ ಬದಲಿಯಾದರೆ ಬೇಡಾದ ಸ್ಥಳಕ್ಕೆ ಆಗುವದು ಮತ್ತು ಈ ಬಗ್ಗೆ ವರಿಷ್ಠರೊಡನೆ ವಾಗ್ಯುದ್ಧದ ಕಟು ಪ್ರಸಂಗವೂ ಬರುವದು. ಕೈಯಲ್ಲಿದ್ದ ಅಧಿಕಾರವನ್ನು ಬಹಳ ದರ್ಪದಿಂದ ಉಪಯೋಗಿಸುವಿರೆಂಬ ಆರೋಪವನ್ನು ಅನೇಕರು ನಿಮ್ಮ ಮೇಲೆ ಮಾಡುವರು. ಮತ್ತು ಅದರಲ್ಲಿ ಬಹಳಷ್ಟು ಸತ್ಯಾಂಶವೂ ಇರುವದು. ವ್ಯಾಪಾರಸ್ಥರು ಮತ್ತು ಸ್ವತಂತ್ರ ಧಂದೆ ಮಾಡುವವರಿಗೆ ಫೆಬ್ರುಅರಿಯಿಂದ ಯಶಸ್ಸು ಮತ್ತು ಲಾಭ ತುಂಬ ದೊರೆತು ಔದ್ಯೋಗಿಕ ಪ್ರಗತಿಯಾಗಹತ್ತುವದು ಮತ್ತು ವಿಶೇಷತಃ ಜನೆವರಿ ೨೭ ರಿಂದ ಮಾರ್ಚ ೨ ಮತ್ತು ಜೂನ ೨೯ ರಿಂದ ಸಪ್ಟಂಬರ ೧೭ ಈ ಕಾಲದಲ್ಲಿ ಬಹಳ ಲಾಭವಾಗುವದು. ಒಂದೆರಡು ಸಣ್ಣ ದೊಡ್ಡ ಸ್ಥಾವರ ಜಂಗಮ ಆಸ್ತಿಯನ್ನು ಅಂದಾಜಿಗಿಂತ ಕಡಮೆ ಬೆಲೆಗೆ ಕೊಳ್ಳುವ ಅವಕಾಶವು ಉಂಟಾಗುವದು. ಸ್ಥಾವರ ಉತ್ಪನ್ನವೂ ಚೆನ್ನಾಗಿ ಬರುವದು. ಆದರೆ ಸಪ್ಟಂಬರ ೨೩ ರಿಂದ ನವಂಬರ ೨೫ ರೊಳಗಿನ ಕಾಲದಲ್ಲಿ ನಿಸರ್ಗ ಕೋಪದಿಂದ ಇಲ್ಲವೆ ವಿರೋಧಿಗಳ ಅತಿಕ್ರಮಣದಿಂದ ಸ್ವಲ್ಪ ಹಾನಿಯಾಗುವ ಸಂಭವವಿದೆ. ವಾಹನ ಸುಖ ಚೆನ್ನಾಗಿ ಸಿಕ್ಕುವದಿಲ್ಲ. ಮೇಲಿಂದ ಮೇಲೆ ಹರಿವುಮುರಿವು ಆಗುವದು. ಫೆಬ್ರುಅರಿಯಿಂದ ಮಿತ್ರ ಸುಖ ಅನುಕೂಲ. ಆದರೆ ಎಪ್ರಿಲ ೨೬ ರಿಂದ ಜೂನ ೧೯ ರ ವರೆಗೆ ಅವರಲ್ಲಿ ಒಬ್ಬಿಬ್ಬರ ಮೇಲೆ ಆರ್ಥಿಕ ಇಲ್ಲವೆ ಶಾರೀರಿಕ ಆಪತ್ತು ಬರುವ ಸಂಭವವಿದೆ. ಜೂನ ೨೯ ರಿಂದ ಜುಲೈ ೨೭ ರ ಅವಧಿಯಲ್ಲಿ ಯಾವದೊಂದು ಯಾತ್ರೆ ಸಂಭವಿಸುವದು ಇಲ್ಲವೆ ಮನೆಯಲ್ಲಿಯೇ

## ಕನ್ಯಾ

ಈ ವರ್ಷ ಫೆಬ್ರುವರಿ ೧೦ ರ ವರೆಗೆ ನಿಮಗೆ ಕಷ್ಟದ್ದೆನಿಸಿದರೂ ಅನಂತರ ಬಹಳ ಸುಖದ್ದು ಮತ್ತು ಪ್ರಗತಿಯದು ಮತ್ತು ಒಳ್ಳೆ ಲಾಭ-ದ್ದಾಗಿ ಎನಿಸುವಲ್ಲಿ ಸಂದೇಹವಿಲ್ಲ.

ಫೆಬ್ರುಅರಿಯಿಂದ ನಿಮ್ಮ ಆರೋಗ್ಯ ಚೆನ್ನಾಗಿದ್ದರೂ ನವಂಬರ ೨೦ ರಿಂದ ಫೆಬ್ರುಅರಿ ೭ ರ ವರೆಗೆ ಬಹಳ ಕಷ್ಟದ್ದೆನಿಸುವದು. ಕಾಯಿಲೆಗಿಂತ ಅಪಘಾತದ ಅಂಜಿಕೆಯೆ ಬಹಳ. ಆದುದರಿಂದ ಈ ಅವಧಿಯಲ್ಲಿ ವಾಹನ ನಡೆಸುವದರಿಂದ, ಈಸುವದರಿಂದ, ಎತ್ತರವನ್ನು ಏರುವದರಿಂದ ಮತ್ತು ಸ್ಫೋಟಕ ಪದಾರ್ಥಗಳಿಂದ ದೂರವಿರುವದು ಅವಶ್ಯ. ಉಳಿದ ವಿಷಯಗಳಲ್ಲಿ ದೇಹಸುಖ ಬಹಳ ಉತ್ತಮ ದೊರೆಯುವದು. ಜುಲೈ ೨೫ ರ ನಂತರನಂತೂ ಅದು ಬಹಳ ಅನುಕೂಲವೆನಿಸುವದು.

ಸ್ತ್ರೀ ಸುಖಕ್ಕೆ ಈ ವರ್ಷ ಸದಾಕಾಲ ಅನುಕೂಲ. ಆದರೆ ಫೆಬ್ರುಅರಿ ೧ ರಿಂದ ಜುಲೈ ೨೫ ರ ವರೆಗೆ ಆವಳ ಆರೋಗ್ಯಕ್ಕೆ ಸ್ವಲ್ಪ ಕ್ಲೇಶವಾಗುವದು. ಅದರಂತೆ ಜುಲೈ ೨೫ ರ ನಂತರ ಆವಳ ಇಲ್ಲವೆ ನಿಮ್ಮ ತಾಯಿ ತಂದೆಗಳಲ್ಲಿ ಒಬ್ಬರಿಗೆ ಅರಿಷ್ಟಸೂಚಕವೆನಿಸುವಂತಹ ಯಾವದೊಂದು ಕ್ಲೇಶವಾಗುವ ಅಂಜಿಕೆಯಿದೆ. ಪತಿ ಪತ್ನಿಯರಲ್ಲಿ ಪೂರ್ಣ ಮತ್ಯೆಕ್ಯವುಳಿಯುವದು ಮತ್ತು ಫೆಬ್ರುಅರಿಯಿಂದ ಅವಳ ವಿಚಾರದಂತೆ ನಡೆದುಕೊಂಡರೆ ಪ್ರತಿಯೊಂದು ವಿಷಯದಲ್ಲಿ ಯಶ ಮತ್ತು ಸುಖ ಹೆಚ್ಚು ದೊರೆಯಹತ್ತುವದು. ನಿಮ್ಮ ವಿವಾಹವಿನ್ನೂ ಆಗಿರದಿದ್ದರೆ ಅದಕ್ಕೆ ಈ ವರ್ಷ ಫೆಬ್ರುಅರಿ ೧೦ ರಿಂದ ಬಾಶಿಂಗಬಲ ಚೆನ್ನಾಗಿ ಬರುವದು. ಮತ್ತು ಅಲ್ಪಾಯಾಸದಿಂದ ಅದು ಕೂಡಿಬರುವದು. ಗೊತ್ತುಮಾಡಿದ ದಿನವೇ ನಿಶ್ಚಿತವಾಗಿ ಮದುವೆಯಾಗಿಬಿಡುವದು. ವಧು-ವರ ಪೂರ್ಣವಾಗಿ ಪರಸ್ಪರ ಒಪ್ಪಿಗೆಯುವರಿರುವರು. ಬಹುಶಃ ಪರಸ್ಪರ ಪರಿಚಯದವರೇ ಆಗಿರುವರು. ಅತ್ತೆಯ ಮನೆ ಸಧನ ಮತ್ತು ಸುಶಿಕ್ಷಿತ ಇರುವದು. ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಬಹಳ ಅನುಕೂಲ ಮತ್ತು ಫೆಬ್ರುಅರಿಯಿಂದ ಕೌಟುಂಬಿಕ ಉತ್ಕರ್ಷದ ಮೂರು ನಾಲ್ಕು ಘಟನೆಗಳಂತೂ ಒಂದರ ಹಿಂದೊಂದು ಘಟಿಸುವವು. ಫೆಬ್ರುಅರಿಯಿಂದ ಜುಲೈ ವರೆಗೆ ಪ್ರಿಯ ಜನರ ಸಹವಾಸ ಸದಾ ಸಿಕ್ಕುವದು. ಆದರೆ ಡಿಸೆಂಬರ ೧೫ ರಿಂದ ಜಾನೆವರಿ ೧೩ ರ ಅವಧಿಯಲ್ಲಿ ಅಲ್ಪಸ್ವಲ್ಪ ವಿರೋಧ ಬರುವಂತಹ ಅಶ್ಲಾಘ್ಯ ಇಲ್ಲವೆ ಮತ್ಸರದ ವರ್ತನೆ. ಬಂಧುಗಳಲ್ಲಿ ಒಬ್ಬರಿಂದ ಸಂಭವಿಸುವದರಿಂದ ಮನಸ್ಸಿಗೆ ಬಹಳ ವಿಷಾದವಾಗುವ ಸಂಭವವಿದೆ. ಆದರಂತೆ ಆಪ್ತರಲ್ಲಿ ಕೆಲವರು ನಿಮ್ಮನ್ನು ನಿಷ್ಕಾರಣವಾಗಿ ನಿಂದಿಸಹತ್ತುವರಲ್ಲದೆ ನಿಮ್ಮ ಮೇಲೆ ಮತ್ಸರವನ್ನು ತಾಳುವರು.

ಮಕ್ಕಳಲ್ಲಿ ಯಾರದಾದರೂ ವಿವಾಹ ಈ ವರ್ಷ ಮಾಡುವದಿದ್ದರೆ ಫೆಬ್ರುಅರಿಯಿಂದ ಜುಲೈ ವರೆಗೆ ಅದಕ್ಕೆ ಉತ್ತಮ ಬಾಸಿಂಗ ಬಲವಿದೆ. ಅಂತೆಯೇ ಬಹಳಷ್ಟು ಪ್ರಯಾಸವಿಲ್ಲದೆ ಬಹುಶಃ ಪೂರ್ವಪರಿಚಿತ ಸ್ಥಳಕ್ಕೆ ಕೂಡಿಬರು

ಯಾವದೊಂದು ಧಾರ್ಮಿಕ ಕೃತ್ಯ ಸಂಭವಿಸುವದು. ವಿವಾಹಾದಿ ಮಂಗಳ ಕೃತ್ಯಗಳು ಜರುಗಿದರೆ ಅವುಗಳಲ್ಲಿ ಅನವಶ್ಯಕ ಖರ್ಚು ಹೆಚ್ಚಾಗುವದು. ಮನಸ್ಸಿನಲ್ಲಿ ಹುರುಹುರು ಎನಿಸುವಂಥ ಸ್ವಪ್ನ ಅನೇಕ ಸಲ ಬೀಳುವವು. ಮಹತ್ವದ ಲೇಖನಕೆಲಸಗಳು ವಿಶೇಷವಾಗಿ ಡಿಸೆಂಬರ ೩ ರ ವರೆಗೆ ಮತ್ತು ಅನಂತರ ಜನೆವರಿ ೧೦ ರಿಂದ ೨೯ ರ ವರೆಗೆ ಮೇ ೨೪ ರಿಂದ ಜುಲೈ ೨೯ ವರೆಗೆ ಮತ್ತು ಸಪ್ಟಂಬರ ೧ ರಿಂದ ವರ್ಷವಿಡೀ ಈ ಅವಧಿಯಲ್ಲಿ ಬಹಳ ಅನುಕೂಲವಾಗುವದು. ಜುಲೈ ೧೬ ರಿಂದ ಅಗಸ್ಟ ೧೬ ಈ ಅವಧಿಯಲ್ಲಿ ಯಾವದೊಂದು ಸರಕಾರಿ ಮಹತ್ವದ ಕೆಲಸವೂ ಯಶಸ್ವಿಯಾಗುವದು.

ದಾವೆ ಖಟ್ಲೆ ಖಾಸಗಿ ಸ್ಪರ್ಧೆಗಳಲ್ಲಿ ಬಹುಶಃ ಅನುಕೂಲ ವಾತಾವರಣವುಳಿದು ಪ್ರತ್ಯಕ್ಷ ತೀರ್ಪಿನಲ್ಲಿ ನಾಲ್ಕರಲ್ಲಿ ಮೂರಾದರೂ ಯಶಸ್ವಿಯಾಗುವವು. ಆದರೆ ಅದಕ್ಕಾಗಿ ಖರ್ಚು ಮತ್ತು ತೊಂದರೆಯೂ ವಿಪರೀತ. ಶತ್ರುಗಳು ಇಲ್ಲವೆ ವಿರೋಧಿಗಳಲ್ಲಿ ಒಬ್ಬಿಬ್ಬರು ದಿವಂಗತರಾಗುವ ಸಂಭವವೂ ಇದೆ.

ಜುಲೈ ೨೫ ರ ನಂತರ ಹಡೆಯುವ ಸ್ತ್ರೀಯರು ಪ್ರಸೂತಿ ಕಷ್ಟವನ್ನು ಸ್ವಲ್ಪೂ ಅನುಭವಿಸದೆ ಹಡೆಯುವರು. ಹುಟ್ಟುವ ಮಗುವೂ ಒಳ್ಳೆಯ ಸಶಕ್ತ ಮತ್ತು ಸುಂದರ ಇರುವದು. ನವಂಬರ ೨೦ ರಿಂದ ಫೆಬ್ರುಅರಿ ೬ ರ ಅವಧಿಯಲ್ಲಿ ಯಾರು ಹಡೆಯುವರೋ ಅವರಿಗೆ ಬಹುಶಃ ಗಂಡು ಹುಟ್ಟುವುದು ನಿಜ. ಆದರೆ ಅವಳು ಪ್ರಸೂತಿಕಷ್ಟವನ್ನು ಬಹಳಷ್ಟು ಅನುಭವಿಸಬೇಕಾಗುವದು. ಮತ್ತು ಫೆಬ್ರುವರಿ ೧೦ ರಿಂದ ಜುಲೈ ೨೫ ರ ಅವಧಿಯಲ್ಲಿ ಹಡೆಯುವರೋ ಅವರು ಸುಲಭವಾಗಿ ಹಡೆದರೂ ಹುಟ್ಟುವ ಮಕ್ಕಳು ಬಹಳ ಅಶಕ್ತರಿರುವರು. ಒಟ್ಟಾರೆ ಈ ವರ್ಷ ಈ ರಾಶಿಯವರು ಹೆಣ್ಣು ಹಡೆಯುವದೇ ಹೆಚ್ಚು.

ಫೆಬ್ರುಅರಿ ೧೦ ರ ನಂತರ ಪರೀಕ್ಷೆ ಕಟ್ಟುವ ವಿದ್ಯಾರ್ಥಿಗಳಲ್ಲಿ ಅನೇಕರು ಪಾಸಾಗುವರು. ಆದರೆ ಯಾರ ಪರೀಕ್ಷೆ ಫೆಬ್ರುಅರಿ ೧೦ ರಿಂದ ಮೇ ೨೯ ಮತ್ತು ಅಗಸ್ಟ ೨೩ ರಿಂದ ಸಪ್ಟಂಬರ ೧೭ ಈ ಅವಧಿಯಲ್ಲಿ ಅಗುವದೋ ಅವರು ಬಹುಶಃ ವರ್ಗವನ್ನು ಸಂಪಾದಿಸುವರು.

# ತುಲಾ

ಒಟ್ಟಾರೆ ಈ ರಾಶಿಯವರಿಗೆ ಈ ವರ್ಷ ಕೆಲ ಸಂದರ್ಭಗಳಲ್ಲಿ ಮನಸ್ಸಿನ ವಿರುದ್ಧ ವರ್ತಿಸುವ ಪ್ರಸಂಗ ಬಂದರೂ ಬಹುತರ ವಿಷಯಗಳಲ್ಲಿ ಸುಪ್ರಸನ್ನರಾಗಿ ಉಳಿದು ಉತ್ತಮ ಭಾಗ್ಯೋದಯವಾಗುವಂತಹ ಯೋಗವಿದೆ ಎಂಬಲ್ಲಿ ಸಂದೇಹವಿಲ್ಲ.

ಈ ರಾಶಿಯವರ ಆರೋಗ್ಯ ಇಡೀ ವರ್ಷ ಬಹಳಷ್ಟು ನಿರೋಗಿಯುಳಿಯುವ ಯೋಗವಿದ್ದರೂ ಡಿಸೆಂಬರ ೧೫ ರಿಂದ ಜನೆವರಿ ೧೩ ರ ವರೆಗಿನ ಅವಧಿಯಲ್ಲಿ ಸಣ್ಣ ದೊಡ್ಡ ಅಪಘಾತದ ಅಂಜಿಕೆಯಿದೆ. ಮುಂದೆ ಫೆಬ್ರುಅರಿ ೧೦ ರಿಂದ ಜುಲೈ ೨೫ ರ ವರೆಗೆ ಒಟ್ಟಗೆ ಇರುವ ಚತುರ್ಥ ಶನಿ ಮತ್ತು ಗುರುವಿನಿಂದ ಆರೋಗ್ಯ ಅಷ್ಟೊಂದು ಸರಿಯಿಲ್ಲೆಂದು ಹೇಳುವಂತೆ ನೆಗಡಿ ಕೆಮ್ಮು ವಾತದಿಂದ ಮೈನೋವು ಇಲ್ಲವೆ ಮಧುಮೇಹವಾದ ಭಾಸವಾಗುವದು. ಅಲ್ಲದೆ ಕಿರುಕಳ ಸ್ವರೂಪದ ವಿಕಾರದ ಅಂಜಿಕೆಯೂ ಇದೆ. ಉಳಿದ ವಿಷಯಗಳಲ್ಲಿ ದೇಹ ಸುಖಕ್ಕೆ ಈ ವರ್ಷ ಚತುರ್ಥ ಗುರುಶನಿಯಿದ್ದರೂ ಬಹಳ ಸುಖಕರವೆನಿಸುವದು. ಬಹಳ ಕಾಲ ಅತಿಪ್ರಿಯ ಜನರ ಸಹವಾಸವೂ ಸಂಭವಿಸುವದು. ಮತ್ತು ಕೌಟುಂಬಿಕ ಉತ್ಕರ್ಷದ ಮತ್ತು ಆನಂದದ ಕೆಲವಾದರೂ ಸಂಗತಿಗಳು ಒಂದರಹಿಂದೊಂದರಂತೆ ಸಂಭವಿಸಿ ಮನಸ್ಸು ಬಹಳ ಪ್ರಸನ್ನ ಮತ್ತು ಆನಂದದಲ್ಲಿ ಉಳಿಯುವದು. ಆದರೂ ಅಕ್ಟೋಬರ ೩೦ರ ನಂತರದ ವಾರದಲ್ಲಿ ಮನಸ್ಸಿಗೆ ಹತ್ತುವಂಥ ಯಾವದೊಂದು ಅಪಕೃತಿಯು ಆಪ್ತರಲ್ಲಿಯ ಯಾವನೊಬ್ಬ ಪ್ರೀತಿಯ ಮನುಷ್ಯನೇ ಮಾಡುವ ಸಂಭವವಿದೆ.

ಈ ವರುಷ ನಿಮಗೆ ಸ್ತ್ರೀ ಸಹವಾಸದಲ್ಲಿ ಸಹಸಾ ವ್ಯತ್ಯಯ ಬರಲಾರದು. ಆದರೆ ವ್ಯತ್ಯಯ ಬಂದರೆ ಇಷ್ಟ ಕಾರ್ಯಕ್ಕಾಗಿಯೇ ಅದು ಸಂಭವಿಸಿದರೆ ಸಪ್ಟಂಬರ ೨೩ ರಿಂದ ಅಕ್ಟೋಬರ ೫ ರೊಳಗಾಗಿ ಸಂಭವಿಸಬಹುದು ಆದರೂ ಸಹವಾಸ ಸುಖದಲ್ಲಿ ವ್ಯತ್ಯಯ ಬರದಿದ್ದರೂ ಮತಾಂತರವಾಗುವದರಿಂದ ಮೇಲಿಂದ ಮೇಲೆ ಸಹವಾಸದಲ್ಲಿ ವ್ಯತ್ಯಯ ಬರಬಹುದು. ಇಬ್ಬರ ವಿಚಾರಗಳು ಸಯುಕ್ತಿಕ ಮತ್ತು ಪ್ರಪಂಚಕ್ಕೆ ಹಿತಕರವಾಗಿದ್ದರೂ ಅವನ್ನು ಕಾರ್ಯರೂಪದಲ್ಲಿ ತರುವ ಮಾರ್ಗ ಮಾತ್ರ ಭಿನ್ನ ಭಿನ್ನವಾಗಿರುವದರಿಂದ ಪ್ರತಿಯೊಬ್ಬರು ಎರಡನೆಯವರಿಗೆ ಅಪ್ರಬುದ್ಧರೆನ್ನಹತ್ತುವರು. ಇನ್ನೂ ನಿಮ್ಮ ವಿವಾಹವಾಗಿರದಿದ್ದರೆ ಮತ್ತು ಈ ವರ್ಷ ಮಾಡುವದಿದ್ದರೆ ಅದಕ್ಕೆ ಮಾತ್ರ ಫೆಬ್ರುಅರಿ ೧೦ ರ ವರೆಗೆ ಬಾಶಿಂಗ ಬಲ ಅಂದರೆ ಗುರು ಬಲವಿದ್ದಷ್ಟು ಮುಂದೆ ಇರುವದಿಲ್ಲ. ಒಂದು ವೇಳೆ ಈ ಅವಧಿಯಲ್ಲಿ ಆದರೂ ಬಹಳ ತೊಂದರೆಯಿಂದ ಆಗುವದು. ಬೀಗರಿಂದ ಬಹಳ ದಬ್ಬಾಳಿಕೆಯನ್ನು ಸಹಿಸಬೇಕಾಗುವದು. ಅದರಂತೆ ಫೆಬ್ರುಅರಿ ವರೆಗೆ ಅದಷ್ಟು ವಿವಾಹಗಳಲ್ಲಿ ವಧೂ ವರ ಬಹಳ ಅನುರೂಪ ಇರುವರು. ಅನಂತರ ಲಗ್ನವಾಗುವವರು ಅಷ್ಟೊಂದು ಅನುರೂಪ ಇರುವದಿಲ್ಲ. ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಅಂತರ್ಗತ ಕಲಹಯುಕ್ತವಾಗಿದ್ದರೂ ಬಾಹ್ಯದಲ್ಲಿ ಅದು ಚೆನ್ನಾಗಿ ದೊರೆತಿದೆಯೆಂದೇ ಒಪ್ಪಬೇಕಾಗುವದು.

ಅದರಂತೆಯೇ ನಿಮ್ಮ ಮಕ್ಕಳ ಲಗ್ನ ಮಾಡುವದಿದ್ದರೆ ಅದಕ್ಕೂ ಮೇಲಿನಂತೆ ಫೆಬ್ರುಅರಿ ವರೆಗೆ ಬಹಳ ಉತ್ತಮ ಆದರೆ ಅನಂತರ ಸಾಧಾರಣ ಬಾಶಿಂಗಬಲವಿದೆ. ಫೆಬ್ರುಅರಿಯಿಂದ ಮುಂದೆ ವಿವಾಹವಾದರೆ ಅನೇಕ ವಿಷಯಗಳಲ್ಲಿ ಮನಸ್ಸಿನ ವಿರುದ್ಧ ಒಪ್ಪಿಗೆ ಕೊಡಬೇಕೆಂಬ ದುರಾಗ್ರಹವನ್ನು ಲಗ್ನವಾಗುವ ನಿಮ್ಮ ಮಕ್ಕಳೇ ತಾಳುವರು. ಸೊಸೆ ಇಲ್ಲವೆ ಅಳಿಯ ರೂಪದಿಂದ ಬುದ್ಧಿಯಿಂದ ಇಲ್ಲವೆ ಶಿಕ್ಷಣದಿಂದ ಒಳ್ಳೆಯವರು ಇರುವರು. ಆದರೆ ನಿಮಗೆ ಸ್ವತಃಕ್ಕೆ ಮಾತ್ರ ಅವರಷ್ಟೊಂದು ಸೇರುವರೆಂದು ಹೇಳಲಿಕ್ಕೆ ಬರುವದಿಲ್ಲ. ವಿವಾಹ ಯಾವದೇ ಕಾಲಕ್ಕೆ ಆಗಲೊಲ್ಲದೇಕೆ, ಯಾವದೊಂದು ಅನಪೇಕ್ಷಿತ ಅಡಚಣೆಯಿಂದ ಗೊತ್ತಾದ ಮುಹೂರ್ತ ಬಿಟ್ಟು ಎರಡನೆಯ ಮುಹೂರ್ತವನ್ನು ಹುಡುಕಬೇಕಾಗುವದು. ಇದು ಮಾತ್ರ ನಿಶ್ಚಿತ. ಮಕ್ಕಳ ಆರೋಗ್ಯ ಪಿತ್ತವಿಕಾರದಿಂದ ಮೇಲಿಂದ ಮೇಲೆ ಕೆಡುವದು ಮತ್ತು ಎಪ್ರಿಲ ೨೬ ರಿಂದ ಜೂನ ೧೯ ರ ವರೆಗೆ ಇದು ವಿಶೇಷವಾಗಿ ಪ್ರತ್ಯಯಕ್ಕೆ ಬರುವದು. ಕನ್ಯೆಗಿಂತ ಗಂಡು ಹುಡುಗರೇ ಈ ಸಲ ನಿಮ್ಮ ಮಾತಿನಂತೆ ನಡೆಯುವರು. ಎಲ್ಲರ ಉನ್ನತಿಗೆ ಮಾತ್ರ ಈ ವರುಷವಿಡೀ ಚತುರ್ಥಶನಿ ಮತ್ತು ಗುರು ಇದ್ದಾಗಲೂ ಪ್ರಗತಿಧಾಯಕವಿದೆ. ಆದರಲ್ಲಿಯೂ ಫೆಬ್ರುವರಿ ೧ ರ ವರೆಗೆ ಮತ್ತು ಅನಂತರ ಜೂನ ೧೯ ರಿಂದ ಅಗಸ್ಟ ೮ ಮತ್ತು ಸಪ್ಟಂಬರ ೨೩ ರಿಂದ ಮುಂದಿನ ಅವಧಿಯಲ್ಲಿ ಅದು ಹೆಚ್ಚು ಕಂಡು ಬರುವದು, ಗಂಡು ಮಗುವಿನ ಅಥವಾ ಹೆಣ್ಣು ಹುಡಿಗೆಯ ಹೆಸರು ಎಲ್ಲೆಡೆಗೂ ಕೇಳಿಬರುವಷ್ಟು ಉತ್ಕರ್ಷದ್ದಾಗುವದು.

ನಿಮ್ಮ ಸ್ವಂತ ಧಂದೆ ಅಥವಾ ನೌಕರಿಗೂ ಈ ವರ್ಷ ಅನುಕೂಲವೇ. ಪ್ರಚಂಡ ಯಶಸ್ಸು ಸಿಕ್ಕು ಅನೇಕರಿಗೆ ಅವರ ಇಚ್ಛೆಗಿಂತ ಹೆಚ್ಚು ಭಾಗ್ಯೋದಯವಾದಂತೆನಿಸುವದು. ಶನಿ ಗುರು ಮೂರನೆಯವರಿರಲಿ ಅಥವಾ ನಾಲ್ಕನೆಯವರಿರಲಿ ಯಾರ ಜನ್ಮಕುಂಡಲಿಯಲ್ಲಿ ಆ ಸ್ಥಾನ ಮತ್ತು ರಾಶಿ ಬಲಿಷ್ಠವಾಗಿದ್ದರೆ ಸಾಕು. ನೌಕರರಿಗೆ ಜೂನ ೧೯ ರಿಂದ ಅಗಸ್ಟ ೮ ಇಲ್ಲವೆ ಸಪ್ಟಂಬರ ೨೩ ರಿಂದ ನವಂಬರ ೫ ರ ಅವಧಿಯಲ್ಲಿ ಮೇಲಿನ ಗ್ರೇಡು ನಿಧಾನ ಪ್ರಮೋಶನ್ನಂತೂ ನಿಶ್ಚಿತವಾಗಿ ಸಿಕ್ಕುವದು ಮತ್ತು ವರಿಷ್ಠರ ಮರ್ಜಿ ಎಪ್ರಿಲ ೨೬ ರಿಂದ ಜೂನ ೧೯ ರ ವರೆಗೆ ಸ್ವಲ್ಪ ಕಡಮೆಯಾಗಿದೆ

ಯೆಂದೆನಿಸಿದರೂ ಉಳಿದ ವೇಳೆಯಲ್ಲಿ ಅದು ಬಹಳ ಅನುಕೂಲ. ಬದಲಿಯಾದರೆ ಅದು ಕೆಲಸದ ಮತ್ತು ವಸತಿಯ ಹಾಗೂ ಇತರ ಎಲ್ಲ ವಿಷಯಗಳಲ್ಲಿ ಅತ್ಯಂತ ಸುಖ ಸೌಕರ್ಯದ ಸ್ಥಳಕ್ಕೆ ಬಹುಶಃ ನೀವು ಅಪೇಕ್ಷಿಸಿದ ಸ್ಥಳಕ್ಕೇ ಆಗುವದು. ಆದೇರೀತಿ ವ್ಯಾಪಾರಸ್ಥರು ಇಲ್ಲವೆ ಬುದ್ಧಿಜೀವಿಗಳು ಅಥವಾ ಶ್ರಮಜೀವಿಗಳು ಇವರಿಗೂ ಈ ವರ್ಷ ಅತ್ಯಂತ ಲಾಭದ್ದು. ಧಂದೆಯಲ್ಲಿ ಪತ್ತು ಮತ್ತು ಸಮಾಜದಲ್ಲಿ ಪ್ರತಿಷ್ಠೆಯನ್ನು ಹೆಚ್ಚಿಸುವಂತಹದು. ಅದರಿಂದ ಅನೇಕರ ಹೆಸರು ಪತ್ರಿಕೆಗಳಲ್ಲಿ ಪ್ರಸಿದ್ಧವಾಗುವದರಿಂದ ಜನರಲ್ಲಿಯೂ ಕೀರ್ತಿ ಹಬ್ಬುವದು. ಪ್ರಗತಿಗೆ ಮಾತ್ರ ನವಂಬರ ೨೦ ರಿಂದ ಫೆಬ್ರುಅರಿ ೭ ರ ಅವಧಿಯಲ್ಲಿ ಕೆಲ ಅಡಚಣಿ ಬರುವದರಿಂದ ಅವನ್ನು ಹೋಗಲಾಡಿಸಲಿಕ್ಕೆ ಬಹಳ ತೊಂದರೆ ಸಹಿಸಬೇಕಾಗುವದು. ಚತುರ್ಥ ಶನಿ ಮತ್ತು ಗುರು ಫೆಬ್ರುಅರಿ ೧೦ ರಿಂದ ಜುಲೈ ೨೫ ರ ಅವಧಿಯಲ್ಲಿ ಅಲ್ಪಸ್ವಲ್ಪ ಸ್ಥಾವರ ಜಂಗಮ ಆಸ್ತಿಯನ್ನು ಮಾಡಿಸಬಹುದು. ಸ್ಥಾವರ ಉತ್ಪನ್ನವಿದ್ದವರಿಗೆ ಆದು ವ್ಯವಸ್ಥಿತವಾಗಿ ಸಿಕ್ಕುವದು. ಸಮೀಪದ ಇಲ್ಲವೆ ದೂರದ ಆಪ್ತರು ಬಹಳ ಚೆನ್ನಾಗಿ ಪ್ರೇಮದಿಂದ ನಡೆದುಕೊಳ್ಳುವರು. ಮಿತ್ರಸುಖ ಅನುಕೂಲ. ಆದರೆ ಅಗಸ್ಟ ೧೬ ರಿಂದ ಸಪ್ಟಂಬರ ೧೬ ರ ಅವಧಿಯಲ್ಲಿ ಅವರಲ್ಲಿ ಯಾವನೊಬ್ಬನು ಮರಣಹೊಂದುವ ಸಂಭವವಿದೆ. ಫೆಬ್ರುಅರಿ ವರೆಗೆ ಯಾವದೊಂದು ಯಾತ್ರೆಯನ್ನು ನೀವು ಮಾಡುವಿರಿ. ಇಲ್ಲವೆ ಯಾವದೊಂದು ದೊಡ್ಡ ಧಾರ್ಮಿಕ ಕೃತ್ಯ ಮನೆಯಲ್ಲಿ ನಡೆಯುವದು. ಆರಾಮಕ್ಕಾಗಿಯೆಂದು ಬಹಳ ಪ್ರವಾಸ ಮಾಡುವಿರಿ.

ದಾವೆ ಖಟಲೆ ಇಲ್ಲವೆ ಖಾಸಗಿ ಸ್ಪರ್ಧೆಯಲ್ಲಿ ಎಪ್ರಿಲ ೨೬ ಕ್ಕಿಂತ ಮೊದಲು ತೀರ್ಪು ಹೇಳಲ್ಪಟ್ಟರೆ ಆದು ಬಹುಶಃ ನಿಮ್ಮ ವಿರುದ್ಧವಾಗುವ ಆಂಜಿಕೆ ಇದೆ. ಆದರೆ ಅನಂತರ ಹೇಳಲ್ಪಡುವ ತೀರ್ಪುಗಳು ನಿಮಗೆ ಅನುಕೂಲವೇ ಆಗುವವು.

ನವಂಬರ ೨೦ ರಿಂದ ಫೆಬ್ರುಅರಿ ೭ರ ಅವಧಿಯಲ್ಲಿ ಹಡೆವ ಸ್ತ್ರೀಯರಿಗೆ ಇಲ್ಲವೆ ಕೂಸುಗಳಿಗೆ ಸ್ವಲ್ಪ ತೊಂದರೆ ಅನುಭವಿಸಬೇಕಾಗಿ ಬಂದರೂ ಉಳಿದ ಅವಧಿಯಲ್ಲಿ ಪ್ರಸೂತಿಯು ಬಹಳ ಸುಲಭವಾಗಿ, ಬಾಲಕರು ನಿರೋಗಿಯಿರುವರು ಬಹುತರ ಜನರಿಗೆ ಈ ವರ್ಷ ಗಂಡು ಮಗು ಹುಟ್ಟುವ ಸಂಭವವಿದೆ. ಫೆಬ್ರುಅರಿ ೧೦ ಕ್ಕಿಂತ ಮೊದಲು ಇಲ್ಲವೆ ಜುಲೈ ೨೫ ರ ನಂತರ ಪರೀಕ್ಷೆ ಕಟ್ಟುವ ವಿದ್ಯಾರ್ಥಿಗಳು ನಿಶ್ಚಯವಾಗಿ ಪಾಸಾಗುವರು. ಆದರೆ ಜುಲೈ ೨೭ ರಿಂದ ಅಗಸ್ಟ ೨೩ ಇಲ್ಲವೆ ಸಪ್ಟಂಬರ ೧೭ ರಿಂದ ಅಕ್ಟೋಬರ ೧೧ರ ಅವಧಿಯಲ್ಲಿ ಪರೀಕ್ಷೆ ಕಟ್ಟುವವರು ವರ್ಗವನ್ನೂ ಸಂಪಾದಿಸುವರು.

## ವೃಶ್ಚಿಕ

ಒಟ್ಟಿಗೆ ಈ ರಾಶಿಯವರಿಗೆ ಈ ವರ್ಷ ಎಪ್ರಿಲ್ ೨೬ರ ವರೆಗೆ ಕಷ್ಟಸಾಧ್ಯವೆನಿಸಿದರೂ ಅನಂತರ ಮಾತ್ರ ಬಹುತರ ವಿಷಯಗಳಲ್ಲಿ ಅತ್ಯಂತ ಸುಸಾಧ್ಯವೆನಿಸುವದು ಮಾತ್ರ ನಿಶ್ಚಿತ.

ಎಪ್ರಿಲ ೨೬ ರ ವರೆಗೆ ಇರುವ ಅಷ್ಟಮ ಮಂಗಳನಿಂದ ಈ ರಾಶಿಯ ಜನರ ಆರೋಗ್ಯ ಸ್ವಲ್ಪ ಹೆಚ್ಚುಕಡಿಮೆಪ್ರಮಾಣದಲ್ಲಿ ಕುರಕುರಿಯದೇ ಉಳಿಯುವದು. ಆದರೂ ಈ ಗ್ರಹವೇ ಈ ರಾಶಿಯ ಸ್ವಾಮಿಯಾಗಿದ್ದುದರಿಂದ ಗಂಡಾಂತರದ ಅಂಜಿಕೆ ಸ್ವಲ್ಪೂ ಇಲ್ಲ, ಬಹುತರ ಜನರಿಗೆ ಉಷ್ಣ ವಿಕಾರ. ಆದರೆ ಕೆಲ ಜನರಿಗೆ ನೇತ್ರವಿಕಾರವಾಗುವದು ಕೆಲ ಜನರಿಗೆ ನವಂಬರ ೨೦ ರಿಂದ ಫೆಬ್ರುಅರಿ ೬ ರ ಮಧ್ಯಂತರ ಅವಧಿಯಲ್ಲಿ ವಾಹನದ ಮೇಲಿಂದ ಇಲ್ಲವೆ ಗಿಡದ ಮೇಲಿಂದ ಅಥವಾ ಯಾವದೊಂದು ಎತ್ತರದ ಸ್ಥಳದಿಂದ ಬೀಳುವದರಿಂದ ಅಪಘಾತದ ಅಂಜಿಕೆಯೂ ಇದೆ. ಆದರೆ ಫೆಬ್ರುಅರಿ ೧ ರಿಂದ ಬರುವ ತೃತೀಯ ಶನಿಯಿಂದ ಕಷ್ಟದ ಜೋರು ಬಹಳ ಕಡಿಮೆಯಾಗುವದು, ಇಲ್ಲವೆ ಪೂರ್ಣವಾಗಿ ನಿಲ್ಲುವದೂ ಶಕ್ಯವಿದೆ. ಕ್ಲೇಶಪರಿಹಾರಕ್ಕಾಗಿ ಈಗಿರುವ ಸಾಡೇಸಾತಿಯ ಕೊನೆಯ ಅಂದರೆ ಮೂರನೆ ವಿಭಾಗದ ಕೊನೆಯೊಳಗಾಗಿ ಅವನ ೨೩ ಸಾವಿರ ಜಪವನ್ನು ಮತ್ತು ಅಷ್ಟಮ ಮಂಗಳನ ಪ್ರೀತ್ಯರ್ಥ ೧೦ ಸಾವಿರ ಮಂಗಳ ಜಪವನ್ನು, ಬೆಲ್ಲ ದಾನವನ್ನೂ ಮಾಡಬೇಕು.

ಉಳಿದ ವಿಷಯದಲ್ಲಿ ದೇಹಸುಖಕ್ಕೆ ಈ ವರ್ಷ ಫೆಬ್ರುವರಿಯಿಂದ ಜುಲೈ ೨೫ ರ ವರೆಗೆ ಸಾಡೇಸಾತಿ ಇಲ್ಲದೆ ಇರುವದರಿಂದ ಬಹಳ ಉತ್ತಮವಿದೆ ಮತ್ತು ಶನಿಯ ವಕ್ರಗತಿಯಿಂದ ಜುಲೈ ೨೫ರ ನಂತರ ಮತ್ತೆ ಸಾಡೆಸಾತಿ ವರ್ಷಮುಗಿಯುವವರೆಗೆ ಅದರ ನೆಳಲು ಸ್ವಲ್ಪ ಬಿದ್ದರೂ ಅದರ ಬಾಧೆಯಾಗಲಾರದು. ಇದು ನಿಶ್ಚಿತ. ಮತ್ತು ಎಪ್ರಿಲ ೨೬ ರಿಂದ ರಾಶಿಸ್ವಾಮಿ ಮಂಗಳನ ಭ್ರಮಣ ಅನುಕೂಲವಿರುವದರಿಂದ ಆರೋಗ್ಯದಂತೆ ಮನಸ್ಸಿನಲ್ಲಿಯೂ ಒಳ್ಳೆ ಹುರುಪು ಬರುವದು.

ನಿಮ್ಮ ಮದುವೆಯಿನ್ನೂ ಆಗುವದಿದ್ದರೆ ಇಡೀ ವರ್ಷ ಒಳ್ಳೇ ಬಾಶಿಂಗಬಲವಿರುವದರಿಂದ ಅದು ಅನಾಯಾಸವಾಗಿ ಮತ್ತು ಗೊತ್ತಾದ ಸಮಯಕ್ಕೆ ಆಗುವದು. ವಧೂ ಇಲ್ಲವೆ ವರ ಪರಸ್ಪರ ಅನುರೂಪ ಇರುವರು. ಆದರೆ ಸ್ವಂತಕ್ಕಿಂತ ಅಪೇಕ್ಷಿತ ವ್ಯಕ್ತಿ ( ವಧೂ ಇಲ್ಲವೆ ವರ ) ಹೆಚ್ಚು ಸುಂದರವಿರುವರು. ಆದರೂ ಚತುರ್ಥ ಕೇತುವಿನಿಂದ ವಿವಾಹ ಸಮಾರಂಭ ಸಮಾಧಾನದಿಂದ ಪೂರ್ಣವಾಗದೆ ಸ್ವಲ್ಪ ಬೀಗರು ಅಸಂತುಷ್ಟರಾಗುವರು.

ವಿವಾಹದ ಪೂರ್ವದಲ್ಲಿ ಆದದ್ದಿರಲಿ ಇಲ್ಲವೆ ಬೇಕಾದಾಗ ಆದುದಿರಲಿ ಸ್ತ್ರೀ ಸುಖ ಮಾತ್ರ ಅನುಕೂಲ. ಅವಳ ವಿಚಾರ ಮತ್ತು ವರ್ತನೆ ಸದಾ ಒಳ್ಳೆಯವು. ನಿಮ್ಮ ಮಕ್ಕಳ ಲಗ್ನ ಮಾಡುವದಿದ್ದರೆ ಅದಕ್ಕೆ ಫೆಬ್ರುಅರಿಯಿಂದ ಹೆಚ್ಚು ಬಾಶಿಂಗ ಬಲಬರುವದು. ಸೊಸೆ ಇಲ್ಲವೆ ಅಳಿಯ ಲೋಕದೃಷ್ಟಿಯಿಂದ ಉತ್ತಮವಿರುವರು. ಆದರೆ ಸ್ವತಃ ನಿಮಗೆ ಮಾತ್ರ ಅಷ್ಟೊಂದು ಅನುಕೂಲವಿರುವದಿಲ್ಲ. ಮಕ್ಕಳ ಉತ್ಕರ್ಷಕ್ಕೆ ಬಹಳ ಉತ್ತಮವಿದೆ. ಈ ವರ್ಷ ಜುಲೈ ೨೫ ರ ನಂತರವಂತೂ ಆದು ಕಣ್ಣಿಗೆ ಕಾಣಿಸುವಷ್ಟು ತುಂಬಿ ಬರುವದು ಎಲ್ಲರ ಆರೋಗ್ಯವು ಅನುಕೂಲ ಆದರೆ ಯಾರೊಬ್ಬರಿಗೆ ಅಗಸ್ಟ ೮ ರಿಂದ ಸಪ್ಟಂಬರ ೨೩ ರ ಅವಧಿಯಲ್ಲಿ ಅಲ್ಪ ಸ್ವಲ್ಪ ಕ್ಲೇಶವಾಗುವ ಸಂಭವವಿದೆ. ಅವರೆಲ್ಲ ನಿಮ್ಮ ಮಾತಿನಂತೆ ನಡೆಯುವರು. - ಎಪ್ರಿಲ ೨೬ ರಿಂದ ಜೂನ ೧೯ ರ ಅವಧಿಯಲ್ಲಿ ಶಿಕ್ಷಣಕ್ಕಾಗಿ ಇಲ್ಲವೆ ಬೇರೆ ಮಹತ್ವದ ಕಾರ್ಯಕ್ಕಾಗಿ ಅವರು ಪರದೇಶಕ್ಕೆ ಕನಿಷ್ಠ ದೂರ ಪ್ರಾಂತಕ್ಕಾದರೂ ಹೋಗುವ ಯೋಗವಿದೆ.

ಸ್ವತಃ ನಿಮ್ಮ ಉದ್ಯೋಗ ಇಲ್ಲವೆ ನೋಕರಿ ಬಗ್ಗೆ ಈ ವರ್ಷ ಫೆಬ್ರುವರಿಯಿಂದಲೆ ಹೆಚ್ಚು ಉತ್ತಮಯೋಗವಿದೆ. ಮತ್ತು ಎಪ್ರಿಲ ೨೬ ರಿಂದ ಸಪ್ಟಂಬರ ೨೩ ರ ಅವಧಿಯಲ್ಲಿ ಮಣ್ಣು ಹಿಡಿದರೂ ಹೊನ್ನು ಆಗುವ ಯೋಗವಿದೆ. ನೋಕರರಿಗೆ ಎಪ್ರಿಲ ಕೊನೆಯವರೆಗೆ ವರಿಷ್ಠರಿಂದ ಬಹಳಷ್ಟು ತೊಂದರೆಯಾಗುವದು. ಅವರು ಮೇಲಿಂದ ಮೇಲೆ ಉಪಹಾಸ ಮಾಡುವರು. ಮತ್ತು ಕೆಟ್ಟ ಶರಾ ಬರೆಯುವರು. ಹೀಗಿದ್ದರೂ ಮೇ ತಿಂಗಳಿಂದ ತಕ್ಕಡಿ ತಿರುಗಿಮುರುಗಿ ಆಗಿ ಅವರೇ ಯಾವದೊಂದು ಪೇಚಿನಲ್ಲಿ ಬೀಳುವ ಪರಿಣಾಮವಾಗಿ ನಿಮ್ಮ ಕೂಡ ಮಿತ್ರತ್ವವನ್ನು ಇಚ್ಛಿಸುವರು ಮತ್ತು ಒಳ್ಳೆನಮ್ರರಾಗುವರು. ಅನೇಕರಿಗೆ ಮೇ ೬ ರಿಂದ ೨೪, ಜುಲೈ ೨೯ ರಿಂದ ಅಗಸ್ಟ ೧೬ ಮತ್ತು ಸಪ್ಟಂಬರ ೧ ರಿಂದ ೨೦ ಈ ಅವಧಿಯಲ್ಲಿ ಮೇಲಿನ ಗ್ರೇಡ ಕೂಡ ದೊರೆಯುವದು. ಬದಲಿಯಾದರೆ ಮಾತ್ರ ಅನಾನುಕೂಲ ಸ್ಥಳಕ್ಕೆ ಆಗುವದು. ವ್ಯಾಪಾರಸ್ಥರಿಗೆ ಇಲ್ಲವೆ ಸ್ವತಂತ್ರ ಧಂದೆ ಮಾಡುವವರಿಗೆ ಫೆಬ್ರುವರಿ ೧೦ ರಿಂದ ಜುಲೈ ೨೫ ಈ ಅವಧಿ ಬಹಳ ಉತ್ಕರ್ಷದ್ದಾಗಿ ಪರಿಣಮಿಸುವದು. ಸಾಮಾಜಿಕ ಪ್ರತಿಷ್ಠೆಯೂ ಹೆಚ್ಚುವದು ಆದರೆ ಆಪ್ತರು ಮಾತ್ರ ಅಲ್ಪ ಸ್ವಲ್ಪ ವಿಶುಷ್ಟರಾಗುವರು. ವಾಹನಗಳಿದ್ದವರಿಗೆ ಕೂಡ ಸುಖದ ಬದಲು ಕಷ್ಟವನ್ನೇ ಅನುಭವಿಸಬೇಕಾಗುವದು. ಸರಕಾರದ

ಒಂದೆರಡು ಕೆಲಸಗಳು ಒಳ್ಳೆ ಮನಸ್ಸಿನಂತೆ ಆಗುವವು. ಆದರೆ ಅದಕ್ಕಾಗಿ ಯೋಗ್ಯ ಅಯೋಗ್ಯ ಮಾರ್ಗ್ಗಗಳಿಂದ ವೆಚ್ಚವನ್ನು ಮಾಡ ಬೇಕಾಗುವದು. ಫೆಬ್ರುಅರಿಯಿಂದ ಜುಲೈ ೨೫ರ ವರೆಗೆ ಯಾವದೊಂದು ಯಾತ್ರೆ ಸಂಭವಿ ಸುವದು ಇಲ್ಲವೆ ಪರೋಪಕಾರದ ಯಾವ ದೊಂದು ಕಾರ್ಯವನ್ನು ಮಾಡುವಿರಿ. ಫೆಬ್ರು- ಅರಿಯು ವರೆಗೆ ಮಿತ್ರರಲ್ಲಿ ಕೆಲವರು ಬಹಳ ದೂರದೂರ ಸರಿದು ಹೋಗುವರು. ಅನಂತರ ಮಾತ್ರ ನಿಮ್ಮ ವೈಯಕ್ತಿಕ ತೇಜಸ್ಸನ್ನು ನೋಡಿ ಪ್ರೇಮದಿಂದ ವರ್ತಿಸುವರು. ಈ ವರ್ಷ ನಿಮಗೆ ಬಹಳ ವೆಚ್ಚವಾಗಿಯೂ ಸ್ವಲ್ಪಾದರೂ ಹಣಕೂಡಿ ಬೀಳದಿರಲಾ ರದು.

ದಾವೆ ಖಟಲೆ ಇಲ್ಲವೆ ಖಾಸಗಿ ಸ್ಪರ್ಧೆಯಲ್ಲಿ ಎಪ್ರಿಲಗಿಂತ ಮೊದಲಾಗುವ ತೀರ್ಪು ನಿಮ್ಮ ವಿರುದ್ಧವಾಗುವ ಅಂಜಿಕೆ ಇದೆ. ಆದರೂ ಅನಂತರ ದುರ್ಲಭವೆನಿಸುವಂತಹವು ಕೂಡ ಒಳ್ಳೆ ಯಶಸ್ವಿಯಾಗಿ ಎಲ್ಲರಿಗೂ ಆಶ್ಚರ್ಯವೆನಿ ಸುವದು.

ಈ ವರ್ಷ ಹಡೆಯುವ ಸ್ತ್ರೀಯರಿಗೆ ಬಹುಶಃ ಕನ್ಯಾ ಹುಟ್ಟುತಿದ್ದರೂ ಸಪ್ಟಂಬರ ೨೩ ರಿಂದ ನವಂಬರ ೫ ರ ವರೆಗಿನ ಕಾಲವನ್ನು ಬಿಟ್ಟು ಉಳಿದ ಕಾಲದಲ್ಲಿ ಅವರು ಸುಲಭ ವಾಗಿ ಹಡೆಯುವರು. ಮಕ್ಕಳು ಕೂಡ ಒಳ್ಳೆ ನಿರೋಗಿ ಮತ್ತು ಸುಂದರ ಇರುವರು.

ಫೆಬ್ರುಅರಿ ನಂತರ ಪರೀಕ್ಷೆ ಕಟ್ಟುವವರು ಪಾಸಾಗಿಯೇ ತೀರುವರು. ಆದರೆ ಜುಲೆ ೨೫ರ ನಂತರ ಪರೀಕ್ಷೆ ಕಟ್ಟುವವರು ವರ್ಗ ವನ್ನು ಸಂಪಾದಿಸುವರು.

ರಿರುವರು. ಮಕ್ಕಳಲ್ಲಿ ಒಬ್ಬ ಮಗ ಇಲ್ಲವೆ ಮಗಳಿಗೆ ನವಂಬರ ೨೦ ರಿಂದ ಫೆಬ್ರುವರಿ ೭ರ ವರೆಗೆ ದುರಾಗ್ರಹದಿಂದ ಬಹಳ ತೊಂದರೆಯಾ ಗುವದು. ಉಳಿದವರು ಮಾತ್ರ ನಿಮ್ಮ ಮನ ಸ್ಸಿನಂತೆ ವರ್ತಿಸುವರು. ಅವರ ಉತ್ಕರ್ಷಕ್ಕೆ ಈ ವರ್ಷ ಜೂನ ೧೯ರ ನಂತರ ಬಹಳ ಉತ್ತಮವಿದೆ. ಅವರಲ್ಲಿ ಒಬ್ಬನು ಸಪ್ಟಂಬರ ೨೩ ರಿಂದ ನವಂಬರ ೫ ರ ಕಾಲದಲ್ಲಿ ವಿಶೇಷ ಭಾಗ್ಯವಂತನಾಗುವನು. ಇದು ನಿಶ್ಚಿತವೆಂದು ತಿಳಿಯಿರಿ.

ಸಂದೆ ಕೂಲಿಯುವರ ದೃಷ್ಟಿಯಿಂದ ಈ ವರ್ಷ ಸಾಡೇಸಾತಿಯುದಿದ್ದರೂ ಬಹಳ ಉತ್ತಮವಿದೆ. ಇದರಲ್ಲಿ ಸಂದೇಹವಿಲ್ಲ. ಉದ್ಯೋಗ-ಧಂದೆಯ ದೃಷ್ಟಿಯಿಂದ ವಿಚಾರ ಮಾಡಿದರೆ ಇಡೀ ವರ್ಷ ಗುರು ಮತ್ತು ಶನಿ ಭ್ರಮಣ ಪ್ರಥಮ ಮತ್ತು ದ್ವಿತೀಯ ಸ್ಥಾನ ದಲ್ಲಿ ಆಗುವದು. ಅವರು ಬಹಳ ಅನುಕೂಲ ಫಲ ಕೊಡುವರು. ಆದುದರಿಂದ ಜನೆವರಿ ಕೊನೆಯವರೆಗೆ ಅವರು ಜನ್ಮಸ್ಥರಾಗಿರುವರು.

## ಧನು

ಒಟ್ಟಾರೆ ಈ ವರ್ಷ ಪ್ರಯತ್ನದ ನಂತರ ಪರಮೇಶ್ವರ ಎಂಬಂತೆ ಬಹುತರ ವಿಷಯ ಗಳಲ್ಲಿ ಒಟ್ಟಿಗೆ ಯಶಸ್ಸು ಸಿಕ್ಕುವದೆಂದು ತಿಳಿಯಲಡ್ಡಿಯಿಲ್ಲ.

ಈ ರಾಶಿಯವರಿಗೆ ಈಗ ಸಾಡೇಸಾತಿ ಇದ್ದು ಆದಿನ್ನೂ ಸುಮಾರು ೩॥ ವರುಷ ಇರು ವದು. ಆದರೆ ಸದ್ಯಕ್ಕೆ ಅಂದರೆ ಫೆಬ್ರುಅರಿ ೧ ರಿಂದ ಮತ್ತೆ ವಕ್ರಗತಿಯಿಂದ ಜುಲೈ ೨೫ ರಿಂದ ಮುಂದೆ ಶನಿ ಇದೇ ರಾಶಿಯಲ್ಲಿ ರುವನು. ಅವನು ನಿಮ್ಮ ಆರೋ- ಗ್ಯಕ್ಕೆ ಅಷ್ಟೊಂದು ಅನುಕೂಲನಿರುವುದಿಲ್ಲ. ವಾತ-ಕಫದಿಂದ ಅಥವಾ ಕಾಲು ಕೈಗಳಲಿ ಯಾವದೊಂದಕ್ಕೆ ವಾತದಿಂದ ಇಲ್ಲವೆ ಶಸ ಘಾತದಿಂದ ತೊಂದರೆಯಾಗಬಹುದು. ಅಲ್ಲದೆ ಮನಸ್ಸು ಸದಾ ಉದಾಸೀನವಾಗುವದು. ಯಾವದೇ ಮಾತಿಗಾಗಿ ಸರಳ ವಿಚಾರ ಮಾಡದೆ ವಿಪರೀತ ಗ್ರಹಮಾಡಿಕೊಳ್ಳುವಿರಿ. ಅನೇಕರಿಗೆ ನವಂಬರ ೨೦ ರಿಂದ ಫೆಬ್ರುಅರಿ ೭ ರ ಅವಧಿಯಲ್ಲಿ ವಾಹನಗಳಿಂದ ಅಪಘಾ ತದ ಅಂಜಿಕೆಯು ಇದೆ. ಆದರೆ ಅಷ್ಟೊಂದಕ್ಕೆ ಆಳವಾದರೂ ಇಡೀ ವರ್ಷವಿರುವ ನವಮ ರಾಹುವಿನಿಂದ ಆಯುಷ್ಯಕ್ಕೆ ಮಾತ್ರ ಏನೂ ಅಂಜಿಕೆಯಿಲ್ಲ. ಆದರೂ ಕ್ಲೇಶಪರಿಹಾರಕ್ಕಾಗಿ ಮಹಾ ಮೃತ್ಯುಂಜಯ ಜಪವನ್ನು ಕನಿಷ್ಠ ೧೧ ಸಾವಿರ ಮಾಡಬೇಕು. ಉಳಿದ ವಿಷಯ ಗಳಲ್ಲಿ ದೇಹಸುಖ ಅನುಕೂಲ. ಎಪ್ರಿಲ ೧ ರಿಂದ ಜುಲೈ ೨೫ ರ ವರೆಗೆ ಗುರುವಿನಂತೆ ಶನಿಯು ದ್ವಿತೀಯ ಸ್ಥಾನಕ್ಕೆ ಬರುವದರಿಂದ ಆರೋಗ್ಯ ಮತ್ತು ಮನೋತ್ಸಾಹ ಚೆನ್ನಾಗಿ ಉಳಿದು ಹೊಸ ಹೊಸ ಸಮಾಧಾನದ ಕೆಲವು ಸಂಗತಿಗಳು ಅವಶ್ಯವಾಗಿ ಸಂಭವಿಸುವವು.

ಅವಿವಾಹಿತರಾಗಿದ್ದವರು ಈ ವರುಷ ವಿವಾಹ ಮಾಡಿಕೊಳ್ಳುವವರಿದ್ದರೆ ಇಡೀ ವರ್ಷ ಗುರು ಬಲ ಅನುಕೂಲವಿದೆ. ಅಲ್ಲದೆ ಗುರುವೆ ಈ ರಾಶಿಸ್ವಾಮಿಯಾಗಿರುವನು. ಆದರೂ ಲಗ್ನ ಗೊತ್ತಾಗಬೇಕಾದರೆ ಅಡಚಣೆ ಬರುವವು. ಎಪ್ರಿಲ ೨೬ ರ ವರೆಗೆ ವಕ್ರೀ ಸ್ತಂಭೀ ಎಂದು ಅನೇಕ ತಿಂಗಳುಗಳ ವರೆಗೆ ಇರುವ ಮಂಗಳ ನಿಂದ ಗೊತ್ತಾದ ಲಗ್ನ ಕೂಡ ಆಗುವದು ಕಠಿನ. ಕೂಡಿ ಬಂದರೂ ಆಗಬೇಕಾದರೆ ಸ್ವಲ್ಪ ತೊಂದರೆಯೇ. ವಧೂವರರು ಮಾತ್ರ ಪರ ಸ್ಪರ ಅನುರೂಪ ಇರುವರು. ಒಟ್ಟಾರೆ ಸ್ತ್ರೀ ಸುಖ ಎಪ್ರಿಲ ೨೬ ರ ವರೆಗೆ (ಮೊದಲು ವಿವಾಹವಾಗಿರುವವರಿಗೆ ಕೂಡ) ಅಷ್ಟೊಂದು ಸಮಾಧಾನಕರವಿರುವದಿಲ್ಲ. ಸಣ್ಣ ದೊಡ್ಡ ಕಾರಣಗಳಿಗಾಗಿ ಉಭಯತರಲ್ಲಿ ಮೇಲಿಂದ ಮೇಲೆ ಮತಭೇದವಾಗಿ ವಾಗ್ಯುದ್ಧದ ವರೆಗೆ ಸರತಿ ಬರುವದು. ಕೆಲ ಸಲ ಅವಳಿಗೆ ಉಷ್ಣ ದಿಂದ ತೊಂದರೆಯಾಗುವದು. ಎಪ್ರಿಲ ೨೬ ರ ನಂತರ ಮಾತ್ರ ಸ್ತ್ರೀಸುಖ ಅನುಕೂಲವಾಗ ಹತ್ತುವದು. ಮತ್ತು ಪರಸ್ಪರರ ಬಗ್ಗೆ ಸಹಾನುಭೂತಿ ಮತ್ತು ತನ್ಮಯತನ ಹೆಚ್ಚು ವದು.

ನಿಮ್ಮ ಮಕ್ಕಳ ಮದುವೆ ಈ ವರ್ಷಮಾಡು ವದಿದ್ದರೆ ಅದಕ್ಕೆ ಮಾತ್ರ ನವಂಬರ ೨೦ ರಿಂದ ಜುಲೈ ೭ ಈ ಕಾಲವನ್ನು ಬಿಟ್ಟು ಉಳಿದ ಕಾಲ ಬಹಳ ಬಾಶಿಂಗಬಲದ್ದಾಗಿದೆ. ಕೂಡಿ ಬರುವದರಲ್ಲಿ ವಿಶೇಷ ಅಡಚಣೆ ಬರುವದಿಲ್ಲ. ವರ ಇಲ್ಲವೆ ವಧುವಿಗೆ ಅವರ ಅಪೇಕ್ಷಿತ ಸ್ಥಳವು ಅವರಿಗಿಂತ ಬಹಳ ಸುಸ್ಥಿತಿಯಿಂದ ಸಿಕ್ಕು ವದು. ಸೊಸೆ ಇಲ್ಲವೆ ಅಳಿಯ ಬಹಳ ಮೆಚ್ಚಿಕೆ ಯವರು ಸಿಕ್ಕುವರು. ಜಾಣ, ವಿದ್ವಾನ್, ನಿದಾನ ಸುಶಿಕ್ಷಿತರು ಮತ್ತು ಬಹಳ ಸುಂದರ

ಆಗ ದೇಹೇಶನಾದ ಗುರು ದೇಹಸ್ಥಾನದಲ್ಲಿ ಮತ್ತು ದ್ವಿತೀಯೇಶ ಅರ್ಥಾತ್ ಧನೇಶನಾದ ಶನಿ ದೇಹಸ್ಥಾನದಲ್ಲಿ ಇರುವ ಯೋಗವಿದೆ. ಆದರೆ ಫೆಬ್ರುವರಿಯಿಂದ ಜುಲೈ ಕೊನೆಯ ವರೆಗೆ ಅವರಿಬ್ಬರೂ ಧನಸ್ಥಾನದಲ್ಲಿ ಮಕರದಲ್ಲಿ ಇರುವರು. ಆಗ ಶನಿ ಧನೇಶನಾಗಿದ್ದು ಧನ ಸ್ಥಾನದಲ್ಲಿ ದೇಹೇಶನಾದ ಗುರು ಧನಸ್ಥಾನದಲ್ಲಿ ಧನೇಶನಿಂದ ಯುಕ್ತನಾಗಿರುವ ಯೋಗ ಬರು ವದು. ಅದ್ದರಿಂದ ಅಗಸ್ಟದಿಂದ ಮುಂದೆಲ್ಲ ವಕ್ರಗತಿಯಿಂದ ಶನಿ ಮತ್ತೆ ದೇಹಸ್ಥಾನದಲ್ಲಿ ಉಳಿಯುವದರಿಂದ ಧನೇಶ ದೇಹಸ್ಥಾನದಲ್ಲಿ ಮತ್ತು ದೇಹೇಶ ಗುರು ಧನಸ್ಥಾನದಲ್ಲಿ ಹೀಗೆ ಅನ್ಯೋನ್ಯ ಅನ್ಯೋನ್ಯಾಶ್ರಯಯೋಗವಾಗು ವದು. ಈ ಮೂರೂ ಯೋಗ ಧಂದೆ ಕೂಲಿ ಗಳಿಗೆ ಪೂರಕವಿದೆ. ಅಲ್ಲದೆ ನೀವು ಮಾಡುವ ಎಲ್ಲ ಪರಾಕ್ರಮಗಳಲ್ಲಿ ಅಂದರೆ ಉಪಜೀವ ನದ ಸಲುವಾಗಿ ಮಾಡಿದ ಕಾರ್ಯಗಳಲ್ಲೆಲ್ಲ ಯ- ಶಸ್ಸು ಕೊಡುವ ತೃತೀಯ ಕೇತು ಇಡೀ ವರ್ಷ ಇರುವನು. ಇದರಿಂದ ನೋಕರರಿಗೆ ಮೇಲಿನ ಗ್ರೇಡು ಇಲ್ಲವೆ ಪ್ರಮೋಶನ ಖಾತ್ರಿಯಿಂದ ಸಿಕ್ಕುವದು. ಆದರೆ ಈ ವರ್ಷದ ಕೊನೆಯ ಭಾಗದಲ್ಲಿ ಅಂದರೆ ಅಗಸ್ಟ ೮ ರಿಂದ ನವಂಬರ ೫ ರ ವರೆಗೆ ವರಿಷ್ಠರ ಕೃಪೆ ಚೆನ್ನಾಗಿ ಲಭಿಸು ವದು. ಬದಲಿಯಾದರೆ ಒಳ್ಳೆ ಸುಖಸೌಕರ್ಯದ ಸ್ಥಳಕ್ಕೆ ಆಗುವದು. ಆದರೆ ಈ ಸಲ ಲೋಕ- ಮತ ಅಷ್ಟೊಂದು ಅನುಕೂಲವಿಲ್ಲ. ಖಾಸಗಿ ನೋಕರರಿಗೆ ಕೂಡ ಒಡೆಯರ ಹೊರತು ಉಳಿ ದವರು ಅಷ್ಟೊಂದು ಮನ್ನಣೆ ಕೊಡುವದಿಲ್ಲ. ವ್ಯಾಪಾರಸ್ಥರು ಮತ್ತು ಸ್ವತಂತ್ರ ಧಂದೆಯವ ರಿಗೆ ಕೂಡ ನವಂಬರ ೨೦ ರಿಂದ ಫೆಬ್ರುಅರಿ ೭ ರೊಳಗಿನ ಕಾಲದಲ್ಲಿ ಸರಕಾರದ ತೊಂದರೆ ಇಲ್ಲವೆ ವಿಶ್ವಾಸಘಾತದಿಂದ ಸ್ವಲ್ಪ ಹಾನಿಯಾ

ದರೂ ಉಳಿದ ವೇಳೆಯಲ್ಲಿ ಮಾತ್ರ ಒಳ್ಳೆ ಲಾಭವಾಗುವದು. ಪ್ರಗತಿ ಮತ್ತು ಪತ್ತು ಬಹಳಷ್ಟು ಹೆಚ್ಚುವವು. ಸ್ಥಾವರ ಇಲ್ಲವೆ ಜಂಗಮ ಸಂಗ್ರಹವೂ ಆಗುವ ಯೋಗವಿದೆ. ಆದರೆ ಯಾರು ತರುಣರು ಮತ್ತು ವ್ಯಸನಿಗಳಿರುವರೋ ಅವರಿಗೆ ಅದಕ್ಕಾಗಿ ಹೆಚ್ಚು ಹಣವೂ ವೆಚ್ಚವಾಗುವದು. ಬಂಧುಗಳೊಡನೆ ಮೇಲಿಂದಮೇಲೆ ವಿರೋಧ ಬಂದು ಅನೇಕ ರೊಡನೆ ಕೈಗೆ ಕೈ ಹತ್ತುವ ಪ್ರಸಂಗ ಬರುವದು ದಿವಾಣಿ ಇಲ್ಲವೆ ಫೌಜದಾರಿ ಖಟ್ಲೆಯವರೆಗೂ ವಿಕೋಪಕ್ಕೆ ಹೋಗಬಹುದು. ಯಾತ್ರೆ ಇಲ್ಲವೆ ಯಾವದೊಂದು ದೊಡ್ಡ ಧಾರ್ಮಿಕ ಕೃತ್ಯ ನಡೆಯಲಾರದು. ಮಿತ್ರಸುಖವೂ ದೊರೆಯದು. ವಾಹನ ನೋಕರ ಚಾಕರರಿಂದಲೂ ಜುಲೈ ೨೫ರ ವರೆಗೆ ಬಹಳ ತೊಂದರೆ. ಆದರೆ ಅನಂತರ ಮಾತ್ರ ಉತ್ತಮ ಸುಖ ಸಿಕ್ಕುವದು.

ದಾವೆಖಟ್ಲೆ ಇಲ್ಲವೆ ಖಾಸಗಿ ಸ್ಪರ್ಧೆಯ ಕೆಲಸಗಳಲ್ಲಿ ಯಾರ ತೀರ್ಪು ನವೆಂಬರ ೯ ರಿಂದ ಡಿಸೆಂಬರ ೩೦ ರ ವರೆಗೆ, ಮಾರ್ಚ ೨ ರಿಂದ ಮೇ ೨೯ ಮತ್ತು ಸಪ್ಟೆಂಬರ ೧೬ ರಿಂದ ಅಕ್ಟೋಬರ ೧೧ ರ ಅವಧಿಯಲ್ಲಿ ಆಗುವದೋ ಅವರಿಗೆ ಬಹುಶಃ ಯಶಸ್ಸು ಸಿಕ್ಕುವದು.

ಯಾವ ಸ್ತ್ರೀಯರು ನವೆಂಬರ ೨೦ ರಿಂದ ಫೆಬ್ರುಅರಿ ೬ ರೊಳಗಾಗಿ ಹಡೆಯುವರೊ ಅವರಿಗೆ ಅಲ್ಪಸ್ವಲ್ಪ ಕಷ್ಟವಾಗುವದು ಮತ್ತು ಹುಟ್ಟಿದ ಬಾಲಕರು ಸಶಕ್ತ ಉಳಿಯುವದಿಲ್ಲ. ಆದರೆ ಇತರ ಸಮಯದಲ್ಲಿ ಸುಲಭ ಪ್ರಸೂತಿಯ ಯೋಗವಿದೆ. ಫೆಬ್ರುಅರಿ ೧೦ ರ ವರೆಗೆ ಮತ್ತು ಅನಂತರ ಕನ್ಯಾ ಹುಟ್ಟಿದ್ದು ಪ್ರತ್ಯಯಕ್ಕೆ ಬರುವದು.

ಯಾರ ಪರೀಕ್ಷೆ ಫೆಬ್ರುಅರಿ ೧೦ ಕ್ಕಿಂತ ಮೊದಲು ಇಲ್ಲವೆ ಜೂನ ೨೯ ರ ನಂತರ ಆಗುವದೊ ಅವರಲ್ಲಿ ಬಹುತರ ಜನರು ಪಾಸ ಆದದ್ದು ಕಂಡುಬರುವದು.

# ಮಕರ

ಒಟ್ಟಾರೆ ಈ ವರ್ಷದ ಪ್ರಾರಂಭದಲ್ಲಿ ಬಹುತರ ವಿಷಯಗಳಲ್ಲಿ ಬಹಳ ಕಷ್ಟದ್ದೆನಿಸಿದರೂ ಎಪ್ರಿಲ ೨೬ ರಿಂದ ಮುಂದೆ ಅದು ಸಾವಕಾಶ ಕಡಿಮೆಯಾಗಹತ್ತುವದು ಮತ್ತು ಆಯುಷ್ಯ ಇಲ್ಲವೆ ಪ್ರತಿಷ್ಠೆಗೆ ಎಂದೂ ಯಾವ ಬಗೆಯಿಂದಲೂ ಧಕ್ಕೆ ತಟ್ಟುವದಿಲ್ಲ. ಇಷ್ಟು ಶುಭದಾಯಕವಿದೆ.

ಫೆಬ್ರುಅರಿ ಪ್ರಾರಂಭದಿಂದ ಗುರು ಮತ್ತು ರಾಶಿಸ್ವಾಮಿಯಾದ ಶನಿ ಇವರಿಬ್ಬರು ೧೨ ನೆಯವರು ಮತ್ತು ಅಷ್ಟಮರಾಹು ಇರುವದರಿಂದ ಪ್ರಕೃತಿಗೆ ಬಹಳ ಕಷ್ಟ. ಫೆಬ್ರುಅರಿಯಿಂದ ಮಾತ್ರ ಶನಿ ಗುರು ಜನ್ಮಸ್ಥ ಅಂದರೆ ಪ್ರಥಮಸ್ಥಳಕ್ಕೆ ಅರ್ಥಾತ್ ಮಕರಕ್ಕೆ ಬರುವದರಿಂದ ಪ್ರಕೃತಿ ಬಹಳ ಸುಧಾರಿಸಹತ್ತುವದು. ಆದರೂ ವರ್ಷವಿಡಿ ಇರುವ ಅಷ್ಟಮ ರಾಹುವಿನಿಂದ ಅದು ಪೂರ್ಣ ನಿರೋಗಿಯಾದಂತೆನಿಸುವದಿಲ್ಲ. ಮತ್ತೆ ಜುಲೈ ೨೫ ರಿಂದ ವಕ್ರಗತಿಯಿಂದ ದ್ವಾದಶ ಶನಿ ಬರುವದರಿಂದ ಅದು ಸ್ವಲ್ಪ ಚೆನ್ನಾಗಿ ಉಳಿದರೂ ಮಾನಸಿಕ ಸ್ಥಿತಿ ಮಾತ್ರ ಮೇಲಿಂದ ಮೇಲೆ ಕೆಡುತ್ತ ಹೋಗುವದು. ಶನಿಯ ಭ್ರಮಣ ೧೨ ನೇ ಸ್ಥಾನದಲ್ಲಿರಲಿ ೧ ರಲ್ಲಿರಲಿ ಸಾಡೇಸಾತಿಯೇ ಇರುವದರಿಂದ ಎಷ್ಟೋ ಸಂಗತಿಗಳ ಬಗ್ಗೆ ಹೇಗೆ ಆದವು, ಏನಾಗುವದು ಎಂಬ ಚಿಂತೆ ಸದಾ ಬಾಧಿಸುವದು. ಈ ಚಿಂತೆ ಕೆಲವರಿಗೆ ಸಕಾರಣವಾದರೆ ಕೆಲವರಿಗೆ ನಿಷ್ಕಾರಣವಾಗಿಯೂ ಉಂಟಾಗುವದು ಅಷ್ಟಮ ರಾಹುವಿನಿಂದ ಮನಸ್ಸಿನಲ್ಲಿ ಹುರುಹುರಿ ಎನಿಸುವಂತೆ ಅಶುಭ ಸ್ವಪ್ನ ಮೇಲಿಂದಮೇಲೆ ಬೀಳುವವು. ದ್ವಿತೀಯ ಕೇತುವಿನಿಂದ ಕುಟುಂಬದಲ್ಲಿಯ ಒಬ್ಬರಿಗೆ ಪಿಶಾಚಬಾಧೆಯಾಗುವದು. ಅದರಂತೆ ಮನೆಯಲ್ಲಿ ಯಾವಾಗಲೂ ಮತವಿರೋಧ, ಕಲಹ ಮತ್ತು ದುಸುಮುಸಿ ಹೆಚ್ಚುವದು. ಆದರೆ ಫೆಬ್ರುಅರಿಯಿಂದ ಗುರು ಜನ್ಮಸ್ಥ ಅಂದರೆ ದೇಹಸ್ಥಾನಕ್ಕೆ ಬರುವದರಿಂದ ತುಂಬಿ ಬರದಂಥ ಹಾನಿಯಾಗುವ ಅಂಜಿಕೆ ಇಲ್ಲವೇ ಇಲ್ಲ.

ಹೆಂಡತಿಯ ಆರೋಗ್ಯ ಎಪ್ರಿಲ ೧೬ ರಿಂದ ಜೂನ ೧೯ ರ ವರೆಗೆ ಅಲ್ಪಸ್ವಲ್ಪ ಕೆಡುವ ಸಂಭವವಿದೆ. ಆದರೆ ಉಳಿದ ಕಾಲದಲ್ಲಿ ಅದು ಚೆನ್ನಾಗಿ ಉಳಿಯುವದು. ಅವಳ ಸುಖ ಸಹವಾಸವೂ ಅನುಕೂಲ ಮತ್ತು ಸಮಾಧಾನಕರ. ಅನೇಕವಿಷಯಗಳಲ್ಲಿ ಅವಳ ಸಲಹೆಯಂತೆ ವರ್ತಿಸಿದರೇ ಯಶಸ್ಸು ಸಿಕ್ಕುವದು ಮತ್ತು ಲಾಭವಾಗುವದು. ಆದರೆ ಇನ್ನೂ ನೀವು ವಿವಾಹಿತರಾಗದೆ, ಈ ವರ್ಷ ಮದುವೆ ಮಾಡಿಕೊಳ್ಳುವ ಇಚ್ಛೆ ಇದ್ದರೆ ಫೆಬ್ರುಅರಿಯಿಂದ ಒಳ್ಳೆ ಬಾಶಿಂಗ ಬಲ ಇರುವದರಿಂದ ಮತ್ತು ಜನ್ಮಸ್ಥ ಶನಿಯಿಂದ ಸ್ವಲ್ಪ ಕಷ್ಟದಿಂದಲಾದರೂ ಖಾತ್ರಿಯಿಂದ ನೆರವೇರುವದು ಮತ್ತು ಜುಲೈ ೨೫ ರ ನಂತರ ಆಯಾಸವಿಲ್ಲದೆ ಮದುವೆಯಾಗುವದು. ವಧು ಇಲ್ಲವೆ ವರ ಒಳ್ಳೆ ರೂಪವಂತರಿದ್ದರೂ ಸ್ವಲ್ಪ ಅವರ ಸ್ವಭಾವಧರ್ಮ ಮೊದಲು ಬಹಳ ದಿನ ಅಷ್ಟೊಂದು ಅನುಕೂಲವುಳಿಯದೆ ಮನಸ್ಸು ಬಹಳ ವ್ಯಥಿತವಾಗುವದು.

ಅದರಂತೆ ಮಕ್ಕಳ ಮದುವೆ ಮಾಡುವವರಿದ್ದರೆ ಅದಕ್ಕೆ ಕೂಡ ಫೆಬ್ರುಅರಿ ೧೦ ರಿಂದ ಬರುವ ಪ್ರಥಮ ಗುರು ಬಾಶಿಂಗಬಲಕ್ಕೆ ಅನುಕೂಲವಿರುವದರಿಂದ ಅಲ್ಪಾಯಾಸದಿಂದ ಕೂಡಿಬಂದು ಅಂದಾಜಿಗಿಂತ ಕಡಿಮೆ ವೆಚ್ಚದಲ್ಲಿಯೇ ಲಗ್ನವಾಗಿಹೋಗುವದು. ಯಾವದೇ ಬಗೆಯ ಕಿಟಕಿಟ ಇಲ್ಲವೆ ಅಡಚಣೆ ಬಾರದೇ ಖಾತ್ರಿಯಿಂದ ಲಗ್ನವಾಗುವುದು. ಆದರೆ ಜುಲೈ ೨೫ ರ ನಂತರ ಮಾತ್ರ ಏನಾದರೊಂದು ಮನೆತನದ ಅಡಚಣೆಯಿಂದ ತೊಂದರೆ ಮತ್ತು ಹೆಚ್ಚು ವೆಚ್ಚವಾಗುವದು ಇಷ್ಟೇ. ಸೊಸೆ ಇಲ್ಲವೆ ಅಳಿಯ ಅಷ್ಟೊಂದು ಮನಸ್ಸಿಗೆ ಒಗ್ಗುವಂತಹವರಿರುವರು. ಸುಂದರರು, ಬುದ್ಧಿವಂತರು ಮತ್ತು ಸುದೈವಿಗಳು ಇದ್ದು ಬಹುಶಃ ಪೂರ್ವಪರಿಚಿತ ಮನೆತನದವರೂ ಇರುವ ಸಂಭವವಿದೆ. ಮಕ್ಕಳ ಉನ್ನತಿಗೆ ಫೆಬ್ರುಅರಿಯಿಂದ ಹೆಚ್ಚು ಜೋರು ಬೀಳುವದು. ಆದರೆ ನಿಮ್ಮ ನಿಮ್ಮಲ್ಲಿ ಮಾತ್ರ ಅಷ್ಟಕ್ಕಷ್ಟೇ ಉಳಿಯುವದು. ಅಂತಃಕರಣಕ್ಕಿಂತ ಉಪಚಾರವೇ ಬಹಳ.

ಧಂದೆ ಕೂಲಿಯ ದೃಷ್ಟಿಯಿಂದ ಈ ವರ್ಷ ಸಾಧಾರಣವೇ ಇದೆ. ಅದರಲ್ಲಿಯೂ ಫೆಬ್ರುಅರಿ ೧೦ ರಿಂದ ಜುಲೈ ೨೫ ಈ ಅವಧಿ ಮಾತ್ರ ಸುಲಭ ಮತ್ತು ಬಹಳ ಸಮಾಧಾನಕರ. ನವೆಂಬರ ೨೦ ರಿಂದ ಫೆಬ್ರುಅರಿ ೬ ರ ವರೆಗೆ ವಿಪರೀತ ದಗದಗಿ ಸಹಿಸಬೇಕಾಗುವದು, ಕೈಗೆ ಬಂದ ದುಡ್ಡು ಬೊಕ್ಕಸದಲ್ಲಿ ಬೀಳದೆ ಅಪರಿಹಾರ್ಯವೆಚ್ಚಕ್ಕಾಗಿ ಉಪಯೋಗಿಸಬೇಕಾಗುವದು. ಯಾರದಾದರೂ ಸಾಲಕೊಡುವದಿದ್ದರೆ ಅವರ ತಗಾದೆ ಅಸಹ್ಯವೆನಿಸುವದು. ಸಾಲವಿಲ್ಲದಿದ್ದರೂ ಅದನ್ನು ತೆಗೆವ ಪ್ರಸಂಗ ಬರುವದು. ಜುಲೈ ೨೫ ರ ನಂತರ ಹಣ ಇಲ್ಲವೆ ಮಹತ್ವದ ವಸ್ತು ಕಳವಾಗಿ ಹೋಗುವ ಅಂಜಿಕೆ ಇದೆ. ನೋಕರರಿಗೆ ಮೇಲಿನವರು 'ವಿಷಕುಂಭ ಪಯೋಮುಖಂ' ಎಂಬಂತೆ ಕಪಟಿಗಳಾಗಿರುವರು. ಕೈಕೆಳಗಿನ ನವಕರರು ಕೂಡ ವಿರುದ್ಧ ವರ್ತಿಸುವರು. ಬದಲಿಯಾದರೆ ಅನುಕೂಲ ಸ್ಥಳಕ್ಕೆ ಆದರೂ ಬಹಳ ವೆಚ್ಚದ ಸ್ಥಳಕ್ಕಾಗುವದು. ವ್ಯಾಪಾರಸ್ಥರು ಮತ್ತು ಸ್ವತಂತ್ರ ಉದ್ಯೋಗ ಮಾಡುವವರಿಗೆ ಆಶ್ರಯದಾತರಿಂದ ಒದಿಕೆ ಬರುವದು. ತಪ್ಪು ತಿಳುವಳಿಕೆಯಿಂದ ಖರೀದಿ ಇಲ್ಲವೆ ವಿಕ್ರಿಯಲ್ಲಿ ಬಹಳ ತಪ್ಪು ತಡಿಗಳಾಗಿ ಹಾನಿಯನ್ನು ಸಹಿಸಬೇಕಾಗುವದು. ನವೆಂಬರ ೨೦ ರಿಂದ ಫೆಬ್ರುಅರಿ ೬ ಮತ್ತು ಅಗಷ್ಟ ೧೬ ರಿಂದ ಸಪ್ಟೆಂಬರ ೧ ಮತ್ತು ಅಕ್ಟೋಬರ ೧೧ರಿಂದ ನವೆಂಬರ ೫ ಈ ಕಾಲದಲ್ಲಿ ಬಹಳ ತೊಂದರೆಯಾಗುವದು. ಆದರೂ ಫೆಬ್ರುಅರಿ ೧೦ ರಿಂದ ಬರುವ ಪ್ರಥಮ ಅಂದರೆ

ಜನ್ಮಸ್ಥ ಗುರುವಿನ ಪರಿಣಾಮವಾಗಿ ಎಷ್ಟೇ ಕಠಿನ ಪ್ರಸಂಗಗಳು ಬಂದೂ ಮಾನ ಹಾನಿಯಾಗದೆ ಆಯುತ್ತ ಸಮಯಕ್ಕೆ ಸಂಕಟ ನಿವಾರಣವಾಗುವಂತೆ ಕುಲದೇವತೆಯ ಕೃಪೆಯಾಗುವದು. ಈ ಅನುಭವ ಅನೇಕರಿಗೆ ಬರುವದು. ಇದು ನಿಶ್ಚಿತ. ಮಿತ್ರರು ಸದಾ ನಿಮ ವಿರುದ್ಧವೆ ಆದರೆ ಅವರಲ್ಲಿ ಕೆಲವರು ಅಗಷ್ಟ ೮ ರಿಂದ ಬಹಳ ಸರಳ ರೀತಿಯಿಂದ ವರ್ತಿಸ

ತ್ತು ವರು. ಸಪ್ಟಂಬರ ೧ ರಿಂದ ೨೦ ರ ಕಾಲದಲ್ಲಿ ಬಹಳ ದೂರದ ಪ್ರವಾಸ, ಯಾತ್ರೆ ಇಲ್ಲವೆ ಮಂಗಲ ಕಾರ್ಯಕ್ಕಾಗಿ ಘಟಿಸುವದು ಮತ್ತು ದೇವಧರ್ಮ ಶ್ರದ್ಧೆ ಹೆಚ್ಚುವದು. ವಾಹನ ಸುಖ ಇಲ್ಲವೆ ಹೊಸ ಸಂಗ್ರಹದ ಯೋಗ ಸುಮಾರಾಗಿ ಇಲ್ಲವೆಂದೇ ಹೇಳಬಹುದು. ಸಮೀಪದ ಆಪ್ತರು ಸದಾ ರುಷ್ಟ ಉಳಿಯುವರು. ದಾವೆ ಖಟಲೆ ಇಲ್ಲವೆ ಖಾಸಗಿ ಸ್ಪರ್ಧೆಯ ಕಾರ್ಯಗಳಲ್ಲಿ ಶತ್ರುಗಳಿಗೆ ಬೇರೆ ಬೇರೆ ಕಾರಣಗಳಿಗಾಗಿ ಬಹಳ ಹಾನಿಯಾದರೂ ನಿಮ್ಮ ಉಡಿಯಲ್ಲಿ ಬೀಳುವ ಲಾಭವೂ ಅಷ್ಟಕ್ಕೆ. ಜುಲೈ ೨೫ ರ ನಂತರ ಒಂದೆರಡು ಪ್ರಕರಣಗಳು ವಿರುದ್ಧವಾಗುವ ಅಂಜಿಕೆ ಬಹಳ. ನಿಮ್ಮವರೆ ಪ್ರತಿಪಕ್ಷಿಗಳಿಗೆ ಫಿತೂರರಾಗುವರು.

ಫೆಬ್ರುವರಿ ೧೦ ರಿಂದ ಜುಲೈ ೨೫ ಮತ್ತು ಅಗಷ್ಟ ೨೪ ರಿಂದ ಸಪ್ಟಂಬರ ೧೭ ರ ಅವಧಿಯಲ್ಲಿ ಹಡೆಯುವ ಸ್ತ್ರೀಯರಿಗೆ ಪ್ರಸೂತಿಕಷ್ಟ ಅಷ್ಟೊಂದು ಆಗಲಾರದು. ಆದರೆ ಪ್ರಸೂತಿ ಎಂದೇ ಆಗಲಿ ಹುಟ್ಟುವ ಮಗು ಸುಂದರ ಮತ್ತು ಸಶಕ್ತ ಇರುವದು. ಬಹುತರ ಜನರಿಗೆ ಕನ್ಯಾ ಹುಟ್ಟುವ ಸಂಭವ ಹೆಚ್ಚಿಗಿದೆ.

ಯಾವ ವಿದ್ಯಾರ್ಥಿಗಳ ಪರೀಕ್ಷೆ ಫೆಬ್ರುವರಿ ೧೦ ರ ನಂತರ ಆಗುವುದೋ ಅವರು ನಿಶ್ಚಿತವಾಗಿ ಪಾಸಾಗುವರು. ಆದರೆ ಯಾರು ಫೆಬ್ರುವರಿ ೧೦ ರಿಂದ ಮೇ ೨೯, ಜೂನ ೨೯ ರಿಂದ ಜುಲೈ ೨೭ ಮತ್ತು ಅಗಷ್ಟ ೨೪ ರಿಂದ ಸಪ್ಟಂಬರ ೧೭ ಈ ಅವಧಿಯಲ್ಲಿ ಪರೀಕ್ಷೆ ಕಟ್ಟುವರೊ ಬಹುತರ ವರ್ಗವನ್ನು ಸಂಪಾದಿಸುವರು.

ಮಾಡುವದಿದ್ದರೆ ಅದಕ್ಕೆ ಬಾಶಿಂಗಬಲದ ಯೋಗ ಕಡಮೆಯೇ ಇದೆ ಅದರಲ್ಲಿಯೂ ಫೆಬ್ರುಅರಿ ೧೦ ರ ವರೆಗೆ ಸಾಧಾರಣ ಅನುಕೂಲವಿದ್ದರೂ ಇದೇ ಅವಧಿಯಲ್ಲಿ ಶನಿ ಮಂಗಳ ಪ್ರತಿದೃಷ್ಟಿಯೋಗವಾಗುವದರಿಂದ ಪ್ರತಿಶತ ೮೦ ರಷ್ಟು ಅದು ಕೂಡಿಬರದೆಮು-ರಿದೇ ಹೋಗುವ ಸಂಭವವಿದೆ ಮತ್ತು ಅದಕ್ಕಾಗಿಯೇ ಪರಸ್ಪರ ದ್ವೇಷವೂ ಹೆಚ್ಚುವದು. ಅದರಲ್ಲಿಯೂ ಯಾರದಾದರೂ ಲಗ್ನವಾದರೆ ವಧೂವರರು ವಿವಾಹೋತ್ತರ ಪರಸ್ಪರ ಪ್ರೀತಿಯ ಬದಲು ತಿರಸ್ಕಾರದಿಂದ ವರ್ತಿಸಹತ್ತುವರು. ಇದು ನಿತ್ಯವೂ ಅನುಭವಕ್ಕೆ ಬರುವದು ಆದರೆ ಮಕ್ಕಳ ಇತರ ವಿಷಯಕ ಉತ್ಕರ್ಷಕ್ಕೆ ಈ ವರ್ಷ ಕೆಟ್ಟ ಇರುವದಿಲ್ಲ. ತದ್ವಿರುದ್ಧ ಫೆಬ್ರುವರಿ ೭ ರಿಂದ ಪ್ರಗತಿಪರವಿರುವದು. ಜುಲೈ ೨೫ ರ ನಂತರ ಬಹಳ ದ್ರುತಗತಿಯಿಂದ ಅದು ಸಂಭವಿಸುವುದು. ಇದೂ ನಿಮ್ಮ ನಿದರ್ಶನಕ್ಕೆ ಬರುವದು. ಆದರೆ ನವೆಂಬರ ೨೦ ರಿಂದ ಫೆಬ್ರುವರಿ ೭ ರ ವರೆಗೆ ಅವರ ಪ್ರಕೃತಿ ಅಷ್ಟೊಂದು ಅನುಕೂಲವಿರುವದಿಲ್ಲ. ಒಬ್ಬಿ-ಬ್ಬರಿಗೆ ವಿಶೇಷ ಕಷ್ಟವಾಗುವದು. ಆದರೂ ಗಂಡಾಂತರದ ಅಂಜಿಕೆ ಸ್ವಲ್ಪೂ ಇಲ್ಲ. ಗುರುವಿನ ದೃಷ್ಟಿಯಿಂದ ಆ ಬಗೆಯ ಅಂಜಿಕೆಯಿಲ್ಲ.

## ಕುಂಭ

ಒಟ್ಟಾರೆ ಈ ವರ್ಷ ನೀವು ಬಹಳ ತೊಂದ-ರೆಗಳನ್ನು ಎದುರಿಸಬೇಕಾಗಿ ಬಂದರೂ ವರ್ಷ ಪ್ರವೇಶಕಾಲದಲ್ಲಿ ಶನಿ ಮತ್ತು ಗುರು ಏಕಾದಶ ಸ್ಥಾನದಲ್ಲಿರುವದರಿಂದ ತುಂಬಿ ಬರಲು ಶಕ್ಯವಿಲ್ಲದಂಥ ಹಾನಿಯು ಆಗಲಾರದು.

ಈ ರಾಶಿಯ ಜನರ ಆರೋಗ್ಯ ಫೆಬ್ರುಅರಿ ೧೦ ರ ವರೆಗೆ ಅನುಕೂಲವೆ. ಆದರೆ ಫೆಬ್ರುಅರಿ ೧ ರಿಂದ ಜುಲೈ ೨೫ ರ ವರೆಗೆ ಸಾಡೇಸಾತಿಯ ತಾತ್ಪೂರ್ತಿಕ ಸ್ಪರ್ಶವಾಗುವದು. ಅದು ಕೆಲಮಟ್ಟಿಗೆ ಬಾಧಿಸದಿರಲಾರದು. ಆದರೆ ಆ ಕಾಲಕ್ಕೆ ಆಗುವ ಕಷ್ಟ ಕಿವಿನೋವು ಸ್ವಲ್ಪ ಕಪಾಳ ನೋವು, ಕಾಲು ಒರಟು ಹಿಡಿಯುವದು ಮೊದಲಾದ ಕಿರುಕಳ ವಿಕಾರಗಳಾಗುವವು. ಅದರಂತೆಯೇ ಅಗಷ್ಟ ೮ ರಿಂದ ಸಪ್ಟಂಬರ ೨೪ ರವರೆಗೆ ಅನೇಕರಿಗೆ ಜ್ವರಬಾಧೆಯಾಗುವ ಸಂಭವವಿದೆ. ಇತರ ವಿಷಯಗಳಲ್ಲಿ ದೇಹಸುಖ ಫೆಬ್ರುಅರಿ ೧೦ ರ ವರೆಗೆ ಎಷ್ಟು ಉತ್ತಮವಿರುವದೋ ಅಷ್ಟು ಮುಂದೆ ಉತ್ತಮ ದೊರೆಯಲಾರದು. ಈ ತಾರೀಕಿನಿಂದ ಜುಲೈ ೨೫ ರ ವರೆಗೆ ಬಹಳಷ್ಟು ತೊಂದರೆಯಾಗುವದು. ಏಕೆಂದರೆ ಈ ಅವಧಿಯಲ್ಲಿ ರಾಶಿ ಸ್ವಾಮಿ ಶನಿ ಮತ್ತು ಗುರು ದ್ವಾದಶ ಸ್ಥಾನದಲ್ಲಿರುವರು. ಅನಂತರ ಗುರು ಇದ್ದಲ್ಲಿಯೇ ಉಳಿದರೂ ಶನಿ ಮಾತ್ರ ವಕ್ರಗತಿಯಿಂದ ಮತ್ತೆ ೧೧ ನೆಯವನಾಗುವನು. ಅರ್ಥಾತ್ ಜುಲೈ ೨೫ ರ ನಂತರ ಸ್ವಲ್ಪಾದರೂ ಅನುಕೂಲ ಕಾಲ ಬರುವದು. ವರ್ಷವಿಡಿ ಜನ್ಮಸ್ಥನಾಗಿದ್ದ ಕೇತುವಿನಿಂದ ಮಾನಸಿಕ ಸುಖ ಚೆನ್ನಾಗಿ ದೊರೆಯಲಾರದು.

ಸಪ್ತಮ ರಾಹುವಿನಿಂದ ಸ್ತ್ರೀ ಸುಖದಲ್ಲಿ ಮೇಲಿಂದ ಮೇಲೆ ವಿರಸವಾಗುವದು. ಪರಸ್ಪರರು ತಪ್ಪು ತಿಳಿವಳಿಕೆ ಮಾಡಿಕೊಳ್ಳುವಿರಿ ಆದರಿಂದ ಉಭಯತರಲ್ಲಿ ಮೇಲಿಂದ ಮೇಲೆ ದುಸುಮುಸಿ ನಡೆದದ್ದೆ. ಎಷ್ಟೋ ಸಲ ದೊಡ್ಡ ವಾಗ್ವಾದ ನಡೆಯುವದು. ಜೂನ ೧೯ ರಿಂದ ಅಗಷ್ಟ ೮ ಈ ಅವಧಿ ಅವಳ ಆರೋಗ್ಯಕ್ಕೆ ಅನುಕೂಲವಿರುವದಿಲ್ಲ. ಆದರಂತೆ ನಿಮ್ಮ ವಿವಾಹವಾಗಿರದಿದ್ದರೆ ಮತ್ತು ಈ ವರ್ಷ ಮಾಡಿಕೊಳ್ಳುವದಿದ್ದರೆ ಅಷ್ಟೊಂದು ಒಳ್ಳೆ ಬಾಶಿಂಗಬಲ ಈ ವರುಷವಿಲ್ಲ. ಆದರೆ ಏಕಾದಶ ಗುರು ಇರುವವರೆಗೆ ಅಂದರೆ ಫೆಬ್ರುಅರಿ ೧೦ ರಿಂದ ಮಧ್ಯಮ ಇರುವದರಿಂದ ವಿಶೇಷ ಪ್ರಯತ್ನಮಾಡುವದರಿಂದ ಯಶಸ್ಸು ಸಿಕ್ಕಬಹುದು. ವಧೂವರರು ಅನುರೂಪ ಇರುವರು ಮತ್ತು ಅನೇಕರು ಸ್ತ್ರೀಯೋಗದಿಂದ ಸಂಪನ್ನರೂ ಆಗುವರು. ಫೆಬ್ರುಅರಿ ೧೦ ರ ನಂತರ ಮಾತ್ರ ವಿವಾಹ ಕೂಡಿಬಂದಿದ್ದರೂ ಅದು ಕೆಲವೊಂದು ವ್ಯಾವಹಾರಿಕ ಅಡಚಣಿಗಳ ಮೂಲಕ ಆಕಲ್ಪಿತ ವಿಘ್ನಗಳು ಬಂದು ಮುರಿಯುವಸಂಭವವಿದೆ. ಇಲ್ಲವೆ ಬಹಳ ಮುಂದಕ್ಕೆ ಹಾಕಬೇಕಾಗುವದು.

ನಿಮ್ಮ ಮಕ್ಕಳ ಲಗ್ನವನ್ನು ಈ ವರ್ಷ

ಧಂದೆ ಕೂಲಿಯ ದೃಷ್ಟಿಯಿಂದ ಈ ವರ್ಷ ಸುಮಾರಾಗಿ ನಾಲ್ಕು ನಾಲ್ಕು ತಿಂಗಳ ಅಂತರದಿಂದ ಉತ್ತಮ ಕನಿಷ್ಠ ಮಧ್ಯಮ ಹೀಗೆ ಮೂರು ಭಾಗಗಳನ್ನು ಮಾಡಬಹುದು. ಅಂದರೆ ಫೆಬ್ರುಅರಿ ೧ ರ ವರೆಗೆ ಏಕಾದಶ ಶನಿ ಮುಂದೆ ತಾರೀಖು ೧೦ ವರೆಗೆ ಏಕಾದಶ ಗುರು ಇರುವದರಿಂದ ಈ ಕಾಲ ಬಹಳ ಉತ್ತಮ. ಅನಂತರ ಜುಲೈ ೨೫ ರ ವರೆಗೆ ಇವರಿಬ್ಬರೂ ದ್ವಾದಶದಲ್ಲಿರುವದರಿಂದ ಆ ಕಾಲ ಬಹಳ ಕನಿಷ್ಠ ಮತ್ತು ಅನಂತರದ ಕಾಲದಲ್ಲಿ ಶನಿ ವಕ್ರಗತಿಯಿಂದ ಏಕಾದಶಕ್ಕೆ ಬರುವದರಿಂದ ವರ್ಷದ ಕೊನೆಯವರೆಗೆ ಮಧ್ಯಮ ಸ್ಥಿತಿ. ಆದರೆ ಶನಿಯೇ ಈ ರಾಶಿಯ ಸ್ವಾಮಿಯಾಗಿರುವದರಿಂದ ಈ ವರ್ಷ ಅಲ್ಪ ಕಾಲ ಇರುವ ಮತ್ತು ಮುಂದಿನ ವರ್ಷ ನವಂಬರ ಕೊನೆಯವರೆಗೆ ಹಾಗು ಮುಂದೆ ಕಾಯಮವಾಗಿ ಏಳು ಏಳುವರಿ ವರ್ಷ ಕಾಲ ಇರುವ ಸಾಡೇಸಾತಿಯೂ ಅಷ್ಟು ಕಷ್ಟದ್ದೆನಿಸಲಾರದು. ನೋಕರರಿಗೆ ಆಯಾ ಕೆಲಸಗಳಲ್ಲಿ ಯಾವಾಗಲೂ ದಗದಗಿಯೇ ಆದರೆ ಏಪ್ರಿಲ ೨೬ ರ ವರೆಗೆ ವರಿಷ್ಠರ ಮರ್ಜಿ ಬೀಳುವಂತಹ ಕೆಲ ಘಟನೆಗಳು ಸಂಭವಿಸುವದರಿಂದ ಸದೈವ ಅವರು ಸಂತುಷ್ಟ ಉಳಿಯುವರು. ಅನೇಕರಿಗೆ ಜನೆವರಿ ೧ ರಿಂದ ಫೆಬ್ರುಅರಿ ೧೦ ಇಲ್ಲವೆ ಜೂನ ೧೯ ರಿಂದ ಅಗಷ್ಟ ಎಂಟರ ಅವಧಿಯಲ್ಲಿ ಗ್ರೇಡು ಇಲ್ಲವೆ

ಪ್ರಮೋಶನ ಖಾತ್ರಿಯಿಂದ ಸಿಕ್ಕುವದು ಬದಲಿಯಾದರೆ ಅದು ಲೋಕದೃಷ್ಟಿಯಿಂದ ಒಳ್ಳೆ ಅನುಕೂಲವೆನಿಸುವದಾದರೂ ನಿಮಗೆ ತೊಂದರೆಯದಾಗಿ ಪರಿಣಮಿಸುವದು. ಪ್ರಾಪಂಚಿಕ ದೃಷ್ಟಿಯಿಂದಲೂ ಅದು ಅನುಕೂಲವಿರಲಾರದು ನೋಕರಿಯಲ್ಲಿ ಸಂಬಳದ ಹೊರತು ಬೇರೆ ಅವಾಂತರ ಹಣ ದೊರೆಯುವ ಅವಕಾಶವಿದ್ದವರಿಗೆ ನವಂಬರ ೯ ರಿಂದ ಡಿಸೆಂಬರ ೪, ಜನೇವರಿ ೨೭ ರಿಂದ ಫೆಬ್ರುಅರಿ ೧೦, ಜುಲೈ ೨೭ ರಿಂದ ಅಗಸ್ಟ ೨೩ ಮತ್ತು ಸಪ್ಟಂಬರ ೧೭ ರಿಂದ ಅಕ್ಟೋಬರ ೧೧ ಈ ಕಾಲ ಬಹಳ ಲಾಭದ್ದೆನಿಸುವದು. ಅದರಂತೆ ವ್ಯಾಪಾರಿಗಳಿಗೆ ಮತ್ತು ಸ್ವತಂತ್ರ ಧಂದೆಯವರಿಗೆ ಮೊದಲನೇ ಭಾಗ ಬಹಳ ಉತ್ತಮ ಮತ್ತು ಕೊನೆಯದು ಸಾಧಾರಣ ಅನುಕೂಲದ್ದಾಗಿರುವದು. ಆದರೆ ನಡುವಿನಕಾಲ ಅತ್ಯಂತ ದಗದಗಿಯದೂ ಅಲ್ಪ ಸ್ವಲ್ಪ ಹಾನಿಯದಾಗಿರುವ ಅಂಜಿಕೆಯಿದೆ. ಅದುದರಿಂದ ಬಹಳ ಎಚ್ಚರಿಕೆಯಿಂದಿರಬೇಕು. ದ್ವಾದಶ ಗುರು ಮತ್ತು ಶನಿ ಇದ್ದಾಗ, ಅನೇಕರು ಇದ್ದ ಧಂದೆ ಬಿಟ್ಟು ಬೇರೆ ಧಂದೆ ಮಾಡಬೇಕಾಗುವದು. ಹಲವರಿಗೆ ಮೊದಲಿನದನ್ನು ಉಳಿಸಿಕೊಳ್ಳುವದಕ್ಕಾಗಿ ಸಾಲ ಇಲ್ಲವೆ ಉದ್ದರಿಯ ಭಾರ ಹೊರಬೇಕಾಗುವದು. ಕೆಲವಸ್ತುಗಳ ಸಂಗ್ರಹವಾದರೂ ಆಗಬಹುದು. ಮೊದಲನೆ ವಿಭಾಗದಲ್ಲಿ ಮಿತ್ರರು ಎಷ್ಟು ಒಳ್ಳೆಯವರಾಗಿ ವರ್ತಿಸುವರೊ ಮುಂದಿನ ಎರಡೂ ಕಾಲಗಳಲ್ಲಿ ಅಷ್ಟು ಕೆಟ್ಟ ರೀತಿಯಿಂದ, ನಡೆದುಕೊಳ್ಳುವರು. ದ್ವಾದಶ ಗುರು ಶನಿಇದ್ದಾಗ ಯಾವದೊಂದು ಯಾತ್ರೆ ಮಾತ್ರ ಆಕಸ್ಮಾತ್ತಾಗಿ ಸಂಭವಿಸುವದು. ವಾಹನ ಸುಖ ಅನುಕೂಲ. ಅಪ್ತರೂ ಚೆನ್ನಾಗಿ ನಡೆದುಕೊಳ್ಳುವರು.

ದಾವೆ ಖಟಲೆ ಇಲ್ಲವೆ ಖಾಸಗಿ ಸ್ಪರ್ಧೆಯ ಕೆಲಸಗಳಲ್ಲಿ ದ್ವಾದಶ ಗುರು ಶನಿ ಇದ್ದಾಗ ತೊಂದರೆಯದು ಇಲ್ಲವೆ ಅಪಯಶಸ್ಸು ಇದ್ದರೂ ಉಳಿದ ಸಮಯದಲ್ಲಿ ನಿಮ್ಮದೇ ಮೇಲ್ಗೈ. ಫೆಬ್ರುಅರಿ ೧೦ ಕ್ಕಿಂತ ಮೊದಲು ಯಾವದಾದರೊಂದರಲ್ಲಿ ಪ್ರಚಂಡ ಯಶಸ್ಸು ಕೂಡ ಸಿಕ್ಕುವದು.

ಫೆಬ್ರುಅರಿ ೧ ರ ನಂತರ ಹಡೆಯುವ ಸ್ತ್ರೀಯರು ಬಹಳ ಸುಖದಿಂದ ಪ್ರಸೂತರಾಗಿ ಪುತ್ರರತ್ನವನ್ನು ಪಡೆಯುವರು. ಆದರೆ ಫೆಬ್ರುವರಿ ೧೦ ರಿಂದ ಜುಲೈ ೨೫ ರ ಮಧ್ಯಂತರ ವೇಳೆಯಲ್ಲಿ ಹಡೆಯುವವರ ಮಕ್ಕಳು ಅಶಕ್ತರಾಗುವರು.

ಯಾರ ಪರೀಕ್ಷೆ ಫೆಬ್ರುಅರಿ ೧೦ ಕ್ಕಿಂತ ಮೊದಲು ಆಗುವದೋ ಅವರು ಖಾತ್ರಿಯಿಂದ ಯಶಸ್ವಿಯಾಗುವರು. ಮತ್ತು ೨೫ ಜುಲೈ ನಂತರ ಪರೀಕ್ಷೆ ಕಟ್ಟುವರೊ ಅದು ಹೇಗೆ ಹೇಗೊ ಉತ್ತೀರ್ಣರಾಗುವರು.

## ಮೀನ

ಒಟ್ಟಾರೆ ಈ ವರ್ಷ ಪ್ರಾಪಂಚಿಕ ಸುಖಕ್ಕಿಂತ ಆರ್ಥಿಕ ದೃಷ್ಟಿಯಿಂದ ಹೆಚ್ಚು ಉತ್ಕರ್ಷದ್ದಾಗಿದೆ. ವಿಶೇಷವಾಗಿ ಮೇ ೧ರಿಂದ ಅದು ಕಾಣಹತ್ತುವದು.

ಈ ರಾಶಿಯ ಜನರ ಆರೋಗ್ಯ ಒಟ್ಟಗೆ ಅನುಕೂಲವಿದೆ ಆದರೆ ನವಂಬರ ೧೫ ರ ವರೆಗೆ ಮತ್ತು ಸಪ್ಟಂಬರ ೨೩ ರಿಂದ ನವೆಂಬರ ೫ ರ ಅವಧಿಯಲ್ಲಿ ಸ್ವಲ್ಪ ಅನುಕೂಲವಿಲ್ಲ ಯಾರ ಜನ್ಮಕಾಲದಲ್ಲಿ ಪ್ರಥಮ ಚತುರ್ಥ ಸಪ್ತಮ ಇಲ್ಲವೆ ದಶಮ ಈ ಕೇಂದ್ರ ಸ್ಥಾನಗಳಲ್ಲಿ ಯಾವದಾದರೊಂದು ಸ್ಥಾನದಿಂದ ಶನಿಮಂಗಳರು ಪರಸ್ಪರಸಮಸಪ್ತಮ ಇಲ್ಲವೆ ದಶಮ-ಚತುರ್ಥ ಈ ದೃಷ್ಟಿಯಿಂದ ನೋಡುತ್ತಿದ್ದರೆ ನವಂಬರ ೨೦ ರಿಂದ ಫೆಬ್ರುಅರಿ ೧ರ ಅವಧಿಯಲ್ಲಿ ಅವರಿಗೆ ಸಣ್ಣ ದೊಡ್ಡ ಅಪಘಾತದ ಅಂಜಿಕೆ ಇದೆ. ಅವರು ವಿಶೇಷವಾಗಿ ವಾಹನಗಳನ್ನು ನಡೆಸಬಾರದು. ಎಲ್ಲ ವಿಷಯಗಳಲ್ಲಿ ಅನುಕೂಲತೆ ಇದ್ದರೂ ಎಪ್ರಿಲ ೨೬ರ ನಂತರವೇ ಮನಸ್ಸಿನಂತೆ ದೇಹ ಸುಖ ಲಭಿಸುವದು.

ಅವಿವಾಹಿತರಾದವರು ಈ ವರ್ಷ ವಿವಾಹ ಮಾಡಿಕೊಳ್ಳುವದಿದ್ದರೆ ಫೆಬ್ರುವರಿ ೧೦ ರಿಂದ ಉತ್ತಮ ಬಾಶಿಂಗಬಲ ಬರುವದರಿಂದ ಅನಾಯಾಸವಾಗಿ ಗೊತ್ತುಪಡಿಸಿದ ದಿನವೇ ಲಗ್ನವಾಗಿ ಹೋಗುವದು. ಆದರೆ ೨೬ ಕ್ಕಿಂತ ಮೊದಲು ಆದರೆ ಬೀಗಬೀಗರಲ್ಲಿ ಅಷ್ಟೊಂದು ಕೂಡಿನಡೆಯುವದಿಲ್ಲ. ವಧೂ ಇಲ್ಲವೆ ವರರು ಸುಲಕ್ಷಣರಿರುವರು ಮತ್ತು ಮುಂದೆ ಇಬ್ಬರದೂ ಕೂಡಿ ನಡೆಯುವದು. ಅದರಂತೆ ವಿವಾಹಿತರಿದ್ದವರಿಗೂ ಸ್ತ್ರೀ ಸುಖ ಚನ್ನಾಗಿ ಲಭಿಸುವದು. ಆದರೆ ಜನೇವರಿ ೨೯ ರಿಂದ ಎಪ್ರಿಲ ೪ ಇಲ್ಲವೆ ಎಪ್ರಿಲ ೨೧ ರಿಂದ ಮೇ ೬ ಅಥವಾ ಅಗಸ್ಟ ೧೬ ರಿಂದ ಸಪ್ಟಂಬರ ೧ ರ ಅವಧಿಯಲ್ಲಿ ನೀವು ಅಥವಾ ಅವಳು ಪರಸ್ಥಳಕ್ಕೆ ಹೋಗುವದರಿಂದ ಸಹವಾಸದಲ್ಲಿ ವ್ಯತ್ಯಯ ಬರುವದು. ಅವಳ ವಿಚಾರ ಮತ್ತು ಸಲಹೆ ಒಳ್ಳೆಯ ಮುತ್ಸದ್ದಿತನದ್ದು.

ನಿಮ್ಮ ಮಕ್ಕಳ ಲಗ್ನವನ್ನು ಈ ವರ್ಷ ಮಾಡುವದಿದ್ದರೆ ಆದಕ್ಕೆ ಫೆಬ್ರುಅರಿ ೧೦ ರಿಂದಲೇ ಒಳ್ಳೆ ಬಾಶಿಂಗಬಲವಿದೆ. ಕೂಡಿ ಬರಲಿಕ್ಕೆ ಅಷ್ಟೊಂದು ತೊಂದರೆ ಬರಲಾರದು. ಆದರೆ ಎಪ್ರಿಲ ೨೬ ರಿಂದ ಜೂನ ೧೯ ಈ ಅವಧಿಯಲ್ಲಿ ಮುಹೂರ್ತ ಗೊತ್ತಾದರೆ ಏನಾದರೂ ವೃದ್ಧಿ ಸೂತಕದಂಥ ಗೌತ್ರಿಕ ಅಡಚಣೆ ಬಂದು ಮುಹೂರ್ತವನ್ನು ಹಿಂದೆ ಮುಂದೆ ಹಾಕಬೇಕಾಗುವದು. ಅಳಿಯ ಇಲ್ಲವೆ ಸೊಸೆ ಮನಸ್ಸಿಗೆ ಒಗ್ಗುವಂತಹರಿರುವರು. ನಿಮ್ಮದು ಅವರದು ಬಹಳಷ್ಟು ಕೂಡಿ ನಡೆಯುವದು. ಅವರ ಉನ್ನತಿಗೆ ಈ ಜುಲೈ ೨೫ ರ ನಂತರ ಹೆಚ್ಚು ಅನುಕೂಲವಿದೆ ಅವರಲ್ಲಿ ಒಬ್ಬರಿಗೆ ಜಪಾನ ಅಮೇರಿಕೆ ಮತ್ತು ಇಂಗ್ಲಂಡದಂತಹ ಪರದೇಶಗಳ ಪ್ರವಾಸವೂ ಸಂಭವಿಸಬಹುದು.

ಧಂದೆ ಕೂಲಿಯವರಿಗೆ ಈ ವರ್ಷ ಮೂಲತಃ ಅನುಕೂಲವಿದ್ದು ಫೆಬ್ರುಅರಿಯಿಂದ ಬರುವ ಏಕಾದಶ ಗುರು ಮತ್ತು ಶನಿ ಒಳ್ಳೆ ಉತ್ಕರ್ಷದಾಯಕವಾಗಿರುವರು. ಫೆಬ್ರುಅರಿ ೧೦ ರಿಂದ ಜುಲೈ ೨೫ ರ ವರೆಗೆ ನೀವು ಬಯಸಿದ್ದು ಕೈಗೂಡುವದು. ನೋಕರರಿಗೆ ಜೂನ ೧೯ರಿಂದ ಅಗಸ್ಟ ೪ ರ ಅವಧಿಯಲ್ಲಿ ಗ್ರೇಡು ಇಲ್ಲವೆ ಪ್ರಮೋಶನ ದೊರೆವುದು. ವರಿಷ್ಠರ ಮರ್ಜಿ ನವಂಬರ ೨೦ ರಿಂದ ಫೆಬ್ರುಅರಿ ೭ ರ ಅವಧಿಯಲ್ಲಿ ಬಹಳ ಕಡಿಮೆಯಾದಂತೆ ಅನಿಸುವದು ಆದರೆ ಇತರ ಸಮಯದಲ್ಲಿ ಉತ್ತಮವೇ ಇರುವದು. ಬದಲಿಯಾದರೆ ಬಹಳ ದಿನಗಳಿಂದ ಮನಸ್ಸಿನಲ್ಲಿ ಇದ್ದ ಸ್ಥಳಕ್ಕೆ ಆಗುವದರಿಂದ ಮನಸ್ಸಿಗೆ ಬಹಳ ಸಂತೋಷವಾಗುವದು. ಅದರಂತೆ ವ್ಯಾಪಾರಸ್ಥರು ಇಲ್ಲವೆ ಸ್ವತಂತ್ರ ಧಂದೆಯವರಿಗೆ ನವಂಬರ ೨೦ ರಿಂದ ಜನೇವರಿ ೧೫ರ ವರೆಗೆ ಸರಕಾರಿ ಇಲ್ಲವೆ ತೇಜಿ ಮಂದಿಯ ಬಹಳ ತೊಂದರೆಯಾಗಿ ಸ್ವಲ್ಪ ಹಾನಿಯನ್ನು ಸಹಿಸಬೇಕಾಗುವದು. ಆದರೆ ಫೆಬ್ರುವರಿ ೧೦ ರಿಂದ ಒಳ್ಳೆ ದ್ರವ್ಯಲಾಭವಾಗಹತ್ತುವದರಿಂದ ಮತ್ತು ಉದ್ಯೋಗದಲ್ಲಿ ಪ್ರಗತಿ ಮತ್ತು ಪ್ರತಿಷ್ಠೆ ಜೋರಿನಿಂದ ಹೆಚ್ಚುವದರಿಂದ ಮನಸ್ಸು ಸಂತೋಷಸಾಗರದಲ್ಲಿ ಲೋಲಾಡುವದು. ಬಂಧುಗಳ ಉತ್ಕರ್ಷವೂ ಆಗುವದು. ಅನೇಕ ಸಲ ಸಮೀಪದ ಮತ್ತು ದೂರದ ಪ್ರವಾಸ ಸಂಭವಿಸುವದು. ಮಂಗಲಕಾರ್ಯ ಮತ್ತು ಕೀರ್ತಿ ಬೆಳೆಯುವಂತಹ ಪರೋಪಕಾರದ ಕೃತ್ಯ ಮತ್ತು ಯಾವದೊಂದು ದೈವಿಕ ಆರಾಧನೆಯ ಕೃತ್ಯ ಇವುಗಳಲ್ಲಿ ಎಲ್ಲವೂ ಅಥವಾ ಯಾವದೊಂದು ಬೇರೆ ಸತ್ಕೃತ್ಯ ನಿಶ್ಚಯದಿಂದ ಸಂಭವಿಸುವದು. ಅನೇಕರಿಗೆ ಆಕಸ್ಮಿಕ ದ್ರವ್ಯ ಲಾಭವೂ ಆಗುವ ಯೋಗವಿದೆ. ಕೈಕೆಳಗಿನ ನೋಕರರ, ವಾಹನಗಳ, ಸಮೀಪದ ಅಪ್ತರ ಮತ್ತು ನೆರೆಯವರ ಸುಖ

( ೮೦ನೇ ಪುಟಕ್ಕೆ ಮುಂದುವರೆದಿದೆ. )

# ಚಲಬ್ಬೆ ಚಿರಂಜೀವಿಯಾದಾಗ...

ಕಥೆಗಾರರು : **ಶ್ರೀ ಗೋವಿಂದಮೂರ್ತಿ ದೇಸಾಯಿ** ಬಿ.ಎ. (ಆನರ್ಸ) ಧಾರವಾಡ

ಚಲುಕ್ಯಸಮ್ರಾಟ ವಿಕ್ರಮಾದಿತ್ಯ ಕಂಚಿಯ ಪಲ್ಲವರನ್ನು ಗದ್ದ ವಿಜಯೋತ್ಸಾಹಕ್ಕಾಗಿ ಅವನ ಪತ್ನಿಯರು ಲೋಕೇಶ್ವರ, ತ್ರೈಲೋಕೇಶ್ವರ ದೇವಾಲಯಗಳನ್ನು ನಿರ್ಮಿಸಿದರು. ಪಲ್ಲವಶಿಲ್ಪಿ ಗುಂಡನೇ ಈ ದೇವಾಲಯಗಳನ್ನು ಬಹು ಪರಿಶ್ರಮಪೂರ್ವಕವಾಗಿ ನಿರ್ಮಿಸಬೇಕಾಗಿ ಬಂದುದು ಒಂದು ವಿಧಿವಿಲಾಸವೇ? ಆದರೆ ಇವುಗಳ ಹಿನ್ನೆಲೆಯಲ್ಲಿ ದುರಂತವೊಂದು ಅಡಗಿದೆ. ಆ ದುರಂತದ ನಾಯಕಿಯ ಕತೆ ಇಲ್ಲಿದೆ.

"ಯಾರಲ್ಲಿ......ಪರಿಚಾರಿಕೆ ದೇಮಲಾ ಇರುವಳೇನು"?

"ಇದೋ ತಮ್ಮಾಜ್ಞೆಗೆ ಸಿದ್ಧವಾಗಿ ನಿಂತಿರುವೆ."

"ಚೈತ್ರಯಾತ್ರೆಯ ಸನ್ನಾಹಗಳೆಲ್ಲಾ ಪೂರ್ಣವಾಗಿರಬೇಕು. ವೀರಪೂಜೆಗಾಗಿ ನೀರಾಜನಗಳಿಗೆ ಆಜ್ಯವನ್ನು ಹಾಕಿಡು. ಹಾಗೆಯೇ ಕಿರಿಯ ರಾಣಿ ತ್ರೈಲೋಕ್ಯಮಹಾದೇವಿಗೆ ಸಮ್ರಾಟರು ಪಲ್ಲವರ ಮೇಲೆ ದಂಡೆತ್ತಿ ಹೋಗುವ ಮುಹೂರ್ತ ಸನ್ನಿಹಿತವಾಗಹತ್ತಿದೆಯೆಂದು ತಿಳಿಸು" ಎಂದು ಕುಂತಳೇಶ್ವರಿ ಲೋಕಮಹಾದೇವಿ ದಾಸಿಗೆ ಹೇಳುತ್ತಿರುವಾಗಲೇ 'ಅಕ್ಕಾ, ಸಮ್ರಾಟರು ಆರತಿಗೆ ಬರುವ ಸಮಯವಾಯಿತೆ? ನನ್ನಿಂದೆಲ್ಲಿ ವಿಲಂಬವಾಗುವದೋ ಎಂದು ಈ ಮಲ್ಲಿಗೆಯ ಮಾಲೆಯನ್ನು ಮುಡಿಯದಲೇ, ಬಂದೆ.' ಎಂದು ಕುಂತಳೇಶ್ವರ ವಿಕ್ರಮಾದಿತ್ಯನ ಕಿರಿಯರಾಣಿ ಅಕ್ಕನಿಗೆ ಮುಡಿಸಲು ಮಾಲೆಯನ್ನು ಕೊಡುತ್ತಿರುವಾಗಲೇ "...ಪೃಥ್ವೀವಲ್ಲಭ.... ಮಹಾರಾಜಾಧಿರಾಜ... ಪರಮೇಶ್ವರ.. ವಿಕ್ರಮಾದಿತ್ಯ ಭಟಾರ..ಭೋ.... ಪರಾಕ" ಎಂಬ ಭಟ್ಟಂಗಿಗಳ ಪರಾಕಿನ ಧ್ವನಿ ದಿಗ್ದೆಶೆಯನ್ನು ಪ್ರತಿಧ್ವನಿಸಿತು. ಆದರೂ ರಾಣಿಯರು ಮಾಲೆಯನ್ನು ಮುಡಿಸುವಲ್ಲಿ ಸಮ್ರಾಟರ ಆಗಮನವನ್ನು ಗಮನಿಸಲೇ ಇಲ್ಲ. ಅಷ್ಟರಲ್ಲಿ ವಿಕ್ರಮಾದಿತ್ಯನು "ಹೆಂಗಳೆಯರಿಗೆ ಶೃಂಗಾರವೆಂದರೆ ಸಾಮ್ರಾಜ್ಯ ಕೂಡಾ ಬೇಡವಾಗುತ್ತಿದೆ" ಎಂದು ಹೇಳಿ ನಗಹತ್ತಿದನು.

"ಹಾಗೆನ್ನಬೇಡಿ ದೇವ. ತ್ರೈಲೋಕ್ಯಮಹಾದೇವಿಗೆ ನೀವು ಬರುವ ಮುನ್ನವೇ ಮಾಲೆಯನ್ನು ಮುಡಿಯಬೇಕಿತ್ತು" ಎಂದಳು ಲೋಕಮಹಾದೇವಿ.

"ಅಂದಹಾಗೆ ತ್ರೈಲೋಕಾ! ಪಲ್ಲವರನ್ನು ಗೆದ್ದು ಮರಳಿ ಬರುವಾಗ ನಿನಗೇನನು ತರಬೇಕು?" ಎಂದನು ವಿಕ್ರಮಾದಿತ್ಯ.

"ದೇವಾ, ಪಲ್ಲವಸ್ತ್ರೀಸಮೂಹದ ಮಂಗಳಸೂತ್ರಗಳನ್ನೆಲ್ಲಾ ತೆಗೆದುಕೊಂಡು ಬನ್ನಿ" ಎಂದಳು ಕಿರಿಯರಾಣಿ ತ್ರೈಲೋಕ್ಯಮಹಾದೇವಿ ವೀರರಮಣಿಯಂತೆ.

"ನಿನ್ನ ಬಯಕೆ ಏನು ಲೋಕಾ?"

"ವಿಜೇತರಾಗಿ ಕಂಚಿಯಿಂದ ಬರುವಾಗ ಶ್ರೇಷ್ಠ ಶಿಲ್ಪಿಯೊಬ್ಬನನ್ನು ಕರೆದುತನ್ನಿ. ನೀವು ಪಲ್ಲವರನ್ನು ಸೋಲಿಸಿ ಕಂಚಿಯನ್ನು ಗೆದ್ದುದಕ್ಕಾಗಿ ಲೋಕೇಶ್ವರ ದೇವಾಲಯ ಒಂದನ್ನು ಕಟ್ಟಿಸಬೇಕೆಂದಿದ್ದೇನೆ" ಎಂದಳು ಸಮ್ರಾಜ್ಞಿ ಲೋಕಮಹಾದೇವಿ.

"ಇಂಥ ಅಕ್ಕತಂಗಿಯರನ್ನು ರಾಣಿಯರೆಂದು ಪಡೆದ ನಾನೇ ಧನ್ಯ. ನನಗಂತೂ ನನ್ನ ರಕ್ತವು ಆರಿದ್ದೇ ಗೊತ್ತಿಲ್ಲ. ಯುದ್ಧವೆಂದರೆ ನನ್ನ ಬಾಹುಗಳು ಕುಣಿಯುತ್ತಿವೆ. ಇತಿಹಾಸದಲ್ಲಿ ನನ್ನ ಚರಿತ್ರೆಯನ್ನು ಬರೆಯುವಾಗ ಯುದ್ಧದಿಂದ ಮೂಡಿ ಯುದ್ಧದಿಂದಲೇ ಮುಕ್ತಾಯವಾಗಬೇಕು. ಸೇನೆ ಸಿದ್ಧವಾದಂತಿದೆ. ನಾನಿನ್ನು ಪಯಣ ಬೆಳೆಸಬೇಕು" ಎಂದು ವಿಕ್ರಮಾದಿತ್ಯನು ಎದ್ದುನಿಂತನು. ರಾಣಿಯರಿಬ್ಬರೂ ಪಲ್ಲವರ ರಾಜಧಾನಿ ಕಂಚಿಯ ಮೇಲೆ ವಿಜಯಯಾತ್ರೆ ಕೈಕೊಂಡಿರುವ ಕುಂತಳೇಶ್ವರನಿಗೆ ಆರತಿ ಮಾಡಿ ಶುಭಪ್ರಯಾಣ ಕೋರಿದರು.

ಚಲುಕ್ಯಸಮ್ರಾಟ ವಿಕ್ರಮಾದಿತ್ಯನ ಸೇನೆಯಿಂದ ಅದಾಗಲೇ ಕಂಚಿಯ ನೆಲವೆಲ್ಲಾ ಸ್ಫುರಣಗೊಳ್ಳತೊಡಗಿತು. ಜ್ಯೇಷ್ಠದಲ್ಲಿ ಚಲುಕ್ಯರ ರಾಜಧಾನಿ ಪಟ್ಟದಕಲ್ಲನ್ನು ಬಿಟ್ಟ ವಿಕ್ರಮಾದಿತ್ಯನ ಸೇನೆ ಗ್ರೀಷ್ಮ ಋತು ಕಳೆಯುವಾಗಲೇ ಕಂಚಿಯನ್ನು ಸಮೀಪಿಸಿತು. ಅದನ್ನು ಪೂರ್ವಭಾವಿಯಾಗಿಯೇ ಊಹಿಸಿದ ಪಲ್ಲವರ ದೊರೆ ನಂದಿಪೋತವರ್ಮನು ತೊಂಡಮಂಡಲದಲ್ಲಿಯೇ ಚಲುಕ್ಯರನ್ನು ಸಂಧಿಸಿದನು, ಆದರೆ ಅದೃಷ್ಟವು ನಂದಿಪೋತವರ್ಮನನ್ನು ಅದೇಕೋ ಕಡೆಗಣಿಸಿತ್ತು. ಶ್ರಾವಣದ ಮಳೆ ಕಳೆಯುವ ಮುನ್ನವೇ ವಿಕ್ರಮಾದಿತ್ಯನ ವಿಜೇತ ಸೇನೆ ಕಂಚಿಯನ್ನು ಪ್ರವೇಶಿಸಿತು. ಕೆಲ ದಿವಸ ಕಂಚಿಯಲ್ಲಿ ವಿಶ್ರಾಂತಿ ಪಡೆದು ಸೇನೆ ರಾಜಧಾನಿಗೆ ಮರಳಿತು. ವಿಜಯ ದೊರೆತದ್ದಕ್ಕಾಗಿ ಸೇನೆಯ ಮುಖದ ತುಂಬಾ ಗೆಲುವೇ ಗೆಲುವು.

ಈ ಸಲ ದೊರೆ ಬರುವಾಗ ಒಬ್ಬನೇ ಬಂದಿರಲಿಲ್ಲ. ಪಲ್ಲವರ ರೂವಾರಿಯನ್ನು ರಾಜ್ಞಿಯ ಬಯಕೆಯಂತೆ ದೇವಾಲಯದ ನಿರ್ಮಾಣಕ್ಕಾಗಿ ಕರೆತಂದಿದ್ದನು. ರಾಜಪರಿವಾರಕ್ಕೆ ದೊರೆ ಶಿಲ್ಪಿಯ ಪರಿಚಯ ಮಾಡಿಕೊಟ್ಟನು. ಅಷ್ಟರಲ್ಲಿ ಆರತಿಯನ್ನು ತಂದ ರಾಣಿಯರು "ದೇವಾ, ನೀವು ಬೇಗನೆ ಮರಳಿ ಬಂದಿರಿ. ಈ ವಿರಹ ವ್ಯಥೆಯನ್ನು ನಾವು ಹೇಗೆ ಸಹಿಸಿದೆವೆಂಬುದು ನಮಗೇ ಗೊತ್ತು" ಎಂದರು. ಆ ಮಾತು ಮಹಾಶಿಲ್ಪಿಯ ಮುಖವನ್ನೇಕೊ ಬಾಡಿಸಿತು. ತನ್ನ ಪ್ರೇಯಸಿಯ ನೆನಪಾಯಿತು. ಇನ್ನೂ ಇಪ್ಪತ್ತೈದು ವಸಂತಗಳನ್ನು ಕಾಣದ ಶಿಲ್ಪಿಯ ವಿವಾಹವಾಗಿ ಎರಡು ಸಂವತ್ಸರಗಳೇನು ಆಗಿರಲಿಲ್ಲ. ಭಾರವಾದ ಹೃದಯದಿಂದಲೇ ಬಂದಿದ್ದನು. ಬರುವಾಗಿನ ಚಿತ್ರ ಕಣ್ಣೆದುರು ಬಂದಿತು.

"....ಏನು ಇನಿಯಾ, ನಿನ್ನ ಪುನರಾಗಮನವೆಂದು?" ಎಂದು ಪ್ರೇಯಸಿ ಚಲಬ್ಬೆ ಕೇಳಿದಾಗ ಮಹಾಶಿಲ್ಪಿ ಗುಂಡನಿಗೆ ಮಾತುಗಳ ಬದಲು ಕಂಠವು ಉಬ್ಬಿಬಂದಿತು. "ಬರುವೆ, ಪ್ರೇಯಸಿ, ಆರುಸಂವತ್ಸರಗಳನ್ನು ಕಳೆದು ಬರುವೆನು" ಎಂದನು ಶಿಲ್ಪಿ.."ಒಂದು ಎರಡು..ಮೂರು....ಆರು....! ಅದು ಹೇಗೆ ನೆನಪಿಡಲಿ?" ಎಂದಳು ಚಲಬ್ಬೆ. "ಪ್ರಿಯೆ, ಪ್ರತಿ ಪೂರ್ಣಿಮೆಯ ರಾತ್ರಿ ಕಲ್ಲಿನ ಮೇಲೊಂದು ಗೆರೆ ಕೊರೆ. ಆರು ವರುಷಗಳು ಗಡುವು ಬಂದೊಡನೆಯೇ ಸ್ವಾಗತಕ್ಕಾಗಿ ಸಿದ್ಧಳಾಗಿರು. ಗಡುವು ಬಂದೂ ಬರದಿದ್ದರೆ ನೀನೇ ಬಂದುಬಿಡು" ಎಂದು ಕೊರಳಿಗೆ ಮಾಲೆಯಂತೆ ಕೈಹಾಕಿದ ಚಲಬ್ಬೆಯ ಕೈಗಳನ್ನು ಬಿಡಿಸಬೇಕಾದರೆ ಶಿಲ್ಪಿಗೆ ಕಣ್ಣೀರೇ ಬಂದವು. ಹೊರಟ ಪತಿಯನ್ನು ತಡೆದು ಚಲಬ್ಬೆಯು "ಹೊರಡಬೇಕಾದ ನೀವು ಹೊರಟೇಹೊರಡುವಿರಿ. ಇಷ್ಟು ತ್ವರೆಯೇಕೆ? ಎರಡು ಹೆಜ್ಜೆ ತಿರುಗಿ ನಿಲ್ಲಿ. ಇನ್ನೊಮ್ಮೆ ನಿಮ್ಮ ಮುಖಾವಲೋಕನವನ್ನು ಮಾಡುವೆ. ಈ ಸಂಸಾರವೆಂದರೆ ಘಟಕಾರಂಧ್ರದಿಂದ ಸುರಿಯುವ ಜಲಧಾರೆಯಂತೆ—ಪುನಃ ನಮ್ಮಿಬ್ಬರ ಸಮಾಗಮವಾಗುವದೋ ಇಲ್ಲವೋ ಬಲ್ಲವರಾರು?" ಎಂದಳು. ಶಿಲ್ಪಿಗೆ ಹೆಂಡತಿಯದೇ ಚಿಂತೆ. ದೊರೆ ಶಿಲ್ಪಿಯನ್ನು ಅವನಿಗಾಗಿ ಗೊತ್ತುಪಡಿಸಿದ ವಾಸಸ್ಥಳಕ್ಕೆ ಹೋಗಲು ಹೇಳಿದಾಗಲೇ ಅವನಿಗೆ ಎಚ್ಚರ. ಭಾರವಾದ ಕಾಲುಗಳನ್ನೆಳೆಯುತ್ತ ಭಗ್ನಮನಸ್ಸಿನ ಶಿಲ್ಪಿ ತನ್ನ ತಾಣಕ್ಕೆ ಹೋದನು. ಅಂದು ರಾತ್ರಿ ಅವನಿಗೆ ಪ್ರೇಯಸಿಯದೇ ಕನಸು.

ಸುಮುಹೂರ್ತದಲ್ಲಿ ಲೋಕೇಶ್ವರ ದೇವಾಲಯದ ಕೋನಶಿಲೆಯನ್ನಿಡಲಾಯಿತು. ಮಹಾ-

ಶಿಲ್ಪಿಯ ಜೊತೆ ಸಹಸ್ರಾರು ಕುಂತಳನಾಡಿನ ಶಿಲ್ಪಿಗಳೂ ಸೇರಿದರು. ಮೊದಮೊದಲು ಕಲ್ಲುಗಳನ್ನು ಕಟೆಯುವಾಗ ಮಹಾಶಿಲ್ಪಿಗೆ ಪ್ರೇಯಸಿಯದೇ ಚಿತ್ರ ಕಣ್ಣಿಗೆ ಕಟ್ಟುತ್ತಿತ್ತು. ದೇವಾಲಯದ ಒಂದೊಂದೇ ಕಲ್ಲುಗಳು ಏರುತ್ತಿದ್ದಂತೆ ದೇವಾಲಯದ ಚಿಂತೆಯೇ ಮಹಾಶಿಲ್ಪಿಗೆ ಬೆಳೆದು ನಿಂತಿತು. ಸಹಸ್ರಾರು ಉಳಿಗಳ ಸಂತತ ಸೊ...ಸೋ.. ಶಬ್ದಗಳಲ್ಲಿ ಮಹಾಶಿಲ್ಪಿಗೆ ಮನೆಯೇ ಮರೆಯಿತು. ದೇವಾಲಯದ ಒಳಭಿತ್ತಿಗಳಲ್ಲಿ ಚಿತ್ರಗಳನ್ನು ಕೊರೆಯುವಾಗಲೆಲ್ಲಾ ಪ್ರೇಯಸಿಯ ಮುಖ ಮತ್ತೆ ಎದುರು ಬರುತ್ತಿತ್ತು. ಅಂತಲೇ ಭಿತ್ತಿಗಳ ತುಂಬಾ ಅನೇಕ ಹೆಣ್ಣು-ಗಂಡಿನ ಚಿತ್ರಗಳನ್ನು ಕೊರೆಯಹತ್ತಿದನು. ರಸಿಕ-ದಂಪತಿಗಳ ಚಿತ್ರವನ್ನು ಕೊರೆದಾಗಂತೂ ಎಂಥ ಅರಸಿಕನಿಗೂ ಅದನ್ನು ನೋಡಬೇಕೆಂಬ ಕುತೂಹಲವಾಗುತ್ತಿತ್ತು. ಆ ಚಿತ್ರಗಳನ್ನು ನೋಡಿ ಯಾರೋ ಒಬ್ಬರು "ಏನು, ದೇವಾಲಯದ ಭಿತ್ತಿಗಳಿಗೇಕೆ ಇಂಥ ಬೀಭತ್ಸ ಚಿತ್ರಗಳು? ಮಹಾ-ಶಿಲ್ಪಿಗೇನಾದರೂ ಪ್ರೇಯಸಿಯ ನೆನಪಾಗಿದೆಯೆ ?" ಎಂದು ನಗೆಯಾಡಿದರು. ಅದನ್ನು ಕೇಳಿ ಮಹಾ-ಶಿಲ್ಪಿ ಹೇಳಿದ "ಇಲ್ಲಿಲ್ಲ....ಪ್ರೇಯಸಿಯ ಕಡೆ ಮನಸ್ಸು ಹೋಗಿದ್ದರೆ ನಾನೆಲ್ಲಿ ಈ ಲೋಕೇಶ್ವರ ದೇವಾಲಯವನ್ನು ಕಟ್ಟುತಿದ್ದೆ. ಕಾಮಕಲೆಯೂ ಒಂದು ಶಾಸ್ತ್ರವೆಂದು ತಿಳಿದವರಲ್ಲಿ ನಾನೊಬ್ಬ. ಆ ಕಲೆಯ ನೈಜರೂಪವನ್ನು ಚಿತ್ರಿಸಲು ಸಾಹಿತ್ಯ ಪರಾಭವ ಹೊಂದಲೆಂದೇ ಈ ಶಿಲ್ಪರೇಖೆಗಳಿಂದ ಅವುಗಳನ್ನು ಒಡಮೂಡಿಸಿದ್ದೇನೆ. ಈ ಸಂಸಾರ ಚಿತ್ರಗಳನ್ನು ದೇವಾಲಯಕ್ಕೆ ಬಂದ ಭಕ್ತರು ನೋಡುತ್ತಾ ನಾಚಿಕೆಗೊಂಡು ಮೋಹಪಾಶದಿಂದ ಬಂಧಮುಕ್ತರಾಗಬೇಕೆಂದು ನನ್ನಾಶೆ. ಇಂಥ ಸೆಳೆತಗಳ ಹಿಂದೆ ನಿಂತಿರುವ ಆ ಲೋಕೇಶ್ವರನನ್ನು, ಭಕ್ತರು ಚಲವಿಚಲಿತರಾಗದೆ ಕಾಣಬೇಕು." ಎಂದನು. ಮಹಾಶಿಲ್ಪಿ ನಿರ್ಮಿಸುತ್ತಿದ್ದ ಲೋಕಮಹಾದೇವಿಯ ಆ ದೇವಾಲಯವನ್ನು ನೋಡಲು ಪ್ರತಿ-ನಿತ್ಯ ನೂರಾರು ಮಂದಿ ಬರುತ್ತಿದ್ದರು. ಮಲಪ್ರಭೆಯ ತಟಾಕದಲ್ಲಿ ಪೂರ್ವಾಭಿಮುಖವಾಗಿ ನಿಂತ ಈ ದೇವಾಲಯವನ್ನು ಪ್ರಜೆಗಳು ಪವಿತ್ರ ತಾಣವನ್ನಾಗಿ ಮಾಡತೊಡಗಿದರು. ಹೊಂಬಣ್ಣದ ಕಿರಣಗಳಿಗೆ ಸಂಜೆ ಮುಂಜಾವುಗಳಲ್ಲಿ ನಯನ ಮನೋಹರವಾಗಿ ಕಾಣುವ ಈ ದೇವಾಲಯ ಹಾಗು ಅದನ್ನು ನಿರ್ಮಿಸಲು ಕಾರಣಳಾದ ಹಿರಿಯ ರಾಣಿ ಲೋಕಮಹಾದೇವಿಯ ಮಾತು ಇಡೀ ರಾಜ್ಯದ ತುಂಬಾ ಕೇಳಬರಹತ್ತಿದವು.

ಬೆಳೆಯುತ್ತಿರುವ ಅಕ್ಕನ ಕೀರ್ತಿಯನ್ನು ನೋಡಿ ತಂಗಿ ತ್ರೈಲೋಕ್ಯಮಹಾದೇವಿಗೆ ತಾನೂ ಒಂದು ದೇವಾಲಯವನ್ನು ನಿರ್ಮಿಸಬೇಕೆಂಬ ಮನಸ್ಸಾಯಿತು. ಪಲ್ಲವರನ್ನು ಸೋಲಿಸಿದ ವಿಜಯಕ್ಕಾಗಿಯೇ ಈ ದೇವಾಲಯವನ್ನು ಕಟ್ಟಿಸಲಿರುವೆನೆಂದು ಕಿರಿಯ ರಾಣಿ ವಿಕ್ರಮಾದಿತ್ಯನಿಗೆ ಹೇಳಿದಳು. ಯುದ್ಧ; ವಿಜಯ; ಸ್ಮಾರಕ ಎಂದರೆ ದೇಹವನ್ನೆಲ್ಲಾ ಕಣ್ಣನ್ನಾಗಿ ಮಾಡಿ ನೋಡುತ್ತಿದ್ದ ವಿಕ್ರಮಾದಿತ್ಯನಿಗೆ ಕಿರಿಯರಾಣಿಯ ಆಶೆಯನ್ನು ಪೂರೈಸುವದು ದೊಡ್ಡ ಮಾತೆನಿಸಲಿಲ್ಲ. ಲೋಕೇಶ್ವರ ದೇವಾಲಯದ ಅನತಿದೂರದಲ್ಲಿಯೇ ಕಿರಿಯರಾಣಿಯ ತ್ರೈಲೋಕೇಶ್ವರ ದೇವಾಲಯದ ನಿರ್ಮಾಣವು ಪ್ರಾರಂಭವಾಯಿತು. ಮಹಾಶಿಲ್ಪಿಗೆ ಇಂದು ಕಾಣಿಸುತ್ತಿದ್ದುದು ಕಲ್ಲು; ಕಲೆ; ಆದರೆ ಕಂಚಿಯಲ್ಲ, ಪ್ರೇಯಸಿಯಲ್ಲ.

ಶಿಶಿರನನ್ನು ಬೆಂಬತ್ತಿ ವಸಂತ, ವಸಂತನನ್ನು ಬೆಂಬತ್ತಿ ಶಿಶಿರ ಬಂದೇ ಬರುತ್ತಿದ್ದರು. ಚಲಬ್ಬೆ ಪೂರ್ಣಿಮೆಗೊಮ್ಮೆ ಗೆರೆಗಳನ್ನು ಕೊರೆದೇ ಕೊರೆಯುತ್ತಿದ್ದಳು. ಕೊರೆದ ಗೆರೆಗಳನ್ನೆಣಿಸಿದರೆಲ್ಲಿ ಆರು ಸಂವತ್ಸರಗಳು ಪೂರ್ತಿಯಾಗಿಲ್ಲವೆಂದು ತಿಳಿದು ಮನಸ್ಸಿಗೆ ವ್ಯಥೆಯಾಗುವದೋ ಎಂದು ಚಲಬ್ಬೆ ಗೆರೆಗಳನ್ನೇ ಎಣಿಸುವ ಗೋಜಿಗೆ ಹೋಗಲಿಲ್ಲ. ಆರು ಸಂವತ್ಸರಗಳೆಂದೋ ಮುಗಿದುಹೋಗಿದ್ದವು. ಪತಿ



"......ಯಾರ ವಿಜಯಕ್ಕೂ ನಾನಿಂದು ದೇವಾಲಯ ಕಟ್ಟಲಾರೆನೆಂದು ಪ್ರತಿಜ್ಞೆ ಮಾಡಲು ಈ ಹೆಬ್ಬೆರಳುಗಳನ್ನೇ ಕಡಿದುಕೊಂಡಿದೇನೆ.........."

ಬಂದೇ ಬರುವನೆಂಬ ಭರವಸೆ ಅವಳಲ್ಲಿತ್ತು. ಅಲ್ಲದೆ ಶಿಲ್ಪಿ ಹೊರಡುವಾಗಲೇ ಅವಳು ಹೇಳಿದ್ದಳು "ನಾವು ಪಲ್ಲವರು ಸೋತವರು. ಚಲುಕ್ಯರು ಗೆದ್ದವರು. ನಮ್ಮ ನಿರ್ನಾಮದ ಸ್ಮಾರಕಕ್ಕಾಗಿ ನಾವೇ ದೇವಾಲಯವನ್ನು ಕಟ್ಟಬೇಕೇ ? ನನಗೇಕೋ ಮನಸ್ಸಿಗೆ ಬಾರದು" ಎಂದು. ಆ ಮಾತು ಮತ್ತೆ ನೆನಪಾಗಿ ಕಣ್ಣೀರಿಡುತ್ತ ಕಲ್ಲಿನಲ್ಲಿ ಕೊರೆದ ಗೆರೆಗಳನ್ನು ಎಣಿಸಿದಳು. ಎಣಿಸಿ ಮೂರ್ಛೆಹೋದಳು. ಒಂದಲ್ಲ ಎರಡಾರು ವರ್ಷಗಳಾಗಿದ್ದವು. ತಾನೇ ಪತಿಯನ್ನು ಪಟ್ಟದಕಲ್ಲಿನಲ್ಲಿ ಸಂಧಿಸುವದಾಗಿ ಸಿದ್ಧಳಾದಳು ಪ್ರಯಾಣದ ಸನ್ನಾಹಗಳನ್ನು ಮಾಡಿದಳು. ಇಂದು ಅವಳ ಮದುವೆಯ ಬಳೆಗಳೆಲ್ಲಾ ಕೈಗಳಿಂದ ತಾನೇ ತಾನಾಗಿ ಹೊರಕ್ಕೆ ಬರುತ್ತಿದ್ದವು. ಕಪೋಲಗಳೆಲ್ಲಾ ಸುಕ್ಕುಗಟ್ಟಿದಂತಾಗಿದ್ದವು. ತೇಜಃಪುಂಜವಾದ ಕಣ್ಣುಗಳಲ್ಲಿಯ ಕಾಂತಿ ಬಾಡುತ್ತ ಹೊರಟಿತ್ತು.

ನಡೆದು ನಡೆದು ಚಲಬ್ಬೆ ಪಟ್ಟದಕಲ್ಲಿಗೆ ಬರುವಾಗ ಸೋತು ಸುಣ್ಣವಾಗಿದ್ದಳು. ರಾಜಧಾನಿಯಲ್ಲಿ ಚಲಬ್ಬೆಯನ್ನು ಗುರುತಿಸುವವರಾರು ? ಪಲ್ಲವ-ರಾಜ್ಯದ ಮಹಾಶಿಲ್ಪಿ ನಿರ್ಮಿಸಿದ ಮತ್ತು ನಿರ್ಮಿಸುತ್ತಿರುವ ದೇವಾಲಯಗಳನ್ನು ನೋಡಲು ಚಲಬ್ಬೆಯೂ ಬಂದಳು. ಮೊದಲು ಲೋಕೇಶ್ವರ ದೇವಾಲಯವನ್ನು ನೋಡಹತ್ತಿದಳು. ಪಲ್ಲವರಾಜ್ಯದಲ್ಲಿ ದೇವಾಲಯಗಳನ್ನವಳು ನೋಡಿಲ್ಲವೆಂದಲ್ಲ. ಆದರೆ ತನ್ನ ಪತಿ ಕಟ್ಟಿದ ದೇವಾಲಯವೆಂದು ಅದನ್ನು ನೋಡಲು ಅವಳಿಗೆ ಅಭಿಮಾನವೆನಿಸಿತು. ಹೊರಗಿನಿಂದ ಆ ಭವ್ಯ ದೇವಾಲಯವನ್ನು ನೋಡಿ ತನ್ನ ಪತಿಗೆ ಅಂತಲೇ ಇಷ್ಟು ವರ್ಷಗಳು ಹಿಡಿದಿರಬೇಕು ಎಂದು ಸಮಾಧಾನ ಮಾಡಿಕೊಂಡಳು. ದೇವಾಲಯದ ಹಿಂದಿನ ದ್ವಾರದಿಂದ ಪ್ರವೇಶಿಸಿ ಭಿ ತ್ತಿ ಗ ಳ ನ್ನೆ ಲ್ಲಾ ನೋ ಡ ತೊ ಡ ಗಿ ದ ಳು. ಅಲ್ಲಿರುವ ಚಿತ್ರಗಳ ಮುಖಗಳೆಲ್ಲಾ ಪಲ್ಲವರನ್ನೇ ಹೋಲುವವೆಂದು ಚಲಬ್ಬೆಗೆ ಅನಿಸಿತು ಆ ಮುಖಗಳನ್ನೆಲ್ಲಾ ವಿಕ್ರಮಾದಿತ್ಯ ಸೆರೆಹಿಡಿದು ಹಾಕಿದಂತೆ ಇವಳಿಗನಿಸಿತು. ಮೇಲಿಂದ ಮೇಲೆ ಮೂರು ಸಲ ಕಂಚಿಯನ್ನು ಗೆದ್ದ ವಿಕ್ರಮಾದಿತ್ಯನ ಹೆಸರನ್ನು ಕೇಳಿದರೆ ಪಲ್ಲವರಿಗೆ ಒಂದು ಬಗೆಯ ದ್ವೇಷ ಬೆಳೆದು ನಿಲ್ಲುತ್ತಿತ್ತು. ಅದೇಕೋ ಚಲಬ್ಬೆಗೆ ಕೋಪ ಬಂತು " ಅಹುದು. ಪಲ್ಲವರ ಮುಖಗಳನ್ನು ಸೆರೆಹಿಡಿದು ಭಿತ್ತಿಗಳಲ್ಲಿ ಹಾಕಿದ್ದಾರೆ. ವಿಕ್ರಮಾ-ದಿತ್ಯ ಗೆದ್ದು ಬದುಕಿದ; ನಾವು ಸೋತು ಸತ್ತೆವು. ಪಲ್ಲವರನ್ನು ಹಿಂಸಿಸಿದ ಉನ್ಮಾದಕ್ಕಾಗಿ; ಪಲ್ಲವರ ಶಿಲ್ಪಿಯೊಬ್ಬ ಸ್ಮಾರಕವನ್ನು ನಿರ್ಮಿಸಬೇಕೆ ?. . . ಛೀ. . . ." ಎಂದು ತನ್ನಲ್ಲಿ ತಾನೇ ಮಾತನಾಡಿಕೊಳ್ಳುತ್ತ ದೇವಾಲಯದಿಂದ ಹೊರಕ್ಕೆ ಬಂದಳು. ಪತಿಯನ್ನು ಕಾಣಬೇಕೆಂದು ಹನ್ನೆರಡು ವರುಷಗಳನ್ನು ಕಾದು ನೂರಾರು ಹರದಾರಿ ನೆಲ ತುಳಿದು ಬಂದವಳಿಗೆ ಅರೆನಿಮಿಷದಲ್ಲಿಯೇ ಕಾಣಬಾರದೆಂಬ ಮನಸ್ಸಾಯಿತಂತೆ—ಹೊರಕ್ಕೆ ಬಂದಾಗ. ಅಲ್ಲಿ ನಿಲ್ಲಿಸಿದ ಶಾಸನ ಒಂದನ್ನು ನೋಡಿದಾಗಲಂತೂ ಅವಳ ರಕ್ತವೇ ಕುದಿಯಹತ್ತಿತು. ಓದಹತ್ತಿದಳು . . . .

ಶ್ರೀ ಸ್ವಸ್ತಿ ವಿಕ್ರಮಾದಿತ್ಯ ಶ್ರೀ
ಪೃಥಿವೀವಲ್ಲಭ ಮಹಾದೇವಿ
ಯರಾ ದೇಗುಲವಮಾನ್ ಮಾಡಿದ ಸೂತ್ರಧಾರಿ
ಶ್ರೀ ಗುಂಡನ್ ಅನಿವಾರಿತಾಚಾರಿ
ಗೆ ಮೂಮೆ ಪೆರ್ಜ್ಜೆರಿಪು ಪಟ್ಟಮಂ ತ್ರಿಭುವ-
ನಾಚಾರಿ
ಯನ್ದು ಪೆಸರಿತ್ತು
ಪಲ್ಲವರ ಗೆಲ್ದ ಸ್ಮರಣೆಗೆ ನಿಲ್ಲಿಸಿದ ಶಾಸನವ
ನು ಕವರ್ದ್ದು ಅಳಿದೊರ್ಗೆ ಪರಿಹಾರ
ಇದಾನ್
ವಾರಣಾಸಿಯ ಸಾಸಿರಾ ಕವಿಲೆಯುಂ
ಸಾಸಿರ್ವ್ವ
ಪಾರ್ವ್ವರುಮಾನ್ ಕೊನ್ದೊನ್ ಲೋಕಕ್ಕೆ
ಸನ್ದೋನ್

ಓದುತ್ತ ಓದುತ್ತ 'ಪಲ್ಲವರ ಗೆಲ್ದ ಸ್ಮರಣೆಗೆ. . .' ಎಂಬ ಅಕ್ಷರಗಳನ್ನುನೋಡಿ ಅವಳಿಗೆ ಎಲ್ಲಿಲ್ಲದ ಶಕ್ತಿ ಬಂದಿತು. ಅದನ್ನು ಅಳಿಕಿಸಹತ್ತಿದಳು. ಆ ಎರಡು ಸಾಲುಗಳನ್ನು ಅಳಿಕಿಸುತ್ತಿರುವಾಗಲೇ ರಾಜಭಟರು ಬಂದು ಅವಳನ್ನು ಎಳೆದು ದೊರೆಯ ಬಳಿ ಒಯ್ದರು. ದೊರೆ ಅಂತಃಪುರದಲ್ಲಿ ತ್ರೈಲೋಕ್ಯದೇವಿಯೊಡನೆ ತ್ರೈಲೋಕೇಶ್ವರ ದೇವಾಲಯ ಕುರಿತು ಮಾತನಾಡುತ್ತಿದ್ದನು. ಇವಳನ್ನೊಯ್ದು, ರಾಜನ ಮುಂದೆ ನಿಲ್ಲಿಸಿ ಅವಳು ಮಾಡಿದ ರಾಜದ್ರೋಹದ ಸಾಹಸವನ್ನು ಹೇಳಿದರು. ದೊರೆಗೆ ಅವಳನ್ನು ನೋಡಿ ಅದೇಕೋ ಪಲ್ಲವ ರಾಜ್ಯದ ಹೆಣ್ಣುಮಗಳಿರಬೇಕೆಂದು ಅನಿಸಿತು, ಕೇಳಿದನು: " ಏನಮ್ಮಾ, ಇದು ಯಾರ ರಾಜ್ಯ ಗೊತ್ತೆ? ಅದನ್ನಳಿಕಿಸಿದವರಿಗೆ ಮರಣದಂಡನೆ ಇದೆ ಎಂಬುದು ಗೊತ್ತೆ? " ಎಂದನು ವಿಕ್ರಮಾದಿತ್ಯ.

" ಗೊತ್ತು . . . . ಬದುಕಿ ಇರುವ ಆಶೆಯನ್ನು ಬಿಟ್ಟವರಿಗೆ ಮರಣದಂಜಿಕೆಯೇ ? ಸಹಸ್ರಾರು ಪಲ್ಲವರನ್ನು ಕೊಂದ ನಿಮಗೆ ನನ್ನನ್ನು ಕೊಲ್ಲುವದು ಸುಲಭವೆಂಬುದನ್ನೂ ನಾನು ಬಲ್ಲೆ " ಎಂದಳು ಚಲಬ್ಬೆ. ವಿಕ್ರಮಾದಿತ್ಯನಿಗೆ ಚಲಬ್ಬೆಯು ಹುಚ್ಚಿಯಿದ್ದಿರಬೇಕೆಂದು ಅನಿಸಿತು. ಆದರೆ ಮಾತುಗಳಲ್ಲಿ ಅಲುಗಿನ ಮೊನೆಯಿತ್ತು ಎಂಬುದನ್ನು ಕಂಡ ವಿಕ್ರಮಾದಿತ್ಯ ಅವಳಾರೆಂದು ಕೇಳಿದನು. ಚಲಬ್ಬೆ ತಾನಾರೆಂದು ಹೇಳಲು ನಿರಾಕರಿಸಿದಳು. ತಾನೇಕೆ ಪಟ್ಟದಕಲ್ಲಿಗೆ ಬಂದಿರುವೆನೆಂದು ಹೇಳಲೂ ಅವಳಿಗೆ ಮನಸ್ಸಾಗಲಿಲ್ಲ. ದೊರೆ ಅವಳಿಗೆ ಮರಣದಂಡನೆಯನ್ನು ವಿಧಿಸಿ " ನಿನ್ನದೇನಾದರೂ ಕೊನೆಯಾಶೆ ಇದ್ದರೆ ಹೇಳು ? ಪೂರೈಸುವೆ ? " ಎಂದನು ಸಮ್ರಾಟ ವಿಕ್ರಮಾದಿತ್ಯನು.

ಚಲಬ್ಬೆ ಬಿಕ್ಕಿ ಬಿಕ್ಕಿ ಅಳುತ್ತ " ನನ್ನ ಕೊನೆಯಾಶೆ ಪೂರೈಸಲ್ಪಡುವದಲ್ಲವೆ ? " ಎಂದು ಕೇಳಿದಳು.

" ನಿನ್ನದೇಕೆ? ಯಾವದೇ ವ್ಯಕ್ತಿಯಿರಲಿ. ಮರಣದಂಡನೆಗೊಳಗಾದವರ ಕೊನೆಯಾಶೆಯನ್ನು ಪೂರೈಸಲಾಗುವದು" ಸಮ್ರಾಟನು ದರ್ಪದಿಂದ ಹೇಳಿದನು.

ಕೂಡಲೇ ಕೊರಳಲ್ಲಿಯ ಮಂಗಳಸೂತ್ರವನ್ನು ಕಿತ್ತಿ " ಇದೋ ಈ ಮಂಗಳಸೂತ್ರವನ್ನು ಲೋಕೇಶರ, ತ್ರೈಲೋಕೇಶ್ವರ ದೇವಾಲಯಗಳನ್ನು ಕಟ್ಟಿದ ಮಹಾಶಿಲ್ಪಿ ಗುಂಡನಿಗೆ ಮರಳಿಕೊಟ್ಟುಬಿಡಿ. ಇದವನಿತ್ತ ಬಂಧನರಕ್ಷೆ. ಆ ರಕ್ಷೆಯನ್ನು ಹರಿದು ನನ್ನಿಂದ ಅವನೇ ಇಂದು ಹೋಗಿದ್ದಾನೆ. ಅಂಥ ದೇಶದ್ರೋ-ಹಿಯ ಬಂಧನವನ್ನು ನಾನಿಂದು ಹರಿಯಬಲ್ಲೆ " ಎಂದಳು ಚಲಬ್ಬೆ ವೀರಾವೇಶದಿಂದ. ಪತಿ-ಪತ್ನಿಯರಿಬ್ಬರಿಗೂ ಆ ಮಾತು ಕೇಳಿ ಬೆನ್ನುಮೇಲೆ ಕೊಡಲಿಏಟನ್ನು ಹಾಕಿದಂತಾಯಿತು.

" . . . . ಏನು ನೀನು ಮಹಾಶಿಲ್ಪಿಯ ಹೆಂಡತಿಯೇ ? " ಎಂದಳು ತ್ರ್ಯೈಲೋಕ್ಯದೇವಿ.

" ಅಹುದು; ಒಂದು ಸಮಯದಲ್ಲಿದ್ದೆ. ಆದರೆ ಇಂದು ಹಾಗೆ ಹೇಳಿಕೊಳ್ಳಲು ನಾಚಿಕೆ ಎನಿಸುತ್ತದೆ." ಎಂದವಳೇ ಬೆನ್ನಿಗೆ ಹಾಕಿದ ಭಾರವಾದ ಕಲ್ಲನ್ನು ರಾಣಿಎದುರು ಇಟ್ಟು "....ದೇವಿ ಆರುಸಂವತ್ಸರಗಳನ್ನು ಕಳೆಯುವದರಲ್ಲಿ ಬರುವೆನೆಂದು ವಚನವಿತ್ತು ನನ್ನ ಪತಿ ಇಲ್ಲಿಗೆ ಬಂದ. ಅವನು ಬರುವ ದಿವಸಗಳ ಸ್ಮರಣೆಗಾಗಿ ಒಂದೊಂದು ಹುಣ್ಣಿಮೆಗೆ ಗೆರೆ ಕೊರೆಯಲು ಹೇಳಿದ್ದನು. ಗೆರೆ ಕೊರೆದು ಕೊರೆದು ಕೈ ಸೋತಿತು; ಬರುವಿಗಾಗಿ ಕಾದು ಕಾದು ಮನಸ್ಸು ಮುದುಡಿತು. ಹನ್ನೆರಡು ವರ್ಷಗಳಾಗಿ ಗಡುವು ಮುಗಿದರೂ ಪತಿ ಬರಲೇ ಇಲ್ಲ. ಅವನನ್ನು ನೋಡಲು ನಾನೇ ಬರಬೇಕಾಯಿತು.. ." ಎಂದು ಹೇಳಿ ಅಳಹತ್ತಿದಳು. ರಾಣಿಗೂ ಚಲಬ್ಬೆಯ ವಿರಹತಾಪದಿಂದ ಕಣ್ಣೀರು ಬಂದವು "ಮಹಾಶಿಲ್ಪಿಯ ಹೆಂಡತಿಯೇ ಈ ತಪ್ಪೆಲ್ಲ ನನ್ನದು. ಲೋಕೇಶ್ವರ ದೇವಾಲಯ ಮುಗಿದೊಡನೆ ತ್ರ್ಯೈಲೋಕೇಶ್ವರ ದೇವಾಲಯವನ್ನು ನಿರ್ಮಿಸಲು ನಾನು ಶಿಲ್ಪಿಯನ್ನು ನಿಲ್ಲಿಸಿಕೊಂಡೆ. ಶಿಕ್ಷೆ ನಿನಗಲ್ಲ, ನನಗಾಗಬೇಕು. ದೇವಾ; ಇವಳಿಗಿತ್ತ ಮರಣದಂಡನೆ ನನಗೆ ಸಲ್ಲಬೇಕು." ಎಂದಳು ಕಿರಿಯ ರಾಣಿ ತ್ರ್ಯೈಲೋಕ್ಯಮಹಾದೇವಿ. " ವಿರಹತಾಪದಿಂದ ಯಾವ ಹೆಣ್ಣಿನ ಹೃದಯ ಬೇಯಲಿಕ್ಕಿಲ್ಲ " ಎಂದು ಉದ್ಗಾರ ತೆಗೆಯುತ್ತ ಚಲಬ್ಬೆಯನ್ನಪ್ಪಿಕೊಳ್ಳಲು ಮರಾಹಾಣಿ ಮುಂದೆ ಬಂದಳು. ಚಲಬ್ಬೆ ಅವಳನ್ನು ತಡೆದು ".. ಶಿಕ್ಷೆ ನಿಮಗಲ್ಲ ರಾಣಿಯವರೆ; ನನಗೆ. ಬದುಕುವ ಆಶೆಯೇ ನನಗಿಲ್ಲ. ಪಲ್ಲವರ ನೂರಾರು ಸ್ತ್ರೀಯರು ವಿಧವೆಯರಾಗಿ ನರಳುತ್ತಿರುವಾಗ ಇದ್ದೂ ಸತ್ತವನಂತಿದ್ದ ಆ ಶಿಲ್ಪಿಯ ಹೆಂಡತಿಯಾಗಿ ಬದುಕಿ ಉಳಿಯುವ ಆಶೆ ನನಗಿಲ್ಲ. ಪಲ್ಲವರ ದೇಹಗಳ ಮೇಲೆ ಮಹಾಶಿಲ್ಪಿ ದೇವಾಲಯಗಳನ್ನು ನಿರ್ಮಿಸಿ, ಪಲ್ಲವರ ಕಲಾಕುಶಲತೆಯ ರಕ್ತವನ್ನು ಅವಕ್ಕೆ ಎರೆದಿದ್ದಾನೆ. ಭಿತ್ತಿಗಳ ಮೇಲೆ ಪಲ್ಲವರ ಮುಖಗಳನ್ನು ಹೋಲುವ ಚಿತ್ರಗಳನ್ನು ಬರೆದದ್ದು ನೋಡಿ ಪಲ್ಲವರನ್ನು ತಾವು ಸೆರೆಹಿಡಿದು ಬಂಧನದಲ್ಲಿರಿಸಿರುವಿರೆಂದು ಅನಿಸಿತು. ದೊರೆಗಳೇ, ನಿಮ್ಮ ಯುದ್ಧದ ಬೇಗೆಗೆ ಸತ್ತವರೆಷ್ಟು ? ನಿರ್ಗತಿಕರಾದವರೆಷ್ಟು ಗೊತ್ತೆ ? ಅಗಲಿದ ಪತಿಪತ್ನಿಯರೆಷ್ಟು ಗೊತ್ತೆ ? ಕುಲದೀಪಕರನ್ನು ಕಳೆದುಕೊಂಡ ತಂದೆ ತಾಯಿಗಳೆಷ್ಟು ಗೊತ್ತೆ? ಇ. . ಲ್ಲ. . ಗೊತ್ತಿಲ್ಲ. ದೀಪದ ಹುಳಕ್ಕೆ ಹೊತ್ತಿದ ಸೊಡರಿನಲ್ಲಿ ಬೆಂಕಿ ಇರುವದೆಂಬುದುಎಂದೂ ತಿಳಿಯುವದಿಲ್ಲ. ರೆಕ್ಕೆಗಳು ಸುಟ್ಟು ಅದು ನಿಸ್ಸಹಾಯಕವಾಗಿ ಹಾರದಂತಾಗ-ದಾಗಲೇ ಅದಕ್ಕೆ ಅರಿವು ಬರುತ್ತದೆ ದೀಪ

ಒಂದು ಬೆಂಕಿಯೆಂದು. ಹಾಗಿದೆ ಈ ಯುದ್ಧದ ಆಕಾಂಕ್ಷೆ

" ನೀವು ಗೆದ್ದಿದ್ದೀರಿ; ನಾವು ಸೋತಿದ್ದೇವೆ. ನೀವು ಬದುಕಿದ್ದೀರಿ; ನಾವು ಸತ್ತಿದ್ದೇವೆ. ಪಲ್ಲವರೇನು ನಿಮ್ಮ ಮನೆಯನ್ನು ದೋಚಿಕೊಂಡು ಹೋಗಲಿಲ್ಲ. ಆದರೆ ನೀವೇ ಪಲ್ಲವರನ್ನು ದೋಚಿದ್ದೀರಿ. ಪಲ್ಲವರ ಸಂಪತ್ತಿನೊಡನೆ ಕಲಾಸಂಪತ್ತನ್ನೂ ತಂದು ವಿಜಯೋನ್ಮಾದಕ್ಕಾಗಿ ದೇವಾಲಯಗಳನ್ನು ನಿರ್ಮಿಸಿ ಬಂದವರಿಗೆ ದಾನವನ್ನು ಕೊಡುತ್ತೀರಿ. ಅಧರ್ಮದ ಯುದ್ಧಮಾಡಿ ಗುಡಿಗುಂಡಾರಗಳನ್ನು ಕಟ್ಟಿಸಿ ದಾನಕೊಟ್ಟು ಧರ್ಮಮಾಡಬಾರದು, ವಿಶ್ವದಲ್ಲಿ ಎಲ್ಲವೂ ಅನಿಶ್ಚಿತ. ಹುಟ್ಟಿನ ಬೆನ್ನಿಗೆ ಸಾವು; ಗೆಲುವಿನ ಬೆನ್ನಿಗೆ ಸೋಲು; ಕೀರ್ತಿಯ ಬೆನ್ನಿಗೆ ಶನಿ ಅಂಟಿಕೊಂಡಿರುವದನ್ನು ವಿಕ್ರಮಾದಿತ್ಯಭಟಾರರು ನೆನಪಿನಲ್ಲಿ ಇಟ್ಟುಕೊಂಡಂತಿಲ್ಲ. ಮೇಲಿಂದಮೇಲೆ ನೀವು ಕಂಚಿಯನ್ನು ಮುತ್ತಿ ಪಲ್ಲವರ ಮರ್ಯಾದೆಯನ್ನು ಕೊಳ್ಳೆ ಹೊಡೆದಿದ್ದೀರೆಂದು ನಿಮಗೆ ಆನಂದವಾಗಿರಬಹುದು. ಅಂತಲೇ ಇಂದು ಪಲ್ಲವರ ಸೌಭಾಗ್ಯದೇವತೆ ಕಣ್ಣೀರಿನ ಮಶಿಯಿಂದ ಸಹಸ್ರಾರು ವಿಧವೆಯರ ಕರುಳುಗಳನ್ನು ಹೊಸೆದು ಲೆಕ್ಕಣಿಕೆಯನ್ನಾಗಿ ಮಾಡಿ ಜನಾಂಗದ ಇತಿಹಾಸಪುಟಗಳ ಮೇಲೆ ನಿಮ್ಮ ಅಟ್ಟಹಾಸದ ವಿಜಯೋನ್ಮಾದವನ್ನು ಬರೆದಿದ್ದಾಳೆ. ನಿಮ್ಮ ರುದ್ರನಾಟಕದ ತುಳಿತಕ್ಕೆ ಸಿಕ್ಕು ಜಜ್ಜಿಯಾದ ಈ ಚಲಬ್ಬೆ ಯಾವ ಮುಖದಿಂದ ಬದುಕಬೇಕು? ಪಲ್ಲವರನ್ನು ಈ ರೀತಿ ಹಿಂಸಿಸಿದ ದೊರೆಯ ವಿಜಯೋತ್ಸಾಹಕ್ಕಾಗಿ ಪಲ್ಲವರ ರಕ್ತಪಿಂಡ ಒಂದು ಸ್ಮಾರಕವನ್ನು ನಿರ್ಮಿಸಬೇಕೆ? ಅಂಥವನ ಸತಿಯಾಗಿ ನಾನು ಈ ನಾಯಿಬಾಳನ್ನು ನಡೆಸಬೇಕೆ ?" ಎಂದವಳೇ ದೊರೆಗಳಿಟ್ಟ ಒರೆಯಿಂದ ಕತ್ತಿಯನ್ನೆತ್ತಿಕೊಂಡು "ಸಮ್ರಾಟರೆ, ಈ ಕ್ಷಣಾರ್ಧದಲ್ಲಿ ನನ್ನನ್ನು ಕೊಲ್ಲಿ" ಎಂದಳು ಮಹಾಶಿಲ್ಪಿಯ ಹೆಂಡತಿ. ವಿಕ್ರಮಾದಿತ್ಯನ ಕಣ್ಣು ತುಂಬಾ ನೀರು ಬಂದವು. ಅದಾಗಲೇ ಬಂದು ನಿಂತ ಮಹಾಶಿಲ್ಪಿಗೆ ಈ ದೃಶ್ಯ ನೋಡಿ ಅರ್ಧ ಜೀವವೇ ಹೋದಂತಾಯಿತು. ಚಲಬ್ಬೆಗೆ ಮುಖ ತೋರಿಸದಷ್ಟು ನಾಚಿಕೆ ಎನಿಸಿತು. ತತ್‌ಕ್ಷಣವೇ ಕೈಯಲ್ಲಿಯ ಉಳಿಯಿಂದ ಹೆಬ್ಬೆರಳುಗಳೆರಡನ್ನು ಕಡಿದುಕೊಂಡು ಚಲಬ್ಬೆಗೆ ಅದೇ ರಕ್ತದ ಕುಂಕುಮ ಹಚ್ಚುತ್ತ "ಪಲ್ಲವಿ, ನೀನಿಂದು ನನ್ನ ಕಣ್ಣು ತೆರೆಸಿದಿ. ನೀನು ನನ್ನಪ್ರೇಯಸಿ ಅಲ್ಲ, ನನ್ನನಾಡಿನ ದೇವತೆ. ಯಾರ ವಿಜಯಕ್ಕೂ ನಾನಿಂದು ದೇವಾಲಯಗಳನ್ನು ಕಟ್ಟಲಾರನೆಂದು ಪ್ರತಿಜ್ಞೆ ಮಾಡಲು ಕಲ್ಲು ಕಟೆಯುವ ಈ ಹೆಬ್ಬೆರಳುಗಳನ್ನೂ ಕಡಿದುಕೊಂಡಿದ್ದೇನೆ. ಇಂದು ನನ್ನ ಕಣ್ಣು ತೆರೆದವು. ಕ್ಷಮಿಸು" ಎಂದು ಮಹಾಶಿಲ್ಪಿ ಚಲಬ್ಬೆಯನ್ನು ಅಪ್ಪಿಕೊಳ್ಳಲು ಹೋದನು. ಚಲಬ್ಬೆ ಶಿಲ್ಪಿಯನ್ನು ದೂಡಿ ಸಿಡಿದು ನಿಂತು ದೊರೆಯ ಕತ್ತಿಯನ್ನು ಎದೆಯಲ್ಲಿ ಚುಚ್ಚಿಕೊಂಡಳು. ಸುತ್ತಲಿದ್ದವರು ಚಲಬ್ಬೆಯನ್ನು ರಕ್ಷಿಸುವಷ್ಟರಲ್ಲಿ ಮಿಂಚಿನಂತೆ ಅವಳ ಹೃದಯದಲ್ಲಿ ಕತ್ತಿ ನೆಟ್ಟು ರಕ್ತ ಚಿಮ್ಮುತ್ತಿತ್ತು. ಮಹಾಶಿಲ್ಪಿ ಗುಂಡನು ಹೆಂಡತಿಯ ದೇಹವನ್ನು ಹಿಡಿದುಕೊಂಡಾಗ "ನನ್ನ ಆಯುಷ್ಯ ಮುಗಿಯಿತು. ಇನ್ನು ಶಾಂತಿಗಾಗಿ ದೇವಾಲಯಗಳನ್ನು ನಿರ್ಮಿಸಿ" ಎಂದು ಹೇಳಿ ಅವನ ತೊಡೆಯ ಮೇಲೆ ಪ್ರಾಣಬಿಟ್ಟಳು. "ನೀನು ಮರಣವನ್ನು ಹೊಂದಿಲ್ಲ, ಚಲಬ್ಬೆ; ನೀನು ಚಿರಜೀವಿ" ಎಂದು ಅಲ್ಲಿ ನೆರೆದಿದ್ದವರೆಲ್ಲಾ ಉದ್ಗಾರ ತೆಗೆದರು. ಅವಳ ಮೃತದೇಹಕ್ಕೆ ರಾಜಮರ್ಯಾದೆಯಿಂದ ಅಂತ್ಯಸಂಸ್ಕಾರ ಮಾಡಿ ಅಲ್ಲೊಂದು ವೀರಗಲ್ಲನ್ನು ನಿಲ್ಲಿಸಿದರು. ಕಲ್ಲನ್ನು ನಿಲ್ಲಿಸುವಾಗ "ನಮ್ಮ ಕಣ್ಣನ್ನು ತೆರೆಸಿದೆ. ನಾವಿಂದು ನಮ್ಮ ಶಕ್ತಿಯನ್ನು ಯುದ್ಧದಲ್ಲಿ ಹ್ರಾಸ ಮಾಡಿಕೊಳ್ಳದೆ ಶಾಂತಿಗಾಗಿ ಹೋರಾಡುವೆವು." ಎಂದು ವಿಕ್ರಮಾದಿತ್ಯನು ಉದ್ಗಾರ ತೆಗೆದನು. ಚಲಬ್ಬೆಯ ಕಲ್ಲು ಚಲಬ್ಬೆ ಚಿರಜೀವಿ ಎಂದೇ ಹೇಳುತ್ತಿದೆ.

ಇಂದಿಗೂ ಪಟ್ಟದಕಲ್ಲಿನ ಅನತಿದೂರದಲ್ಲಿ ನಿಂತ ವೀರಗಲ್ಲು ಅವಳ ಕಥೆಯನ್ನು ಹೇಳುತ್ತಿದೆ. ಆ ಮಹಾಶಿಲ್ಪಿ ಗುಂಡನು ಅನಿವಾರಿತಾಚಾರಿ ಎಂಬ ಬಿರುದನ್ನೂ ದೊರೆಯಿಂದ ಮರ್ಯಾದೆಯನ್ನೂ ಪಡೆದು ಕಟ್ಟಿದ ಲೋಕೇಶ್ವರ ಹಾಗು ತ್ರೈಲೋಕೇಶ್ವರ ದೇವಾಲಯಗಳು ಚಲುಕ್ಯರ ಕಲಾವೈಭವವನ್ನು ಹಾಗು ದಂಡಯಾತ್ರೆಗಳನ್ನು ಸಾರುತ್ತಿದ್ದರೂ ಮಹಾಶಿಲ್ಪಿಯ ರೌದ್ರ ನಾಟಕದ ದುರಂತವನ್ನು ಮುಚ್ಚಿಟ್ಟಿವೆ. ಲೋಕೇಶ್ವರ ದೇವಾಲಯದ ಮುಂದಿನ ಶಾಸನದ ಮಧ್ಯದ ಎರಡು ಸಾಲುಗಳು ಯಾರಿಗೂ ಅರ್ಥವಾಗವೆಂದು ಸಂಶೋಧಕರು ಇಂದು ಹೇಳುವ ಸಾಲುಗಳನ್ನು ಅಂದು ಚಲಬ್ಬೆ ಅಳಿಸಿರಬೇಕು. ದೇವಾಲಯದ ಚಿತ್ರಗಳ ಮೇಲೆ ಇಂದಿಗೂ ಕಾಣುವ ರಸಿಕ ದಂಪತಿಗಳ ಚಿತ್ರಗಳನ್ನು ಮಹಾಶಿಲ್ಪಿ ಪ್ರೇಯಸಿಯನ್ನು ನೆನಪು ಮಾಡಿಕೊಂಡು ಬಿಡಿಸಿರಬೇಕು.



## ವರ್ಷ ಭವಿಷ್ಯ (೭೬ ನೇ ಪುಟದಿಂದ ಬಂದುದು)

ಮಾತ್ರ ಚೆನ್ನಾಗಿ ಸಿಕ್ಕುವುದಿಲ್ಲ. ಪುಷ್ಕಳ ಸ್ವಪ್ನಗಳು ಶುಭ ಮತ್ತು ಭಾವೀ ಸೂಚಕ ಬೀಳುವವು. ಫೆಬ್ರುವರಿಯಿಂದ ಸ್ಥಾವರ ಜಂಗಮ ವಸ್ತುಗಳು ಇಲ್ಲವೆ ರೋಖ ಹಣದ ಸಂಗ್ರಹ—ಮೂಲತಃ ಗ್ರಹಗಳ ಯೋಗಾನುಸಾರ ಹೆಚ್ಚುಕಡಿಮೆ ಪ್ರಮಾಣದಲ್ಲಿ ಖಾತ್ರಿಯಿಂದ ಆಗುವದು. ಪ್ರಿಯ ಮನುಷ್ಯರು ಮೇಲಿಂದ ಮೇಲೆ ಭೆಟ್ಟಿಯಾಗುವರು.

ಜುಲೈ ೨೫ ರ ನಂತರ ಹಡೆವ ಸ್ತ್ರೀಯರು ಅತ್ಯಂತ ಸುಲಭವಾಗಿ ಹಡೆಯುವರು. ಅದರಂತೆ ಫೆಬ್ರುಅರಿ ೧೦ ರಿಂದ ಎಪ್ರಿಲ ೨೬ ರ ವರೆಗೂ ಹಾಗೆಯೇ ಆಗುವದು. ನವಂಬರ ೨೦ ರಿಂದ ಫೆಬ್ರುಅರಿ ೧ ರ ಅವಧಿಯಲ್ಲಿ ಹಡೆದರೆ ಬಹಳ ಕಷ್ಟವೆನಿಸುವದು. ಫೆಬ್ರುಅರಿ ೧೦ ರ ವರೆಗೆ ಹುಟ್ಟುವ ಮಕ್ಕಳು ಬಹಳ ಅಶಕ್ತ ಆದರೆ ಅನಂತರ ಹುಟ್ಟುವ ಮಕ್ಕಳು ಬಹಳ ಸಶಕ್ತರಿರುವರು. ಜುಲೈ ೨೫ ರ ವರೆಗೆ ಕನ್ಯಾ ಅನಂತರ ಗಂಡು ಹುಟ್ಟುವವು.

ಫೆಬ್ರುಅರಿ ೧೦ ರ ನಂತರ ಪರೀಕ್ಷೆಯಾದರೆ ವಿದ್ಯಾರ್ಥಿಗಳು ಪಾಸಾಗಿಯೇ ತೀರುವರು. ಅದರಲ್ಲಿಯೂ ಜುಲೈ ೨೫ ರ ನಂತರ ಪರೀಕ್ಷೆಯಿದ್ದವರು ಮೊದಲನೇ ವರ್ಗದಲ್ಲಿ ಕನಿಷ್ಟ ೨ ನೇ ವರ್ಗದಲ್ಲಿಯಾದರೂ ಪಾಸಾಗುವದು ನಿಶ್ಚಿತ.

**ಸರ್ವೇ ಜನಾಃ ಸುಖಿನೋ ಭವಂತು**



# ಪಾಶ್ಚಾತ್ಯ-ಆಧುನಿಕ ತತ್ತ್ವಜ್ಞಾನಿಗಳು—ತತ್ತ್ವಜ್ಞಾನ

ತತ್ತ್ವಜ್ಞಾನದಲ್ಲಿ ಭೌತವಾದವು ಪ್ರಬಲವಾಗಲು ಅದನ್ನು ಕಡಿಮೆ ಮಾಡಲು ಈ ಶತಮಾನದಲ್ಲಿ ತತ್ತ್ವಜ್ಞಾನಿಗಳು ಧ್ಯೇಯವಾದವನ್ನು ಒಲಿದರು. ಆದರೆ ಅವರು ಭೌತವಾದದ ಮೋಹದಿಂದ ಪೂರ್ಣ ಮುಕ್ತರಾಗುವುದು ಸಾಧ್ಯವಾಗಲಿಲ್ಲ. ತತ್ತ್ವಜ್ಞಾನಿಗಳು ಇವು ಎರಡನ್ನೂ ಅನುಸರಿಸುತ್ತಿರುವುದನ್ನು ಮೂವರು ತತ್ತ್ವಜ್ಞಾನಿಗಳ ನಿದರ್ಶನದಿಂದ ಲೇಖಕರು ಇಲ್ಲಿ ನಿರೂಪಿಸಿರುವರು.

ಲೇಖಕರು :
ಶ್ರೀ. ಗು. ಭೀ. ಜೋಶಿ, ಎಂ. ಎ., ಬಿ. ಟಿ.
ಶಿರಹಟ್ಟಿ

ಹತ್ತೊಂಬತ್ತನೇ ಶತಮಾನದ ಭೌತಶಾಸ್ತ್ರದ ಒತ್ತಡದ ಪರಿಣಾಮವಾಗಿ ಭೌತವಾದವು ತತ್ತ್ವಜ್ಞಾನದಲ್ಲಿ ಬಹಳ ಪ್ರಬಲವಾಯಿತು. ಇದಕ್ಕೆ ಪ್ರತಿಗಾಮಿಯಾಗಿ ಇಪ್ಪತ್ತನೇ ಶತಮಾನದಲ್ಲಿ ಧ್ಯೇಯವಾದ ( Idealism ) ದ ಕಡೆಗೆ ಅದರ ಒಲವು ಹೆಚ್ಚಾಯಿತು. ಆದರೆ ಭೌತವಾದದ ಸಂಬಂಧವನ್ನೇನೂ ಅದು ಕಡಿದುಕೊಳ್ಳಲಿಲ್ಲ. ತನ್ನ ಗಂಡನು ಇನ್ನೊಬ್ಬ ಪ್ರೇಯಸಿಯೊಡನೆ ಪ್ರೀತಿ ವ್ಯವಹಾರವನ್ನು ನಡೆಸಿದ ಸಂಗತಿಯನ್ನು ಅರಿತ ಚಾಣಾಕ್ಷ ಹೆಂಡತಿಯಂತೆ ವಿಜ್ಞಾನವು ತತ್ತ್ವಜ್ಞಾನದೊಡನೆ ತನ್ನ ಮೊದಲಿನ ಬಿಗುವನ್ನು ಸಡಿಲಿಸಿ ಅನುನಯವನ್ನು ಪ್ರಾರಂಭಿಸಿ ತನ್ನ ಅಂಕಿತದಲ್ಲಿ ಅದನ್ನು ಇಡಲು ಹವಣಿಸಿತು; ತತ್ತ್ವಜ್ಞಾನವು ಸಂಪನ್ನ ಹೆಂಡತಿಯ ಸಹವಾಸವನ್ನು ತಪ್ಪಿಸಿಕೊಂಡರೆ ಬರುವ ಅಲೌಕಿಕಕ್ಕೆ ಹೆದರಿ ಅವಳ ಗೌರವವನ್ನು ಕಾಯ್ದರೂ ಧ್ಯೇಯದೊಡನೆ ತನ್ನ ಶೃಂಗಾರವಿಲಾಸವನ್ನು ಹೆಚ್ಚಿಸಿತು. ಈ ವಿಷಯವನ್ನೇ ಉದಾಹರಿಸುವಂತೆ ಮೂವರು ತತ್ತ್ವಜ್ಞಾನಿಗಳನ್ನು ಆಯ್ದುಕೊಂಡಿದ್ದೇನೆ.

ಮೊದಲಿಗನು ಕಾಲಕ್ರಮದಲ್ಲಿ (೧೮೪೨-೧೯೧೦) ಅಮೇರಿಕಾ ದೇಶದ ವಿಲಿಯಮ ಜೇಮ್ಸನು. ಜೀವನದಲ್ಲಿ ಇವನಿಗೆ ಆಳವಾದ ಅವಗಾಹನೆಯಿದೆ; ಮಾನವನ ಸ್ವಾತಂತ್ರ್ಯದಲ್ಲಿ ವಿಶ್ವಾಸವಿದೆ; ಪ್ರಗತಿಯ ಆಶೆಯಿದೆ. ಇವೆರಡೂ ಲೋಕಕ್ಕೆ ಆಶೆಯ ಸಂದೇಶವನ್ನು ಬೀರುತ್ತವೆ. ಜನರು ತಮ್ಮಲ್ಲಿಯೂ ದೇವನಲ್ಲಿಯೂ ಪ್ರಕೃತಿಯಲ್ಲಿಯೂ ನಂಬುಗೆಯನ್ನೂ ಪ್ರೀತಿಯನ್ನೂ ಹೆಚ್ಚಿಸಲು ಉತ್ತೇಜಿಸುತ್ತಾನೆ. ಇವನ ತತ್ತ್ವವಾದವು ವ್ಯಾವಹಾರಿಕ ಉಪಯೋಗಿತಾವಾದವು. ಈ ವಾದವು ಭೌತಶಾಸ್ತ್ರದೊಡನೆ ಸಂಬಂಧ ಇಟ್ಟುಕೊಂಡು ಮಾನವನ ಹಿರಿ ಆಶೆಗಳಿಗೆ ಅನ್ನ ನೀಡುತ್ತದೆ. ಮೇಲಾಗಿ ಇವನ ತತ್ತ್ವಜ್ಞಾನವು ಜನಸಾಮಾನ್ಯಕ್ಕೆ, ದುಡಿದು ಹೊಟ್ಟೆ ತುಂಬಿಸಿಕೊಳ್ಳುವ ಜನರಿಗೆ ಹೆಚ್ಚು ಹಿಡಿಸುತ್ತದೆ. ಇವನ ದೇವವಾದ, ಜೊತೆಗೆ ವ್ಯಾವಹಾರಿಕ ಲಾಭ, ಹಣಕಾಸಿನ ಬೆಲೆಗಳಲ್ಲಿ ತೋರಿದ ಮನೋಮಾರ್ದವ ಮತ್ತು ಕಾಡನ್ನು ಸುಂದರನಾಡನ್ನು ಮಾಡಿದ ಕಠೋರ ಧೈರ್ಯಗಳೆಲ್ಲವೂ ಅಮೇರಿಕೆಯ ನಾಗರಿಕನ ಆದರ್ಶ ಮನೋವೃತ್ತಿಯೇ.

ಇವನು ನ್ಯೂಯಾರ್ಕ ಪಟ್ಟಣದಲ್ಲಿ ೧೮೪೨ ರಲ್ಲಿ ಜನಿಸಿದನು. ಇವನ ತಂದೆಯು ದೇವಭಕ್ತನಾದರೂ ವಿನೋದಶೀಲನೂ ವ್ಯವಹಾರ ಚತುರನೂ ಆಗಿದ್ದನು. ಮಗನಲ್ಲಿಯೂ ಈ ಮೂರು ಗುಣಗಳಿಗೆ ಕೊರತೆ ಇದ್ದಿಲ್ಲ. ಸ್ವಲ್ಪ ದಿವಸ ಶಾಲೆ ಕಲಿತಮೇಲೆ ಇವನ ತಂದೆಯು ಇವನ ಸಹೋದರನಾದ ಹೇನ್ರಿಯೊಡನೆ ಇವನನ್ನು ಫ್ರಾನ್ಸ ದೇಶಕ್ಕೆ ಅಭ್ಯಾಸಕ್ಕಾಗಿ ಕಳುಹಿಸಿದನು. ಅಲ್ಲಿ ಇವರಿಬ್ಬರೂ ಮಾನಸಶಾಸ್ತ್ರವನ್ನು ಅಭ್ಯಾಸ ಮಾಡಿದರು. “ಇವರಿಬ್ಬರಲ್ಲಿ ಒಬ್ಬನು ಮಾನಸಶಾಸ್ತ್ರವನ್ನು ಕಲ್ಪಿತ ಕಥೆಯಂತೆ ಬರೆದರೆ ಇನ್ನೊಬ್ಬನು ಕಲ್ಪಿತ ಕಥೆಯನ್ನು ಮಾನಸಶಾಸ್ತ್ರದಂತೆ ಬರೆದನು.” ಆಮೇಲೆ ಜೇಮ್ಸನು ಅಮೇರಿಕಾದೇಶಕ್ಕೆ ಮರಳಿದನು. ಹಾರ್ವರ್ಡದಲ್ಲಿ M.D. ಡಿಗ್ರಿ ತೆಗೆದುಕೊಂಡು ಅಲ್ಲಿಯೇ ಮೊದಲು ಶರೀರರಚನಾಶಾಸ್ತ್ರವನ್ನು ಆಮೇಲೆ ಮಾನಸಶಾಸ್ತ್ರವನ್ನು ಕೊನೆಗೆ ತತ್ತ್ವಜ್ಞಾನವನ್ನು ಕಲಿಸಿದನು. ಇವನ ಮೊದಲಿನ ಗ್ರಂಥವು ‘ಮಾನಸಶಾಸ್ತ್ರದ ಮೂಲತತ್ತ್ವಗಳು’ ಇವನನ್ನು ಪ್ರಸಿದ್ಧಿಗೆ ತಂದಿತು. ಅದರಲ್ಲಿ ಶರೀರರಚನಾ ಶಾಸ್ತ್ರವದೆ, ಮಾನಸಶಾಸ್ತ್ರವದೆ, ತತ್ತ್ವಜ್ಞಾನವದೆ.

ಆವನ ವಿಶ್ಲೇಷಣಾಭಿರುಚಿಯು ಅವನನ್ನು ನೇರವಾಗಿ ತತ್ತ್ವಜ್ಞಾನಕ್ಕೆ ಮುಟ್ಟಿಸಿತು. ಅವನ ಅಭಿಪ್ರಾಯದಂತೆ ಸರ್ವಸಂಗ್ರಾಹಕವಾದ ಸ್ಪಷ್ಟ ವಿಚಾರವೇ ತತ್ತ್ವಜ್ಞಾನವು. ಇವನ ಎರಡನೇ ಪ್ರಸಿದ್ಧ ಕೃತಿಯೇ “ಪರಮಾತ್ಮಾನುಭವ ವೈವಿಧ್ಯ.” ಆಮೇಲೆ “ವ್ಯಾವಹಾರಿಕ ಉಪಯೋಗಿತಾವಾದವು” ಹೊರಬಿತ್ತು. “ಅನೇಕತ್ವವಿಶಿಷ್ಟ ವಿಶ್ವವು” ಅವನ ಮತ್ತೊಂದು ಗ್ರಂಥವು.

## ಉಪಯೋಗಿತಾವಾದ

ಜೇಮ್ಸನಿಗೆ ಜೇಡರಹುಳದಂತೆ ತನ್ನ ಮೈಯೊಳಗಿಂದ ಎಳೆಗಳನ್ನು ಹಿರಿದು ಸುತ್ತಿಕೊಳ್ಳುವ ತತ್ತ್ವಜ್ಞಾನವು ಸೇರುವದಿಲ್ಲ. ಅವನು ಬುದ್ಧಿಯು ಬಾಹ್ಯ ವಸ್ತುವಿನಕಿಂತ ಬೇರೆಯಾದರೂ ಅದು ಬಾಹ್ಯ ವಸ್ತುವಿಗೆ ಹಿಡಿದ ಕನ್ನಡಿಯೆಂದು ತಿಳಿಯುತ್ತಾನೆ. ಅದು ಬರೀ ಅಸಂಗತವಾದ ಅನೇಕ ವಸ್ತುಗಳನ್ನಷ್ಟೇ ತೋರಿಸದೆ ಅವುಗಳ ಸಂಬಂಧವನ್ನೂ ಪ್ರಕಟಿಸುತ್ತಿದೆ. ವಸ್ತುಸಂವೇದನೆಯಲ್ಲಿಯೇ ಅದರ ಅರ್ಥವೂ ಅದರ ಕ್ರಮವೂ ಇದ್ದೇ ಇರುತ್ತದೆ.

ಪ್ರಜ್ಞೆಯೆಂದರೆ ಒಂದು ವಸ್ತುವಲ್ಲ; ಅದೊಂದು ಪ್ರವಾಹವು; ಒಂದು ಸಂಬಂಧಗಳ ಜಾಲವು. ಇದರಲ್ಲಿ ( ಜ್ಞಾನದಲ್ಲಿ ) ಕರ್ತೃಕರ್ಮಭಾವವು ( ತಿಳಿಯುವವನು ಕರ್ತಾ, ತಿಳಿದುದು ಕರ್ಮ) ಮೂಲಭೂತವಾದುದಲ್ಲ. ಕೆಲವು ಕರ್ತೃಗಳೇ, ಕೆಲವು ಕರ್ಮಗಳೇ ಎಂದು ಮೂಲದಿಂದಲೇ ವಿಂಗಡಿಸಲ್ಪಟ್ಟಿಲ್ಲ. ಮೂಲಭೂತವಾದುದು ಶುದ್ಧ ಅನುಭವವು. ತಿಳಿಯುವುದು ಎಂದರೆ ಒಂದು ‘ಶುದ್ಧ ಅನುಭವಕ್ಕೂ’ ಇನ್ನೊಂದು ‘ಶುದ್ಧ ಅನುಭವಕ್ಕೂ’ ಇರುವ ಸಂಬಂಧವು. ಒಮ್ಮೆ ಶುದ್ಧ ಅನುಭವವು ಒಂದು ಸಂದರ್ಭದಲ್ಲಿ ಕರ್ತೃವಾಗಬಹುದು. ಇನ್ನೊಂದು ಸಂದರ್ಭದಲ್ಲಿ ಅದೇ ಕರ್ಮವಾಗಬಹುದು. ಈ ಶುದ್ಧ ಅನುಭವವೆಂದರೆ “ಮುಂದಿನ ವಿಚಾರಕ್ಕೆ ವಿಷಯಗಳನ್ನು ಒದಗಿಸುವ ಜಗತ್‌ಪ್ರವಾಹವು” ಈ ಜಗತ್ತು ಮನೋನಿರ್ಮಿತವೂ ಅಲ್ಲ ಭೂತ-ನಿರ್ಮಿತವೂ ಅಲ್ಲ. ಇವೆರಡರ ಮೊದಲು ಇದ್ದುದೇ ಪ್ರಪಂಚದ ಮೂಲ ತತ್ತ್ವವು.

ಅನುಭವವು ಜಗತ್ತಿನ ಮೂಲ ತತ್ತ್ವವಾಗಲಾರದೆಂದು ರಸೆಲ್ಲರು ವಾದಿಸುತ್ತಾರೆ. ಅವರು ಹೇಳುವದೇನಂದರೆ— “ಅನುಭೂತವಾದ ಸಂಗತಿಯು ಸಜೀವ ಪ್ರಾಣಿ ಇದ್ದಲ್ಲಿಯೇ

ಇದೆ. ಮರುಪ್ರದೇಶದಲ್ಲಿ ಮಳೆ ಬೀಳುತ್ತಿದ್ದರೂ ಅಲ್ಲಿ ಪ್ರಾಣಿಗಳಿಲ್ಲದ್ದರಿಂದ ಅದು ಅನುಭೂತವಾಗುವದಿಲ್ಲ. ಪ್ರಾಣಿಗಳಿದ್ದಲ್ಲೆಲ್ಲ ಅನುಭವವಾಗುತ್ತದೆಂದು ಹೇಳುವದಕ್ಕೂ ಸಾಧ್ಯವಿಲ್ಲ. ನನಗೆ ಎಷ್ಟೋ ಸಂಗತಿಗಳು ಅನುಭೂತವಾಗದೆ ಜರುಗಿ ಹೋಗುತ್ತವೆ. ನನಗೆ ನೆನಪು ಇದ್ದುದೆಲ್ಲ ಅನುಭೂತವಾಗಿರುತ್ತದೆ. ಆದರೆ ನನಗೆ ಅನುಭವಬಂದಿದ್ದರೂ ಒಂದು ಸಂಸ್ಕಾರವನ್ನು ಹುಟ್ಟಿಸಿ ಅದು ಮರೆತು ಹೋಗಿರಬಹುದು. ಸಂಸ್ಕಾರವು ಚಟದಲ್ಲಿ ಪರಿಣಮಿಸುವದು. ಇದು ಜೀವಂತ ಪ್ರಾಣಿಗಳಲ್ಲಿ ಸಾಧ್ಯ. ನಿರ್ಜೀವ ಜಡವಸ್ತುವಿಗೆ ಈ ಅನುಭವ ಹೇಗೆ ಸಾಧ್ಯ? ಕೈಸುಟ್ಟುಕೊಂಡ ಕೂಸು ಬೆಂಕಿಗೆ ಹೆದರುತ್ತದೆ. ಸವಟನ್ನು ಎಷ್ಟು ಸಾರೆ ಬೆಂಕಿಯಲ್ಲಿಟ್ಟರೂ ಅದಕ್ಕೆ ಹೆದರುವ ಚಟ ಬೆಳೆಯುವದಿಲ್ಲ. ಆದುದರಿಂದ ಅನುಭವವು ಜಗತ್ತಿನ ಮೂಲ ತತ್ತ್ವವಾಗಲಾರದು."

ಜೇಮ್ಸನು 'ಸತ್ಯವನ್ನು ನಂಬಿರಿ' 'ಅಸತ್ಯವನ್ನು ಜರಿಯಿರಿ' ಎಂದು ಹೇಳುತ್ತಾನೆ. ಆದರೆ ನಂಬುವದು ಜರಿಯುವದು ಎಂದು ಎರಡೇ ಪಕ್ಷಗಳಿರುವದು ಬಹಳ ಸಾರೆ ಸಾಧ್ಯವಿಲ್ಲ. ನಂಬದೆ ಜರಿಯದೆ ಸಂದೇಹವನ್ನೂ ತಾಳಬಹುದು. ಮಳೆ ಆಗಬಹುದೆಂಬ ಸಂದೇಹದಿಂದಲೂ ಹೊಲ ಬಿತ್ತುತ್ತೇನೆ. ಆದರೆ ಇವನ 'ಸತ್ಯವನ್ನು ನಂಬಿರಿ' ಎನ್ನುವದನ್ನು ಅವನ ಉಪಯೋಗಿತಾವಾದದೊಡನೆ ವಿಚಾರಿಸಿದಾಗ ಅದರ ಅರ್ಥವು ಸರಿಯಾಗಿ ತಿಳಿಯುತ್ತಿದೆ.

ಸತ್ಯವೆಂದರೆ "ನಂಬಿದಾಗ ಯಾವದು ನಮಗೆ ಹಿತಕಾರಿಯಾಗಿದೆಯೋ ಅದು" ಯಾವದೇ ವಾದವು ಮನುಷ್ಯನನ್ನು ಸದ್ಗುಣಿಯನ್ನೂ ಸುಖಿಯನ್ನೂ ಮಾಡಿದರೆ ಅದು ಸತ್ಯವೆನಿಸುವದು. ವಿಚಾರಗಳು ನಮ್ಮ ಉಳಿದ ಅನುಭವಗಳೊಡನೆ ನಮಗೆ ಸರಿಯಾದ ಸಂಬಂಧ ಬೆಳಿಸಲಿಕ್ಕೆ ನೆರವಾದರೆ ಅವು ಸತ್ಯವೆನಿಸುವವೆಂದು ಜೇಮ್ಸನ ಮತ. ಸತ್ಯವಿಚಾರವು ತತ್ತ್ವದೊಡನೆ ಹೊಂದಿಕೆಯಾಗಬೇಕೆಂದರೆ ಅದರ ಪ್ರತಿಬಿಂಬವಾಗಬೇಕೆಂದಲ್ಲ. ಆದರೆ "ತತ್ತ್ವದೊಡನೆ ಹೊಂದಾಣಿಕೆ ಎಂದರೆ ಆ ವಿಚಾರವು ನಮ್ಮನ್ನು ತತ್ತ್ವದ ಸಮೀಪಕ್ಕೆ ಅಥವಾ ಅದರ ಪರಿಸರಕ್ಕೆ ಒಯ್ದು ಮುಟ್ಟಿಸಬೇಕು, ಅಥವಾ ಅದರೊಡನೆಯಾಗಲಿ ಅದಕ್ಕೆ ಸಂಬಂಧಪಟ್ಟದ್ದರೊಡನೆಯಾಗಲಿ ಕಾರ್ಯಕಾರಿಯಾದ ಸಂಬಂಧ ಬೆಳಿಸಿ, ಅದನ್ನು ಒಪ್ಪದೆ ಇದ್ದುದರಕ್ಕಿಂತ ವಿಶೇಷವಾದ ರೀತಿಯಿಂದ ಅದನ್ನಾಗಲಿ ಅದಕ್ಕೆ ಸಂಬಂಧಪಟ್ಟದ್ದನ್ನಾಗಲಿ ಉಪಯೋಗಿಸುವಂತೆ ಸಹಾಯ ನೀಡಬೇಕು".

ಇದರ ಫಲವು ಅವನ ಉಪಯೋಗಿತಾವಾದದಲ್ಲಿ ಕಂಡುಬರುತ್ತದೆ. ಯಾವದೇ ವಾದವು ನಮಗೆ ಉಪಯುಕ್ತವಾದರೆ ಅದನ್ನು ನಾವು ತ್ಯಜಿಸಲಾರೆವು. ದೇವರು ಇದ್ದಾನೆಂಬ ವಾದವು ಸಮಾಧಾನಕರನಾಗಿ ಕಂಡುಬಂದರೆ ಅದು ಸತ್ಯವಾದುದು. ಅನುಭಾವಿಗಳ ಅನುಭವವನ್ನು ಪ್ರಮಾಣವೆಂದು ನಂಬಬೇಕು. ಹೆಚ್ಚಿನ ಶಕ್ತಿಗಳು ಜಗತ್ತನ್ನು ಆದರ್ಶಮಾರ್ಗದಲ್ಲಿ ಒಯ್ಯಲು ಕೆಲಸ ಮಾಡುತ್ತವೆಂದು ವಿಶ್ವಸಿಸಬೇಕು, ಎಂದು ಮೊದಲಾಗಿ ಜೇಮ್ಸನು ಹೇಳಿದ್ದಾನೆ.

ಆದರೆ ಒಂದು ವಾದದ ಒಳ್ಳೆ ಪರಿಣಾಮದ ಮೇಲೆಯೇ ಅದರ ಸತ್ಯತೆಯು ನಿರ್ಧಾರವಾಗುತ್ತಿದ್ದರೆ ನಾವು ಮೊದಲು— (೧) ಒಳ್ಳೇದು ಯಾವುದು? (೨) ಈ ವಾದದ ಪರಿಣಾಮವೇನು? ಎಂಬುದನ್ನು ಅದು ಸತ್ಯವೆಂದು ತಿಳಿಯಲಿಕ್ಕೆ ಹೇಳಬೇಕು. ಪರಿಣಾಮವನ್ನು ಹೇಳುವದು ಕಷ್ಟ; ಅದು ಒಳ್ಳೇದು ಕೆಟ್ಟದ್ದು ಎಂದು ನಿರ್ಧರಿಸುವದು ಮತ್ತಿಷ್ಟು ಕಷ್ಟ. ಇನ್ನು ವಾದದ ಸತ್ಯತೆಯನ್ನು ನಿರ್ಧರಿಸಲಿಕ್ಕೆ ಆ ವಾದದ ಪರಿಣಾಮದ ಮಾಪನವು ಸತ್ಯವೆಂದು ಒಪ್ಪಬೇಕು. ಈ ಎರಡನೆಯದರ ಸತ್ಯತೆಯನ್ನು ಒಪ್ಪಲಿಕ್ಕೆ ಅದರ ಪರಿಣಾಮವು ಒಳ್ಳೇದಿರಬೇಕು. ಹೀಗೆಯೇ ಅನವಸ್ಥೆಯು ತಪ್ಪಿದ್ದಲ್ಲ. ಇದು ಅಲ್ಲದೆ ಒಂದು ವಸ್ತುವು ಇದೆಯೊ ಇಲ್ಲವೊ ಎನ್ನುವದರ ಶೋಧದ ಬದಲು ಅದರ ಪರಿಣಾಮದ ಶೋಧವೇ ಬೆಳೆಯುವದು; ಮತ್ತು ವಸ್ತುವಿಲ್ಲದಿದ್ದರೂ 'ಅದು ಇದೆ' ಎಂಬ ವಿಶ್ವಾಸದ ಫಲವು ಒಳ್ಳೇದಿದ್ದರೆ ಅದು ಇದೆ ಎನ್ನಬೇಕಾಗುವದು. ಕತ್ತೆಯನ್ನು ಹುಗಿದ ಸಮಾಧಿಗೆ ಗುರುವಿನ ಸಮಾಧಿಯೆಂದು ನಡಕೊಂಡ ಜನರು ಭಾವಿಕರಾಗಿದ್ದರೆ ಅದು ಗುರುವಿನ ಸಮಾಧಿಯೆನ್ನುವದು ನಿಜವಾಗಬೇಕಾಗುವದು.

ಮೇಲಾಗಿ ಭಕ್ತನಿಗೆ ದೇವರು ಬೇಕು; ಅವನು ಸತ್ಯನಾಗಿರುವದು ಬೇಕು. ಅವನು

ಇರುವನೆಂಬ ವಿಶ್ವಾಸದ ಪರಿಣಾಮವು ಅವನಿಗೆ ದೂರದ ಸಂಗತಿ.

### ವ್ಹಾಯಿಟಹೆಡ್ಡನ ಕೊಡುಗೆ

ಭೌತಶಾಸ್ತ್ರಕ್ಕೂ ಈಶ್ವರನ ಅಸ್ತಿತ್ವಕ್ಕೂ ಮೇಲೆ ಮೇಲೆ ತೋರುತ್ತಿರುವ ವಿರೋಧವನ್ನು ಪರಿಹರಿಸಿದವರಲ್ಲಿ ವ್ಹಾಯಿಟಹೆಡ್ಡನ ಹೆಸರು ಕೇಳಬರುತ್ತದೆ. ಇವನು ಒಳ್ಳೇ ಕುಶಲನಾದ ತಾರ್ಕಿಕನು, ವಿಶ್ವತೋಮುಖಿಯಾದ ತತ್ತ್ವಜ್ಞಾನಿಯೂ ಮತ್ತು ವೈಜ್ಞಾನಿಕ ಮೀಮಾಂಸಕನು. ಇವನ ಸೇಂದ್ರಿಯ ತತ್ತ್ವಜ್ಞಾನವು ಧರ್ಮ, ನೀತಿ, ಭೌತಶಾಸ್ತ್ರಗಳ ವಿರೋಧ ಪರಿಹರಿಸಿ ಸರ್ವಸಂಗ್ರಾಹಕವಾದ ತತ್ತ್ವಮಂದಿರವನ್ನು ಕಟ್ಟಿದೆ. ಮೊದಲು ಇವನು ತಾರ್ಕಿಕನು, ವಿಜ್ಞಾನವಾದಿಯೂ ಆಗಿ ಕೊನೆಗೆ ತತ್ತ್ವಜ್ಞಾನಿಯಾದನು. ಇವನ ಹಿರಿಯ ಹೊತ್ತಿಗೆ 'ಕ್ರಮ ಮತ್ತು ತತ್ತ್ವ'.

ಇವನ ಸೇಂದ್ರಿಯ ತತ್ತ್ವಜ್ಞಾನದಲ್ಲಿ ಜಗತ್ತು ಸಜೀವವಾದದ್ದು. ಇದನ್ನು ಅವನು ಆಧುನಿಕ ವಿಜ್ಞಾನದಿಂದ ಮತ್ತು ಗಣಿತಶಾಸ್ತ್ರದಿಂದ ಸಿದ್ಧಮಾಡುತ್ತಾನೆ. ಈ ಧೈರ್ಯಶಾಲಿಯಾದ ಈಶ್ವರವಾದಿಯು ಬುದ್ಧಿವಾದಿಗಳನ್ನೂ ಭೌತವಾದಿಗಳನ್ನೂ ಪ್ರತ್ಯಕ್ಷವಾದಿಗಳನ್ನೂ ಅವರ ಎದುರಿಗೆ ನಿಂತೇ ಅವರನ್ನು ಕೆಣಕುತ್ತಾನೆ.

ಜೀವನವೆಂದರೆ ಸ್ವರಮಣತೆಯು ಸಾತಂತ್ರ್ಯವು. ಈ ಸ್ವರಮಣತೆಯು ಸುತ್ತಲಿನ ಪರಿಸರವನ್ನು ವ್ಯಕ್ತಿಗತಮಾಡುವದರಲ್ಲಿದೆ, ಇದೇ ಅನುಭವವು. ಈ ಅನೇಕ ವ್ಯಕ್ತಿಗಳು ಸಾಮೂಹಿಕ ವ್ಯಕ್ತಿಯಾಗಿ ವಿಕಸಿಸುವ ವಿಶ್ವದ ಅಂಗಗಳಾಗಿ ನಿತ್ಯದಲ್ಲಿ ರಚನಾತ್ಮಕ ವಿಕಾಸದ ಪ್ರಗತಿಯಲ್ಲಿ ತೊಡಗಿವೆ. ಈ ಪ್ರಗತಿಕ್ರಮವು ಸಂಭಾವ್ಯ (Potential) ವಾದುದು ಸಂಭೂತ ( actual ) ವಾಗುವದರಲ್ಲಿ ಪ್ರಕಟವಾಗುತ್ತದೆ. ಅನಂತ ಸಂಭಾವ್ಯಗಳನ್ನು ಪರಿತ್ಯಜಿಸಿ ಏಕ-ಸಂಭೂತದ ಕಡೆಗೆ ಧಾವಿಸುವದೇ 'ಗುರಿ' ಎನಿಸುವದು. ಎಲ್ಲ ತತ್ತ್ವವಾದಗಳೂ ನೋಡಿದ ಸಂಗತಿಗಳ ಸುಸಂಗತ ವಿವೇಚನೆಯಾಗಿವೆ.

ವ್ಹಾಯಿಟಹೆಡ್ಡನ ವಿಶ್ವದಲ್ಲಿ ವಸ್ತುಗಳು ಪರಸ್ಪರ ಸಂಬಂಧವುಳ್ಳವಾಗಿವೆ. ಒಂದು ವಸ್ತುವು ಇನ್ನೊಂದು ವಸ್ತುವಿನ ಸಂಬಂಧವನ್ನು 'ಅನುಭವಿಸುತ್ತದೆ'. ಈ ಸಂಬಂಧಕ್ಕೆ 'ಭಾವನೆ' ಯೆಂದು ಕರೆಯುತ್ತಾನೆ. ದೇಶಕಾಲದ ಚೌಕಟ್ಟಿನಲ್ಲಿ ಬಂದ ಸಂಗತಿಗಳ ಪ್ರವಾಹದಿಂದ ಬೇರೆಯಾಗಿ 'ನಿತ್ಯವಸ್ತುಗಳನ್ನು' ಒಪ್ಪುತ್ತಾನೆ. ಇದೇ ಸಂಭಾವ್ಯ ವಸ್ತುಗಳಿಂದ ತುಂಬಿದ ರಾಜ್ಯ. ಈ ಅನಂತ ಸಂಭಾವ್ಯಗಳಲ್ಲಿ ಒಂದನ್ನೇ ಆರಿಸಿ ಅದನ್ನು ನಮ್ಮ ಜಗತ್ತಿನಲ್ಲಿ ಸಂಭೂತವನ್ನಾಗಿ ಮಾಡುವವನೇ ಈಶ್ವರನು. ಹೀಗೆ ಸಂಭಾವ್ಯ ಸಂಭೂತಗಳಿಂದ ಕೂಡಿದ ಒಂದು ವಿಶ್ವವು ಪೂರ್ಣವೆನಿಸುವದು. ಪೂರ್ಣವು ಭಾಗಗಳಿಂದ ಬೇರೆ ಇದೆ; ಭಾಗಗಳ ಸ್ವರೂಪಕ್ಕೆ ತನ್ನ ಒತ್ತು ಮುದ್ರೆ ಹಾಕುತ್ತದೆ. ಈ ಪೂರ್ಣವು ಸಿದ್ಧವಲ್ಲ; ಸಾಧ್ಯವು. ಬೆಳೆಯುತ್ತಾ ಹೋಗುವದು. ನಿತ್ಯದಲ್ಲಿ ಒಂದು ವಸ್ತುವು ಇನ್ನೊಂದು ವಸ್ತುವಿನ ಸಂಬಂಧ ನೆನಿಸಿ ಅದಕ್ಕನುಗುಣವಾಗಿ ಬದಲಿಸುತ್ತಾ ಹೋಗುವದು. ಹೀಗೆ ಒಂದು ವಸ್ತುವು ವಿಶ್ವದಲ್ಲಿಯ ಎಲ್ಲ ವಸ್ತುಗಳೊಡನೆ ಸಂಬಂಧವುಳ್ಳದ್ದಿದೆ. ಒಂದು ವಸ್ತುವಿನ ಸಂದರ್ಭವೆಂದರೆ ಇಡೀ ವಿಶ್ವವೇ. ಭಾವಸಂಬಂಧದಂತೆ ಅಭಾವ ಸಂಬಂಧವೂ ಇದೆ. ದುಂಡನ್ನ ವಸ್ತುವು ಚೌಕ ವಸ್ತುವಿನಿಂದ ಭಿನ್ನವಾದುದರಿಂದ ಅದರಲ್ಲಿ ಚೌಕ-ಇಲ್ಲವೆಂದು ಹೇಳಲಿಕ್ಕೆ ಜಗತ್ತಿನೊಳಗಿನ ಎಲ್ಲ ವಸ್ತುಗಳೂ ಬೇಕಾಗುವವು.

### ಜಡಚೇತನಗಳ ಭೇದ

ಎಲ್ಲ ವಸ್ತುಗಳೂ ಭಾವನಾತ್ಮಕ( feeling ) ಸಂಬಂಧವುಳ್ಳವಾದುದರಿಂದ ಜಡಚೇತನಗಳ ಭೇದವು ಬರುವದಿಲ್ಲ. ಜಡಚೇತನಗಳ ವಿರೋಧವನ್ನು ಎದುರಿಸುವದು ಕಷ್ಟವಾಗುತ್ತಿತ್ತು. ಅದು ತಿಳಿದುಹೋಯಿತು. ಯಾಕೆಂದರೆ ಜಡಚೇತನಗಳು ಒಂದೆಯಾಗಿ ಕೂಡಿಸಿ ಮೂಲ ತತ್ತ್ವದಲ್ಲಿ ಅವುಗಳ ಅಸಾಧಾರಣ ಗುಣಧರ್ಮಗಳನ್ನು ಒಂದಕ್ಕೊಂದು ವಿನಿಮಯವಾಗುವಂತೆ ಮಾಡಿದರೆ ಅದು ವಿಶ್ವವಾಗುವದು ಎಂದು ಅವನ ಅಭಿಪ್ರಾಯ. ಹೀಗೆಂದರೆ ಜೀವ-ಜಡಗಳಲ್ಲಿ ಮೂಲಭೂತ ಭೇದವಿಲ್ಲ. ಜೀವವು ದೊಡ್ಡ ಸೇಂದ್ರಿಯ ಕೇಂದ್ರವಾದರೆ ಜಡವು ಸಣ್ಣ ಸೇಂದ್ರಿಯ ಕೇಂದ್ರವು ಮತ್ತು ಒಂದರ ಅಭ್ಯಾಸವನ್ನು ಪ್ರಾಣಿಶಾಸ್ತ್ರ ಮಾಡಿದರೆ ಇನ್ನೊಂದರ ಅಭ್ಯಾಸವನ್ನು ಪದಾರ್ಥವಿಜ್ಞಾನಶಾಸ್ತ್ರವು ಮಾಡುವದು. ಎಂದ ಮೇಲೆ ಒಂದು ವಸ್ತುವು(ಎಂದರೆ ಸಂಗತಿಯು ) ಇನ್ನೊಂದರ ಸಂಬಂಧವನ್ನು

ಅನುಭವಿಸುವದೆಂದರೆ ಅದು ಭಾವನೆಯೇ ಎನ್ನುವದು ಸರಿಯಾಗಿ ಕೂಡುವದು. ಅದು ದರಿಂದಲೇ ವಿಶ್ವವೆಲ್ಲ ಸಜೀವವಾದುದು. ಎಂದರೆ ಒಂದೊಂದಾಗಿ, ಬಿಡಿಬಿಡಿಯಾಗಿ ಅದು ಸಜೀವವೆಂದಲ್ಲ; ಆದರೆ ಅದರ ಅನಂತ ವಸ್ತುಗಳು ಸುಸಂಗತವಾಗಿ ಒಂದರಲ್ಲೊಂದು ಬೆರೆತು, ಒಂದು ಉಳಿದೆಲ್ಲದರ ಅಸ್ತಿತ್ವವನ್ನು ಅನುಭವಿಸಿ ಎಂದರೆ ಭಾವಿಸಿ ಬೆಳೆಯುತ್ತಿರುವಾಗ ವಿಶ್ವವು ಪ್ರಾಣಮಯವೆಂಬುದೇ ಅವರ ಅಭಿಪ್ರಾಯ.

ವಸ್ತುವೆಂದರೆ ಒಂದು ಸಂಗತಿ ಅಥವಾ ಸಂಭವ (event); ಈಗ ಆ ಸಂಭವವು ಒಂದು ಅನುಭವದ ಅವಕಾಶವೆಂದು ಗೊತ್ತಾಯಿತು. ಈ ಅನುಭವದ ಅವಕಾಶಗಳೆಂಬ ಸಂಗತಿಗಳೇ ವಿಶ್ವದ ಹಾಸುಹೊಕ್ಕುಗಳಾಗಿವೆ. ಇವೆಲ್ಲವೂ ಯಾವಾಗಲೂ ಬದಲಾಯಿಸುತ್ತ ಬೆಳೆಯುತ್ತ ಪ್ರಗತಿಪಥವನ್ನು ಕ್ರಮಿಸುತ್ತವೆ. ಇದೇ ವಿಶ್ವದ ವಿಕಾಸ.

ಇದರಲ್ಲಿ ಪ್ರತಿಯೊಂದು ವ್ಯಕ್ತಿಯು ಎಂದರೆ ಅನುಭವದ ಅವಕಾಶವು ಉಳಿದೆಲ್ಲ ವಿಶ್ವದ ಸಂಬಂಧವನ್ನು ಅನುಭವಿಸುವದರಲ್ಲಿ ತಾರತಮ್ಯವಿದೆ. ಹಾಗೆಯೇ ಅಭಾವಾತ್ಮಕ ಸಂಬಂಧಗಳನ್ನು ಅನುಭವಿಸುವದರಲ್ಲಿಯೂ ತಾರತಮ್ಯವಿದೆ. ಇದೇ ಆ ವ್ಯಕ್ತಿಯ ವೈಶಿಷ್ಟ್ಯ. ಈ ವ್ಯಕ್ತಿಯು ಬೆಳೆಯುವದು ಹೊರಗಿನಿಂದ ನಿರ್ಧಾರವಾಗುವದಿಲ್ಲ. ಆದರೆ ಅದರ ಸ್ವಭಾವದಲ್ಲಿಯೇ ಆ ರೀತಿಯು ಗೂಢವಾಗಿದೆ. ತಾನು ತಾನಾಗಲಿಕ್ಕೆ ಅದರ ಸ್ವಭಾವವೇ ಪ್ರಚೋದಿಸುತ್ತಿದೆ. ಉಳಿದೆಲ್ಲ ವಸ್ತುಗಳನ್ನು ಅನುಭವಿಸುವ ರೀತಿಯನ್ನೂ ಈ ಸ್ವಭಾವವೇ ನಿರ್ಧರಿಸುತ್ತದೆ. ಇದೇ ಅದರ ವ್ಯಕ್ತಿಗತ ಗುರಿಯು. ಈ ವ್ಯಕ್ತೀಕರಣವು ಅದರ ಸ್ವಭಾವ. ಭೌತಶಾಸ್ತ್ರವು ವಸ್ತುವಿನ ಸಂಘಟನೆಯಲ್ಲಿ ಬರತಕ್ಕ ಸಂಗತಿಗಳನ್ನು ಲೆಕ್ಕಕ್ಕೆ ತೆಗೆದುಕೊಂಡಿದ್ದರೂ ವ್ಯಕ್ತಿಗತ ಗುರಿಯ ನಿಮಿತ್ತವಾಗಿ ಇತರ ಸಂಗತಿಗಳನ್ನು ಅನುಭವಿಸುವ ವಿಶಿಷ್ಟ ವ್ಯಾಪಾರವನ್ನು ಅದು ಲಕ್ಷ್ಯಕ್ಕೆ ತೆಗೆದುಕೊಂಡಿಲ್ಲ. ಇದೇ ವ್ಯಕ್ತಿಯ ವಿಭೂತಿ (Personality) ಇದನ್ನು ಭೌತಶಾಸ್ತ್ರವು ಅರಿತಿಲ್ಲ. ಈ ವಿಭೂತಿ ಜ್ಞಾನವು ಅಂತಃಪ್ರತಿಭೆಗೆ (Intuition) ಮಾತ್ರ ಸಾಧ್ಯವು.

## ಬರ್ಟ್ರಂಡ ರಸೆಲ್

ಇವರು ಈ ಯುಗದ ಮಹಾವ್ಯಕ್ತಿಯು. ಇವರು ೧೮೭೨ ರಲ್ಲಿ ಹುಟ್ಟಿದರು. ಇವರಿನ್ನೂ ಜೀವಿಸಿದ್ದಾರೆ. ಇವರು ತೆಳ್ಳಗೆ ನಿಸ್ತೇಜರಾಗಿ ಆಸನ್ನಮರಣರಂತೆ ತೋರುತ್ತಾರೆ. ಆದರೆ ಮೊದಲಿನ ಜಾಗತಿಕ ಯುದ್ಧವು ಸಂಭವಿಸಿದಾಗ ಸುಧಾರಿಸಿದ ಯುರೋಪದ ಜನಾಂಗವು ಕೀಳು ಕಾಡುಸ್ಥಿತಿಗೆ ಮುಟ್ಟಿದ್ದನ್ನು ನೋಡಿ ಇದಕ್ಕೆ ಎದುರು ನಿಲ್ಲುವ ಉತ್ಸಾಹವು ಇವರಲ್ಲಿ ಪುಟಿದೆದ್ದಿತು. ಇವರು ಇಂಗ್ಲಂಡದಲ್ಲಿ ಒಂದು ಶ್ರೀಮಂತ ಕುಲದಲ್ಲಿ ಜನಿಸಿದ್ದಾರೆ. ತಲೆತಲಾಂತರದಿಂದ ಆ ವಂಶವು ಒಳ್ಳೇ ಮೇಧಾವಿಗಳನ್ನು ಕೊಟ್ಟಿದೆ.

ಇವರು ಸ್ವಭಾವದಿಂದಲೇ ಕಠೋರ ತಾರ್ಕಿಕರು. ಇವರು ಬಹು ದಿವಸಗಳ ವರೆಗೆ ಚಲಚ್ಚಿತ್ರವನ್ನೇ ನೋಡಿರಲಿಲ್ಲವಂತೆ. ಆದರೆ ಬರ್ಗಸಾನ ತತ್ತ್ವಜ್ಞಾನದಲ್ಲಿ ಬುದ್ಧಿಗೆ ಚಲಚ್ಚಿತ್ರದ ಸಾಮ್ಯ ಕೊಟ್ಟಿದ್ದನ್ನು ಓದಿ ಒಮ್ಮೆ ನೋಡಿದರಂತೆ. ಇವರಿಗೆ ಗಣಿತಶಾಸ್ತ್ರವೇ ಹಿರಿಯ ದೇವತೆ, ತರ್ಕಶಾಸ್ತ್ರವೇ ಸರ್ವಗುಣಸಂಪನ್ನೆ. ಸಾಹಿತ್ಯಕ್ಕೆ ಇವರು ಮನಸೋತಿರಲಿಲ್ಲ. ಶಿಕ್ಷಣದಲ್ಲಿ ಹೆಚ್ಚು ವಿಜ್ಞಾನಬೇಕೆಂದು ವಾದಿಸಿದರು. "ನಾನು ಅಥವಾ ಎರಡನೆ ಮನುಷ್ಯನು ಸುಳ್ಳನ್ನು ನಂಬುವದರಕ್ಕಿಂತಲೂ ಜಗತ್ತೇ ನಾಶವಾಗುವದು ಒಳ್ಳೆಯದು. ಈ ವೈಚಾರಿಕ ಧರ್ಮವು ಜಗತ್ತಿನ ಕೊಳೆಯನ್ನೆಲ್ಲ ಸುಟ್ಟು ಬೂದಿ ಮಾಡುವದು" ಎಂದು ಸಾರಿದರು.

"ಗಣಿತದಲ್ಲಿ ಸರಿಯಾಗಿ ತಿಳಿದರೆ ಸತ್ಯವದೆ ಇಷ್ಟೇ ಅಲ್ಲ, ಸೌಂದರ್ಯವೂ ಇದೆ. ಆ ಸೌಂದರ್ಯವು ಕಲ್ಲಿನ ಮೂರ್ತಿಯ ಸೌಂದರ್ಯದಂತೆ ಕಾವು ಇಲ್ಲದ್ದು; ಅದಕ್ಕೆ ಸಂಗೀತದ ಅಥವಾ ಚಿತ್ರಕಲೆಯ ಭವ್ಯ ಅಲಂಕಾರಗಳಿಲ್ಲ. ಅದು ನಮ್ಮನ್ನದು ಸ್ವಭಾವವನ್ನು ಸೆಳೆದುಕೊಳ್ಳುವದಿಲ್ಲ. ಅದರ ಶುದ್ಧ ಗಾಂಭೀರ್ಯವು, ದೊಡ್ಡ

ಕಲೆಯಂತೆ ನಿಷ್ಠುರ ಪರಿಪೂರ್ಣತೆಯನ್ನು ನೀಡುವ ಶಕ್ತಿಯೂ ಅಗಾಧವಾಗಿದೆ." ಇವರು ಗೃಹೀತ ಕೃತ್ಯಗಳನ್ನೂ ಅಲ್ಲಗಳೆದು ಸ್ಪಷ್ಟವಿದ್ದುದನ್ನೂ ಸಿದ್ಧಮಾಡಬೇಕೆಂದು ವಾದಿಸುತ್ತಾರೆ. ಸಮಾಂತರ ರೇಖೆಗಳೂ ಒಂದೆಡೆ ಕೂಡುತ್ತವೆಂದು ಸಿದ್ಧವಾದಾಗ ಇವರ ಸಂತೋಷಕ್ಕೆ ಸೀಮೆಯೇ ಇಲ್ಲದಾಯಿತು.

ಇವರ ತತ್ತ್ವಜ್ಞಾನವು ಗಣಿತದಂತೆ ಕಟ್ಟುನಿಟ್ಟಾಗಿರಬೇಕು, ಅದರ ಪರಿಪೂರ್ಣತೆಯನ್ನು ಪಡೆಯಬೇಕು; ಅದರಂತಹ ವಿಧಾನಗಳನ್ನೇ ಮಾಡಬೇಕು. ತತ್ತ್ವಜ್ಞಾನದ ವಿಶಿಷ್ಟ ಗುಣಗಳನ್ನೆಲ್ಲ ಅಳಿದು ಅದನ್ನು ಗಣಿತದ ಸೂತ್ರಗಳ ಸ್ವರೂಪಕ್ಕೆ ಇಳಿಸಬೇಕೆಂಬುದೇ ಇವರ ಹವ್ಯಾಸವಾಗಿತ್ತು.

ಇಂತಹ ನಿಷ್ಠುರ ನೀರಸ ತಾರ್ಕಿಕರು ಆಕಾಶದ ಮೋಡಗಳ ಬೆನ್ನುಹತ್ತಿ ತಿರುಗುವದನ್ನು ಬಿಟ್ಟು ಒಮ್ಮೆಲೆ ಭೂಲೋಕಕ್ಕೆ ಇಳಿದು ಬಹು ಆವೇಶದಿಂದ ಯುದ್ಧವನ್ನು ವಿರೋಧಿಸಿದಾಗ ಪ್ರಪಂಚಕ್ಕೆಲ್ಲ ಆಶ್ಚರ್ಯವಾಯಿತು. ಸಮಾಜದ ಕುಂದುಕೊರತೆಗಳನ್ನು ನೋಡಿ ಅವರ ಮನಸ್ಸು ನೊಂದಿತು. ಯಾವ ನಾಗರಿಕತೆಯಲ್ಲಿ ಕ್ರಿಶ್ಚಿಯನ್ನರಲ್ಲದವರನ್ನು ಅಮಾನುಷ ರೀತಿಯಿಂದ ನಡೆಸಿಕೊಳ್ಳುವರೊ ಅವರ ನಾಗರಿಕತೆಗೆ ಏನೆನ್ನಬೇಕು? ಈ ಅಮಾನುಷ ಕೃತ್ಯದಲ್ಲಿ ತೊಡಗಿದ ಜಗತ್ತನ್ನು ನೋಡಿ ಇದರಲ್ಲಿ ದೇವರಿಲ್ಲೆಂದು ರಸೆಲ್ಲರು ಹೇಳಿದರು. ಇದನ್ನೊಬ್ಬ ದೈತ್ಯನು ನಿರ್ಮಿಸಿರಬಹುದೆಂದು ಹೇಳಿದರು. ಮಾನುಷವಿಗ್ರಹಿ ದೇವತೆಗಳನ್ನು ಅತಿ ಕಠೋರವಾಗಿ ಹಳಿದರು. ಮಾನವನು ತಾನು ಸಾಯತಕ್ಕವನೇ ಎಂಬ ಧೈರ್ಯದಿಂದ ಹೆಜ್ಜೆ ಇಡಬೇಕೆಂದು ಬೋಧಿಸಿದರು.

## ಯುದ್ಧದ ಉಗಮವೇಕೆ?

ಸ್ವಾತಂತ್ರ್ಯವೇ ಮಾನವನ ಗುರಿ. ಅದೇ ಹಿರಿದಾದ ಹಿತ. ಅದಿಲ್ಲದೆ ವ್ಯಕ್ತಿವಿಭೂತಿಯೇ ವಿಕಾಸ ಹೊಂದುವದಿಲ್ಲ. ಎಲ್ಲರೂ ತಮ್ಮ ತಮ್ಮ ಅಭಿಪ್ರಾಯಗಳನ್ನು ನಿರ್ಭಯವಾಗಿ ಪ್ರಕಟಿಸಲಿ. ಸತ್ತ ವಿಚಾರಗಳ ಕಿಟ್ಟದಲ್ಲಿಯೇ ಜಗತ್ತನ್ನು ನಾಶಗೊಳಿಸುವ ದ್ವೇಷ ಯುದ್ಧ ಮೊದಲಾದ ಭಯಂಕರ ಕ್ರಿಮಿಗಳು ಹುಟ್ಟುವವು ಎಂದು ಅವರ ಮತ. ಶಿಕ್ಷಣವೇ ಇದಕ್ಕೆ ಹೆದ್ದಾರಿಯೆಂದು ಇವರು ಹೇಳಿದ್ದಾರೆ.

ರಸೆಲ್ಲರು ತತ್ತ್ವಜ್ಞಾನವು ವಿಶ್ಲೇಷಣ ಪದ್ಧತಿಯನ್ನು ಅನುಸರಿಸಿ, ಅತಿ ವಿಚಕ್ಷಣತೆಯಿಂದ ಎಲ್ಲ ಶಾಸ್ತ್ರಗಳ ಮೂಲವನ್ನೇ ವಿಮರ್ಶಿಸಿ ಅವುಗಳನ್ನು ಪುನಃ ನಿರ್ಮಿಸಬೇಕು ಎಂದು ವಾದಿಸುತ್ತಾರೆ. ಕೆಲವೊಂದು ಪ್ರಶ್ನೆಗಳ ವಿಷಯದಲ್ಲಿ ಈ ಪದ್ಧತಿಯಿಂದ ಗಣಿತದಂತೆ ನಿರ್ದಿಷ್ಟ ಉತ್ತರಗಳು ದೊರೆಯುತ್ತವೆ. ಯಾವದನ್ನು ನಾವು ತಿಳಿಯಬಲ್ಲೆವೊ ಅವೆಲ್ಲವನ್ನೂ ಈ ತರ್ಕಬದ್ಧ ಭೌತಶಾಸ್ತ್ರ ನಿಯಮದಂತೆ ತಿಳಿಯಬಹುದು. ಆದರೆ ಅಂತಿಮ ಧ್ಯೇಯದ ಮೌಲಿಕ ಪ್ರಶ್ನೆಗಳು, ಭಾವನಾತ್ಮಕ ಸಮಸ್ಯೆಗಳು ಇದಕ್ಕೆ ಬಹಿರ್ಭೂತವಾದುವು.

ತತ್ತ್ವಜ್ಞಾನದಲ್ಲಿ ಎರಡುಭಾಗಗಳಿವೆ. ಇವೆರಡನ್ನೂ ವಿಸಂಗತವಾಗಿಯೇ ಕಲಿಸುವದು ಸಾಂಪ್ರದಾಯಿಕ ತತ್ತ್ವಜ್ಞಾನದಲ್ಲಿ ಕಂಡಿದೆ. ಒಂದು ಜಗತ್ತಿನ ಸ್ವರೂಪದ ವಿಚಾರ, ಇನ್ನೊಂದು ಉತ್ತಮ ಜೀವನಕ್ರಮದ ನೈತಿಕ ಅಥವಾ ರಾಜಕೀಯ ವಿಚಾರ. ಉತ್ತಮ ಜೀವನ ಕಲ್ಪನೆಯಿಂದ ಪ್ರೇರಿತರಾಗಿ ಜಗತ್ತಿನ ಸ್ವರೂಪವನ್ನು ನಿರ್ಣಯಿಸಲಿಕ್ಕೆ ಧಾವಿಸುತ್ತಾರೆ. ರಸೆಲ್ಲರು ಇದನ್ನು ಸೇರುವದಿಲ್ಲ. ತತ್ತ್ವಜ್ಞಾನಿಯು ಸತ್ಯಶೋಧದ ಒಂದೇ ಕಾರ್ಯವನ್ನು ಕೈಕೊಳ್ಳಬೇಕು; ಇದರ ಪ್ರಾವೀಣ್ಯವನ್ನು ಅನ್ಯಥಾ ಉಪಯೋಗಿಸಿದರೆ ಅವನು ದ್ರೋಹಿಯಾಗುತ್ತಾನೆಂದು ಅವರು ಹೇಳುತ್ತಾರೆ. ನಿಜವಾದ ತತ್ತ್ವಜ್ಞಾನಿಯು ಎಲ್ಲ ಮೂಲಗ್ರಹಗಳನ್ನೂ ಪರಿಶೋಧಿಸಬೇಕು. ಧಾರ್ಮಿಕ ಭಾವನೆಗಳನ್ನು ಸಿದ್ಧಿಸುವದಾಗಲಿ ವಿರೋಧಿಸುವದಾಗಲಿ ತತ್ತ್ವಜ್ಞಾನಕ್ಕೆ ಸಾಧ್ಯವಿಲ್ಲೆಂದು ಅವರ ಮತ. ಆದರೂ ದೇವರಿದ್ದಾನೆಂದು ತತ್ತ್ವಜ್ಞಾನಿಗಳು ಹೇಳುತ್ತ ಬಂದಿದ್ದಾರೆಂದು ವಿಷಾದಿಸುತ್ತಾರೆ. ದೇವರನ್ನು ಸಾಧಿಸಲಿಕ್ಕೆ ತರ್ಕವನ್ನು ಅಲ್ಲಗಳೆದಿದ್ದಾರೆ. ನಿಗೂಢವಾದ ಪೂರ್ವಗ್ರಹಗಳು ದೇವದತ್ತ ಸ್ಫೂರ್ತಿಗಳೆಂದು ತಿಳಿಯುತ್ತಾರೆ.

ವಿಶ್ಲೇಷಣಾತ್ಮಕ ತರ್ಕವನ್ನು ಅನುಸರಿಸುವ ತತ್ತ್ವಜ್ಞಾನಿಗಳು ಇದನ್ನೆಲ್ಲ ಮಾಡರು. ಮಾನವನ ಜೀವನಕ್ಕೆ ಅತಿ ಮಹತ್ವದ ಅನೇಕ ಪ್ರಶ್ನೆಗಳಿಗೆ ಉತ್ತರ ಹೇಳುವದು ಸಾಧ್ಯವಿಲ್ಲೆಂದು ರಸೆಲ್ಲರು ಒಪ್ಪುತ್ತಾರೆ. ಆದರೆ ಇವುಗಳನ್ನು ತಿಳಿಯುವ 'ಹೆಚ್ಚಿನ ಸಾಧನೆ' ಇದೆ ಎನ್ನುವದನ್ನು ಇವರು ಒಪ್ಪುವುದಿಲ್ಲ. ಬುದ್ಧಿಗೆ ಗೋಚರವಾಗದ ತತ್ತ್ವಗಳನ್ನು ಅರಿಯುವ ಯಾವ ಇಂದ್ರಿಯವೂ ಇಲ್ಲವೆಂದು ಇವರ ಅಭಿಪ್ರಾಯ. ಈ ಪದ್ಧತಿಯಿಂದ ತತ್ತ್ವಜ್ಞಾನದಲ್ಲಿ ಗಡುಚಾದ ಅನೇಕ ಪ್ರಶ್ನೆಗಳು (ಉದಾಹರಣೆಗಾಗಿ ಕಾಲ, ದೇಶ, ಮನಸ್ಸು, ಭೂತತತ್ತ್ವ) ಅತಿ ಸ್ಪಷ್ಟವಾಗಿವೆಯೆಂದು ಇವರ ಅಭಿಪ್ರಾಯ.

ತತ್ತ್ವಜ್ಞಾನವು ನಿರ್ಧಾರಿತ ಉತ್ತರಗಳನ್ನು ಕೊಡದಿರುವದೇ ಅದರ ವೈಶಿಷ್ಟ್ಯ. ಅದರ ಮಹತಿಯು ಮಾನವನನ್ನು ಹೊಡೆದೆಬ್ಬಿಸಿ ಅವನ ಬಂಧನದಿಂದ ಮೋಚನಗೊಳಿಸುವದರಲ್ಲಿದೆ. ಇಲ್ಲವಾದರೆ ಮಾನವನು ಪೂರ್ವಗ್ರಹಗಳಲ್ಲಿ ಮೂಢ ನಂಬಿಕೆಗಳಲ್ಲಿ ಹೂತುಹೋಗುತ್ತಾನೆ. ಉಚ್ಚತತ್ತ್ವಗಳ ತಿಳುವಳಿಕೆಯಲ್ಲಿ ಕೀಳಜೀವನದಿಂದ ಪಾರುಮಾಡುವದೇ ಅದರ ಹಿರಿಮೆ. ಈ ಸಂಸಾರದ ಹೋರಾಟದಿಂದ ಮೋಚನಗೊಳಿಸಿ ತಾನು ತನ್ನ ಪರಿಸರದ ನಿಜವಾದ ಜ್ಞಾನವನ್ನುಜೀವನಿಗೆ ಕೊಡುತ್ತದೆ. ತನ್ನನ್ನುಳಿದ ಎಲ್ಲದರ ಮಹತಿಯ ಜ್ಞಾನದಿಂದ ತಾನು ದೊಡ್ಡವನಾಗುತ್ತಾನೆ.

# ಕನ್ನಡ ಲಾಲಿ ಜೋಗುಳಗಳು



ಲೇಖಕರು :
**ಡಾ. ಬಿ. ಎಸ್. ಗದ್ದಗಿಮಠ,**
ಎಂ.ಎ., ಪಿಎಚ್.ಡಿ
ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

ಮಕ್ಕಳೇ ಈ ಬಾಳಿನ ಸಂಪತ್ತೆಂದು ಜನಾಂಗ ಅರಿತುಕೊಂಡುದು ಬಾಳಿಗೊಂದು ನೆಮ್ಮದಿಯುಂಟುಮಾಡುತ್ತಿದೆ. ಹೆಣ್ಣು ಮಕ್ಕಳ ಲಾಲನೆಪಾಲನೆಯಲ್ಲಿ ತನ್ನ ಪರಿವೆಯನ್ನು ಮರೆಯುತ್ತಾಳೆ. ಅವನ್ನು ಮುದ್ದಾಡಿ, ಆಡಿಸಿ, ಕುಣಿಸಿ ನಲಿಯುತ್ತಾಳೆ. ಅವು ತನ್ನ ಬಾಳಸರ್ವಸ್ವವೆಂದು ಅವಳು ಭಾವಿಸಿರುತ್ತಾಳೆ. ಅವನ್ನು ಮುದ್ದಾಡಲು, ಮಲಗಿಸಲು, ಆಡಿಸಲು ಆಗಾಗ ಹಾಡಿಕೊಳ್ಳುತ್ತಿರುವುದುಂಟು. ಇವೇ ಲಾಲಿ.ಜೋಗುಳಗಳು. ಕನ್ನಡ ಹೆಣ್ಣುಮಕ್ಕಳಿಗೆ ಇವು ಸುಪರಿಚಿತ. ಈ ಲಾಲಿ ಜೋಗುಳಗಳ ವೈಶಿಷ್ಟ್ಯ, ಅವುಗಳಲ್ಲಿ ಹುದುಗಿರುವ ಅರ್ಥ, ಮಕ್ಕಳ ಪಾಲನೆ ಪೋಷಣೆಯಲ್ಲಿ ಅವುಗಳ ಪಾತ್ರ ಇವನ್ನು ಲೇಖಕರು ಇಲ್ಲಿ ಸೋದಾಹರಣವಾಗಿ ನಿರೂಪಿಸಿರುವರು.

ಮಕ್ಕಳೇ ಈ ಬಾಳಿನ ಸಂಪತ್ತು, ಎಂದು ಜನಾಂಗವು ಅರಿತುಕೊಂಡು ಪ್ರಪಂಚವನ್ನು ನೆಮ್ಮದಿಯಾಗಿ ಮಾಡುತ್ತ ಬಂದಿದೆ. ಅಂತಯೇ ಮಾನವಕೋಟಿಯು ಉದ್ಧಾರವಾಗಿದೆ. ಗಂಡು-ಹೆಣ್ಣು ನೆಮ್ಮದಿಯಾಗಿ ದಾಂಪತ್ಯವನ್ನು ಸಾಗಿಸುವುದೇ ಮಕ್ಕಳನ್ನು ಪಡೆಯುವುದಕ್ಕಾಗಿ. ಇದುವೇ ಲಗ್ನದ ಮೂಲೋದ್ದೇಶ. ಹೆಣ್ಣಿಗೆ ಮಕ್ಕಳನ್ನು ಪಡೆದ ಮೇಲೆಯೇ ಅವಳ ಒಗತನದಲ್ಲಿ ದಾಂಪತ್ಯವು ಬಂಧುರವಾಗುವುದು. ಮಕ್ಕಳಿಂದಲೇ ಇಹಪರದಲ್ಲಿ ಗತಿ, ಎಂಬ ಜಾಗ್ರತ ಭಾವನೆಯೂ ಇದೆ ಅವಳಲ್ಲಿ. ಇದಕ್ಕೆ ಪುಷ್ಟಿಯಾಗಿ ಭಾರತ ಸ್ಮೃತಿಕಾರರ 'ಅಪುತ್ರಸ್ಯ ಗತಿರ್ನಾಸ್ತಿ', ಎಂಬ ವಾಕ್ಯವೂ ಭಾರತ ಧರ್ಮ ಸಂಸ್ಕೃತಿಯಲ್ಲಿ ತಲೆಯೆತ್ತಿ ನಿಂತಿದೆ. ಮಕ್ಕಳನ್ನು ಪಡೆಯದ ಹೆಣ್ಣು ಬಾಳಿನಲ್ಲಿ ಚಿಂತೆಗೀಡಾಗಿ ಬಳಲಿ, ಕೊರಗಿ ಸಮಾಜದಲ್ಲಿ ಜನಾಪಹಾಸಕ್ಕೀಡಾಗಲು ಹೆಜ್ಜೆಹೆಜ್ಜೆಗೆ ಉಸುರುಹಾಕುತ್ತಲೂ ಬಂದಿದೆ. ಅವಳು ಬಿಟ್ಟ ನಿಟ್ಟುಸುರುಗಳನ್ನು ಜನಜೀವನದ ಬಾಳಗನ್ನಡಿಯಾದ ಜನಪದ ಸಾಹಿತ್ಯದಲ್ಲಿ ಕಾಣಬಹುದು. ಯಾವ ಜನಾಂಗದಲ್ಲಿಯೇ ಆಗಲಿ ಹೆಣ್ಣಿನ ಹೆಣ್ಣುತನವು ಸಾರ್ಥಕವಾಗಬೇಕಾದರೆ ಅವಳು ಮಕ್ಕಳ ತಾಯಿಯಾದ ಮೇಲೆ!

> ಹೆಣ್ಣು ಜನುಮಕ ಬಂದೆ ಮಣ್ಣು ಮಾಡಲಿ ಬ್ಯಾಡ
> ಹೆಣ್ಣುತನ ಶಿವನೆ ಜಗದಾಗ। ಕೈಮುಗಿವೆ
> ಕಂದಯ್ನ ಕೊಟ್ಟು ಕಡಿ ಮಾಡು ॥
>
> —ಜನತಾ ಗೀತೆಗಳು ಪುಟ ೫೯

ಎಂದು ಹೆಣ್ಣು ಶಿವನಲ್ಲಿ ಮೊರೆಹೊಕ್ಕಿದೆ. ತಾಯಿಯಾಗದ ಹೆಣ್ಣು ಹೆಣ್ಣೇ? ಎಂಬ ಉದ್ಗಾರವು ಹೆಣ್ಣುಮಕ್ಕಳಲ್ಲಿ ಮಾತುಮಾತಿಗೆ ಬರುವುದು.

> ಬಾಲಕರಿಲ್ಲದ ಬಾಲಿದ್ಯಾತರ ಜನ್ಮ
> ಬಾಡಗಿ ಎತ್ತು ದುಡಿದಂಗ। ಬಾಳೆಲೆಯ
> ಹಾಸ್ಯುಂಡು ಬೀಸಿ ಒಗೆದಂಗ ॥
>
> —ಗರತಿಯ ಹಾಡು ಪುಟ ೬೧

ಎಂದು ಬಂಜೆ 'ಬಾಡಿಗಿ ಎತ್ತು', 'ಹಾಸ್ಯುಂಡು ಬೀಸೊಗೆದ ಬಾಳೆಲೆ', ಎಂಬ ಕಲ್ಪನೆಯು ಮೂಡಲು—

> ಕಂದನ ಕೊಡು ಶಿವನೆ ಬಂದನ ಬಡಲಾರೆ
> ಹಂಗಿನ ಬಾನ ಉಣಲಾರೆ। ಜನದಾಗ
> ಬಂಜೆಂಬು ಸಬುದ ಹೊರಲಾರೆ ॥
>
> —ಜನತಾ ಗೀತೆಗಳು ಪುಟ ೫೯

'ಬಂಜೆಂಬ ಮಾತು' ಹೆಣ್ಣಿನ ದೇಹದಲ್ಲಿ ಕಾಣದ ಮಹಾರೋಗ! ಮಕ್ಕಳಾಗಲೆಂದು ಹಂಬಲಿಸಿ ಹರಕೆ ಹೊರುತ್ತಾಳೆ. 'ಮಕ್ಕಳ ಕೊಡು ಶಿವನೆ ಮತ್ತೊಂದು ನಾನೊಲ್ಲೆ', 'ಬಡತನ ನನಗಿರಲಿ ಭಾಳ ಮಕ್ಕಳಿರಲಿ' ಎಂದು ಶಿವನಿಗೆ ಸೆರಗೊಡ್ಡಿ ಬೇಡಿಕೊಳ್ಳುವಳು.

> ಬಡತನ ಬಂದರ ಬಡಿಬ್ಯಾಡ್ರಿ ಮಕ್ಕಳನ
> ಆಡ್ಯಾಡಿ ಬಂದು ತೊಡಿಮ್ಯಾಗ। ಕೂತರ
> ಬಂದ ಬಡತನ ಬಯಲಾಗಿ ॥
>
> —ಜನತಾಗೀತೆಗಳು ಪುಟ ೬೨

ಎಂದು ಮಕ್ಕಳೇ ಸಂಪತ್ತೆಂದು, ಹೆಣ್ಣು ಗಂಡಿಗೆ ತಿಳಿಹೇಳಿದೆ. ಹೆಣ್ಣಿಗೆ ಬಸಿರೆಂಬುದು ಕೊಡದಲ್ಲಿ ತುಂಬಿ ಬೆಳೆದ ಕುಂಬಳಕಾಯಿಯಂತೆ! ಅದು ಜಗತ್ತಿನ ಬೆಳಕು ಕಾಣುವುದೆಂದರೆ ಅವಳಿಗೆ ಒಂದು ದೊಡ್ಡ ಕುತ್ತು! ದಿನ ತುಂಬಿ ಹಣ್ಣಾಗಿ, ತುಂಬುಚ್ಚಿ ಗರ್ಭಕೋಶದಿಂದ ಕೂಸು ಕಡೆಗಾಗುವಾಗ ಆ ನೋವು-ಬೇನೆಗಳನ್ನು ತಾಳಲಾರದೆ ಹೆಣ್ಣು ಗೋಳಿಟ್ಟರೂ ಅವಳಿಗೆ ಮಕ್ಕಳ ಬಯಕೆ ಬೇಡೆನ್ನದ ತುಂಬಿದ ಹಂಬಲ! ಆ ಕಟುತರ ನೋವು.ಬೇನೆಗಳು ಅನಿವಾರ್ಯ!

> ಬ್ಯಾನೀಯ ಕೊಡುವಾಗ ಬ್ಯಾಡಂದ ಮಕ್ಕಳ
> ಕುಡಗೋಲ ಹಿಡಿದು ಬಚ್ಚಲಕ। ಇಳಿವಾಗ
> ನೂರೊಂದು ಫಲವ ಕೊಡು ಶಿವನೆ ॥

ಎಂದು ಹೆಣ್ಣು ಹೆರಿಗೆಯ ಗಂಡಾಂತರವನ್ನು ಮನಗಂಡು ಸಾಕಂದರೂ ಬಚ್ಚಲಕಟ್ಟೆಯನ್ನು ಇಳಿಯುವಾಗ ಮತ್ತೆ 'ನೂರೊಂದು ಫಲವ ಕೊಡು ಶಿವನೆ', ಎಂದು ಪ್ರಾರ್ಥಿಸುವ ಪರಂಪರೆಯು ಹಳ್ಳಿಗರಲ್ಲಿ ಇಂದಿಗೂ ಕೇಳಬರುವುದು.

## ಮಮತೆಯಿಂದ ಮುದ್ದಾಡಲು

ಇಂತು ಪರಿ ಕಷ್ಟಸಹಿಸಿ ಮಕ್ಕಳನ್ನು ಹೆತ್ತ ಹೆಣ್ಣು ಆ ಮಕ್ಕಳನ್ನು ಎತ್ತಿ ಮಮತೆಯಿಂದ ಮುದ್ದಾಡುವುದೇನೂ ಅಶ್ಚರ್ಯವಲ್ಲ! ಅದು ತಾಯಿತನಕ್ಕೆ ಅತ್ಯಂತ ಸಹಜವಾದುದು. ಎಂತಹ ಮಗುವಿದ್ದರೂ ಅದು ಆ ತಾಯಿಗೆ ಅತಿ ಮುದ್ದು. ಅಂತೆಯೇ 'ಕಾಗಿ ತನ್ನ ಮಗನಿಗೆ ಕೋಗಿಲಂದಿತಂತೆ' 'ಗುಂಗಿ ತನ್ನ ಮಗನಿಗೆ ಗಂಗಾಧರನಂದಿತಂತೆ', ಎಂಬ ಗಾದೆಯ ಮಾತುಗಳೂ ಕನ್ನಡದಲ್ಲಿ ಪರಂಪರೆಯಿಂದ ಬಂದಿವೆ. ಅನೇಕ ಕಷ್ಟನಷ್ಟಗಳನ್ನು ಸಹಿಸಿದರೂ ತಾನೀಗ ಮಗುವಿನ ತಾಯೆಂದು ಆನಂದ ಉಕ್ಕಲು ಮಗುವಿನ ಗುಣಗಾನ ಮಾಡಿ ಒಡಪು ಒಗಟಾದಿಗಳ ಅಂದಚೆಂದದ ನುಡಿಯೊಡನೆ ಲಾಲಿ ಜೋಗುಳಗಳ ಹಾಡುವುದನ್ನು ಕೇಳಿದಾಗ ಆ ತಾಯ್ತನದ ಹಿರಿಮೆಯು ಪ್ರದರ್ಶನವಾಗದಿರದು. ಲಾಲಿ ಜೋಗುಳ (Lullabies) ಗಳಲ್ಲಿ ತಾಯಿಯ ಹಂಬಲ, ಪರಮಾತ್ಮನ ಸ್ತುತಿ, ಮಗುವಿನ ರೂಪಲಾವಣ್ಯ ಹಾಗು ವಿವಿಧ ಆಟಪಾಟಗಳ ಕೌಶಲ್ಯಾದಿಗಳ ಸೂಕ್ಷ್ಮನಿರೀಕ್ಷಣೆ ಮೊದಲಾದ ವಿಷಯವಿಸ್ತರಣೆಯನ್ನು ಕಾಣಬಹುದು.

ಮುತ್ತೈದೆಯರು, ಐದೆಯರು, ಕನ್ನೆಯರು ಮಗುವಿಗೆ ಹೆಸರಿಟ್ಟು ತೊಟ್ಟಿಲದಲ್ಲಿ ತೂಗುವಾಗ ದೇವದೇವತೆಗಳ, ಶರಣ-ಸಂತ-ಸಾಧು ಸತ್ಪುರುಷರ ಪ್ರಾರ್ಥನೆಯು ಜೋಗುಳವಾಡಗಳಂತೂ ಬಲು ಸ್ವಾರಸ್ಯವಾಗಿವೆ.

ಜೋ ಜೋ ಶಿವನೆ।
ಕೈಲಾಸ
ಶಿವನೆ ಶಿವಲಿಂಗ ಜೋ ಜೋ ॥ ಪ॥
ಚೆಲುವ ಚೆನ್ನಿಗ ಜೋರೆ ನಿಲುವಗನ್ನಡಿ ಜೋರೆ
ಎಳೆವರೆಯೆ ಬೆಳಗು ಜೋಜೋರೆ।
ಎಳೆವರೆಯೆ ಬೆಳಗು ಜೋಜೋರೆ। ಹಾಡ್ಹಾಡಿ-
ಚಲುವೆಯರು ಕೂಸ ಮುದ್ದಿಟ್ಟು
॥ ಜೋಜೋ ॥ ೫೧ ॥

ನಾಲ್ಕನಾಡ ಪದಗಳು—ಬಿಜ್ಜಮಹಾದೇವಿ

ಎಂದೂ ಶಿವನ ಇಪ್ಪತ್ತೈದು ಲೀಲೆಗಳನ್ನು ಹಾಡಿ ಮಗುವಿಗೆ ಹೆಸರಿಡುವುದೂ—

ಜೋಜೋ ಎನ್ನ,
ಗೋಪಿಯ ಕಂದ ಜೋಜೋ ॥ ಪ ॥
ಮನಗ್ಯಾನೊ ಕಂದ ಮಾತಿನ ಗಿಣಿಯೆ
ಹತ್ತು ದಿಕ್ಕಿಗೊಪ್ಪು ಮುತ್ತಿನ ತೆನಿಯೆ
ಮತ್ತ ಪೇಳಿದರ ರನ್ನದ ಕಣಿಯೇ। ಹರೀ
ಇಂದ್ರಂಬ್ರದೊಳೊಪ್ಪು ಅಮೃತ ಧನಿಯೇ
॥ ಜೋಜೋ ॥

ಲೋಕ ಗೀತೆಗಳು—ಪು. ೧೦೫

ಎಂದು ಕೃಷ್ಣನ ದಶಾವತಾರಗಳನ್ನು ಹಾಡಿ ನಲಿದಾಡುವುದೂ ಹೆಣ್ಣಿನ ತಾಯ್ತನದ ಆನಂದವಲ್ಲದೆ ಮತ್ತೇನು? ಚೆನ್ನಬಸವನ ಜೋಗುಳ ಹಾಡಿನಲ್ಲಿ ಈ ವಿಶ್ವಮಾಯಾಮಂದಿರದ ಬಾಳತೊಟ್ಟಿಲದ ಅವಳ ಆಗಾಧ ಕಲ್ಪನೆಯು ಗಮನಾರ್ಹವಾಗಿದೆ.

ಜೋ ಜೋ!
ಜೋಯೆನ್ನ ಚೆನ್ನ ಮಾಯಿ ಜೋ ಜೋ
॥ ಪ॥
.........
ಗಾಳಿ ಹಗ್ಗ ಮಾಡಿ ಭೂಮಿ ತೊಟ್ಟಿಲ ಮಾಡಿ
ಜೋ ಜೋ।
ಆಕಾಶದೊಂಕಿಗೆ ಕಟ್ಟಿದರವ್ವ। ಜೋ ಜೋ
॥ ೧೨ ॥

—ಲೋಕಗೀತೆಗಳು ಪು. ೧೦೭

## ರಸಿಕತೆಯ ಪ್ರತೀಕ

ಬೆಳೆಯುತ್ತಿರುವ ಮಗು ಹಟಮಾಡಿ ಕಾಡಿ ಮಲಗದಿರಲು ಕೈತುಂಬ ಕೆಲಸುಳ್ಳ ತಾಯಿ ಕೂಸನ್ನು ತೊಟ್ಟಿಲಕ್ಕೆ ಹಾಕಿ, ಹಾಡಿ, ಗಲ್ಲಿಸುವಾಗ ಎತ್ತುವ ಸೊಲ್ಲು-ಪಲ್ಲವಿಯು ಹಾಡುಗಳಂತೂ ಕನ್ನಡ ಹೆಣ್ಣುಮಕ್ಕಳ ರಸಿಕತೆಯ ಪ್ರತೀಕವಾಗಿವೆ. ಅಲ್ಲಿ ನಮ್ಮ ಸಂಸ್ಕೃತಿ ಹಾಗೂ ನಾಗರಿಕತೆಯ ಸೌರಭವು ತುಂಬಿ ಸೂಸಾಡುತ್ತಿರುವುದು.

ಕೂಸು ಕುಂಬಳಕಾಯಿ ಕಾಸಿ ಬಾಳೀ ಹಣ್ಣ
ದಾಸಾಳ ಮಗ್ಗಿ ನನಕಂದ। ನಿಸಬೇಡಿ-
ಕಾಸಿ ಈಸರಗ ನಡಕೊಂಡೆ ॥ *

ಇಂತಹ ಕಳೆತುಂಬಿದ ನೈಕಟ್ಟುಳ್ಳ ಮಗು ಆ ಕಾಶಿ ವಿಶ್ವೇಶ್ವರನ ಆಶೀರ್ವಾದವೆಂದೂ ಆ ಮಗು ಮನೆತುಂಬ ಹರಿದಾಡಲು ಅವಳು ತನ್ನ ಬಾಳನ್ನೇ ಮರೆತು ಆ ಕೂಸಿನಲ್ಲಿಯೇ ದೇವರನ್ನು ಕಾಣುತ್ತಾಳೆ.

ಅಸರಕಿ ಬ್ಯಾಸರಕಿ ಯಾರಿಂದ ಗಳಿಯಾಲಿ
ಕೂಸ ಕಂದವ್ವ ಒಳಹೊರಗ ಆಡಿದರ
ಕಾಸಿ ಪರವೂತ ನನಗಾಗಿ॥
ಬಾರೊ ಬಾರೊ ಮಗನೆ ಬಾರೊ ಬಾಗೆದ
ನಿದಿಯೆ
ಬಾರೊ ಬಗಲಿಗೆ ಶಿವಮುದ್ದ। ನಮ್ಮನೆಯ
ಬಾರೊ ಕಂದಯ್ಯ ಶಿವಬಳಕ॥
ಗಂಡ ಮಗನೆ ಬಾರೊ ಬೆಂಡುಬೆತ್ತಾಸ ಬಾರೊ
ದುಂಡ ಮುತ್ತಿನ ಸರ ಬಾರೊ। ಕಂದವ್ವ
ಬಾಂಗಾರ ಬಾರೊ ಬೈಲಿಗೆ॥

ಎಂದು ಮಗುವೇ ಸಕಲ ಸರ್ವಸ್ವವೆಂದೂ ಸರ್ವ ಸಂಪತ್ತೆಂದೂ ಶಿವಮುದ್ದೆಂದೂ ತನ್ನ ಮನೆಯ ಪರಮಜ್ಞಾನವೆಂದೂ ಭಾವಿಸುತ್ತಾಳೆ.

ಆ ಕೂಸು ಎಷ್ಟು ಕಾಡಿ ಹಟಮಾಡಿದರೂ ಅದು ಅವಳಿಗೆ ಬೇಕು. ಅದೆಲ್ಲವನ್ನು ಸಹಿಸಿ ಆ ಕೂಸಿನ ಸಾಕು-ಬೇಕುಗಳನ್ನೂ ಅನುವು-ಆಪತ್ತುಗಳನ್ನೂ ವಿಚಾರಿಸಿ ಉಪಚರಿಸಲುದ್ಯುಕ್ತಳಾಗುವಳು.

ಅತ್ತಾರ ಅಳಲವ್ವ ಆ ಕೂಸು ನನಗಿರಲಿ
ಕೆಟ್ಟಾರ ಕೆಡಲಿ ಕೈಕೆಲಸ। ಕಂದನಂತ
ಮಕ್ಕಳಿರಲವ್ವ ಮನಿ ತುಂಬ

ಇಷ್ಟಾದರೂ ಮಗು ತನ್ನ ರಂಭಾಟವೆಬ್ಬಿಸಿ ಅಳಹತ್ತಲು, ಬಿಡಿ ಜೋಗುಳ ಪದ್ಯಗಳನ್ನು ಪಾಡುವ ತಾಯಿಯ ಹಾಡುಗಳು ಇಮ್ಮಡಿಯಾಗಿ ತೊಟ್ಟಿಲ ಜೀಕವೂ ಇಮ್ಮಡಿಸಹತ್ತುವುದು.

ಅಳೊ ಬಳೊಳೊಳೊಳಳಾಯಿ
ಬಳೊಲಕಾಯೀ। ಜೋ ॥ ಪ ॥
ಅಳಬ್ಯಾಡಂದರ ಚಲಮಾಡಿ ಅತ್ತಾನ
ಹವಳದ ಜೊಲ್ಲ ಸುರಿಸ್ಯಾನ। ಅತ್ತಿಂದ
ಬಂದಳವರಕ್ಕ ಎತ್ತಾಕ॥
ಜೋಮಾಲಿ ಕಂದಗ ಹೂಮಾಲಿ ಹಾಕ್ಯಾಳ
ಕೋಮಾಲಿ ಹಾಡ ಹಾಡ್ಯಾಳ। ಅವರಕ್ಕ
ಸೋಮಾಲಿ ಶಿವನ ಶಿವಮಂತ್ರ॥

ಅಕ್ಕನ ಸೋಮಾಲಿ ಶಿವನ ಶಿವಮಂತ್ರದ ಸರಾಗ ಜೋಮಾಲಿಗಳನ್ನು ತಲ್ಲೀನನಾಗಿ ಕೇಳಿದ ಕೂಸು ತನ್ನ ಮೆಚ್ಚುಗೆಯನ್ನು ವ್ಯಕ್ತಪಡಿಸುವದೋ ಏನೊ? ಎಂಬಂತೆ ತೊಟ್ಟಿಲಲ್ಲಿ ಆಡಹತ್ತುವದು.

ಕಾಲೊದೆದು ಕೈಯತ್ತಿ ಕೈಬೆರಳ ಆಡ್ಯಾನ
ಕುಲುಕುಲು ನಗೆಯ ಕಡಲುಕ್ಕಿ। ಕಣ್ಣೆರಡು
ಕುಡಿ ನೋಟ ಜೋಡ ಮೀನಾಡೆ॥

ಎಂದಿಗೂ ಮಾಸದ ಮಿಾಸಲಚಿತ್ರ ಇದೊಂದು. ಈ ಪದ್ಯದಲ್ಲಿ ಬರುವ ಕೂಸಿನ ಚಿತ್ರವು ಅಪರೂಪವಾಗಿದೆ. ಅದನ್ನು ಗಮನಿಸಿದಾಗ ಅದು ನಮ್ಮ ಮನಸೆಳೆದು ಕಣ್ತುಂಬಿ ನಿಲ್ಲುವುದು.

ಜೈ ಜೈ ಲಾಲಿ ಜೈಲಾಲೀ।
ಲಾಲಿ ಲಾಲಿ ಜೈಲಾಲೀ ॥ ಪ ॥

* ಈ ಮುಂಬರುವ ಪದ್ಯಗಳನ್ನು ಇನ್ನೂ ಪ್ರಕಟನಾಗದ 'ಕನ್ನಡ ಲಾಲಿ ಜೋಗುಳಗಳು' ಎಂಬ ನನ್ನ ಸಂಗ್ರಹದೀದ ಎತ್ತಿಕೊಂಡಿದ್ದೇನೆ.

ಜೈಯೆಂದು ಚಪ್ಪರಿಸಿ ಜೈಲಾಲಿ ಹಾಡ್ಯಾಳ
ಜೈ ಚಾಯ ಚಂದ್ರ ಮಲಗೊಲ್ಲ । ಅವರಕ್ಕ
ಜೈ ಗಿಣಿಗೆ ಮುದ್ದ ಕೊಡತಾಳ ॥
ಸೋ ಮುದ್ದು ಕಂದಯ್ಯ ಸೋಮಾಲಿ ಹಾಡ್ಯಾಳ
ಸೋಲಿಂಗ ಬಂದ ಕೇಳಾಕ। ಕಂದಯ್ಯ
ಸೋ ಸೊಲ್ಲ ಕೇಳಿ ಮಲಗ್ಯಾನ ॥

ಯಾವ ರೀತಿಯಿಂದ ಲಾಲಿ ಜೋಗುಳವಾಡಿದರೂ ಆ ತಾಯಿಗೆ ಆ ಮಗುವಿನ ಮೇಲಿನ ಮಮತೆ ತೀರದು! ಇಂತಹ ಸುಂದರವಾದ ಅನೇಕ ಪದ್ಯಗಳ ಜೋಲಾಲಿ-ಮಾಲೆಯನ್ನೇ ಹೆಣೆಯಬಹುದು. ಅಷ್ಟು ಸಮೃದ್ಧವಾಗಿವೆ ಈ ಲಾಲಿ-ಜೋಮಾಲಿ ಹಾಡುಗಳು ಜನಪದ ಸಾಹಿತ್ಯದಲ್ಲಿ.

## ಜೈಲಾಲಿಗಳು

ಕನ್ನಡ ಲಾಲಿ ಜೋಗುಳಗಳಲ್ಲಿ ಬರುವ ಜೈಲಾಲಿ, ಜೋಮಾಲಿ, ಸೋಮಾಲಿ, ಎಂಬ ಈ ಶಬ್ದಗಳು ಸಂಶೋಧನ ದೃಷ್ಟಿಯಿಂದ ಬಹಳ ಮಹತ್ವದುವು ಆಗಿವೆ. ಅವುಗಳನ್ನು 'ಕನ್ನಡ-ಲಾಲಿ-ಜೋಗುಳಗಳು' ಎಂಬ ನನ ಸಂಗ್ರಹದ ಪ್ರಸ್ತಾವನೆಯಲ್ಲಿ ವಿಶೇಷವಾಗಿ ಚರ್ಚಿಸಿದ್ದೇನೆ. ಲಾಲಿ-ಜೋಗುಳಗಳು ಒಂದಕ್ಕೊಂದು ಭಿನ್ನವಾಗಿವೆ. ಮಕ್ಕಳ ವಯೋಮಾನದಂತೆ ಅವರನ್ನು ಎತ್ತಿ ಆಡಿಸುವ ರೀತಿಯೂ ಬದಲಾಗುವುದು. ಕೂಸು ಹೊಟ್ಟೆ-ಹೊಸೆದು ಹರದಾಡಿ ತನ್ನಿಂದ ತಾನೇ ಕೂಡ್ರ ಹತ್ತಲು, ಜೋಗುಳಕ್ಕಿಂತಲೂ ಚಪ್ಪರಿಸಿ ಜೈಲಾಲಿಗಳನ್ನು ಹಾಡುವುದೇ ಹೆಚ್ಚು. ಮುದ್ದು ಮಗುವನ್ನು ನೋಡ್ತಿಆನಂದಭರಿತರಾದ ಯಾರೇ ಆಗಲಿ, ತೋಳುತೆಕ್ಕೆಯಲ್ಲಿ ಎತ್ತಿ ಮುದ್ದಿಟ್ಟು, ಮೊಳಕೈ ಆಸರಿಟ್ಟು ಕೂಸನ್ನು ಹೆಗಲ ಮೇಲೆ; ಹಾಕಿ ಗಲ್ಲಿಸುತ್ತ ಬೆನ್ನು ಚಪ್ಪರಿಸಿಯಾಗಲಿ, ಕೂತು ಕಾಲ್ಚಾಚಿ ಜೋಡು ತೊಡೆಯ ಮೇಲೆ ಕೂಡ್ರಿಸಿ ಜೀಕ ತೂಗುತ್ತಾಗಲಿ ಜೈಲಾಲಿಗಳನ್ನು ಹಾಡುತ್ತಾರೆ. ಈ ಜೈಲಾಲಿಗಳು ಬಿಡಿಪದ್ಯಗಳಿಗಿಂತಲೂ ನಾಲ್ಕಾರು ಸಾಲಿನ ಚುಟುಕಿ ಹಾಡುಗಳಾಗಿರುವುದೇ ಹೆಚ್ಚು.

ಚಂದಪ್ಪ ಚಂದಪ್ಪ ಚಾರೀ ಕಾಯ್
ಚಾರೀ ಕಾಯ್ ಚಾರೀ ಕಾಯ್।
ಬಟ್ಟಲ ತುಂಬ ಬಾರೀ ಕಾಯ್
ಬಾರೀ ಕಾಯ್ ಬಾರೀ ಕಾಯ್ ॥ ಪ ॥

ಚಂದಪ್ಪ ಚಂದಪ್ಪ ಚೆಲುವಾ
ಚುಂಗ ಬಿಟಗೊಂಡು ಬರುವಾ।
ನನಗೊಂದು ಕಾಯ್ ನಿನಗೊಂದು ಕಾಯ್
ಚಲ್ಲೋ ಚಲ್ಲೋ ಚಾರೀ ಕಾಯ್ ॥

ಗಾಲಿಯಿಲ್ಲದ ಬಂಡೀ
ಬಂಡೀಗ್ಹೂಡ್ಯಾನ ಗಂಡಳ್ಳಿ।
ಬಂಡೀಮ್ಯಾಗ್ ನಾನು
ನನ್ನಮ್ಯಾಗ್ ನವಿಲು ॥
ನವಿಲ್ ಪುಚ್ಚಾ ತೆರಿದು
ಚಾರಿಕಾಯ್ ಬರಿದು।
ಚಿಗರಿ ಚಿಗರಿ ಚಿಕ್ಕಪ್ಪ
ಅವರಿಗುಗ್ರಿ ಮುಕ್ಕಪ್ಪ ॥

ಹಳ್ಳಿಗರಲ್ಲಿ ಚೆಲ್ವಿಕೆಯನ್ನು ಹೋಲಿಸಿ ಹೇಳುವಾಗ ಚಂದ್ರನೇ ಸಾಮಾನ್ಯ ಉಪಮೆಯಾಗಿ ನಿಲ್ಲುವುನು. ಇಲ್ಲಿ 'ಚಾರೀಕಾಯ್' ಚಾರುಕಾಯವಾಗಿದೆ. ಚೆಲುವು ತುಂಬಿದ ದೇಹವುಳ್ಳ ಚಂದ್ರನಂತಹ ಮಗು ಬೇಕು ಆ ತಾಯಿಗೆ. ಆ 'ಬಟ್ಟಲ' ವೇ ಬಾನ್ ಬಟ್ಟಲ (ಗೋಲಾಕಾರವಾದ ಆಕಾಶ) 'ಬಾರೀಕಾಯ್' ಹರುವಿದ ಚಿಕ್ಕೆಗಳಾಗಿವೆ. (ಬೋರೆಕಾಯಿ) ಚಿಕ್ಕೆ ತುಂಬಿದ ಬಾನಿನಲ್ಲಿ ತುಂಬಿದ ಚಂದನಂತೂ ಇನ್ನೂ ಚೆಲುವ! ಅದನ್ನು ನೋಡಿಯೇ ಆನಂದ ಪಡಬೇಕು. ಬರೆಯಲು ಅಸಾಧ್ಯ!

ಜೈ ಜೈ ಜೈ ಜೈ ಚರಗುಬ್ಬೀ
ಚಿಕ್ಕ ನನ ಕಂದನ ಕಂಡೀರೇ।
ಕಂಡವರ್ಯಾಕ ಬಿಟಬಂದಿರೇ ॥ ಪ ॥

ಕೆನಿಮೊಸರದ್ದಿ ಉಣ್ಣ್ಯಾವ
ಬೆಣ್ಣಿ ಗುಳಗಿ ನುಂಗಾವ।
ನಸಕೀಲೆದ್ದು ಹೋದಾವಿನ್ನು
ಮನಿಗೆ ಬಂದಿಲ್ಲಾ ॥ ಜೈ ॥

ಪಾತರಗಿತ್ತಿಯ ಹಿಡಿಯುತಲಿ
ಹೂವಿಂದ್ಹೂವಿಗೆ ಹಾರುತಲಿ।
ಹೂವಿನ ತೋಟವ ಸೇರಿದನ
ಹೂವಿಗೆ ಮೆಚ್ಚಿದನ ॥ ಜೈ ॥

ಬಣ್ಣಬಣ್ಣದ ಬೋರಂಗಿ
ಬನಕೆ ಹಾರುತ ಹೋಗುತಲಿ।
ಹಿಡಿಯಲು ಕಾಡನು ಸೇರಿದನ
ಕಾಡಿಗೆ ಮೆಚ್ಚಿದನ ॥ ಜೈ ॥

ಮೊದಲಾದ ಅನೇಕ ಸಾಲುಗಳುಳ್ಳ ಈ ಜೈ-ಲಾಲಿ ಹಾಡಿನಲ್ಲಿ ಮಗುವಿನ ನೈಸರ್ಗಿಕ ಒಲುಮೆಯನ್ನು ಕಾಣಬಹುದು. ಹಾಡಿನಲ್ಲಿ ಬರುವ ಪಾತರಗಿತ್ತಿ, ಬೋರಂಗಿ, ಹೂ ಮೊದಲಾದವು ಎಲ್ಲ ಮಕ್ಕಳೂ ಮೆಚ್ಚುವ ಸೃಷ್ಟಿಸೌಂದರ್ಯದ ವಸ್ತುಗಳಾಗಿವೆ. ಇದರಲ್ಲಿ, ಕೂಸಿನಲ್ಲಿ ಹುದುಗಿದ ಮಾನವಮನೋಭಾವ (Potential Human Instincts) ಗಳನ್ನು ಗುರುತಿಸಬಹುದು. ಈ ಹಾಡುಗಳ ಸಾಲುಗಳಲ್ಲಿ ರಾಗದ ತಾಳಮೇಳದ ಧ್ವನಿ (Rhythm) ಇರುವದರಿಂದ ಈ ಹಾಡು ಚಿಕ್ಕಮಕ್ಕಳ ಮನಸ್ಸನ್ನು ಹಿಡಿಯುವದು. ಅಳುವ ಮಗು ರಾಗದ ತಾಳಮೇಳಿಗೆ ಕಿವಿಗೊಟ್ಟು ಮೌನ ತಾಳಿ ಚಕಿತಾಗಿ ತಲ್ಲೀನವಾಗುವುದು.

## ಐತಿಹಾಸಿಕ ಪ್ರಸಂಗಗಳು

ಮಗು ಹೆಜ್ಜೆ ಕಲಿತು ಅಲೆದಾಡಹತ್ತಿದ ಮೇಲೆ ಎತ್ತಿ, ತೂರಿ, ಜೀಕವಾಡಿಸುವುದನ್ನು ನಾವು ಕಾಣಬಹುದು. ಮೊಳಕಾಲಮೇಲೆ ಮಗುವನ್ನು ಮಲಗಿಸಿಕೊಂಡು ಮೇಲೆ-ಕೆಳಗೆ ತೂಗುತ್ತ 'ಆನಿ ಬಂತೌ ಆನಿ' ಯನ್ನು ಸೊಲ್ಲು ಪಲ್ಲವಿ ಹಾಡಿನೊಡನೆ ಆಡಿಸುವ ಜೀಕವಂತೂ ಮಗುವನ್ನು ಸ್ತಬ್ಧ ಮಾಡುವುದು. ಜೀಕ ತೂಗಿ, ಮಗುವನ್ನು ಮೊಳಕಾಲುಗಳಿಂದ ಮೇಲೆ ತೂರಿ, ಕೈಗಳ ಚಾಚಿ, ಮಗುವನ್ನು ಹಿಡಿಯುವಾಗ ಗಾಳಿಯಲ್ಲಿ ಗಾಬರಿಯಾದ ಕೂಸು ಜೀಕ ಆಡಿಸುವವನನ್ನು ಅಪ್ಪಿಕೊಂಡು ಅವನ ಎದೆಯಲ್ಲಿ ರಬ್ಬಿಕೊಳ್ಳುವುದನ್ನು ನೋಡಿದಾಗ ಮಗುವಿಗೆ ಆನೆಯ ಬೆದರಿಕೆಯು ಕಲ್ಪನೆಯೂ ಬಂದಿದೆ ಏನೋ ಎಂದು ಬಾಸವಾಗುವುದು.

ಆನಿ ಬಂತವ್ವಾ ಆನಿ
ಇದ್ಯಾವೂರ ಆನಿ ?
ಇಜಾಪುರ ಆನಿ
ಇಲ್ಲಿಗ್ಯಾಕ ಬಂತು ?
ಹಾದಿ ತಪ್ಪಿ ಬಂತು
ಹಾದಿಗೊಂದು ದುಡ್ಡು
ಬೀದಿಗೊಂದು ದುಡ್ಡು
ಆದ ದುಡ್ಡ ಕೊಟ್ಟು
ಬೆಲ್ಲಾ ಕೊಬರಿ ತಂದು
ಲಟಾ ಲಟಾ ಮುರಿದು
ಯವನರ ಕೈಯಾಗಕೊಟ್ಟು
ಚಕ್ರಬಾವಿ ಗುಂಡು
ಕೆಳಗ ಬಿದ್ರ ತುಂಡು *

* ಈ ಹಾಡಿನ ಬೇರೆ ಪಾಠಾಂತರಗಳೂ ಇವೆ. ಇದೇ ಯೋಗ್ಯವೆಂದು ಕಂಡು ಬಂದುದರಿಂದ ಇದನ್ನೇ ಎತ್ತಿಕೊಳ್ಳಲಾಗಿದೆ.

ಈ ಹಾಡಿನಲ್ಲಿ ಐತಿಹಾಸಿಕ ಪ್ರಸಂಗವೊಂದು ಧ್ವನಿ ಮಾಡುವಂತೆ ಅನಿಸುತ್ತಿದೆ. ಇದು ವಿಜಾಪುರ ಆನೆಯಾಗಿರುವುದರಿಂದ ಆದಿಲ ಶಾಹಿಗಳಿಗೆ ಸಂಬಂಧಿಸಿರಬಹುದೇ ? ಹಿಂದೂ ಚಿಕ್ಕಮಕ್ಕಳಮೇಲೆ ಮುಸಲ್ಮಾನರು ಮಾಡಿದ ಕ್ರೂರತರ ಅತ್ಯಾಚಾರಕ್ಕೆ ಅಂಜದೆ ಹಿಂದುಗಳು ವಿಜಾಪುರದ ಅಲ್ಲೀ ಆದಿಲಶಾಹನಿಗೆ ಅವನ ದರ್ಪಕ್ಕೆ ಮದ್ದಾನೆ ಯೆಂದು ಅಂಜುತ್ತಿದ್ದರೆಂಬುದು ಕನ್ನಡ ಜನಪದದಿಂದ ತಿಳಿದು ಬರುವುದು. ಮುಸಲ್ಮಾನರು ಹಿಂದೂ ಚಿಕ್ಕಮಕ್ಕಳ ಚಂಡಿಯು ಚಿವುಟಿ, ಗೋಣು ಮುರಿದುಹಾಕಿದ ಅನೇಕ ಭಯಾನಕ ಹಾಳು ಬಾವಿಗಳು ಕನ್ನಡ ಜನಪದದಲ್ಲಿ ನಿದರ್ಶನಕ್ಕೆ ಬರುವುವು. ಅಂತೆಯೇ ಅಳುವ ಮಗುವಿಗೆ 'ಆನೆ ಬಂತು' 'ಇಜಾಪುರ ಆನೆ ಬಂತು' ಸುಮ್ಮಾಗು ಎಂದು ತಾಯಂದರು ಹೆದರಿಸುವುದನ್ನು ಈಗಲೂ ಕೇಳಬಹುದು.

## ಮನೆ ಹಗುರು ಮಾಡಲು

ಮಗುವಿಗೆ ನಗೆಯೆಂದರೆ ತುಂಬಾ ಹಿಗ್ಗು. ಅದು ಕಾರಣವಿಲ್ಲದೆಯೂ ನಗುತ್ತದೆ. ತಂದೆ ತಾಯಿಗಳು ಮಗುವಿನ ಕಟ್ಟ್ಯೋಡಿಸಿ, ಆಡಿಸಿ ನಗಿಸಿ ಆ ನಗುವಿನಲ್ಲಿ ಬಾಳಿನ ದುಂದುಗ-ದುಮ್ಮಾನಗಳನ್ನು ಹಗರು ಮಾಡಿಕೊಳ್ಳಲೂ ಯತ್ನಿಸುವರು. ತಿನಿಸು-ತಿಂಡಿಗಳ ನಾಮಾವಳಿಗಳನ್ನು ಮಗುವಿನ ಕೈಬೆರಳಿಗೆ ಪೋಣಿಸುತ್ತ ಸುಖಭೋಜನವನ್ನು ಉಂಡು ತೇಗಿದಂತೆ ನಟಿಸಿ ಕಟ್ಟ್ಯೊಡಿಯಿತೆಂದು ಮಗುವಿನ ಕೈಯೊಡನೆ ಬೆರಳಾಡಿಸುತ್ತ ಭುಜದ ಕಂಕುಳಲ್ಲಾಗಲಿ, ಪಕ್ಕಡಿಯ ಮೇಲಾಗಲಿ, ಗುಲ್ಲಾಡಿಸಲು, ಮಗುವಿನ ನಗೆಗಟ್ಟೆಯೊಡೆದು ಅದು, ಹೊಟ್ಟೆತುಂಬ ನಗುವುದನ್ನು ಕಾಣಬಹುದು. ಈ ನಗೆಯೇ ತಂದೆ-ತಾಯಿಗಳಿಗೆ ಬಾಳುಸುರಿಗೆ ವಿಶ್ರಾಂತಿ! ಅದು ಅವರ ಮನವನ್ನು ಹಗರುಮಾಡಿ ಪ್ರಪಂಚವನ್ನು ಸಾಗಿಸಲ ಪ್ರೇರಕವಾಗುವುದು.

ಹೋಳ್ಗಿ, ಹುಗ್ಗಿ, ಕಡಬು,
ತುಪ್ಪ. ಸಕ್ಕರಿ, ಅನ್ನ
ಸಾರು, ಸೆಂಡಿಗಿ ಹಪ್ಪಳ
ಇತ್ಯಾದಿ . . . ಎಲ್ಲಾನು ಮಾಡಿ.
ನಾ ಉಂಡೆ, ನೀ ಉಂಡ ಇತ್ಯಾದಿ
ಎಲ್ಲಾರು ಉಂಡು—
ಕಟ್ಟೀ ಕಟ್ಟಿ—
ಕಟ್ಟ್ಯೊಡಿತಿ ಕಟ್ಟ್ಯೊಡಿತಿ
ಕಟ್ಟ್ಯೊಡಿತಿ ಹೋ ಹೇ ಹೇ ಹೇ !!!

ಎಂದು ಮಗು ನಗಹತ್ತಲು ಎಲ್ಲರೂ ನಕ್ಕು ನಲಿದಾಡುವರು. ಇಷ್ಟು ವೈವಿಧ್ಯವಿದೆ ಕನ್ನಡ ತಾಯಂದಿರ ಲಾಲಿ ಜೋಗುಳಗಳಲ್ಲಿ!

ಮಕ್ಕಳ ಲಾಲಿ ಜೋಗುಳ ( Lullabies ) ಗಳಲ್ಲಿ ತಂದೆ-ತಾಯಿ-ಮಕ್ಕಳುಗಳ ಮನೋವಿಜ್ಞಾನದ ಪರಿಸರಣವನ್ನೇ ಕಾಣುತ್ತೇವೆ. ಇಂದಿನ ವಿಜ್ಞಾನ ಯುಗದಲ್ಲಂತೂ ಮಕ್ಕಳ ಮನಶ್ಶಾಸ್ತ್ರ ( Child's psychology )ವನ್ನು ಅರಿಯಲು ಈ ಹಾಡುಗಳು ಮೂಲಾಗಾರವಾಗಿವೆ. ಇಂದು ನಮ್ಮ ಅಜ್ಞಾನದ ಮೂಲಕವಾಗಲಿ, ಪಾಶ್ಚಾತ್ಯ ಸಂಸ್ಕೃತಿಯ ಸಂಪರ್ಕದಿಂದಾಗಲಿ, ಈಗಿನ ಕಲಿತ ತಂದೆ-ತಾಯಂದರು ಇವು ಅಸಂಸ್ಕೃತವೆಂದು ಕಡೆಗಾಣಹತ್ತಿದುದರಿಂದ ಅವು ಕಣ್ಮರೆಯಾಗಹತ್ತಿವೆ. ಇವುಗಳನ್ನು ಸಂಕಲಿಸಿ-ಸಂಗ್ರಹಿಸಿ-ಸಂಪಾದಿಸುವುದು ಪರಿಕಷ್ಟವಾದರೂ ಅವುಗಳನ್ನು ಹೇಗಾದರೂ ಮಾಡಿ ಉಳಿಸಿಕೊಳ್ಳಲೇಬೇಕು. ಇದು ಸಾಹಸದ ಕೆಲಸವಾಗಿರುವದರಿಂದ ಜನತೆಯ ಸಹಕಾರವೂ ಸರಕಾರದ ಸಂಪೂರ್ಣ ಸಹಾಯವೂ ಈ ದಿಶೆಯಲ್ಲಿ ಅತ್ಯಗತ್ಯ.

— ಜನಪದಕೆ ಶುಭಂ ಮಂಗಲಂ —

# ಬಡವರ ಸಂಜೀವಿನಿ: ಈರುಳ್ಳಿ



( ಹರಟೆ )

ಬರೆದವರು :— **ಶ್ರೀ ಬಿ. ಆರ್. ವಾಡಪ್ಪಿ,** ಎಂ. ಎ., ಬಿ. ಟಿ.

ಈರುಳ್ಳಿ ನಿತ್ಯಜೀವನದಲ್ಲಿ ಒಂದು ಅವಶ್ಯವಾದ ಸಾಧನೆ. ಮೂರ್ತಿ ಚಿಕ್ಕದಾದರೂ ಅದರ ಕೀರ್ತಿ ಮಾತ್ರ ದೊಡ್ಡದು. ಶಾಸ್ತ್ರವು ಇದರ ಬಳಿಕೆಯನ್ನೇನೊ ನಿಷೇಧಿಸಿದೆ. ಆದರೆ ಅದರಷ್ಟು ಜನಪ್ರಿಯತೆಯನ್ನು ಬೇರಾವ ತರಕಾರಿಯು ದೊರಕಿಸಿಲ್ಲವೆಂಬ ಅದರ ಮಾಹಾತ್ಮ್ಯವನ್ನು ಇಲ್ಲಿ ಲೇಖಕರು ಬಣ್ಣಿಸಿರುವರು.

ಈರುಳ್ಳಿಗೂ ಸಾಹಿತ್ಯಕ್ಕೂ ಏನು ಸಂಬಂಧ? ಎಂದು ಈ ಹರಟೆಯ ತಲೆಬರಹ ಕಂಡು ಸಾಹಿತ್ಯಾಭ್ಯಾಸಿಗಳೂ ವೇದಾಂತಿಗಳೂ ಅಲ್ಲದೆ ಕೇವಲ ತಲೆಬರಹವನ್ನಷ್ಟೇ ಓದಿ ತಲೆ ತುರಿಸಿಕೊಂಡು ಪತ್ರಿಕೆ ಚೆಲ್ಲಿ ಕೊಡುವ ಮಹಾಜನರೂ ಒಂದು ಕ್ಷಣ ದಂಗುಬಡೆದು ಕುಳಿತುಕೊಳ್ಳಬಹುದು! ಆದರೆ ಈರುಳ್ಳಿ ಎಂದು ತಾತ್ಸಾರಮಾಡಿ ಅದನ್ನು ಕಡೆಗಣಿಸಿದರೆ— ನಮ್ಮ ನಿಮ್ಮಗತಿ ಏನಾದೀತು? ತುಸು ಲಕ್ಷ್ಯಕೊಟ್ಟು ವಿಚಾರಿಸಿದರೆ—ವಿಚಾರವಂತರಿಗೆ (?) ಹೊಳೆಯಬಹುದಲ್ಲಾ ಈರುಳ್ಳಿ ಬಿಟ್ಟು ನಾವು ಎಂದೂ ಇರಲಾರೆವೆಂದು! ಅದು ಹೇಗೆ? ಎಂದು ಕೊಂಕು ನುಡಿಯುವ ವಂಚಕರಿಗೆ ನಾವು ಉತ್ತರ ಕೊಡಲೂ ಹಿಂಜರಿಯುವದಿಲ್ಲ. ಈರುಳ್ಳಿಯ ಮಹಿಮೆ ಸಣ್ಣದಲ್ಲ. ಬಹು ಎಚ್ಚರಿಕೆಯಿಂದ ನಾವು ಇಲ್ಲಿ ವರ್ತಿಸುವದು ಅವಶ್ಯವಿದೆ.

"ನ ಪಲಾಂಡುಂ ಭಕ್ಷಯೇತ್" ಎಂಬುದು ಈರುಳ್ಳಿಯಮೇಲೆ ಎತ್ತಿದ ಶಾಸ್ತ್ರದ ಗದೆ! ಅದನ್ನು ಈರುಳ್ಳಿ ಎಂದೂ ಲಕ್ಷಿಸಿಲ್ಲ! ಅದರ ಭಕ್ತರು ಅದನ್ನು ಸೇವಿಸುವುದೂ ಬಿಟ್ಟಿಲ್ಲ! ಇದು ಹೇಗೆ? ನಿಷಿದ್ಧವೆಂದು ಶಾಸ್ತ್ರಾಧಾರವಿದ್ದರೂ ಜನರು ಅದನ್ನು ಕಮ್ಮಗೆ ಬಾಯಿ ಚಪ್ಪರಿಸುತ್ತ ಸೇವಿಸುತ್ತಿರುವದಿಲ್ಲವೆ? ವಸ್ತುವಿನ ಬೆಲೆಯು ಅದರ ಗುಣಗಳಿಂದ ಸಿದ್ಧವಾಗುವದೇ ವಿನಾ ಬಡವೇದಾಂತದಿಂದಾಗಲಿ ಶಾಸ್ತ್ರಾಧಾರದಿಂದಾಗಲಿ ಎಂದೂ ಸಿದ್ಧವಾಗಲಾರದು. ನೋಡಿರಿ, ಈರುಳ್ಳಿಯನ್ನು ಬಹು ಪುರಾತನ ಕಾಲದಿಂದಲೂ ನಿಷಿದ್ಧವೆಂದು ಹೇಳುತ್ತ ಬಂದಿದ್ದೇವೆ. ಆದರೆ ಅದನ್ನು ನಾವು ಬಿಟ್ಟು ಬದುಕಿಲ್ಲ! ಹೀಗಿದೆ ಗಮ್ಮತ್ತು!! ಎಲ್ಲಿ ಗಮ್ಮತ್ತು ಅದೆಯೋ ಅಲ್ಲಿ ಸಾಹಿತ್ಯಕ್ಕೂ ಸ್ಥಳವಿದೆ. ಅಂತಲೇ ಈರುಳ್ಳಿಯ ಮೇಲೆ ಒಂದು ಹರಟೆಕೊಚ್ಚುವದಕ್ಕೇನು ಭಯ? ಆದುದರಿಂದ ಸಾಹಿತ್ಯಾಭಿಮಾನಿಗಳಿಗೆ ಇದು ಸಾಹಿತ್ಯದ ಒಂದು ಸರಸ ಪ್ರಸಂಗವಾಗಿಯೇ ಪರಿಣಮಿಸುವದರಲ್ಲಿ ಯಾವ ಅಚ್ಚರಿಯೂ ಇಲ್ಲ. ಅಂದ ಬಳಿಕ ನಮ್ಮ ಡುಬ್ಬ ನಾವು ಚಪ್ಪರಿಸಿಕೊಂಡು ಈರುಳ್ಳಿಯ ಮಹಿಮೆಯನ್ನು ಕೊಂಡಾಡುವಂತಹರಾಗುತ್ತೇವೆ— ಅರ್ಥಾತ್ ನೀವು ಕೇಳುವಂತಹರಾಗುವಿರಲ್ಲವೆ?

ಈರುಳ್ಳಿಯು ನಿತ್ಯಜೀವನದ ಒಂದು ಅವಶ್ಯ ಸಾಧನವಾಗಿದೆ. ಹೆಸರೇನೋ ತೀರ ಸಣ್ಣದು! ಮೂರ್ತಿ ಸಣ್ಣದಾದರೂ ಕೀರ್ತಿ ದೊಡ್ಡದು ಎಂದು ಹೇಳುವ ರೂಢಿಯ ಮಾತು ನಮ್ಮ ಈ ಚಿಕ್ಕ ಉಳ್ಳೇಗಡ್ಡಿಗೆ ತೀರ ಅನ್ವಯಿಸುವದು. ಇಲ್ಲಿ 'ಉಳ್ಳೇಗಡ್ಡಿ' ಎಂಬ ಮತ್ತೊಂದು ಪ್ರಯೋಗಮಾಡಿ ಮೈಸೂರಿನ ಇನ್ನುಳಿದ ಭಾಗಗಳ ಜನರ ಮಾನಸಿಕ ಏಕೀಕರಣಕ್ಕೆ ಅನುವು ಮಾಡಿಕೊಟ್ಟಿದ್ದೇವೆ! ಇರಲಿ. ನೋಡಿರಿ—ಈರುಳ್ಳಿಯನ್ನು ಬಿಟ್ಟು ನಾವಿಲ್ಲ, ಆದರೆ ಅದನ್ನು ಕಂಡರಾಗದವರು—ಕೈ ಬೆರಳಿನಲ್ಲಿ ಎಣಿಸುವಷ್ಟು ಜನ ಮಾತ್ರ! ಬಹುಸಂಖ್ಯಾಕರು ಈರುಳ್ಳಿಯ ಪದಾರ್ಥಗಳನ್ನು ಆಶೆಪಟ್ಟು ತಿನ್ನುತ್ತಾರೆ! ಇಷ್ಟೇಕೆ—ಕೆಲವರಿಗೆ ಈರುಳ್ಳಿ ಬಿಟ್ಟು ಬದುಕುವದು ಕೂಡಾ ಅಸಾಧ್ಯವಾಗಿರುತ್ತದೆ. ಊಟಕ್ಕೆ ಮೊದಲು ಉಪ್ಪಿನಕಾಯಿ, ಆದರೂ ಊಟಕ್ಕೆ ಹೆಚ್ಚು ರುಚಿ ತಂದುಕೊಡುವದು ನಮ್ಮ ಉಳ್ಳೇಗಡ್ಡಿಯೇ ಎಂದು ನಾವು ತೀರ್ಮಾನಕ್ಕೆ ಬಂದಿದ್ದೇವೆ. ನೀವಾದರೂ ಈ ಮಾತಿಗೆ ಒಪ್ಪಲೇಬೇಕಾಗುವದು. ಗುಣಪಕ್ಷಪಾತಬೇಕಲ್ಲವೆ? ಮಹಾಕವಿ ಭವಭೂತಿಯು "ಗುಣಾಃ ಪೂಜಾಸ್ಥಾನಂ, ಗುಣಿಷು ನ ಚ ಲಿಂಗಂ ನ ಚ ವಯಃ" ಎಂದು ಹೇಳಿದ ಮಾತು ಈರುಳ್ಳಿಗೆ ತುಂಬಾ ಅನ್ವಯಿಸುತ್ತದೆ! ಗುಣ ಮೆಚ್ಚಿ ಅದನ್ನು ಯಥಾರ್ಥವಾಗಿ ಕೊಂಡಾಡುವದು ಸಂಸ್ಕೃತಿಯ ಒಂದು ಒಳ್ಳೇ ಲಕ್ಷಣವಷ್ಟೆ? ಅಂದ ಬಳಿಕ ನಾನು ಈಗ ವರ್ಣಿಸುತ್ತಿರುವ ಅಲ್ಲಲ್ಲ ಮಹಿಮೆಯನ್ನು ಕೊಂಡಾಡುತ್ತಿರುವ ಈ ಚಿಕ್ಕ ತರಕಾರಿಯು ಉಳಿದ ಎಲ್ಲ ತರಕಾರಿಗಳಿಗಿಂತಲೂ ಅಧಿಕ ಗುಣವುಳ್ಳದ್ದಾಗಿದೆ. ಅಂತಲೇ ಶತಮಾನಗಳು ಗತಿಸಿದರೂ ಈರುಳ್ಳಿಯು ತನ್ನ ಸ್ಥಾನಮಾನಗಳನ್ನು ಎಂದಿನಂತೆ ಕಾಪಾಡಿಕೊಂಡು ಬಂದಿರುವದಲ್ಲದೆ—ನಿಂದಕರ ವ್ಯಂಜನಪರ ಮಾತುಗಳಿಗೆ ತುಸುವೂ ಸೊಪ್ಪು ಹಾಕಿಲ್ಲ! ಅದು ಎದೆಗಾರಿಕೆಯ ಲಕ್ಷಣ. ಅಲ್ಲಿಯೇ ಅದರ ಯೋಗ್ಯತೆ ನಿರ್ಣಯವಾಗಿಹೋಗಿದೆ. ನಾನು ಈರುಳ್ಳಿಯಮೇಲೆ ಸಹಾನುಭೂತಿಪರ ಮಾತುಗಳನ್ನು ಆಡುತ್ತಿದ್ದೇನೆಂದು ನೀವಾರು ತಿಳಿಯುವ ಕಾರಣವಿಲ್ಲ. ಅಂಥ ಶುಷ್ಕ ಸಹಾನುಭೂತಿಯಿಂದ ಈರುಳ್ಳಿಗೆ ಆಗಬೇಕಾದುದೇನೂ ಇಲ್ಲ. ಅದು ತನ್ನ ಯೋಗ್ಯತೆ, ಗುಣಗಳಿಂದಲೇ ಮಾನವಕುಲದ ಸೇವೆಯನ್ನು ಮಾಡುತ್ತ ಬಂದಿದೆ— ಅಲ್ಲದೆ ತನ್ನ ಕೀರ್ತಿಯನ್ನು ಹಬ್ಬಿಸಿಕೊಂಡಿದೆ. ಕೀರ್ತಿ ಅನ್ನುವದು, ದಾಕ್ಷಿಣ್ಯಕ್ಕೆ ಬಿದ್ದು, ಒಬ್ಬರಿಗೆ ಅಥವಾ ಒಂದು ವಸ್ತುವಿಗೆ ಬರತಕ್ಕದ್ದಲ್ಲ. ಅಲ್ಲಿ ಗುಣದ ನಿಷ್ಕರ್ಷೆಯೇ ಮುಖ್ಯ! ಅಂತಲೇ ನಾನು ಹೇಳುವದು, ಜನ ಇಲ್ಲದ ಹೆಮ್ಮೆಗೆ ಬಿದ್ದು ಬಣ್ಣ ಬದಲಾಯಿಸಿದರೆ— ಆಗುವದೇನು? ಕೇವಲ ಅನರ್ಥ! ಈರುಳ್ಳಿಯೋ ದೇವರ ಸೃಷ್ಟಿಯಲ್ಲಿ ಬಾಳಿ ಬದುಕುತ್ತ ಬಂದಿದೆ. ಅದನ್ನು ಯಾವ ಕಾರಣಕ್ಕಾಗಿ— ಯಾವ ಮಹಾತ್ಮನು ನಿಷಿದ್ಧವೆಂದು ಎಂದು ಹೇಳಿದನೋ ತಿಳಿಯದು.

ಆದರೆ ಶಾಸ್ತ್ರವು 'ಪಲಾಂಡು ಭಕ್ಷಣ' ನಿಷಿದ್ಧವೆಂದು ತೀರ್ಮಾನಮಾಡಿದೆ. ಶಾಸ್ತ್ರಾಧಾರವಿದ್ದ ಮೇಲೆ ಅದನ್ನು ಭಕ್ಷಿಸುವುದಕ್ಕೆ ಭಯವೇನೋ ಬರಬಹುದು ಇರಲಿ. ನಾವು ಇನ್ನುಳಿದ ಪ್ರಸಂಗದಲ್ಲಿ ಶಾಸ್ತ್ರಗಳನ್ನು ನಮ್ಮ ಹಿತಾರ್ಥವಾಗಿ ಗಂಟುಕಟ್ಟಿಟ್ಟು ನಮ್ಮ ನಮ್ಮ ಮನೋರಥಗಳನ್ನು ಚೇತರಿಸಿಕೊಳ್ಳುವದಿಲ್ಲವೆ? ಹೇಳಿರಿ, ಯಾರು ಶಾಸ್ತ್ರಸಮ್ಮತವಾದ ನಡತೆಯಿಟ್ಟುಕೊಂಡು ಬಂದಿದ್ದೀರಿ! ಧೈರ್ಯವಾಗಿ ಹೇಳಬೇಕಂದರೆ 'ಒಬ್ಬರೂ ಇಲ್ಲ' ಎಂದೇ ತೀರ್ಮಾನವಾಗುವದು. ಧರ್ಮ ಹೇಳುತ್ತಿದೆ ನ್ಯಾಯ ಮುಖ್ಯವೆಂದು. ನ್ಯಾಯವೇ

ಧರ್ಮದ ಜೀವಾಳ! ಈಗ ನಡೆದಿದೆ ಏನು — 'ಅನ್ಯಾಯ ಮುಖ್ಯ' ಎಂಬುದಲ್ಲವೆ? ನನ್ನ ಸಣ್ಣ ಮನಸ್ಸಿಗಂತೂ 'ನ್ಯಾಯ' ಎಂಬುವ ಪದಕ್ಕೇ 'ಹೊಡೆದಾಟ—ಬಡಿದಾಟ—(ಬೇಕಾದರೆ) ಕಾದಾಟ—ಎಂದೇ ಹೊಳೆದುಬಿಟ್ಟದೆ. ಈ ರೀತಿಯ ಅರ್ಥ ಹಚ್ಚಿದ್ದೇನೆಂದು ಶಬ್ದೋತ್ಪತ್ತಿಯ ಬಗ್ಗೆ ಹೆಚ್ಚು ಗಮನಕೊಡುವ ಮಹನೀಯರಿಗೆ ಕೆಡಕು ಅನಿಸಬಹುದು. ಒಮ್ಮೊಮ್ಮೆ ಶಬ್ದಗಳ ಅರ್ಥ ವಿರುದ್ಧಾರ್ಥದಲ್ಲಿಯೇ ಉಪಯೋಗಿಸಲ್ಪಡುತ್ತಿರುವದಿಲ್ಲವೆ? ಅಂತೆಯೇ ಎಷ್ಟೋ ವ್ಯಕ್ತಿಗಳನ್ನೂ ಪದಾರ್ಥಗಳನ್ನೂ ನಾವು ಒಮ್ಮೊಮ್ಮೆ ತಪ್ಪು ತಿಳಿದುಕೊಂಡು — ಅಲ್ಲಿ ಇರುವ ಸದ್ಗುಣಗಳನ್ನು ಸಹಿತ ದುರ್ಗುಣಗಳೆಂದೇ ತೀರ್ಮಾನಿಸುತ್ತೇವೆ. ನಮ್ಮ ಪ್ರಿಯ ವಸ್ತುವಾದ ಈರುಳ್ಳಿಯನ್ನು ಕೆಲವರು ಅದರ ಉಗ್ರವಾಸನೆ ತಮಗೆ ಆಗದುದರಿಂದ—ಅದಕ್ಕೆ 'ನಿಷಿದ್ಧ'ವೆಂದೂ ಅದನ್ನು ಸೇವಿಸಿದರೆ ಪ್ರತ್ಯಕ್ಷ ಯಮನೇ ಅದನ್ನು ಸೇವಿಸಿದವರ ಮೇಲೆ At once steps ( ಕೂಡಲೆ ಕ್ರಮ ) ತೆಗೆದುಕೊಳ್ಳುವನೆಂದೂ ಹೇಳಿ ಈರುಳ್ಳಿಯನ್ನು ಕಂಡರೆ ಸಾಕು ಗದಗದ ನಡುಗುವಂತೆ ಮಾಡುತ್ತಾರೆ! ಇದು ಏನು ಚೆಂದ ! ಎಲ್ಲಿಯ ನ್ಯಾಯ !! ನೀವೇ ಹೇಳಿರಿ ?

ಇಂದಿನ ಯುಗವು ಸ್ವಾತಂತ್ರ್ಯ ಯುಗವು. ಎಲ್ಲೆಲ್ಲಿಯೂ ಸ್ವಾತಂತ್ರ್ಯದ ಕಹಳೆ ಕೂಗುತ್ತಿದೆ! ಅದನ್ನು ನಿತ್ಯವೂ ನೀವು ಕೇಳಿ ಹುರುಪುಗೊಳ್ಳುತ್ತಿದ್ದೀರಿ. 'ಕಲಿಯುಗ' ಎಂದು ಭಯಬಿಟ್ಟು ಕುಳಿತಿರುವ ಜನರೆಷ್ಟು—ನೀವೇ ಹೇಳಿರಿ ? ಸ್ವಾತಂತ್ರ್ಯಯುಗವೆಂದರೆ— ಮನಸ್ಸಿಗೆ ಬಂದಹಾಗೆ ಹಾರಾಡುವದೋ ? ಎಂದು ನೀವು ನಮಗೆ ಪ್ರಶ್ನೆ ಹಾಕಬಹುದು. ಅದು ಸಹಜವಾದ ಪ್ರಶ್ನೆಯೇ! ತಂದೆಯೊಡನೆ ಮಗ ಹೋರಾಡಿ, ತನ್ನ ಸ್ವಾತಂತ್ರ್ಯ ಗಳಿಸುವದು—ಸೊಸೆ—ಅತ್ತೆಯ ಮೇಲೆ Strike ಹೂಡಿ, (ಬಂಡು ಹೂಡಿ) ಅತ್ತೆಯ ಅಧಿಕಾರವನ್ನು (ಇದ್ದರೆ) ಕಸಿದುಕೊಂಡು ತಾನು ಸ್ವತಂತ್ರವಾಗುವದು. ಇನ್ನು ಹೇಳಬೇಕೆಂದರೆ ಎಷ್ಟೋ ಇದೆ— ಹೀಗೆ ಸ್ವಾತಂತ್ರ್ಯದ ಹೋರಾಟ ಖಂಡ, ದೇಶ, ರಾಜ್ಯ, ಪ್ರಾಂತ, ಮನೆ, ಮಠ-ಎಲ್ಲಾ ಕಡೆಯಲ್ಲಿಯೂ ನಡೆದಿದೆಯಷ್ಟೇ ? ಅಂದಮೇಲೆ ಸ್ವಾತಂತ್ರ್ಯಯುಗಪ್ರವರ್ತಕರಾದ ಇಂದಿನ ನಾವು 'ಈರುಳ್ಳಿಯ ಭಕ್ತರಾಗಿ' ಬದುಕಿದರೆ— ಅದಾವ ಶಾಸ್ತ್ರ ನಮ್ಮನ್ನು ತಡೆಹಿಡಿದು ದಂಡಿಸುವದು? ಆದುದರಿಂದ ಭಯವಿಲ್ಲದೆ ನಾವು ಇಂದು ಈರುಳ್ಳಿಯನ್ನು ನಿತ್ಯವೂ ಸೇವಿಸಿ ಹುರುಪು ಹುಮ್ಮಸ ಪಡೆದು, ಹುಟ್ಟಿಬಂದುದಕ್ಕೆ ಜನ್ಮ ಸಾಫಲ್ಯ ಮಾಡಿಕೊಳ್ಳಬೇಡವೆ? ನ್ಯಾಯವಾಗಿಯೇ ನಾವು ನಮ್ಮ ಸ್ವಾತಂತ್ರ್ಯವನ್ನು ಪಡೆದುಕೊಂಡು ( ಬೇಕಾದರೆ ಕಿತ್ತುಕೊಂಡು) 'ನಿಷಿದ್ಧ'ವೆಂದು ಹೇಳಿದ ಮಾತನ್ನು 'ಪುನೀತ' ಎಂಬುವ ಅರ್ಥಕ್ಕೆ ಭಯವಿಲ್ಲದೆ ತಿರುಗಿಸಿಕೊಳ್ಳುವದು ಅತ್ಯಂತ ಹಿತಕಾರಿಯಲ್ಲವೆ ?

ಈರುಳ್ಳಿಯನ್ನು ಭುಂಜಿಸದವರ ಬಗ್ಗೆ ನಮ್ಮದೇನು ನ್ಯಾಯವಿಲ್ಲ. ಅವರವರ ವಿಚಾರ ಅವರಿಗಿರಲಿ. ಆದರೆ ಅನ್ಯರನ್ನು ಕಂಡು-ಅಸಹ್ಯ- ತಾತ್ಸಾರ- ಮಾಡಿ ತಮ್ಮ ಮೂಗು ಮೇಲೆ ಮಾಡಿಕೊಳ್ಳುವ ಜನರ ಬಗ್ಗೆ ನಮ ಆಕ್ಷೇಪಣೆ ಇದೆ! ಹೆರವರ ಮನ ನೋಯುವಂತೆ ನಡೆದುಕೊಳ್ಳುವದು ಕೂಡಾ ಶಾಸ್ತ್ರದಿಂದ ನಿಷಿದ್ಧವಿರುವದಿಲ್ಲವೆ? ಅಂದಬಳಿಕ ಈರುಳ್ಳಿಯನ್ನು ತಿನ್ನುವವರನ್ನು ಕಂಡು ಅಸಹ್ಯಪಟ್ಟುಕೊಳ್ಳುವವರನ್ನು ಕಂಡರೆ ನನಗಂತೂ ತೀರ ಕೋಪಬರುತ್ತದೆ. ಸರ್ವಜ್ಞನು ಕೂಡ ಎಷ್ಟೋ ಪ್ರಸಂಗಗಳಲ್ಲಿ 'ಸುಮ್ಮನಿರಬೇಕು' ಎಂಬುವ ಮಾತನ್ನೇ ಹೇಳಿದ್ದಾನೆ. "ಬೊಮ್ಮವನು ತಿಳಿದರೆ ಬಿಮ್ಮಗಿದ್ದಿರಬೇಕು" ಎಂದು ಹೇಳುವ ಮಾತು ತೀರ ಉಚಿತವಾದುದು. ನಿಮಗೆ ತಿಳಿದರೆ— ಅದನ್ನು ಹೆರವರಿಗೆ ತಿಳಿಸಿಯೇ ಬಿಟ್ಟೇನು— ಅಥವಾ ತನ್ನ ಪಕ್ಷಕ್ಕೇ ಅವರನ್ನು ಸೇರಿಸಿಯೇಬಿಟ್ಟೇನು —ಎಂಬುವ ಉಪದ್ವ್ಯಾಪ ಮಾತ್ರ ಮಾಡುವದು ಉಚಿತವಲ್ಲ. ಅದು ಸುಸಂಸ್ಕೃತನ ಲಕ್ಷಣವೂ ಅಲ್ಲ. ಅಂತಲೇ ನಾನು ಹೇಳುವದು. ಈರುಳ್ಳಿ ತನ್ನ ಬಗ್ಗೆ ಎಷ್ಟೋ ಅಪಪ್ರಚಾರ ನಡೆದರೂ— ನಡೆಯುತ್ತಿದ್ದರೂ ಶ್ರೀಶಂಕರರಂತೆ ಧ್ಯಾನಮಗ್ನವಾಗಿದ್ದು "ಆತ್ಮನ್ಯೇವಾತ್ಮನಾ ತುಷ್ಟಃ" ಎಂಬುವದನ್ನು ಸಿದ್ಧ ಮಾಡಿ ತೋರಿಸುತ್ತಿದೆ. ಇದು ಏನು ಬಡ ವೇದಾಂತವಲ್ಲ! ಸುಪ್ರಸಿದ್ಧ ವಿಜ್ಞಾನಿಯಾದ ಡಾರ್ವಿನ್ ಮಹಾಶಯನು ಹೇಳಿರುವ Survival of the fittest (ಬಲಿಷ್ಠನೇ ಬಾಳುವನು) ಎಂಬುವ ತತ್ತ್ವವು ನಮ್ಮ ಈರುಳ್ಳಿಗೆ ನೂರಕ್ಕೆ ನೂರು ಅನ್ವಯಿಸುತ್ತಿದೆ; ಯುಗಯುಗಗಳು ಗತಿಸಿದರೂ ನಮ್ಮ ಈರುಳ್ಳಿಯ ವಂಶ ಇನ್ನೂ ಹೆಚ್ಚು ವೃದ್ಧಿ ಹೊಂದುತ್ತಲಿದೆ; ಅದರ ಉಪಾಸಕರು ಇಡೀ ಭೂಮಂಡಳದಲ್ಲಿಯೇ ಇದ್ದಾರೆ. ನಾವೋ ಭರತಖಂಡದವರು — ಅದರಲ್ಲಿಯೂ ಬೆರಳಿನಿಂದ ಎಣಿಸುವಷ್ಟು ವೇದಾಂತಿಗಳು— ಈರುಳ್ಳಿಯ ಬಗ್ಗೆ ಬಂಡುಹೂಡಿದರೆ ಆಗುವದಾದರೂ ಏನು ? ಇಷ್ಟೆಲ್ಲ ನಾವು ಈರುಳ್ಳಿಯ ಪರವಾಗಿ ವಕಾಲತ್ತು ವಹಿಸಿ—ಅದರ ಪಕ್ಷ ಗೆದಿಸಬೇಕೆಂದೇನು ಅಲ್ಲ—ಆದರೆ ಅದರ ಸದ್ಗುಣಗಳನ್ನು (?) ಮೆಚ್ಚಿ—ಅದಕ್ಕೆ ಸಲ್ಲಬೇಕಾದ —ಮತ್ತು ಸಲ್ಲಲೇಬೇಕಾದ ಮರ್ಯಾದೆಯೇ ಹೊರತು—ಅದರಲ್ಲಿ ಪಕ್ಷಪಾತಕ್ಕೆ ಎಳ್ಳಷ್ಟು ಅವಕಾಶವೇ ಇರುವದಿಲ್ಲ. ಹೀಗೆ ಅದರ ಕೀರ್ತಿಯ ವ್ಯಾಪ್ತಿಯು ಕಾಲಾತೀತವಾಗಿ ನಿಂತುಕೊಂಡಿದೆ. ಸರಿ. ಈವರೆಗೆ ನಾವು ಈರುಳ್ಳಿಯ ಬಗ್ಗೆ ಇಷ್ಟೊಂದು ಆವೇಶದಿಂದ ಹೇಳಿದ ಮೇಲೆ, ಇನ್ನು ಅದರ ಉಪಯುಕ್ತತೆಯ ಬಗ್ಗೆ ಹೇಳದೆ ಬಿಡುವದು ಅನುಚಿತವಾಗಬಹುದು. ನಿತ್ಯವೂ ಈರುಳ್ಳಿಯನ್ನು

ಉಪಯೋಗಿಸುತ್ತಿರುವ ನಿಮಗೆಲ್ಲ ನಾವು ಹೇಳುವ ಕೆಲವು ಮಾತುಗಳು ಗೊತ್ತಿರಲೂ ಸಾಕು. ಆದರೆ ಈ ಪ್ರಪಂಚವು ಬಲು ವಿಚಿತ್ರ ವಾದದ್ದು. ಅಂತಲೇ 'ಬಹುಚಿತ್ರ ಜಗದ್ಬಹುಧಾ ಕರಣಾತ್ ಪರಶಕ್ತಿರನಂತಗುಣಃ ಪರಮಃ' ಎಂದು ಪರಶಕ್ತಿಗೆ ನಾವು ಶರಣು ಹೋಗುವ ಪ್ರಸಂಗ ಬರುವದಿಲ್ಲವೆ? ಪ್ರಪಂಚದಲ್ಲಿಯ ಸೊಬಗನ್ನೂ ವೈಚಿತ್ರ್ಯವನ್ನೂ ನಾವು ಕಾಣಬೇಕಾದರೆ ಮುಗ್ಧವಾದ, ಮುಕ್ತವಾದ ಮನಸ್ಸನ್ನಿಟ್ಟುಕೊಳ್ಳುವದು ಅವಶ್ಯವಿದೆ. ಅಂತಲೆ ಒಬ್ಬರಿಗೆ ಕಂಡಂತೆ ಮತ್ತೊಬ್ಬರಿಗೆ ಈ ಪ್ರಪಂಚ ಕಾಣುವುದಿಲ್ಲ. ಆದಕ್ಕಾಗಿಯೇ 'ಭಿನ್ನ ರುಚಿಃ' ಎಂಬ ಉಕ್ತಿ ಬಳಕೆಯಲ್ಲಿ ಬಂದಿದೆ.

ನೋಡಿರಿ, ಈರುಳ್ಳಿಗೂ ಇನ್ನುಳಿದ ತರಕಾರಿಗಳಿಗೂ ಮಹದಂತರವಿದೆ. ಪೇಟೆಯಲ್ಲಿ ವರುಷದ ಯಾವ ಕಾಲದಲ್ಲಿಯೇ ಆಗಲಿ ಈರುಳ್ಳಿ ಸಿಕ್ಕೇ ಸಿಕ್ಕುವದು. ಉಳಿದ ತರಕಾರಿಗಳು ಹಾಗಲ್ಲ; ತಮ್ಮ ಕಾಲ ಬಂದಾಗ— ಮದಾಂಧ ಮಾನವರಿಗೆ ಸಿರಿಬಂದಾಗ ಸೊಕ್ಕು ಉಕ್ಕೇರುವಂತೆ— ಅವುಗಳಿಗೆ ಉತ್ಕರ್ಷ ಬಂದಿರಬಹುದು! ಆದರೆ ಈರುಳ್ಳಿಯ ಮಾತು ಹಾಗಲ್ಲ— ಅದರಲ್ಲಿ ಏರು ಇಳುವುಗಳ ಮಾತಂತೂ ಎಂದೂ ಇಲ್ಲ! ಒಂದೇ ಮಾರ್ಗ, ಒಂದೇ ನೀತಿ! ಇದೇ ದೊಡ್ಡಸ್ತಿಕೆಯ ಲಕ್ಷಣ. ಈರುಳ್ಳಿ ಇನ್ನುಳಿದ ತರಕಾರಿಗಳ ಸಂಗಡ ಸಖ್ಯ ಮಾಡಬಲ್ಲದು. ಅದಕ್ಕೆ ಸೊಕ್ಕು ಎನ್ನುವದಿಲ್ಲ; ಉಳಿದ ಪಲ್ಯಗಳ ಜೊತೆಗೆ ತಾನು ಬೆರೆತಾಗ ತನ್ನ ವ್ಯಕ್ತಿತ್ವವನ್ನು ಅದು ಕಳೆದುಕೊಳ್ಳದೆ ತನ್ನ ಸುವಾಸನೆಯನ್ನು ತಪ್ಪದೆ ಕೊಟ್ಟು ತಾನು ಅಲ್ಲಿ ಇರುವದಾಗಿ ಸಾರಿ ಸಾರಿ ಹೇಳುತ್ತಿದೆ. ಇದು ಅದರ ವ್ಯಕ್ತಿತ್ವದ ಒಳ್ಳೆಯ ಲಕ್ಷಣ; ಇದರಿಂದ ತಮ್ಮ ಗುಣಗಳನ್ನು ಕಳೆದುಕೊಂಡು ಉಳಿದ ತರಕಾರಿಗಳು— ಈರುಳ್ಳಿಯನ್ನು ಹಳಿಯಬಹುದಾದರೂ ಅಡಿಗೆಯ ರುಚಿ ಅರಿತ ಸದ್ಗೃಹಿಣಿಯರು ಈರುಳ್ಳಿಯ ಬಲದಿಂದಲೇ ತಮ್ಮ ಪಾಕಶಾಸ್ತ್ರದ ಮೇಲ್ಮೆಯನ್ನು ಪುರುಷರ ಎದುರು ತೋರಿಸಲು ಸಾಧ್ಯವಾಗುತ್ತದೆ. ಈರುಳ್ಳಿಯನ್ನು ಬಿಟ್ಟು ಅಡಿಗೆ ಮಾಡದ ಗೃಹಿಣಿಯರಿಲ್ಲವೆಂದೇನು ಅಲ್ಲ; ಇರಬಹುದು. ಆದರೆ ನಾವು ಬಹುಸಂಖ್ಯಾಕರ ಬಗ್ಗೆ ವಾದ ಹೂಡಿ, ಮಾತಾಡುತ್ತಿದ್ದೇವೆಯೇ ಹೊರತು ಅಲ್ಪಸಂಖ್ಯಾಕರ ಮಾತನ್ನೆತ್ತಿ ಹೇಳುವದು ನಮಗಂತೂ ಸಾಧ್ಯವಿಲ್ಲ; ಅಲ್ಪಸಂಖ್ಯಾಕರಾದರೂ- ಬಹುಸಂಖ್ಯಾಕರೊಂದಿಗೆ ಬೆರೆತು- ಒಂದೆ ಕುಲ, ಒಂದೇ ಜನ, ಒಂದೇ ಮಾರ್ಗ, ಒಂದೇ ತತ್ತ್ವ ಜಗವೆಲ್ಲಾ ಒಂದೇ ಎಂದು- ಈರುಳ್ಳಿಯ ಪದರುಗಳು ಒಂದಾಗಿ ಹೊಂದಿಕೊಂಡಂತೆ ಇರಬೇಡವೇ? ಒಮ್ಮೊಮ್ಮೆ ನೋಡಿರಿ. ಅಕಸ್ಮಾತ್ ಅತಿಥಿಗಳ ಅಗಮನವಾಯಿತೆಂದು ತಿಳಿಯುವ. ಅಂದೋ ನಿಮಗೆ ಬಹಳ ಕೆಲಸ. ಕಚೇರಿಯಲ್ಲಿದ್ದು, ಬೇಸರ ಹುಟ್ಟಿ ಪೇಟೆಗೆ ಹೋಗದೆ— ಹಾಗೆಯೆ ಮನೆಗೆ ಬಂದಾಗ, ನಿಮ್ಮ ಮಡದಿಯ ಗತಿಯೇನು? ಅವಳು ಹೌಹಾರಿ ಕುಳಿತುಕೊಳ್ಳಬಹುದು. ಜಾಣ ಗೃಹಿಣಿಯರೋ ತಮ್ಮ ಪತಿಗಳ ಮಾನಕಾಯಬೇಕೆಂದೇ— ನಾಲ್ಕು ಈರುಳ್ಳಿಯ ಗಡ್ಡೆಗಳನ್ನು ಯಾವಾಗಲೂ ತರಕಾರಿಯ ಪುಟ್ಟಿಯಲ್ಲಿ ಇಟ್ಟಿರುತ್ತಾರೆ. ಇದರಿಂದ ನಿಮಗೂ ಧೈರ್ಯ. ನಿಮ್ಮ ಮಡದಿಗೂ ಹೆಮ್ಮೆ— ಅತಿಥಿಗಳಿಗೆ ಸುಖ ಭೋಜನ— ಒದಗಿ ಎಂಥ ಸಂತೋಷ ಉಂ-ಟಾಗಬಲ್ಲದು ನೋಡಿರಿ. ಅತಿಥಿಗಳ ಮುಂದೆ ನಿಮ್ಮ ಅಂತಸ್ಥನ್ನು ಹೆಚ್ಚಿಸಿದ ಈರುಳ್ಳಿಯ ಉಪಕಾರವನ್ನು ನೀವು ಹೇಗೆ ಮರೆಯಲಾದೀತು?

ಈರುಳ್ಳಿಯು ಬಡವರ ಅಧಾರಿಯು. ಈ ಜಗತ್ತಿನ ಸಂಖ್ಯೆಯಲ್ಲಿ ಬಡವರೇ ಹೆಚ್ಚು; ಬಲ್ಲಿದರೋ ತೀರ ಸ್ವಲ್ಪ ಜನ! ಬಡವರ ನಿತ್ಯದ ಆಹಾರದಲ್ಲಿ ಈರುಳ್ಳಿ ಇದ್ದು, ಅವರಿಗೆ ಒಂದು ಸಂಜೀವಿನಿಯಂತಾಗಿದೆ ಅಲ್ಲವೇ? ಈರುಳ್ಳಿಯು ಸತ್ತ್ವಯುತ ಆಹಾರವೆಂದು ಬೇರೆ ಹೇಳುವ ಕಾರಣವೇ ಇಲ್ಲ. ಅದರಲ್ಲಿ

ಇರುವ ಆಹಾರಸತ್ವಗಳು ಇನ್ನುಳಿದ ತರಕಾರಿಗಳಲ್ಲಿ ಇರುವದಿಲ್ಲ ಎಂದು ಅಭಿಪ್ರಾಯಪಡುತ್ತಾರೆ ಎಂಬುವ ಮಾತನ್ನು ನೀವು ಕೇಳಿರಬಹುದು. ಪ್ರಬಂಧ ಬರೆಯುತ್ತ ಒಕ್ಕಲತನದ ವಿಚಾರ ಬರೆದೆನೆಂದು ನೀವು ನಗೆಯಾಡದಿದ್ದರೆ ಸಾಕು!

ನನ್ನ ಗೆಳೆಯರೊಬ್ಬರು ಈರುಳ್ಳಿಯ ಪರಮ ಭಕ್ತರಾಗಿದ್ದಾರೆ! ಅವರು ತಾವು ಈರುಳ್ಳಿಯನ್ನು ತಿನ್ನುವದಲ್ಲದೆ ಹೆರವರೂ ತಮ್ಮ ಹಾಗೆಯೇ ಮಾಡಲಿ ಎಂದು ಅವರ ಅಪೇಕ್ಷೆ. ಒಮ್ಮೆ ಏಕಾದಶಿ ಇದ್ದಿತು. ನಾನೋ ಅವರ ಮನೆಗೆ ಸಹಜವಾಗಿ ಹರಟೆ ಕೊಚ್ಚುವದಕ್ಕೆ ಹೋಗಿ ಕುಳಿತಿದ್ದೆ. ನನಗಂತೂ ನಮ್ಮಾಕಿ ಅಂದು ಏಕಾದಶಿ ಹೊಡಿಸಿಯೇ ಬಿಟ್ಟಿದ್ದಳು. ಆ ಮಾತು ಈ ಮಾತು ಹೊರಟಾಗ, ಅವರ ಅಡಿಗೆಯ ಮನೆಯಿಂದ ಈರುಳ್ಳಿಯ ಒಗ್ಗರಣೆಯ ಸುವಾಸನೆ ಸುಳಿಸುಳಿಯಾಗಿ ಹೊರಬರಹತ್ತಿತು. ನನಗೋ — ಎದೆ 'ದಡದಡ' ಬಡಿದುಕೊಳ್ಳಹತ್ತಿತು. ಏಕಾದಶಿ ದಿನದಂದು ಈರುಳ್ಳಿ ತಿನ್ನುವದೆಂದರೆ ಅದೆಂತಹ ಪಾಪವೆಂದು ನಾನು ಕಸವಿಸಿಗೊಳ್ಳುತ್ತಿರುವಾಗ— ನನ್ನ ಗೆಳೆಯ ಬಲು ಆವೇಶದಿಂದ 'ಈರುಳ್ಳಿ ದೇವರ ಪ್ರೀತಿಯ ವಸ್ತು' ಎಂದು ನುಡಿದ ನನ್ನ ಪ್ರಶ್ನೆಯ ಅಪೇಕ್ಷೆಯಿಲ್ಲದೆ ತಾನೆ ಮುಂದುವರೆದು "ದೇವರ ಸಂಕೇತ-ಗುರುತುಗಳು ಅದರಲ್ಲಿ ಕಾಣುತ್ತೇವೆ! ನೋಡು ಅಡ್ಡ ಹೆಚ್ಚಿದರೆ ಚಕ್ರವಾಗಿಯೂ ಉದ್ದ ಹೆಚ್ಚಿದರೆ ಶಂಖವಾಗಿಯೂ ಅದು ಕಾಣುವದಿಲ್ಲವೆ?" ಎಂದು ನುಡಿದಾಗ ನಾನು ಬಿದ್ದು ಬಿದ್ದು ನಕ್ಕೆ! ಹೀಗಿದೆ ನೋಡಿರಿ ಉಳ್ಳಿಯ ಮಾಹಾತ್ಮ್ಯ! ಅದು ಇರಲಿ. ಆದರ ತಾಳಿಕೆಯಾದರೂ ಆಚ್ಚರಿಯನ್ನುಂಟು ಮಾಡುವಂತಹದು. ಒಮ್ಮೆ ಎಲ್ಲ ತರಕಾರಿಗಳಿಗೂ ನ್ಯಾಯವಾಯಿತಂತೆ. ಒಬ್ಬ ಅವುಗಳ ಗುಣಗಳನ್ನು ನಿಷ್ಕರ್ಷೆಮಾಡಬೇಕೆಂದು — ಭೃಗು ಮಹಾಮುನಿಗಳು ಸರ್ವೋತ್ತಮನು ಯಾರೆಂದು ಕೈಲಾಸ, ಬ್ರಹ್ಮಲೋಕ ಹಾಗು ವೈಕುಂಠ ಲೋಕಗಳನ್ನು Visit ಮಾಡಿ, ವಿಷ್ಣುವೇ ಸರ್ವೋತ್ತುಮನೆಂದು ಸಿದ್ಧಮಾಡಿದರಂತೆ— ಹಾಗೆ ಈ ಮಹಾತ್ಮ ಈ ತರಕಾರಿಗಳನ್ನೆಲ್ಲ ಒಂದು ಕೋಣೆಯಲ್ಲಿ ಹಾಕಿ ಮುಚ್ಚಿಟ್ಟನಂತೆ. ಕೆಲವು ದಿನಗಳಾದಮೇಲೆ, ತೆಗೆದು ನೋಡಿದಾಗ—ಇನ್ನುಳಿದ ತರಕಾರಿಗಳೆಲ್ಲ ನಾಶವಾಗಿ ಹೋಗಿದ್ದವು. ಆದರೆ ನಮ್ಮ ಈರುಳ್ಳಿಯೋ ಸೊಕ್ಕಿನಿಂದ ಈಶ್ವರನ ತ್ರಿಶೂಲದ ಅಲಗಿನಂತೆ ತನ್ನ ಗರಿಗಳನ್ನು ಚಾಚಿಕೊಂಡು ಕುಲುಕುಲು ನಗುತ್ತಿತ್ತಂತೆ! ಎಲ್ಲ ತರಕಾರಿಗಳಲ್ಲಿ ಈರುಳ್ಳಿಯೇ ಉತ್ತಮವೆಂದು ಸಿದ್ಧವಾಯಿತಂತೆ! ಇದನ್ನೆಲ್ಲ ಕೇಳಿದಾಗ ನಮ್ಮ ಉಳ್ಳೇಗಡ್ಡಿಯ ಬಗ್ಗೆ ಇಲ್ಲದ ಅಭಿಮಾನ ಹೆಚ್ಚಾಗಿ, ನಾನಂತೂ ಅಂದು ಈರುಳ್ಳಿಯ ಎರಡು ಗಡ್ಡೆಗಳನ್ನು ಹೆಚ್ಚಾಗಿಯೇ ತಿಂದು ಸಂತೋಷಪಟ್ಟೆ!

ಒಮ್ಮೆ ನಾವೆಲ್ಲ ಹೇಗೋ ಗಟ್ಟಿಮನಸ್ಸು ಮಾಡಿ ಈರುಳ್ಳಿಗೆ ಬಹಿಷ್ಕಾರ ಹಾಕಿದರೆ— ಏನಾಗಬಲ್ಲದು? ನೀವೇ ತರ್ಕಿಸಿರಿ. ಭವ್ಯವಾಗಿ ಇಂದು ಪಟ್ಟಣಗಳಲ್ಲಿ ತಲೆಯೆತ್ತಿ ನಿಂತುಕೊಂಡಿರುವ ವಿಶ್ರಾಂತಿ ಗೃಹಗಳು ತಾವೇ ಮುಚ್ಚಿಹೋಗುವವು. ನಗರದ ಬೀದಿಗಳಿಗೆ ಶೋಭೆಯನ್ನುಂಟುಮಾಡುವವು, ವಿಶ್ರಾಂತಿ ಗೃಹಗಳೆಂಬುದನ್ನು ಯಾರೂ ಒಪ್ಪತಕ್ಕದ್ದಾಗಿದೆ. ವಿಶ್ರಾಂತಿ ಗೃಹಗಳು ಮುಚ್ಚಿದರೆ— ನಾವು ಇನ್ನೆಲ್ಲಿ ವಿಶ್ರಾಂತಿ ಪಡೆಯಲಿಕ್ಕಾದೀತು. ಆಗ ನಮಗೆ ಆಗುವ ತೊಂದರೆ ಅಷ್ಟಿಷ್ಟಲ್ಲ. ಮನೆ ಮನೆಗಳಲ್ಲಿಯ ಸುಖ, ಶಾಂತಿ ಎಲ್ಲವೂ ಈಗ ವಿಶ್ರಾಂತಿಗೃಹಗಳಲ್ಲಿಯೇ ನೆಲೆಸಿರುವಾಗ, ಅಂತಹ ವಿಶ್ರಾಂತಿಗೃಹಗಳನ್ನು ಮುಚ್ಚಿಸಿ ನಾವು ಸಾಧಿಸುವ ಪುರುಷಾರ್ಥವೇನು? ಈರುಳ್ಳಿಗೂ ವಿಶ್ರಾಂತಿಗೃಹಗಳಿಗೂ ನಿಕಟ ಸಂಬಂಧ. ಈರುಳ್ಳಿ ಹಾಕಿದ ಉಪ್ಪಿಟ್ಟು, ಈರುಳ್ಳಿಯ ಬಿಸಿ ಬಿಸಿ ಭಜಿ, ಸೊಗಸಾಗಿ ಬಟಾಟಿಯೊಂದಿಗೆ ಈರುಳ್ಳಿಯನ್ನು ಬೆರಸಿ ಮಾಡಿದ ರಸಪಲ್ಲೆ, ಅದರೊಂದಿಗೆ ಬಿಸಿ ಬಿಸಿ ತುಪ್ಪದ ದೋಸೆ— ಹೀಗೆ ಬಾಯಲ್ಲಿ ನೀರೂರಿಸುವ ರುಚಿಕರ ಪದಾರ್ಥಗಳನ್ನು ಬಿಟ್ಟು ಯಾರು ತಾವೇ ಇದ್ದಾರು! ಈ ವಿಚಾರ ಕೂಡ ಭಯಾನಕವಾದದ್ದು. ಅಂತೂ ಈರುಳ್ಳಿಯನ್ನು ನಾವು ಬಿಟ್ಟಿಲ್ಲ; ಆದು ನಮ್ಮನ್ನು ಎಂದೂ ಬಿಡಲಾರದು. ಈ ಸಿದ್ಧಾಂತಕ್ಕೆ ನಾವು ಬಂದು ಮುಟ್ಟಲೇಬೇಕಾಗುವದು. ನವನಾಗರಿಕತೆಯ ದ್ಯೋತಕವಾಗಿ ತಲೆಯತ್ತಿ ನಿಂತುಕೊಂಡಿರುವ ಚಹದ ಅಂಗಡಿಗಳು— ಪಟ್ಟಣಗಳಲ್ಲಿ ಇಷ್ಟೇ ಇರುವವೆಂದು ಭಾವಿಸುವದು ತೀರ ತಪ್ಪು. ಅವು ಇಂದು ಹಳ್ಳಿಗಳ ಬಾಳನ್ನಾದರೂ ಬೆಳಗಿಸುತ್ತಿರುವವು. ಕೇವಲ ಚಹ ಅಥವಾ ಕಾಫಿ ಕುಡಿದರೆ ನಮಗೆ ವಿಶ್ರಾಂತಿ ದೊರೆಯದು. ಚಹದ ಜೊತೆಗೆ ತುಸು ಚೂಡಾ, ಅದರೊಡನೆ ಸಣ್ಣಾಗಿ ಕೊಚ್ಚಿ ಬೆರಸಿದ ಈರುಳ್ಳಿ ನಮ್ಮ ಬಾಯಿಗೆ ರುಚಿ ಕೊಟ್ಟು ನಮ್ಮ ಮನಸ್ಸಿನ ಜಾಡ್ಯವನ್ನು ಕಳೆಯಬಲ್ಲದು. ಹೀಗೆ ಜನತೆಯ ಜೀವಾಳದ ಪ್ರಶ್ನೆಯಾಗಿ ನಿಂತಿರುವ ಈರುಳ್ಳಿಯನ್ನು ನಾವು ದ್ವೇಷಿಸುವದರಲ್ಲಿ ಯಾವ ಪುರುಷಾರ್ಥವೂ ಇಲ್ಲ ಎಂಬುವದು ಬುದ್ಧಿವಂತರಿಗೆ ತಾನೇ ಹೊಳೆಯುವದು.

ಈರುಳ್ಳಿಯನ್ನು ಬಳಸುವಾಗ ಎಚ್ಚರಿಕೆಯಿಂದ ಉಪಯೋಗಿಸಬೇಕಷ್ಟೆ? ಅದನ್ನು ಸಿಕ್ಕ ಸಿಕ್ಕಹಾಗೆ ಉಪಯೋಗಿಸಿದರೆ— ಅದು ನಿಮಗೆ ಕೆಟ್ಟ ಹೆಸರನ್ನು ತಂದುಕೊಡುವದು. ಹಸಿಯ ಉಳ್ಳಿಯನ್ನು ತಿನ್ನಬೇಕಾದರೆ ರಾತ್ರಿ ಊಟದಲ್ಲಿ ಉಪಯೋಗಿಸಬಹುದು. ಅಂದರೆ ನಿಮ್ಮ ಬಾಯ ಹೊಲಸು ಯಾರಿಗೂ ತಿಳಿಯದು. ಈರುಳ್ಳಿಯನ್ನು ಅರ್ಧಮರ್ಧ ಬೇಯಿಸಿದರೆ ಅದು ನಿಮ್ಮ ಮರ್ಯಾದೆಯನ್ನೇ ತೆಗೆಯುತ್ತದೆ. ಆದುದರಿಂದ ನಿಮ್ಮ ಜಾಣತನ

ಪ್ರದರ್ಶಿಸಬೇಕಾದರೆ ಹೆಚ್ಚು ದೊಡ್ಡ ಹೋಳುಗಳಲ್ಲದಂತೆ ತೀರ ಸಣ್ಣ ಹೋಳುಗಳಾಗದಂತೆ ಈರುಳ್ಳಿಯನ್ನು ಹೆಚ್ಚಿ ಹಿತವಾಗಿ ಮಿತವಾಗಿ ನಯವಾಗಿ ಅದನ್ನು ಬೇಯಿಸಿದರೆ—ಕೇಳುವದೇನಿದೆ? ಅದು ಎಂಥ ಸಂನ್ಯಾಸಿಗಳ ಮನಸ್ಸನ್ನಾದರೂ ಗೆದ್ದೀತು !

ಈರುಳ್ಳಿಯೂ ಒಂದು ಕಂದಮೂಲವಲ್ಲವೆ? ಕಂದಮೂಲಗಳನ್ನು ತಿಂದು 'ತಪಸ್ಸು' ಮಾಡುವ ಕಾಲ ಒಂದು ಆಗಿಹೋಯಿತಲ್ಲವೆ? ತೀರ ಇತ್ತೀಚೆಗೆ ಈರುಳ್ಳಿಯನ್ನು ಯಾರೋ ನಿಷಿದ್ಧ ಮಾಡಿರಬೇಕೆ ವಿನಾ ಮೊದಲು ಅದನ್ನು ಜನರು ಶುದ್ಧ ಪದಾರ್ಥವೆಂದೇ ತಿಳಿದಿರಬೇಕು. ಈಗ ಮರಾಠಿಯಲ್ಲಿ ಬಳಕೆಯಲ್ಲಿರುವ 'ಕಾಂದಾ' ಎಂಬುದು 'ಕಂದ' ಎಂಬುವ ಮೂಲದಿಂದ—ಬಂದಿರಬೇಕು. ಅದು ಬಹುತರ ಕನ್ನಡ ಶಬ್ದವೇ ಆಗಿರಬಹುದು ಎಂದು ನಮ್ಮ ಸಂಶೋಧಕ ಬುದ್ಧಿಗೆ ಹೊಳೆಯುತ್ತಿದೆ. ಆದರೂ ಇದನ್ನು ಸಂಶೋಧಕರಿಗೆ ಬಿಡುವದು ಹೆಚ್ಚು ಉಚಿತವಾದದ್ದು, ಶಬ್ದೋತ್ಪತ್ತಿಯ ಬಗ್ಗೆ ಗುದುಮುರಿಗೆ ಹಾಕುವದಕ್ಕಿಂತ—ಅದರ ರೂಪ, ರಸ, ರುಚಿ, ಉಪಯುಕ್ತತೆ ಹಾಗೂ ಅದರ ವ್ಯಕ್ತಿತ್ವ ಇವುಗಳ ಬಗ್ಗೆ ವಿವೇಚಿಸುವದು ಉಚಿತವಾದದ್ದು. ಈರುಳ್ಳಿಯ ಆಕಾರ ದುಂಡಗೆ; ರೂಪವೊ ನುಣುಪಾಗಿ, ಕೈಯಹಿಡಿತಕ್ಕೆ ಸಿಕ್ಕುವ ಗಾತ್ರ, ಬಣ್ಣ ಒಮ್ಮೊಮ್ಮೆ ತೆಳು ಶುಭ್ರ ವಸ್ತ್ರಧಾರಿಣಿಯಂತೆ ಮಗದೊಮ್ಮೆ ಕಾವಿಯ ಬಟ್ಟೆಯನ್ನುಟ್ಟ ಯೋಗಿನಿಯಂತೆ ಬಲು ಅಂದವಾಗಿರುತ್ತದೆ. ಮೊದಲನೋಟಕ್ಕೆ ಮನಸ್ಸು ಮುಗ್ಧವಾಗಿ ಹೋಗುತ್ತದೆ. ಬಡವರಿಗೂ ಬಲ್ಲಿದರಿಗೂ ಪ್ರಯೋಜನಕಾರಿಯಾದ ಉಳ್ಳಿಯನ್ನು ಎಷ್ಟು ಕೊಂಡಾಡಿದರೂ ಸಾಲದು. ದುಡಿದು ಹಣೆ ಬೆಮರನ್ನು ಒರಿಸುತ್ತ ಬಂದು ಹಾಯಾಗಿ ಗಿಡದ ನೆಳಲಿನಲ್ಲಿ ಕುಳಿತು ಊಟಮಾಡುವ ಒಕ್ಕಲಿಗ—ಈರುಳ್ಳಿಯನ್ನು ಕಡಿದುಕೊಂಡು ರೊಟ್ಟಿಯನ್ನು ತಿನ್ನುತ್ತಿರುವಾಗ ಸ್ವರ್ಗಸುಖವನ್ನು ಭೂಲೋಕದಲ್ಲಿಯೇ ಅನುಭವಿಸುತ್ತಾನೆ. ದೂರದಿಂದ ನಿಂತು ನೋಡುವವರ ಬಾಯಲ್ಲಿಯೂ ನೀರೂರುತ್ತದೆ! ಇವೆಲ್ಲ ಗುಣಗಳಿಗಿಂತ ಈರುಳ್ಳಿಯಲ್ಲಿ ಒಂದು ಸದ್ಗುಣ (?) ಇದೆ. ಅದಾವುದೆಂದರೆ— ಕಂದರ್ಪನ ಪ್ರೀತಿಗೆ ಪಾತ್ರವಾಗಿರುವದು !

ನಾನೊಮ್ಮೆ ನನ್ನ ಒಬ್ಬ ಮಹಾರಾಷ್ಟ್ರ ಬಂಧುವಿನಲ್ಲಿ ವಿಶೇಷ ಆಮಂತ್ರಣದ ಮೇರೆಗೆ ಭೋಜನಕ್ಕೆ ಬಿಜಯಂಗೈದಿದ್ದೆ. ಅಂದೊ—ಅವರಲ್ಲ 'ಕಾಂದ್ಯಾನವಮಿ' ಎಂತೆ! ಅದರ ಬಗ್ಗೆ ಬಹಳ ಕುತೂಹಲಿಯಾಗಿ ಕೇಳಿದಾಗ, ನನ್ನ ಗೆಳೆಯ ನುಡಿದ "ಇನ್ನು ಚಾತುರ್ಮಾಸ" ಬರುತ್ತದೆ—ಅಂದರೆ ನಾಲ್ಕು ತಿಂಗಳು ಈರುಳ್ಳಿ ತಿನ್ನಬಾರದು. ಅಂತಲೇ ಇಂದು ನಮ್ಮಲ್ಲಿ ಈರುಳ್ಳಿಯ ಹಬ್ಬ! ಎಂದು ಹೇಳಿದಾಗ ನನಗೆ ಈರುಳ್ಳಿಯ ಬಗೆಗೆ ಮತ್ತಷ್ಟು ಅಭಿಮಾನವೆನಿಸಿತು. ಅಂದಿನ ಊಟವೊ—ಕೇಳುವದೇನಿದೆ; ಈರುಳ್ಳಿಯ ಭಜಿ, ಅದರದೇ ಹುಳಿ, ಪಲ್ಲೆ—ಎಲ್ಲಾ ಈರುಳ್ಳಿಮಯಂ! ನಾನು ಅಂದಿನ ದಿನದ ಸವಿಯೂಟವನ್ನೇ ಮೆಲಕು ಹಾಕುತ್ತ ಪ್ರಬಂಧ ಬರೆಯಲು ಕುಳಿತಾಗ, ನನ್ನ ಕೋಣೆಯ ಬಾಗಿಲನ್ನು ಯಾರೊ ತಟ್ಟಿದಂತಾಯಿತು. ನೋಡುತ್ತೇನೆ.... ಬಿಸಿ ಬಿಸಿ ಈರುಳ್ಳಿಯ ಉಪ್ಪಿಟ್ಟಿನ ತಟ್ಟೆಯನ್ನು ಹಿಡಿದುಕೊಂಡು ನನ್ನ ಮಡದಿ ನಿಂತಿದ್ದಾಳೆ! ಆಹಹ—ನನಗೆ ಆಗ ಆದ ಸಂತೋಷವೆಷ್ಟೆಂಬುದನ್ನು ನೀವು ಊಹಿಸಲಾರಿರಿ. ಇರಲಿ. ಈರುಳ್ಳಿಯ ಉಪ್ಪಿಟ್ಟು ತಿಂದು ಬಾಯಿ ಚಪ್ಪರಿಸುತ್ತೇನೆ—ನಿಮಗೂ ವಿರಾಮ ಬೇಡವೆ?

# ಮೂರನೆಯ ಯೋಜನೆ ಹಾಗೂ ಒಕ್ಕಲತನ

ಲೇಖಕರು :
**ಡಾ|| ಎನ್. ಏ. ಮುಜುಮುದಾರ,**
ಎಂ. ಏ., ಪಿಎಚ್. ಡಿ.

ಭಾರತದ ಅರ್ಥವ್ಯವಸ್ಥೆಯಲ್ಲಿ ಒಕ್ಕಲತನದ ಪಾತ್ರ ಮಹತ್ವದ್ದೆಂಬುದನ್ನು ಯಾರೂ ಅಲ್ಲಗಳೆಯಲಾರರು. ಅಂತೆಯೇ ಪ್ರಥಮ ಯೋಜನೆಯಲ್ಲಿ ಬೇಸಾಯಕ್ಕೆ ಹೆಚ್ಚಿನ ಪ್ರಾಶಸ್ತ್ಯ ಕೊಡಲಾಯಿತು. ಈಗ ಮೂರನೆಯ ಯೋಜನೆಯಲ್ಲಿ ಮತ್ತೆ ಬೇಸಾಯ ಹೆಚ್ಚಿನ ಪ್ರಾಶಸ್ತ್ಯವನ್ನು ಗಳಿಸಿಕೊಂಡಿರುವುದು. ಆದರೆ ಈ ಯೋಜನೆ ಸರಿಯಾಗಿ ಕಾರ್ಯಗತವಾಗುತ್ತಿಲ್ಲವೇಕೆ? ಲೇಖಕರು ಈ ಪ್ರಶ್ನೆಯನ್ನೇ ಇಲ್ಲಿ ಚರ್ಚಿಸಿರುವರು.

ದೇಶದ ಆರ್ಥಿಕ ಅಭಿವೃದ್ಧಿಗಾಗಿ ವ್ಯಾಪಕ ಯೋಜನೆಯನ್ನು ನಾವು ಅನುಸರಿಸಹತ್ತಿ ಈಗ ಹತ್ತು ವರುಷಗಳಾಗುತ್ತ ಬಂದಿವೆ. ಮುಂದಿನ ವರುಷವೇ ಮೂರನೆಯ ಪಂಚವಾರ್ಷಿಕ ಯೋಜನೆಯ ಹೊಸತಿಲಲ್ಲಿ ಕಾಲಿರಿಸುತ್ತಿದ್ದೇವೆ. ಮೂರನೆಯ ಯೋಜನೆಯ ಬಗ್ಗೆ ವಿಚಾರಿಸುವ ಮುನ್ನ, ನಾವು ಈ ಕಳೆದ ೧೦ ವರುಷಗಳಲ್ಲಿ ಸಾಧಿಸಿದ ಪ್ರಗತಿ ಎಷ್ಟು, ಎಂಬುದನ್ನರಿಯುವದು ಅವಶ್ಯವಾಗಿದೆ.

ಸಾಮಾನ್ಯವಾಗಿ ಒಂದು ದೇಶವು ಅಭಿವೃದ್ಧಿ ಹೊಂದುತ್ತ ನಡೆದಂತೆ, ಆ ಅರ್ಥವ್ಯವಸ್ಥೆಯಲ್ಲಿ ಒಕ್ಕಲತನದ ಮಹತ್ವವು ಕಡಿಮೆಯಾಗುತ್ತ ಹೋಗುವದು ಸ್ವಾಭಾವಿಕವೇ ಸರಿ. ಈ ತರಹದ ಬದಲಾವಣೆಯು ಎರಡು ರೀತಿಯಲ್ಲಿ ಕಾಣಿಸಿಕೊಳ್ಳುತ್ತದೆ. ಒಂದು, ಒಕ್ಕಲತನದಲ್ಲಿ ನಿರತರಾಗಿರುವ ಜನರ ಪ್ರಮಾಣ ಕಡಿಮೆಯಾಗುತ್ತ ಹೋಗುವುದು ಹಾಗೂ ಎರಡನೆಯದಾಗಿ, ರಾಷ್ಟ್ರೀಯ ಆದಾಯದಲ್ಲಿ ಒಕ್ಕಲತನದ ಪಾಲು ಕುಂದುತ್ತ ಹೋಗುವದು. ಯೋಜನೆಯ ಈ ದಶಕದಲ್ಲಿ ಇಂಥ ಪರಿವರ್ತನೆಯ ಲಕ್ಷಣಗಳೇನಾದರೂ ಕಂಡುಬರುತ್ತಿವೆಯೇ ?

## ಒಕ್ಕಲತನಕ್ಕೆ ಅಧಿಕ ಮಹತ್ವ

ಪ್ರಗತಿಯ ವಿವಿಧ ಮುಖಗಳನ್ನು ಅಭ್ಯಸಿಸಿದರೂ ಈ ಪ್ರಶ್ನೆಗೆ ನಕಾರಾತ್ಮಕ ಉತ್ತರವೇ ದೊರೆಯುವಂತಿದೆ. ಹೀಗೆಂದಮಾತ್ರಕ್ಕೆ ಔದ್ಯೋಗೀಕರಣದ ದಿಶೆಯಲ್ಲಿ ಪ್ರಗತಿಯೇ ಆಗಿಲ್ಲವೆಂತಲ್ಲ. ಮೂಲ ಉದ್ದಿಮೆಗಳ ಭದ್ರವಾದ ತಳಹದಿಯನ್ನು, ಎರಡನೆಯ ಯೋಜನೆಯಲ್ಲಿ, ಹಾಕಿದುದು ಶ್ರೇಯಸ್ಕರ ವಿಷಯವೇ ಸೈ. ಮುಖ್ಯವಾಗಿ ನಾವು ಸಾಧಿಸುತ್ತಿರುವ ಪ್ರಗತಿಯನ್ನು ಹೆಚ್ಚುತ್ತಿರುವ ಜನಸಂಖ್ಯೆಯು ನುಂಗಿ ನೀರು ಕುಡಿದು ಬಿಡುತ್ತಿರುವದರಿಂದ, ದೇಶದ ಆರ್ಥಿಕ ಅಭಿವೃದ್ಧಿಯ ಮಟ್ಟವನ್ನು ಸಾಕಷ್ಟು ಹೆಚ್ಚಿಸುವದು ಅಸಾಧ್ಯವಾಗುತ್ತ ನಡೆದಿದೆ. ನಮ್ಮ ಆಹಾರ ಸಮಸ್ಯೆಯೇ ಈ ಮಾತಿಗೆ ದೃಷ್ಟಾಂತವಾಗಿದೆ.

ಮೊದಲನೆಯ ಯೋಜನೆಯಲ್ಲಿ ಒಕ್ಕಲತನಕ್ಕೆ ಹೆಚ್ಚು ಪ್ರಾಧಾನ್ಯವೀಯಲಾಗಿತ್ತು. ಈ ಅವಧಿಯಲ್ಲಿ ಒಕ್ಕಲತನದ ಉತ್ಪಾದನೆಯು ನಿರ್ದಿಷ್ಟಪಡಿಸಿದ ಗುರಿಗಿಂತಲೂ ಸ್ವಲ್ಪ ಅಧಿಕವಾಗಿಯೇ ಹೆಚ್ಚಿತು. ಅಂತೆಯೇ ಕೆಲ ಮಟ್ಟಿಗೆ ಅತಿಪ್ರಸರಣವನ್ನು ತಡೆಹಿಡಿಯುವದೂ ಸಾಧ್ಯವಾಯಿತು. ಯೋಜನಾ ಆಯೋಗಕ್ಕೆ ಈ ತರಹದ ಪ್ರಗತಿಯಿಂದ ಒಕ್ಕಲತನದ ಬಗ್ಗೆ ಆತ್ಮವಿಶ್ವಾಸವು ಉತ್ಪನ್ನವಾಯಿತು. ತತ್ಪರಿಣಾಮವಾಗಿ ಎರಡನೆಯ ಯೋಜನೆಯಲ್ಲಿ ಮೂಲ ಉದ್ದಿಮೆಗಳಿಗೆ ವಿಶೇಷ ಲಕ್ಷ್ಯವೀಯಲಾಯಿತು. ಆದರೆ ಎರಡನೆಯ ಯೋಜನೆಯು ಇನ್ನೂ ಅರ್ಧ ದಾರಿಯಲ್ಲಿರುವಾಗಲೇ ನಮಗೆ ಕಂಡುಬಂದುದೇನು ? ಮತ್ತೆ ಆಹಾರಸಮಸ್ಯೆ ತಲೆದೋರಿತು. ಉಕ್ಕಿನ ಕಾರಖಾನೆಗಳನ್ನು ಕಟ್ಟುವ ಹುಮ್ಮಸದಲ್ಲಿ ಹೊಲ-ಗದ್ದೆಗಳನ್ನು ಅಲಕ್ಷಿಸಲಾರಿರಿ ಎಂಬ ಮಾತನ್ನು ಪುನಃ ಮನವರಿಕೆ ಮಾಡಿಕೊಟ್ಟಂತಾಯಿತು. ಮೂರನೆಯ ಯೋಜನೆಯ ಕರಡನ್ನು ಸಿದ್ಧಪಡಿಸುವ ಕಾಲಕ್ಕೆ ಫೋರ್ಡ ಫೌಂಡೇಶನ್ನಿನ ತಜ್ಞರ ವರದಿಯೊಂದು ಬಹಳಷ್ಟು ಗೊಂದಲವೆಬ್ಬಿಸಿತು ಎಂದು ಹೇಳಬಹುದು. ಆಹಾರ ವಿಷಯದಲ್ಲಿ "ಗಂಡಾಂತರ" ಪರಿಸ್ಥಿತಿಯನ್ನು ದೇಶವು ಎದುರಿಸಬೇಕಾಗುವದೆಂಬ ಅಭಿಪ್ರಾಯವನ್ನು ಆ ತಜ್ಞರು ವ್ಯಕ್ತಮಾಡಿದರು. ಆ ಕಾರಣವಾಗಿಯೋ ಏನೋ ಮೂರನೆಯ ಯೋಜನೆಯಲ್ಲಿ ಪುನಃ ಒಕ್ಕಲತನಕ್ಕೆ ವಿಶೇಷ ಮಹತ್ವವೀಯಲಾಗಿದೆ. ಅಲ್ಲದೆ ಮೂರನೆಯ ಯೋಜನೆಯ ಕರಡಿನಲ್ಲಿ ಒಕ್ಕಲತನದ ಪ್ರಗತಿಯೇ ದೇಶದ ಆರ್ಥಿಕ ಅಭಿವೃದ್ಧಿಯ ನಾಂದಿಯಾಗಿದೆಯೆಂದು ಹಲವಾರು ಬಾರಿ ಹೇಳಲಾಗಿದೆ.

ಎರಡನೆಯ ಹಾಗು ಮೂರನೆಯ ಯೋಜನೆಗಳಲ್ಲಿ ವಿವಿಧ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಹಣವನ್ನು ಹೇಗೆ ವಿನಿಯೋಗಿಸಿರುವರೆಂಬುದನ್ನು ಕೆಳಗಿನ ಅಂಕಿಸಂಖ್ಯೆಗಳಿಂದ ನಾವು ಕಾಣಬಹುದು.

### ೧. ಯೋಜನೆಗಳಲ್ಲಿ ಹಣದ ವಿನಿಯೋಗ

| ಕಾರ್ಯಕ್ರಮಗಳ ವಿವರ | ಒಟ್ಟು ಹಣ (ಕೋಟಿ ರೂ-ಗಳಲ್ಲಿ) ೨ನೆಯ ಯೋಜನೆ | ಒಟ್ಟು ಹಣ (ಕೋಟಿ ರೂ-ಗಳಲ್ಲಿ) ೩ನೆಯ ಯೋಜನೆ | ಪ್ರತಿ ಶತ ೨ನೆಯ ಯೋಜನೆ | ಪ್ರತಿ ಶತ ೩ನೆಯ ಯೋಜನೆ |
|---|---|---|---|---|
| ೧. ಒಕ್ಕಲತನ ಹಾಗೂ ಚಿಕ್ಕ ನೀರಾವರಿ | ೩೨೦ | ೬೨೫ | ೬.೯ | ೮.೬ |
| ೨. ಸಮಾಜವಿಕಾಸ ಹಾಗೂ ಸಹಕಾರ | ೨೧೦ | ೪೦೦ | ೪.೬ | ೫.೫ |
| ೩. ದೊಡ್ಡ ಹಾಗೂ ಮಧ್ಯಮ ನೀರಾವರಿ | ೪೫೦ | ೬೫೦ | ೯.೮ | ೯.೦ |
| ಒಟ್ಟು | ೯೮೦ | ೧೬೭೫ | ೨೧.೩ | ೨೩.೧ |
| ೪. ವಿದ್ಯುಚ್ಛಕ್ತಿ ( ಶಕ್ತಿ ) | ೪೧೦ | ೯೨೫ | ೮.೯ | ೧೨.೮ |
| ೫. ಗ್ರಾಮ ಹಾಗೂ ಚಿಕ್ಕ ಉದ್ದಿಮೆಗಳು | ೧೮೦ | ೨೫೦ | ೩.೯ | ೩.೪ |
| ೬. ಉದ್ದಿಮೆ ಹಾಗೂ ಖನಿಜ | ೮೮೦ | ೧೫೦೦ | ೧೯.೧ | ೨೦.೭ |
| ೭. ಸಾರಿಗೆ, ಸಂಪರ್ಕ | ೧೨೯೦ | ೧೪೫೦ | ೨೮.೧ | ೨೦.೧ |
| ಒಟ್ಟು | ೨೭೬೦ | ೪೧೨೫ | ೬೦.೦ | ೫೭.೦ |
| ೮. ಸಾಮಾಜಿಕ ಸೇವೆ | ೮೬೦ | ೧೨೫೦ | ೧೮.೭ | ೧೭.೨ |
| ೯. ಸಂಗ್ರಹಗಳು | — | ೨೦೦ | — | ೨.೮ |
| ಒಟ್ಟು ಯೋಜನೆಯಲ್ಲಿ | ೪೬೦೦ | ೭೨೫೦ | ೧೦೦ | ೧೦೦ |

ಎರಡನೆಯ ಯೋಜನೆಯಲ್ಲಿ ಒಟ್ಟು ಹಣದಲ್ಲಿ ನೂರಕ್ಕೆ ೨೧ರಷ್ಟು ಒಕ್ಕಲತನ ವಿಷಯಕ ಕಾರ್ಯಕ್ರಮಗಳಲ್ಲಿ ವಿನಿಯೋಗಿಸಲಾಗಿದರೆ ಮೂರನೆಯ ಯೋಜನೆಯಲ್ಲಿ ಈ ಪ್ರಮಾಣವು ೨೩ಕ್ಕಿಂತ ಸ್ವಲ್ಪ ಹೆಚ್ಚೇ ಇದೆ. ಹಾಗೆಯೇ ಉದ್ದಿಮೆ ವಿಷಯಕ ಎಲ್ಲ ಕಾರ್ಯಕ್ರಮಗಳನ್ನು ತೆಗೆದುಕೊಂಡರೆ ಇಂಥ ಪ್ರಮಾಣವು ನೂರಕ್ಕೆ ೬೦ ರಿಂದ ೫೬ಕ್ಕೆ ಇಳಿದುದು ಕಂಡು ಬರುವದು. ಇಷ್ಟೇ ಅಲ್ಲ ಒಕ್ಕಲತನದ ಬಗ್ಗೆ ಇನ್ನುಳಿದ ಯೋಜನೆಗಳನ್ನು ನಾವು ಗಮನಿಸುವದು ಅತ್ಯವಶ್ಯವಿದೆ. ಮೂರನೆಯ ಯೋಜನೆಯಲ್ಲಿ ಕೃತಕ ಗೊಬ್ಬರದ ಉತ್ಪಾದನೆಗಾಗಿ ೨೪೦ ಕೋಟಿ ರೂಪಾಯಿಗಳಷ್ಟು ಹಣ ತೆಗೆದಿರಿಸಲಾಗಿದೆ. ಸಹಕಾರೀ ಸಂಸ್ಥೆಗಳ ಮುಖಾಂತರ ೬೭೫ ಕೋಟಿ ರೂ. ಗಳಷ್ಟು ಹಣವನ್ನು ಸಾಲರೂಪದಲ್ಲಿ ಒಕ್ಕಲತನದ ಅಭಿವೃದ್ಧಿಗಾಗಿ ಒದಗಿಸಲಾಗಿದೆ. ಇವೆಲ್ಲ ಸಂಗತಿಗಳನ್ನು ಮನದಂದರೆ ಮೂರನೆಯ ಯೋಜನೆಯಲ್ಲಿ ಪುನರಪಿ ಒಕ್ಕಲತನವು ವಿಶೇಷ ಪ್ರಾಧಾನ್ಯ ಪಡೆದಿದೆ ಎಂಬ ಮಾತು ಸ್ಪಷ್ಟವಾಗದಿರದು.

ನಿಜವಾಗಿಯೂ ನಮ್ಮ ಒಕ್ಕಲತನವು "ಗಂಡಾಂತರ" ಪರಿಸ್ಥಿತಿಯಲ್ಲಿದೆಯೇ ? ಹಾಗಿದ್ದರೆ ಅದನ್ನು ತಪ್ಪಿಸುವ ಉಪಾಯಗಳಾವವು ? ಈ ಪ್ರಶ್ನೆಗಳಿಗೆ ನಾವು ಉತ್ತರ ಕೊಡಬೇಕಾಗಿದೆ.

### ಈ ವರೆಗಿನ ಪ್ರಗತಿ

ಕಳೆದ ಎರಡು ಯೋಜನೆಗಳ ಅವಧಿಯಲ್ಲಿ ಒಕ್ಕಲತನದ ಉತ್ಪಾದನೆಯು ಯಾವ ಪ್ರಮಾಣದಿಂದ ಹೆಚ್ಚುತ್ತ ನಡೆಯಿತೆಂಬುದನ್ನು ಅವಲೋಕಿಸೋಣ.

### ೨. ಒಕ್ಕಲತನದ ಉತ್ಪಾದನೆ

| ವರ್ಷ | ಆಹಾರ ಧಾನ್ಯಗಳು ( ದಶಲಕ್ಷ ಟನ್ನುಗಳು ) | ಒಕ್ಕಲತನದ ಉತ್ಪಾದನೆಯ ಸೂಚಿಸಂಖ್ಯೆ |
|---|---|---|
| ೧೯೪೯–೫೦ | ೫೪ | ೧೦೦ |
| ೧೯೫೦–೫೧ | ೫೦ | ೯೫ |
| ೧೯೫೧–೫೨ | ೫೧ | ೯೭ |
| ೧೯೫೨–೫೩ | ೫೮ | ೧೦೨ |
| ೧೯೫೩–೫೪ | ೬೮ | ೧೧೪ |
| ೧೯೫೪–೫೫ | ೬೭ | ೧೧೭ |
| ೧೯೫೫–೫೬ | ೬೫ | ೧೧೬ |
| ೧೯೫೬–೫೭ | ೬೭ | ೧೨೩ |
| ೧೯೫೭–೫೮ | ೬೨ | ೧೧೪ |
| ೧೯೫೮–೫೯ | ೭೩ | ೧೩೦ |

ಮೇಲಿನ ಅಂಕಿ-ಸಂಖ್ಯೆಗಳಿಂದ ಒಡೆದು ಕಾಣುವ ಒಂದು ಮುಖ್ಯ ಸಂಗತಿಯೆಂದರೆ ಒಕ್ಕಲತನದ ಉತ್ಪಾದನೆಯು ಒಂದು ನಿರ್ದಿಷ್ಟ ಪ್ರಮಾಣದಿಂದ ವೃದ್ಧಿಂಗತವಾಗುತ್ತ ಹೋಗದೆ, ಅಸ್ತವ್ಯಸ್ತವಾಗಿ ಸಾಗುವದು, ಎಂಬುದು. ನಾವು ನೀರಾವರಿ ಯೋಜನೆಗಳಲ್ಲಿ ಈಗಾಗಲೇ ೧೩೩೦ ಕೋಟಿ ರೂಪಾಯಿಗಳಷ್ಟು ಬಂಡವಾಳವನ್ನು ವಿನಿಯೋಗಿಸಿದ್ದರೂ ಇನ್ನೂ ಬಹಳಷ್ಟು ಸಾಗುವಳಿ ಕ್ಷೇತ್ರವು ಮಳೆಯನ್ನೇ ಅವಲಂಬಿಸಬೇಕಾಗಿದೆ. ಮೂರನೆಯ ಯೋಜನೆಯ ಅಂತ್ಯದಲ್ಲೂ ಸಹ ಬಹಳವಾದರೆ ಒಟ್ಟು ಸಾಗುವಳಿ ಕ್ಷೇತ್ರದ ನೂರಕ್ಕೆ ೩೦ ರಷ್ಟು ಭೂಮಿ ಮಾತ್ರ ನೀರಿನ ಸೌಕರ್ಯವುಳ್ಳದ್ದಾಗುವದು. ಹೀಗಾಗಿ, ಮಳೆಯ ಪ್ರಭಾವವನ್ನು, ನಮ್ಮ ದಾಮೋದರ, ಬಾಕ್ರಾ ಯೋಜನೆಗಳ ಎಲ್ಲ ನೀರೂ ಸಿಂದ್ರಿಯ ಎಲ್ಲ ಕೃತಕ ಗೊಬ್ಬರವೂ ಕಡಿಮೆ ಮಾಡಲಾರದಾಗಿವೆ, ಇರಲಿ.

ಕಳೆದ ದಶಕದಲ್ಲಿ ಒಕ್ಕಲತನದ ಉತ್ಪಾದನೆಯು ವರುಷಕ್ಕೆ ನೂರಕ್ಕೆ ೩ ರಂತೆ ಹೆಚ್ಚುತ್ತ ಹೊರಟದೆ ಎನ್ನಲಡ್ಡಿಯಿಲ್ಲ. ಜನಸಂಖ್ಯೆಯು ನೂರಕ್ಕೆ, ವರುಷಕ್ಕೆ ೨ ರಂತೆ ಹೆಚ್ಚುತ್ತಲಿರುವದರಿಂದ, ಈ ವೇಗದ ಪ್ರಗತಿಯೇನು ಅಷ್ಟೊಂದು ಸಮಾಧಾನಕರವಲ್ಲವೆಂದೇ ಹೇಳಬೇಕು. ಆದರೂ ಅರ್ಥವ್ಯವಸ್ಥೆಯ ಉತ್ಪಾದನೆಯ ಶಕ್ತಿಯು ಮಾತ್ರ ಸಾಕಷ್ಟು ಹೆಚ್ಚಿದೆ, ಎಂದು ನಿಃಸಂಶಯವಾಗಿ ಹೇಳಬಹುದು. ಮೊದಲ ಯೋಜನೆಯಲ್ಲಿ ಹವಾಮಾನ ಪರಿಸ್ಥಿತಿಯು ತೀರ ಒಳ್ಳೆಯದಿದ್ದಾಗ, ಅತಿ ಹೆಚ್ಚೆಂದರೆ ೬೫ ದಶಲಕ್ಷ ಟನ್ನುಗಳಷ್ಟು ಆಹಾರಧಾನ್ಯಗಳನ್ನು ಉತ್ಪಾದಿಸುವದು ಸಾಧ್ಯವಾಯಿತು. ಆದರೆ ಅದೇ ಎರಡನೆಯ ಯೋಜನೆಯ ಅವಧಿಯಲ್ಲಿ ಈಗಾಗಲೇ ೭೩.೫ ದಶಲಕ್ಷ ಟನ್ನು ಆಹಾರ ಉತ್ಪಾದನೆಯನ್ನು ಸಾಧಿಸಿದ್ದೇವೆ. ಹೀಗಾಗಿ, ಒಕ್ಕಲತನ ಅರ್ಥವ್ಯವಸ್ಥೆಯ ಶಕ್ತಿಯನ್ನು ನಾವು ಅಳೆಯಬಲ್ಲೆವಾದರೆ ಅದು ನಮ್ಮ ಬೇಡಿಕೆಯನ್ನು ಪೂರೈಸಲು ಸಾಧ್ಯವಿದೆ ಎಂದು ಧೈರ್ಯವಾಗಿ ಹೇಳಬಹುದು.

ಇಲ್ಲಿ ಇನ್ನೊಂದು ಮಾತನು ಹೇಳಬೇಕು. ಮೂರನೆಯ ಯೋಜನೆಯು ಆಹಾರ ಧಾನ್ಯಗಳ ಬೇಡಿಕೆಯನ್ನು ೧೦೫ ದಶಲಕ್ಷ ಟನ್ನುಗಳಷ್ಟು ಎಂದು ಅಂದಾಜು ಮಾಡಿರುತ್ತದೆ. ಇದು ಬಹುಶಃ ಫೋರ್ಡ್ ಫೌಂಡೇಶನ್ನಿನ ತಜ್ಞರ ಅಭಿಪ್ರಾಯವನ್ನು ಒಪ್ಪಿಕೊಂಡಂತೆಯೇ. ಆದರೆ ೧೯೬೫—೬೬ ರಲ್ಲಿ ನಮ್ಮ ಜನಸಂಖ್ಯೆಯು ೪೭೯.೬ ದಶಲಕ್ಷದಷ್ಟಾಗುತ್ತದೆ ಎಂದು ಒಪ್ಪಿಕೊಂಡರೂ ಆಹಾರ ಧಾನ್ಯಗಳ ಬೇಡಿಕೆ ಸುಮಾರು ೫೫.೫ ದಶಲಕ್ಷ ಟನ್ನುಗಳಷ್ಟು ಮಾತ್ರ ಆಗುವದು. ಒಕ್ಕಲತನದ ಅರ್ಥವ್ಯವಸ್ಥೆಯು ಹೆಚ್ಚು ಆಹಾರಧಾನ್ಯ

ಗಳನ್ನು ಉತ್ಪಾದಿಸಿದರೆ ಅದು ಸ್ವಾಗತಾರ್ಹವೇ. ಆದರೆ ಸುಮ್ಮನೆ ಬೇಡಿಕೆಯ ಅಂದಾಜನ್ನು ಸಬಲವಾದ ಕಾರಣಗಳಿಲ್ಲದೆ ಹೆಚ್ಚಿಸುವದರಿಂದ, ಆಹಾರ ಪರಿಸ್ಥಿತಿಗೆ ಅನವಶ್ಯಕವಾಗಿ "ಗಂಡಾಂತರ" ಸ್ವರೂಪ ಕೊಟ್ಟಂತಾಗುವದು. ಇಂಥ ಅಂದಾಜುಗಳು ನಿಜಸ್ಥಿತಿಯ ಪ್ರತಿಬಿಂಬಗಳಲ್ಲವೆಂದು ಒತ್ತಿ ಹೇಳಬೇಕಾಗಿದೆ.

**ಮುಖ್ಯ ಕೊರತೆ : ಆಡಳಿತ**

ಯೋಜನೆಯಲ್ಲಿ ನಿವೇದಿಸಲಾದ ಒಕ್ಕಲತನದ ವಿವಿಧ ಅಭಿವೃದ್ಧಿ ಕಾರ್ಯಕ್ರಮಗಳು ಯಶಸ್ವಿಯಾಗಿ ಕಾರ್ಯರೂಪಕ್ಕಿಳಿಯುತ್ತಿವೆಯೋ? ಎಂಬದು ವಿಚಾರಿಸಬೇಕಾದ ವಿಷಯ. ಆಶ್ಚರ್ಯದ ಸಂಗತಿಯೆಂದರೆ, ಸಹಕಾರೀ ಆಂದೋಲನ, ಸುಧಾರಿಸಿದ ಬೀಜವಿತರಣ, ಸುಧಾರಿಸಿದ ಸಾಗುವಳಿಪದ್ಧತಿ, ಸ್ಥಳೀಯ ಗೊಬ್ಬರದ ಕಾರ್ಯಕ್ರಮಗಳು—ಇವೆಲ್ಲವುಗಳ ಪ್ರಗತಿಗೆ ಮುಖ್ಯವಾಗಿ ತೊಂದರೆಯೀಯುತ್ತಿದ್ದುದು ಹಣದ ಕೊರತೆಯಲ್ಲ, ಆಡಳಿತದ ಹಾಗೂ ಸಂಘಟನೆಯ ಕೊರತೆ. ಕೆಲವು ಉದಾಹರಣೆಗಳನ್ನು ತೆಗೆದುಕೊಳ್ಳಿರಿ.

ಒಕ್ಕಲತನದ ಅಭಿವೃದ್ಧಿಗಾಗಿ ರಿಜರ್ವ್ ಬ್ಯಾಂಕಿನವರು ಸಹಕಾರಿ ಸಂಘಗಳಿಗೆ ಇತ್ತೀಚಿಗೆ ಬಹಳಷ್ಟು ಹಣವನ್ನು ಕೊಡುತ್ತ ಬಂದಿರುವದು ಸುಪರಿಚಿತ ಸಂಗತಿಯು. ಒಕ್ಕಲಿಗರಿಗೆ ಸಾಗುವಳಿಗಾಗಿ ಸಾಲದ ಅವಶ್ಯಕತೆಯಂತೂ ಇದ್ದೇ ಇದೆ. ಪರಿಸ್ಥಿತಿಯು ಹೀಗಿದ್ದರೂ ರಿಜರ್ವ ಬ್ಯಾಂಕಿನವರು ಕೊಡಮಾಡಿದ ಎಲ್ಲ ಹಣವನ್ನೂ ಸಹಕಾರಿ ಸಂಸ್ಥೆಗಳು ಉಪಯೋಗಮಾಡಿಕೊಳ್ಳಲು ಸಮರ್ಥವಾಗಿಲ್ಲ. ೧೯೫೭-೫೮ ರಲ್ಲಿ ಸರಾಸರಿ ೧೨ ಕೋಟಿ ಹಾಗೂ ೧೯೫೮-೫೯ ರಲ್ಲಿ ೧೬ ಕೋಟಿ ರೂಪಾಯಿಗಳಷ್ಟು ಹಣವು ಉಪಯೋಗಮಾಡಿಕೊಳ್ಳದೆ ಉಳಿದುಹೋಯಿತು! ಇದಕ್ಕೆ ಮುಖ್ಯ ಕಾರಣವೆಂದರೆ ನಮ್ಮ ಸಹಕಾರೀ ಸಂಸ್ಥೆಗಳು ಸಬಲವಾಗಿಲ್ಲ. ಹಾಗೂ ಅವುಗಳ ಸಂಘಟನಾಶಕ್ತಿ ಹೆಚ್ಚಬೇಕಾಗಿದೆ. ಇದೇ ಕತೆ ಹಳ್ಳಿಗಳಲ್ಲಿಯ ಸಹಕಾರೀ ಸಂಘಗಳ ಬೆಳವಣಿಗೆಯಲ್ಲಿಯೂ ಕಾಣಿಸಿಕೊಳ್ಳುತ್ತಿದೆ. ಇಂಥ ಸಂಘಗಳ ಒಟ್ಟು ಸಂಖ್ಯೆಯೇನೋ ದಿನೇ ದಿನೇ ಬೆಳೆಯುತ್ತಿದೆ. ಆದರೆ ಒಳ್ಳೆಯ ರೀತಿಯಿಂದ ಕೆಲಸ ಮಾಡುವ—ಅಂದರೆ "ಅ" ಮತ್ತು "ಬ" ವರ್ಗದ—ಸಂಘಗಳು ನೂರಕ್ಕೆ ೧೬ ರಷ್ಟು ಮಾತ್ರ ಇವೆ. ಬಹಳಷ್ಟು ಸಂಘಗಳು "ಕ" ವರ್ಗದವಾಗಿವೆ, ಅಂದರೆ ಅಶಕ್ತ ಹಾಗೂ ಅಷ್ಟೊಂದು ಪ್ರಗತಿಪರವಿಲ್ಲದವಾಗಿವೆ. ಸಂಘಗಳ ಒಟ್ಟು ಸಂಖ್ಯೆಯನ್ನು ಬೆಳೆಯಿಸುವ ಸಾಹಸದಲ್ಲಿ ಇದ್ದ ಸಂಘಗಳನ್ನು ಬಲಿಷ್ಠ ಮಾಡುವ, ಸುಧಾರಿಸುವ ಕಾರ್ಯವನ್ನು ಮರೆತೇ ಬಿಡುತ್ತಿದ್ದೇವೆ. ಇಂಥ ಸಂದರ್ಭದಲ್ಲಿ ಸಹಕಾರೀ ಸಂಘಗಳು ಗ್ರಾಮಾಭಿವೃದ್ಧಿಯಲ್ಲಿ ಮಹತ್ವದ ಪಾತ್ರವನ್ನು ವಹಿಸಬೇಕೆನ್ನುವ ಮಾತು ವಿಫಲವೆಂದೇ ಹೇಳಬೇಕು.

ಇನ್ನು ಸರಕಾರಿ ಯೋಜನೆಗಳಲ್ಲಿಯಾದರೂ ಕಾರ್ಯಕ್ಷಮತೆ ಉಚ್ಚಮಟ್ಟದ್ದಿದೆಯೋ? ತೀರ ಇತ್ತೀಚೆಗೆ ರಿಜರ್ವ ಬ್ಯಾಂಕಿನವರು ಇಂಥ ಅಭಿವೃದ್ಧಿಯ ಕಾಯಕ್ರಮಗಳು ಎಷ್ಟರಮಟ್ಟಿಗೆ ಯಶಸ್ವಿಯಾಗಿವೆಯೆಂಬುದನ್ನು ಅರಿಯಲು ವಿಶೇಷ ಅಭ್ಯಾಸವೊಂದನ್ನು ಕೈಕೊಂಡರು. ಸುಧಾರಿಸಿದ ಬೀಜಗಳ ವಿತರಣೆಯ ಕಾರ್ಯಕ್ರಮವು ಪ್ರಚಲಿತವಿದ್ದ ಎಂಟು ಗ್ರಾಮಗಳಲ್ಲಿ ಕೇವಲ ಎರಡೇ ಗ್ರಾಮಗಳು ಅದರಿಂದ ನಿಜವಾದ ಲಾಭವನ್ನು ಪಡೆದಿದ್ದವು. ಕೃತಕ ಗೊಬ್ಬರದ ಕಾರ್ಯಕ್ರಮವಂತೂ ಇದಕ್ಕೂ ಹೆಚ್ಚು ಅಲಕ್ಷಿಸಲ್ಪಟ್ಟಿತ್ತು. ಒಟ್ಟು ೧೪೩ ಒಕ್ಕಲಿಗರನ್ನು ಕೇಳಲಾಗಿ, ಅವರಲ್ಲಿ ೧೧೫ ಜನರು ತಮಗೆ ಈ ಯೋಜನೆಯಿದ್ದುದೇ ಗೊತ್ತಿಲ್ಲವೆಂದರು! ಹೀಗೆ ಇಂಥ ಕಾರ್ಯಕ್ರಮಗಳು ಅಯಶಸ್ವಿಯಾದುದಕ್ಕೆ ಮೂಲತಃ ಆಡಳಿತಗಾರರ ಅಲಕ್ಷ್ಯವೇ ಕಾರಣವಾಗಿತ್ತೆಂದು ಅಭ್ಯಾಸದಿಂದ ವ್ಯಕ್ತವಾಗಿದೆ.

ಇವೆಲ್ಲವುಗಳಿಗಿಂತ ಬಹಳ ಒಡೆದು ಕಾಣುವ ಸಂಗತಿಯೆಂದರೆ ನೀರಾವರಿ ಸೌಕರ್ಯಗಳ ಪೂರ್ಣ ಲಾಭ ಮಾಡಿಕೊಳ್ಳದೆ ಇರುವದು. ದೇಶದ ತುಂಬೆಲ್ಲ ಹೆಚ್ಚು ಆಹಾರ ಬೆಳೆಯಿರಿ ಎಂಬ ಕೂಗೆದ್ದಿರುವ ಸಮಯದಲ್ಲಿಯೇ ಹೊಸದಾಗಿ ನಿರ್ಮಿಸಲಾದ ನೀರಾವರಿ ಸೌಕರ್ಯಗಳಲ್ಲಿ ನೂರಕ್ಕೆ ೫೦ ರಷ್ಟು ಭಾಗವನ್ನು ರೈತರು ಉಪಯೋಗಮಾಡಿಕೊಳ್ಳದಿರುವದು ನಿಜವಾಗಿಯೂ ಖೇದಾಶ್ಚರ್ಯ ಸಂಗತಿಯಾಗಿದೆ. ಇಂಥ ಪರಿಸ್ಥಿತಿಯು ಉದ್ಭವಿಸಲು ಕಾರಣಗಳಾವವು ಎಂಬುದು ಅಷ್ಟೊಂದು ಮಹತ್ವದ್ದಲ್ಲ. ಕಾರಣಗಳೇನೇ ಇದ್ದರೂ ಸಂಬಂಧಪಟ್ಟ ಅಧಿಕಾರಿಗಳು ಅವನ್ನು ಯೋಗ್ಯ ರೀತಿಯಿಂದ ವಿಚಾರಿಸಿ ತತ್‌ಕ್ಷಣವೇ ಲಭ್ಯವಿದ್ದ ಎಲ್ಲ ನೀರೂ ಸಾಗುವಳಿಗೆ ಉಪಯೋಗವಾಗುವಂತೆ ನೋಡಿಕೊಳ್ಳಬೇಕಿತ್ತು.

ಈ ನಾಲ್ಕಾರು ಉದಾಹರಣೆಗಳಿಂದ, ನಾವು ಕೇಂದ್ರದಲ್ಲಿ ನಿರೂಪಿಸಿದ ಯೋಜನೆಯನ್ನು ದೇಶದ ಪ್ರತಿಯೊಂದು ಹಳ್ಳಿಯಲ್ಲಿ ಕಾರ್ಯರೂಪಕ್ಕಿಳಿಸುವ ಆಡಳಿತವ್ಯವಸ್ಥೆ ಇನ್ನೂ ಸುಧಾರಿಸಿಲ್ಲವೆಂಬುದು ಸುಸ್ಪಷ್ಟವಾಗುತ್ತದೆ. ಹೀಗಾಗಿ ವಿವಿಧ ಕಾರ್ಯಕ್ರಮಗಳಿಗೆ ಅವಶ್ಯವಿದ್ದ ಹಣವನ್ನು ಯೋಜನೆಯಲ್ಲಿ ಒದಗಿಸಿದರೂ ಅವು ಕಾರ್ಯರೂಪದಲ್ಲಿ ಬರದೇ ಹೋಗಬೇಕಾಗಿದೆ.

**ರಚನಾತ್ಮಕ ಕಾರ್ಯಕರ್ತರು**

ಗ್ರಾಮಾಭಿವೃದ್ಧಿಯ ಅನೇಕ ಕಾರ್ಯಕ್ರಮಗಳನ್ನು ನಾವು ಕೈಕೊಂಡರೂ ಅವು ಸಂಪೂರ್ಣ ಯಶಸ್ವಿಯಾಗಲಾರವಾಗಿವೆ. ಇದೆಲ್ಲ ಬರಿಯ ಆಡಳಿತವರ್ಗದ ದೋಷದ ಮೂಲಕವೇ ಎಂದು ಅರ್ಥವಲ್ಲ. ಸಂಪ್ರದಾಯಬದ್ಧವಾದ

ಗ್ರಾಮೀಣ ಸಮಾಜವನ್ನೂ ಆಧುನಿಕ ಅರ್ಥ ವ್ಯವಸ್ಥೆಯ ನೊಗಕ್ಕೆ ಕಟ್ಟುವದು ಬರಿಯ ದೈನಂದಿನ ಸರಕಾರದ ಕಾರ್ಯವನ್ನು ಈ ವರೆಗೆ ನಿರ್ವಹಿಸುತ್ತಿದ್ದ ಅಧಿಕಾರವರ್ಗಕ್ಕೆ ಸಾಧ್ಯ ವಾಗದ ಕಾರ್ಯ. ಏಕೆಂದರೆ ಆರ್ಥಿಕ ಅಭಿವೃ-ದ್ಧಿಯ ಅರಿವು ಉಂಟುಮಾಡಿ, ಪ್ರತಿಯೊ-ಬ್ಬನೂ ತನ್ನ ಪಾಲಿನ ಶಕ್ತಿಯನ್ನು ಈ ಮಹಾ ಪ್ರಯತ್ನಕ್ಕೆ ಕೊಡುವಂತೆ ಮಾಡುವುದಕ್ಕೆ ಒಂದು ವಿಶಿಷ್ಟ ವಾತಾವರಣ ನಿರ್ಮಾಣವಾಗ ಬೇಕಾಗುತ್ತದೆ. ಇಂಥ ಕಾರ್ಯವನ್ನು ರಚನಾತ್ಮಕ ಕಾರ್ಯಕರ್ತರು ಯಶಸ್ವಿಯಾಗಿ ನಿರ್ವಹಿಸಬಲ್ಲರು. ಇಂಥ ರಚನಾತ್ಮಕ ಕಾರ್ಯಕರ್ತರು ಎಲ್ಲಿಂದ ಬರಬೇಕು ಎಂಬದನ್ನು ಇಲ್ಲಿ ಚರ್ಚಿಸುವದು ಯುಕ್ತವಾಗಲಿಕ್ಕಿಲ್ಲ. ದೃಷ್ಟಾಂತವೆಂದು ಭಾರತ ಸೇವಕ ಸಮಾಜವು ಕೋಶಿ ಮತ್ತು ನಾಗಾರ್ಜುನಸಾಗರ ಯೋಜನೆಗಳಲ್ಲಿ ಮಾಡಿದ ಪ್ರಶಂಸನೀಯ ಕಾರ್ಯವನ್ನು ನೋಡಬಹುದು. ಆದರೆ ಇಂಥ ಪ್ರಯತ್ನಗಳು ದೇಶದಲ್ಲಿ ಎಲ್ಲೋ, ಅಲ್ಲಿಷ್ಟು, ಇಲ್ಲಿಷ್ಟು, ಆದರೆ ನಡೆಯುದು. ದೇಶದಾದ್ಯಂತ ಹಳ್ಳಿಗಳಲ್ಲೆಲ್ಲ ಈ ತರಹದ ವಾತಾವರಣವನ್ನು ನಿರ್ಮಿಸಬಲ್ಲ ಕಾರ್ಯಕರ್ತರ ತಂಡವೇ ಬೇಕು.

### ಅಭಿವೃದ್ಧಿಯ ಸಾಧ್ಯಾಸಾಧ್ಯತೆಗಳು

ಇಂಥ ರಚನಾತ್ಮಕ ಕೆಲಸಗಾರರು ಹಳ್ಳಿಗರಲ್ಲಿ ಅಭಿವೃದ್ಧಿಯ ಅರಿವನ್ನುಂಟುಮಾಡಿ, ಯೋಜನೆಗಳನ್ನು ಕಾರ್ಯರೂಪಕ್ಕಿಳಿಸಲು ನೆರವಾದಲ್ಲಿ, ನಾವು ಎಷ್ಟು ಭರದಿಂದ ಮುಂ-ದುವರಿಯುಬಹುದೆಂಬದನ್ನು ಒಂದೆರಡು ಉದಾಹರಣೆಗಳಿಂದ ಸ್ಪಷ್ಟಪಡಿಸಬಹುದು.

ನಮ್ಮ ದೇಶದ ದನಕರುಗಳ ಸಂಪತು ಅಪಾರವಾದುದು. ಆದರೆ ದನಗಳ ಗೊಬ್ಬರವನ್ನು ಉರುವಲಕ್ಕಾಗಿ ಉಪಯೋಗಿಸುತ್ತಿರುವದರಿಂದ ಬಹಳಷ್ಟು ಹಾನಿಯಾಗುತ್ತಿದೆ. ಈಗ ಈರೀತಿ ಉರುವಲವೆಂದು ಉಪಯೋಗಿಸುತ್ತಿರುವ ಎಲ್ಲ ಗೊಬ್ಬರವನ್ನೂ ಸಾಗುವಳಿಗಾಗಿ ಉಪಯೋಗಿಸಿದಲ್ಲಿ, ಕೇವಲ ಇದೊಂದೇ ಕಾರ್ಯಕ್ರಮದಿಂದ ೯ ದಶಲಕ್ಷ ಟನ್ನುಗಳಷ್ಟು ಹೆಚ್ಚು ಆಹಾರಧಾನ್ಯಗಳನ್ನು ನಾವು ಬೆಳೆಯಬಹುದೆಂದು ಅಂದಾಜು ಮಾಡಲಾಗಿದೆ. ಅದೇ ರೀತಿ ಸಸ್ಯ (ಹಸಿರು) ಗೊಬ್ಬರದಿಂದ (Green Manure) ನಮ್ಮ ಧಾನ್ಯಗಳ ಹುಟ್ಟುವಳಿ-ಯನ್ನು ಇಮ್ಮಡಿಗೊಳಿಸಬಹುದು. ೧೦ ಕೋಟಿ ಎಕರೆ ಭೂಮಿಯಲ್ಲಿ ಇಂಥ ಸಸ್ಯಗಳನ್ನು ಬೆಳೆಯಲು ಬರುತ್ತಿದ್ದರೂ ಸದ್ಯಕ್ಕೆ ಬರಿಯ ನೂರಕ್ಕೆ ೧೦ರಷ್ಟು ಕ್ಷೇತ್ರದಲ್ಲಿ ಮಾತ್ರ ಬೆಳೆಯುತ್ತಿದ್ದಾರೆ. ಸುಧಾರಿಸಿದ ಬೀಜಗಳಿಂದಲೂ ಹುಟ್ಟುವಳಿಯನ್ನು ನೂರಕ್ಕೆ ೩೦ರಷ್ಟು ಹೆಚ್ಚಿಸಬಹುದು. ಹೀಗಿದ್ದರೂ ಹತ್ತಿ ಹಾಗೂ ಕಬ್ಬು ಇವೆರಡನ್ನು ಬಿಟ್ಟರೆ, ಉಳಿದ ಕ್ಷೇತ್ರಗಳಲ್ಲಿ ನೂರಕ್ಕೆ ೧೦ ರಷ್ಟು ಒಕ್ಕಲಿಗರು ಮಾತ್ರ ಇಂಥ ಬೀಜಗಳನ್ನು ಉಪಯೋಗಿಸುತ್ತಿದ್ದಾರೆ. ಇವೆಲ್ಲ ವಿಷಯುಗಳನ್ನು ಒತ್ತಿ ಹೇಳುವ ಉದ್ದಿಶ್ಯವಿಷ್ಟೇ. ಹೆಚ್ಚು ಹಣದ ವಿನಿಯೋಗವಿಲ್ಲದೇನೆ, ಇಂಥ ಒಂದು ಸಂಘಟನಾಶಕ್ತಿಯಿಂದ ದೇಶದ ಬೇಸಾಯ ಉದ್ದಿಮೆಯಲ್ಲಿ ಸಾಕಷ್ಟು ಸುಧಾರಣೆಗಳನ್ನು ತರಬಹುದಾಗಿದೆ.

ಮೂರನೆಯ ಯೋಜನೆಯಲ್ಲಿ, ಹಳ್ಳಿಗಳಲ್ಲಿ ಬಹಳಷ್ಟು ಜನರು ನಿರುದ್ಯೋಗಿ ಹಾಗೂ ಅಪೂರ್ಣ-ಉದ್ಯೋಗಿಗಳಾಗಿರುವದರಿಂದ, ಅವರ ಶ್ರಮವನ್ನು ಉಪಯೋಗಿಸಿಕೊಂಡು ನಾಡಿನ ಸಂಪತ್ತನ್ನು ಹೆಚ್ಚಿಸಬೇಕೆಂದು ಹೇಳಲಾಗಿದೆ. "ಶ್ರಮದಾನ"ದ ಆಂದೋಲನವೂ ಈಗ ಬಹಳಷ್ಟು ಯಶಸ್ವಿಯಾಗಿರದಿದ್ದರೆ ಅದಕ್ಕೆ ಮೇಲೆ ವಿವರಿಸಿದ ಸಂಘಟನಾಶಕ್ತಿ-ಯಿಲ್ಲದಿರುವದೇ ಕಾರಣವೆಂದು ಹೇಳಬಹುದು. ರಚನಾತ್ಮಕ ಕಾರ್ಯಕರ್ತರು ಹೀಗೆ ಹಳ್ಳಿಗರಲ್ಲಿ ಹೊಸ ಚೇತನವನ್ನು ತುಂಬಿ, ಅಭಿವೃದ್ಧಿಕಾರ್ಯದಲ್ಲಿ ಅವರ ನೆರವು ಪಡೆಯಬಲ್ಲರಾದರೆ, ಹಳ್ಳಿಯಲ್ಲಿಯ ಅನೇಕ ಸ್ಥಳೀಯ ಕಾರ್ಯಕ್ರಮಗಳನ್ನು— ಕೆರೆ, ರಸ್ತೆ, ಕಾಲುವೆ ಮನೆ ಇವನ್ನೆಲ್ಲ ಕಟ್ಟುವದು— ಯಶಸ್ವಿಯಾಗಿ ಮಾಡಬಹುದು.

### ಕೊನೆಯ ಮಾತು

ಮೂರನೆಯ ಯೋಜನೆಯಲ್ಲಿ ಯೋ ನಮಗೆ ಅವಶ್ಯವಿದ್ದ ಆಹಾರ ಧಾನ್ಯಗಳನು ಉತ್ಪಾದಿಸುವ ಶಕ್ತಿ ನಮ್ಮ ಬೇಸಾಯಕ್ಕಿದೆ. ಹಾಗೆ ನೋಡಿದರೆ, ಅರ್ಥವ್ಯವಸ್ಥೆಗೆ ಸದ್ಯಕ್ಕೆ ಅವಶ್ಯವಿದ್ದುದು ಹಣವಲ್ಲ, ಸಂಘಟನಾ ಶಕ್ತಿ, ಕೇಂದ್ರದಲ್ಲಿ ನಿರೂಪಿಸಲಾದ ಯೋಜನೆಗಳನ್ನು ಯಶಸ್ವಿಯಾಗಿ ಕಾರ್ಯರೂಪಕ್ಕಿಳಿಸುವಂಥ ಕುಶಲ ಆಡಳಿತವೂ ಅತ್ಯವಶ್ಯವಿದೆ. ಹಾಗೆಯೇ ಆರ್ಥಿಕ ಅಭಿವೃದ್ಧಿಯು ತ್ವರಿತ ಗತಿಯಿಂದ ಸಾಗಬೇಕಾದರೆ ಗ್ರಾಮೀಣ ಜನರಲ್ಲಿ ಬೆರೆತು ಅವರಲ್ಲಿ ಆರ್ಥಿಕ ಅಭಿವೃದ್ಧಿಯ ಅರಿವು ಹುಟ್ಟಿಸಿ, ಸ್ಥಳೀಯ ಅಭಿವೃದ್ಧಿ ಯೋಜನೆಗಳನ್ನು ಯಶಸ್ವಿಯಾಗಿ ಮಾಡಲು ರಚನಾತ್ಮಕ ಕೆಲಸಗಾರರ ತಂಡದ ಅವಶ್ಯಕತೆಯಿದೆ.

ಇಂಥ ಒಂದು ಸಂಘಟನಾಶಕ್ತಿಯನ್ನು ನಾವು ನಿರ್ಮಿಸಬಲ್ಲೆವಾದರೆ, ಅಧಿಕ ಹಣದ ವಿನಿಯೋಗವಿಲ್ಲದೇನೆ, ಬಹಳಷ್ಟು ಪ್ರಗತಿಯನ್ನು ಸಾಧಿಸುವದು ಸಾಧ್ಯವಿದೆ. ಅಮೇರಿಕದಿಂದ ನಮಗೆ ೧೭ ದಶಲಕ್ಷ ಟನ್ನುಗಳಷ್ಟು ಧಾನ್ಯಗಳ ಸಹಾಯ ದೊರೆತಿದ್ದುದರಿಂದ ಮಳೆಯ ಅಭಾವದಿಂದ ಬರಬಹುದಾದ ಕೊರತೆಯ ಬಗ್ಗೆ ನಾವು ಚಿಂತಿಸಬೇಕಾಗಿಲ್ಲ. ಈ ದೃಷ್ಟಿಯಿಂದ ಸಂಘಟನಾಶಕ್ತಿಯೆಡೆಗೆ ನಾವು ವಿಶೇಷ ಲಕ್ಷವಿತ್ತಲ್ಲಿ, ನಮ್ಮ ಒಕ್ಕಲತನದ ಪ್ರಗತಿ ತಂತಾನೆ ಆಗುತ್ತಿದ್ದರೆ, ಇನ್ನಿಷ್ಟು ಹೆಚ್ಚು ಹಣ ಔದ್ಯೋಗಿಕ ಅಭಿವೃದ್ಧಿಗೆ ಮೀಸಲಾಗಿರಿಸಿದ್ದರೂ ನಡೆಯುತ್ತಿತ್ತು ಎಂದು ಹೇಳಬಹುದು. ಏಕೆಂದರೆ ಕೊನೆಯ ವಿಶ್ಲೇಷಣೆಯಲ್ಲಿ, ದೇಶದ ಆರ್ಥಿಕ ಅಭಿವೃದ್ಧಿಯು ಔದ್ಯೋಗೀಕರಣದ ಮೇಲೆಯೇ ಅವಲಂಬಿಸಿದೆ. ಅಂತೆಯೇ ಕೃಷಿ-ಅಭಿವೃದ್ಧಿಯೂ ಔದ್ಯೋಗಿಕ ಅಭಿವೃದ್ಧಿಯೂ ಪರಸ್ಪರ ಅವಲಂಬಿತವಾಗಿರುವದರಿಂದ ಅವೆರಡೂ ಏಕಕಾಲಕ್ಕೆ ಸಾಗುವಂತೆ, ಅಭಿವೃದ್ಧಿ ಹೊಂದುವಂತೆ ನೋಡಿಕೊಳ್ಳುವದೇ ಒಳ್ಳೆಯ ಯೋಜನೆಯ ಲಕ್ಷಣ.

# ಕನ್ನಡದ ಇಂದಿನ ಕಾದಂಬರಿಗಳ ಒಲವು

ಕನ್ನಡ ಸಾಹಿತ್ಯದ ವಿವಿಧ ಅಂಗಗಳಲ್ಲಿ ಕಾದಂಬರಿ ಪ್ರಮುಖ ಸ್ಥಾನವನ್ನು ಪಡೆದಿದೆ. ಅದಕ್ಕೊಂದು ಪ್ರೌಢಾವಸ್ಥೆಯೂ ಒದಗಿದೆ. ಜಗತ್ತಿನ ಕಾದಂಬರೀ ಪ್ರಪಂಚದಲ್ಲಿ ಸ್ಥಾನಪಡೆಯುವ ಕಾಲ ಇಂದು ಒದಗಿದೆಯೆಂಬುದನ್ನು ನಮ್ಮ ಕಾದಂಬರಿಕಾರರು ಅರಿತು ಮುನ್ನಡೆಯಬೇಕಾಗಿರುವುದು. ಅವರು ಇದನ್ನು ಗಮನಿಸಿ ನಡೆದಲ್ಲಿ ಭವ್ಯ ಭವಿಷ್ಯತ್ತು ಅವರಿಗೆ ಕಾದಿದೆಯೆಂಬುದನ್ನು ಲೇಖಕರಿಲ್ಲಿ ಹೇಳುತ್ತಾರೆ.

ಲೇಖಕರು:
**ಶ್ರೀ. ಮಿರ್ಜಿ ಅಣ್ಣಾರಾಯರು,**
ಸೇಡಬಾಳ

ಮಾನವಜನಾಂಗವು ಪ್ರಕೃತಿಯ ಮೇಲೆ ಸಂಪಾದಿಸಿದ ವಿಜಯ ಪರಂಪರೆಯು ಸಂಸ್ಕೃತಿಯನ್ನು ರೂಪಿಸುತ್ತ ಬಂತು. ಈ ಸಂಸ್ಕೃತಿಯನ್ನು ಒಂದು ಪ್ರವಾಹಕ್ಕೆ ನಾವು ಹೋಲಿಸಬಹುದಾಗಿದೆ. ಇದು ಆರಂಭದಲ್ಲಿ ತೀರ ಚಿಕ್ಕ ಸೆಲೆಯಾಗಿದ್ದು, ಬರಬರುತ್ತ ಅನೇಕ ಹಿರಿಕಿರಿ ಹೊನಲುಗಳು ಸೇರಿ ಪ್ರವಾಹವಾಗಿ ಜನೋಪಕಾರಿಯಾಗಿ ಹರಿಯುವದುಂಟು. ಹೀಗೆಯೇ ಒಂದು ನಾಡಿನ ಸಂಸ್ಕೃತಿಯು ಕೂಡ ಅನ್ಯ ಜನಾಂಗಗಳ ಸಂಪರ್ಕದಿಂದ ವಿಕಾಸಗೊಳ್ಳುತ್ತ ಹೋಗುತ್ತದೆ. ಈ ಸಂಸ್ಕೃತಿ ಪ್ರವಾಹವು ಹರಿಯುವ ಪಾತ್ರವೆಂದರೇನೇ ಸಾಹಿತ್ಯವು. ಅದಕ್ಕಂತಲೇ ಸಂಸ್ಕೃತಿಯ ಮಾಧ್ಯಮವು ಸಾಹಿತ್ಯವೆಂದು ತಿಳಿಯಲಾಗಿದೆ. ಈ ದೃಷ್ಟಿಯಿಂದ ನೋಡಿದಾಗ ಸಾಹಿತ್ಯದ ಮಹತಿಯು ಇನ್ನೂ ಹೆಚ್ಚುತ್ತದೆ; ಅದರಲ್ಲೂ ಕಾದಂಬರಿಗಳ ಮೌಲ್ಯವು ಕಲ್ಪನೆಗೆ ನಿಲುಕುತ್ತದೆ.

ಇಂದು ಕನ್ನಡ ಸಾಹಿತ್ಯದ ವಿವಿಧ ಅಂಗಗಳಲ್ಲಿ ಕಾದಂಬರಿಯೇ ಪ್ರಮುಖ ಸ್ಥಾನವನ್ನು ಪಡೆದಿದೆ. ಈಗ ಅದು ನಮ್ಮ ಸಂಸ್ಕೃತಿಯ ಪ್ರದರ್ಶನಕ್ಕೆ ಪ್ರಮುಖ ಸಾಧನವಾಗಿದೆಯೆಂದೇನೂ ಪ್ರಾಧಾನ್ಯವನ್ನು ಪಡೆದಿಲ್ಲ. ಜನತೆಯು ಕೂಡ ಬುದ್ಧಿಪೂರ್ವಕವಾಗಿ ಸಾಹಿತ್ಯ ಸಾಮ್ರಾಜ್ಯದ ಮಹಾರಾಣಿ ಇವಳೆಂದು ಕಾದಂಬರಿಗೆ ಹಿರಿಯ ಪಟ್ಟವನ್ನು ಕಟ್ಟಲಿಲ್ಲ. ಹೊಸಗನ್ನಡ ಸಾಹಿತ್ಯವು ಹೇಗೊ ಹೇಗೋ ರೂಪುಗೊಂಡು ತನ್ನನ್ನು ತಾನು ಸಿಂಗರಿಸಿಕೊಳ್ಳುವ ಅವಸರದಲ್ಲಿ ಕಾದಂಬರಿಯನ್ನು ಸಹಜಕಂಠಾಭರಣವೆಂದು ಧರಿಸಿತು. ಆಗ ಅದು ಕನ್ನಡ ಸಾಹಿತ್ಯದೇವಿಯ ಹೃದಯ ಸ್ಥಾನವನ್ನು ಅಲಂಕರಿಸಿತು. ಆದರೆ ಸಹಜವಾಗಿ ಸಿಕ್ಕ ಸ್ಥಾನವೆಂದು ಇಂದು ಕಾದಂಬರಿಕಾರರು ಸುಲಭವಾಗಿ ಕೃತಿ ರಚಿಸುತ್ತ ಹೋದರೆ ಕನ್ನಡ ಸಾಹಿತ್ಯದೇವಿಯ ಕಂಠಾಭರಣವೆಣಿಸಿದ ಕಾದಂಬರಿ ವಿಭಾಗವು ನಾಳೆ ಕಾಲ್‌ಗೆಜ್ಜೆಯಾಗಿ ನಿಲ್ಲಬಹುದಾಗಿದೆ. ಈ ಎಚ್ಚರದ ದೃಷ್ಟಿಯಿಂದಲಾದರೂ ಕನ್ನಡದ ಇಂದಿನ ಕಾದಂಬರಿಗಳ ಒಲವನ್ನು ಕುರಿತು ವಿಚಾರಿಸುವದು ಅವಶ್ಯಕವಾಗಿದೆ.

## ವಾಸ್ತವಿಕತೆ

ಕನ್ನಡ ಸಾಹಿತ್ಯ ಎಂದರೆ ಮಹಾಕಾವ್ಯಗಳು—ಎನ್ನುವ ಕಾಲವು ಒಂದಿತ್ತು. ಆಗ ಅದು ಜನಜೀವನವನ್ನು ನೇರವಾಗಿ ಪ್ರತಿಬಿಂಬಿಸುತ್ತಿರಲಿಲ್ಲ. ಆದರೂ ಜನಾಂಗದ ಆಶೆ ಅಭಿಲಾಷೆಗಳನ್ನು—ಅದರಲ್ಲಿ ಹಾಸು-ಹೊಕ್ಕಾಗಿರುವುದನ್ನು-ನಾವು ಶೋಧಿಸಿ ಕಾಣುತ್ತೇವೆ. ಅದೇ ಕಾಲದಲ್ಲಿ ಪ್ರಚಾರದಲ್ಲಿದ್ದ ಉಳಿದ ಸಾಹಿತ್ಯ ಪ್ರಕಾರಗಳಿದ್ದರೂ ಅವು ಕೂಡ ಇಂದಿನಂತೆ ಜನಜೀವನವನ್ನು ಚಿತ್ರಿಸುತ್ತಿರಲಿಲ್ಲ. ಹೀಗಾಗಿ ಜೀವನಕ್ಕೂ ಸಾಹಿತ್ಯಕ್ಕೂ ಇರುವ ಅಂತರವನ್ನೇ ಹೆಚ್ಚಾಗಿ ಹಿಂದಿನ ಸಾಹಿತ್ಯದಲ್ಲಿ ಕಾಣುತ್ತೇವೆ. ಅದರಂತೆ ಅಂದಿನ ಸಾಹಿತ್ಯದ ಭಾಷೆಯ ವಿಷಯದಲ್ಲಿ ಕೂಡ ಇದೇ ಮಾತನ್ನು ಹೇಳಬೇಕಾಗುತ್ತದೆ. ಜನರಾಡುವ ಭಾಷೆಯೇ ಬೇರೆ, ಸಾಹಿತ್ಯಕ್ಕಿರುವ ಭಾಷೆಯೇ ಬೇರೆ. ಈ ಅಂತರಗಳೆಲ್ಲ ಇಂದು ಇಲ್ಲದಂತಾಗಿವೆ. ಈಗ ಸಾಹಿತ್ಯವು ಜನಜೀವನಕ್ಕೆ ನಿಕಟವರ್ತಿಯಾಗಿದೆ. ಜನರ ನಿತ್ಯ ಬಳಕೆಯ ನುಡಿಯೇ ಸಾಹಿತ್ಯದ ಮಾಧ್ಯಮವಾಗಿದೆ. ಹೀಗಾಗಿ ಸಾಹಿತ್ಯಕ್ಕೊಂದು ವಾಸ್ತವಿಕತೆಯ ಒಪ್ಪವು ಅಳವಟ್ಟಿದೆ, ಅಳವಡುತ್ತಲಿದೆ. ಇದರಿಂದಾಗಿ ಹೊಸಗನ್ನಡ ಸಾಹಿತ್ಯದ ಲಕ್ಷಣಗಳಲ್ಲಿ ವಾಸ್ತವಿಕತೆಗೇನೇ ಪ್ರಧಾನ ಪಟ್ಟವು ಲಭಿಸುವದು ಸ್ವಾಭಾವಿಕವಾಗಿದೆ. ಈ ವಾಸ್ತವಿಕತೆಯು ಇಂದಿನ ಕನ್ನಡ ಕಾದಂಬರಿಗಳ ಜೀವಾಳವಾಗಿದೆ.

ಕಾದಂಬರಿಯೇ ಆಗಲಿ, ಸಾಹಿತ್ಯದ ಇನ್ನಾವುದೇ ಪ್ರಕಾರವಾಗಲಿ, ಅದು ಜನಜೀವನದ ವಾಸ್ತವ ಚಿತ್ರವನ್ನು ಕೊಡಬೇಕು. ಈ ಮಾತನ್ನು ಹೇಳುವಾಗ ಅದೊಂದು 'ಚಿತ್ರ'ವೆಂಬುದನ್ನು ಮಾತ್ರ ಕಲಾವಿದನು ಮರೆಯುವಂತಿಲ್ಲ. ಅದರಿಂದ ಸಾಹಿತ್ಯದಲ್ಲಿ ಇದ್ದಕ್ಕಿದ್ದಂತೆ—ಸಮಾಜದಲ್ಲಿ ನಡೆದಂತೆಯೇ— ವರದಿಯ ರೂಪದಲ್ಲಿ ಬರೆದುಬಿಟ್ಟರೆ ಅದು ಸುಂದರ ಕೃತಿಯೆನಿಸದು. ಸಾಹಿತ್ಯವು ಮೊದಲು ಸಾಹಿತ್ಯವಾಗಬೇಕು. ಆಮೇಲೆ ಅದು ವಾಸ್ತವಿಕತೆಯಿಂದ ಕೂಡಿರಬೇಕು. ಅದರಿಂದ ಲೇಖಕನು ತಾನು ಕಣ್ಣಿಟ್ಟು ನೋಡಿದ, ನೋಡಿ ಅನುಭವಿಸಿದ, ಅನುಭವಿಸಿ ಎದುರಿಸಿದ, ಎದುರಿಸಿ ಅರಿತ ಸತ್ಯದ ತಿರುಳನ್ನು ಜೀವನದಿಂದ ಎತ್ತಿ ತನ್ನ ಕೃತಿಯಲ್ಲಿ ಎರಕ ಹೊಯ್ಯಬೇಕಾಗುವುದು, ರೂಪಿಸಬೇಕಾಗುವದು. ಈ ಸತ್ಯನಿರೂಪಣ ಕಾರ್ಯವು ನಾವು ತಿಳಿದುಕೊಂಡಷ್ಟು ಸುಲಭಸಾಧ್ಯವೇನಲ್ಲ. ಅದು ಲೇಖಕನ ಅನುಭವದ ಪ್ರಾಮಾಣಿಕತೆ, ಉತ್ಕಟತೆ ಹಾಗೂ ಕಲ್ಪಕತೆಗಳ ಸ್ಥಿತಿ-ಗತಿಗಳನ್ನು ಅವಲಂಬಿಸಿ ಸುಂದರ ಮತ್ತು ಪೂರ್ಣ ರೂಪದಲ್ಲಿ ಕೃತಿಯಲ್ಲಿ ಅವತರಿಸುತ್ತಿರುತ್ತದೆ. ಇಂದು ಕರ್ನಾಟಕದ ಲೇಖಕರ ಸತ್ಯದರ್ಶನದ ಅವತರಣವು ಕಾದಂಬರಿಯ ಸ್ವರೂಪದಲ್ಲಿ ಹೆಚ್ಚಾಗಿ ಆಗುತ್ತಲಿದೆ. ಆದರೆ ಕಾದಂಬರಿಕಾರರ ದರ್ಶನವು ವಿಶುದ್ಧ ಹಾಗೂ ಪ್ರಾಮಾಣಿಕವಾಗಿರುವಷ್ಟೇ ಕನ್ನಡ ಕಾದಂಬರಿಗಳ ಯೋಗ್ಯತೆಯೂ ಇರುತ್ತದೆ. ಅದಕ್ಕಾಗಿ ಕಾದಂಬರಿಕಾರರ ದರ್ಶನ ವಿಶುದ್ಧಿಯು ಹೆಚ್ಚುತ್ತ ಹೋಗಿ, ಅದು ಕಲಾಪೂರ್ಣ ರೀತಿಯಲ್ಲಿ, ಕೃತಿಯಲ್ಲಿ ಒಡಮೂಡಬೇಕಾಗಿದೆ. ಇಂಥ ಅಭಿವ್ಯಕ್ತಿಯು ಇಂದಿನ ಕನ್ನಡ ಕಾದಂಬರಿಯಲ್ಲಿ ಕಡಿಮೆ ಪ್ರಮಾಣದಲ್ಲಿ ನೋಡಲಿಕ್ಕೆ ಸಿಕ್ಕುತ್ತದೆ.

## ಸಂಸ್ಕೃತಿಯ ಕೆನೆ

ಸಾಹಿತ್ಯದ ಅಂಗಗಳೆನಿಸುವ ಭಾವಗೀತೆ, ಸಣ್ಣ ಕತೆ, ನಾಟಕಗಳಿಗಿಂತ ಕಾದಂಬರಿಗಳಲ್ಲಿ ಲೇಖಕನಿಗೆ ವಿಶಾಲವಾದ ಜೀವನ, ವಿವಿಧ

ಪಾತ್ರಸೃಷ್ಟಿ, ಹಲವು ಸನ್ನಿವೇಶಗಳನ್ನು ನಿರೂಪಿಸಲಿಕ್ಕೆ ಅವಕಾಶವಿದೆ. ಅದರಿಂದ ಕಾದಂಬರಿಕಾರನು ಚಿತ್ರಿಸಲಿರುವ ಜನಾಂಗದ ಸಂಸ್ಕೃತಿಯ ಹೃದಯವನ್ನೇ ಅದರಲ್ಲಿ ಅವನು ಚಿತ್ರಿಸಬಹುದಾಗಿದೆ. ಹೀಗೆ ನಮ್ಮ ಜನರ ಸಂಸ್ಕೃತಿಯ ಕೆನೆಯಾಗಿ, ತನೆಯಾಗಿ ರೂಪುಗೊಂಡ ಕನ್ನಡ ಕಾದಂಬರಿಗಳೆಷ್ಟು ?—ಎಂಬ ಪ್ರಶ್ನೆಯನ್ನು ಕೇಳಿಕೊಂಡಾಗ ನಮ್ಮ ಲೆಕ್ಕಕ್ಕೆ ಸಿಗುವ ಕಾದಂಬರಿಗಳ ಸಂಖ್ಯೆಯು ತೀರ ಕಡಿಮೆಯಾಗಿದೆ. ಅದಕ್ಕೆ ಕಾರಣವಿಷ್ಟೆ: ಕನ್ನಡ ಕಾದಂಬರಿಕಾರರು ತಾವು ಚಿತ್ರಿಸಲಿರುವ ಜನಜೀವನದಲ್ಲಿ ಒಂದಾಗಿ ಬಾಳಿ, ಅವರ ಸುಖ-ದುಃಖಗಳನ್ನು ತಾವೂ ಉಂಡು, ಅನುಭವಿಸಿ ಚಿತ್ರಿಸುತ್ತ ಇಲ್ಲ. ಎಲ್ಲಿಯೋ ಇದ್ದು, ಯಾರದೋ ಜೀವನವನ್ನು ಕಂಡು, ಕೇಳಿ, ಕಲ್ಪಿಸಿ ಕೃತಿಗಳನ್ನು ಹೊಸೆಯುತ್ತ ಹೋಗುವುದರಿಂದ ಅದರಲ್ಲಿ ಕೈಗಡ ತಂದ ಹೃದಯವೆ ಮೂಡುತ್ತದೆಯೇ ಹೊರತಾಗಿ ಜೀವಕಳೆಯು ತುಂಬುವುದಿಲ್ಲ. ಹೀಗಾಗಿ ಬರಬರುತ್ತ ಕನ್ನಡ ಕಾದಂಬರೀಪ್ರಪಂಚವು ರಸಹೀನ ಹಾಗೂ ಕಳಾಹೀನವಾಗುತ್ತ ನಡೆದಿದೆ. ವಿಪುಲ ಸಂಖ್ಯೆಯಲ್ಲಿ ಪ್ರಕಟವಾಗುವ ಕಾದಂಬರಿಗಳಲ್ಲಿ ಕೆಲವೊಂದು ಕೃತಿಗಳು ಮಾತ್ರ ಕನ್ನಡ ಕಾದಂಬರಿ ಪ್ರಪಂಚಕ್ಕೆ ಗೌರವವನ್ನು ತರುವಂತೆ ಇರುತ್ತವೆ.

ಇಂದಿನ ಕನ್ನಡ ಕಾದಂಬರಿಯ ಸ್ಥಿತಿಯು ಹೀಗಾಗಲು ಕಾರಣವೇನು ?—ಕ್ರಿಯಾಶೀಲನಾದ ಸಮಾಲೋಚಕನು ಈ ಪ್ರಶ್ನೆಯನ್ನು ಬಿಡಿಸದೆ ಮುಂದರಿಯುವಂತಿಲ್ಲ. ಈಗ ಪ್ರಕಟವಾಗುವ ಹಲವು ಕಾದಂಬರಿಗಳನ್ನು ಓದಿ ಕೆಲವೊಂದು ಮಾತುಗಳನ್ನು ಹೇಳಬಹುದಾಗಿದೆ. ಹೀಗೆ ಹೇಳುವಾಗ ಹೆಸರಾಂತ ನುರಿತ ಕಾದಂಬರಿಕಾರರನ್ನು ಅವರ ಕೃತಿಗಳನ್ನೂ ಒಂದೆಡೆಗೆ; ಅದರಂತೆ ಇತ್ತಿತ್ತಲಾಗಿ ಕಾದಂಬರಿ ಕ್ಷೇತ್ರದಲ್ಲಿ ಕೃಷಿಯನ್ನು ಆರಂಭಿಸಿ, ಕೃತಿರಚನೆ ಮಾಡುತ್ತಿರುವ ಕಾದಂಬರಿಕಾರರನ್ನು ಅವರ ಕೃತಿಗಳನ್ನು ಇನ್ನೊಂದೆಡೆಗೆ ಇಟ್ಟುಕೊಂಡು ವಿವರಿಸಬೇಕಾಗುತ್ತದೆ. ಲೇಖಕನು ಹೊಸಬನೇ ಇರಲಿ, ನುರಿತವನೇ ಇರಲಿ ಅವನಿಗೊಂದು ವ್ಯಕ್ತಿತ್ವವಿರುತ್ತದೆ. ಆ ವ್ಯಕ್ತಿತ್ವದ ವಿಕಾಸಕ್ಕೂ ಒಂದು ಮರ್ಯಾದೆಯು ಇರುತ್ತದೆ. ಎಲ್ಲಿಯವರೆಗೆ ಕಾದಂಬರಿಕಾರನಾದ ವ್ಯಕ್ತಿಯು ತಾನು ಬೆಳೆಯುತ್ತಿರುತ್ತಾನೆಯೋ ಅಲ್ಲಿಯವರೆಗೆ ಅವನ ಕೃತಿಗಳಲ್ಲೂ ಹೊಸತನವು ವ್ಯಕ್ತಗೊಳ್ಳುತ್ತ ಹೋಗುತ್ತದೆ. ಅವನ ಬೆಳವಣಿಗೆಯೇ ಯಾವುದೇ ಕಾರಣದಿಂದಾಗಿ-ನಿಂತಾಗ ಅವನು ಹೊಸೆಯುವ ಕೃತಿಗಳು ಹಿಂದಿನ ಕಾದಂಬರಿಗಳ ಪುನರಾವೃತ್ತಿಗಳೇ ಆಗುತ್ತವೆ. ಅವನು ನುರಿತ ಲೇಖಕನಾಗಿದ್ದರೆ ಕಾದಂಬರಿಯ ತಂತ್ರ, ಭಾಷೆಯ ಆಕರ್ಷಕತೆ ಇವೇ ಮೊದಲಾದ ಹೊರಗಿನ ಬೆಡಗಿನಿಂದ ಕೃತಿಯನ್ನು ಸುಂದರಗೊಳಿಸಿ ತೋರಿಸಬಲ್ಲನು. ಆದರೆ ಅಂಥ ಕೃತಿಗಳು ಕಾದಂಬರಿ ಲೋಕಕ್ಕೇನೂ ಗೌರವವನ್ನು ತರುವದಿಲ್ಲ. ಕನ್ನಡದ ನುರಿತ ಕಾದಂಬರಿಕಾರರ ಸ್ಥಿತಿಯು ಈ ಅವಸ್ಥೆಗೆ ಮುಟ್ಟಿದ್ದರೆ ಅವರು ಇನ್ನು ಮುಂದೆ ಕೃತಿಗಳನ್ನೇ ರಚಿಸಬಾರದೋ ಹೇಗೆ?—ಎಂಬ ಪ್ರಶ್ನೆಯೂ ಇಲ್ಲಿ ಉದ್ಭವಿಸುತ್ತದೆ. ಅದಕ್ಕೊಂದು ಮಾರ್ಗವೂ ಇದೆ. ಇಂಥ ಕಾದಂಬರಿಕಾರರು ತಮ್ಮ ಕಾದಂಬರಿಗಳ ವಸ್ತುವಿನ ಆಯ್ಕೆಯ ಕ್ಷೇತ್ರವನ್ನು ಬದಲಿಸುವದು ವಿಹಿತವೆಂದು ತೋರುತ್ತದೆ. ಇಲ್ಲಿಯವರೆಗೆ ಸಾಮಾಜಿಕ ಕಾದಂಬರಿಗಳನ್ನು ಬರೆದು ಹೆಸರಾಂತವರು ಮುಂದೆ ಐತಿಹಾಸಿಕ ಇಲ್ಲವೆ ಪೌರಾಣಿಕ ವಸ್ತುಗಳನ್ನು ಅಳವಡಿಸಿಕೊಂಡು ಸುಂದರ ಕೃತಿಗಳನ್ನು ನಿರ್ಮಿಸಲು ಸಾಧ್ಯವಿದೆ. ಅಂಥ ಕೃತಿಗಳನ್ನು ರಚಿಸುವಾಗ ಅವುಗಳಿಗೆ ಬೇಕಾಗುವ ಆಳವಾದ ಅಭ್ಯಾಸ, ತಾಳ್ಮೆ, ಕಲ್ಪಕತೆಗಳನ್ನೆಲ್ಲ ಅವರು ಸಂಪಾದಿಸಿಕೊಳ್ಳಬೇಕಾಗುತ್ತದೆ. ಅದಕ್ಕಾಗಿ ಅವರು ಕೆಲವುಕಾಲ ತಿರುಗಿ ತಪಸ್ಸನ್ನಾಚರಿಸಿ ಕೃತಿ ನಿರ್ಮಾಣಕ್ಕೆ ತೊಡಗಬೇಕಾದೀತು. ಇಲ್ಲವೆ ಸಮಾಜದ ವಿವಿಧ ತರಗಳ ಜನರಲ್ಲಿ ಕೂಡಿ ಬಾಳುವ ಹೊಸಜೀವನಯಾತ್ರೆಯ ಸಾಹಸವನ್ನಾದರೂ ಇಂದಿನ ಕನ್ನಡಕ್ಕೆ ನುರಿತ ಕಾದಂಬರಿಕಾರನು ಕೈಕೊಳ್ಳಬೇಕಾಗುವದು. ಏನೇ ಆಗಲಿ, ಅವನ ಜೀವನವು ಮಹತಿಯನ್ನು ಹೊಂದದೆ ಅವನಿಂದ ಮಹಾಕೃತಿಯು ನಿರ್ಮಾಣವಾಗಲಾರದು. ಅದಕ್ಕಾಗಿ ಮಹಾ ಅಲ್ಲದಿದ್ದರೂ ಮಹತ್ವಪೂರ್ಣ ಜೀವನವನ್ನು ಜೀವಿಸಲು ಕಾದಂಬರಿಕಾರರು ಇಂದು ಹವಣಿಸಬೇಕಾಗಿದೆ. ಈ ಹಂಬಲದ ಬೆಂಬಲವು ಇಂದಿನ ಕನ್ನಡ ಕಾದಂಬರಿಗಳಿಗೆ ಇಲ್ಲವೆಂದು ಧಾರಾಳವಾಗಿ ಹೇಳಬಹುದಾಗಿದೆ.

### ಹೊಸ ಕಾದಂಬರಿಕಾರರು

ಇನ್ನು ಹೊಸ ಕಾದಂಬರಿಕಾರರನ್ನು ಕುರಿತು ಒಂದು ಮಾತು. ಎಂಥ ಕಲಾವಿದಗ್ಧನಿಗಾದರೂ ತಾನು ಪಡೆದ ಅನುಭವವನ್ನು ಕಲಾಕೃತಿಯನ್ನಾಗಿ ಒಡಮೂಡಿಸಲಿಕ್ಕೆ ಕೆಲವೊಂದು ಕಾಲವು ಗತಿಸಲಿಕ್ಕೇಬೇಕಾಗುತ್ತದೆ.

ಕಲಾವಿದನು ಎಲ್ಲರೊಡನೆ ಸಮಾಜದಲ್ಲಿ ಬಾಳುತ್ತಿದ್ದರೂ ಉಳಿದವರಿಗಿಂತ ಹೆಚ್ಚು ತೀವ್ರತೆಯಿಂದ ಅವನು ದುಃಖವನ್ನೋ ಸುಖವನ್ನೋ ಅನುಭವಿಸುತ್ತಾನೆ. ಅಲ್ಲದೆ ಅನ್ಯರ ಸುಖ-ದುಃಖಗಳನ್ನೂ ತನ್ನವೆನ್ನುವಂತೆ ಭಾವಿಸುತ್ತಾನೆ; ಅನುಭಾವಿಸುತ್ತಾನೆ. ಈ ಅನು-ಭಾವವನ್ನು ಸತ್ಯಸೃಷ್ಟಿಯಲ್ಲಿ ಯಾವ ಪರಿಸರದಲ್ಲಿ ಅವನು ಪಡೆದಿರುವನೋ ಅದೇ ಪರಿಸರದಲ್ಲಿ ಕಾದಂಬರಿಯಲ್ಲಿ ಇಟ್ಟು ತೋರಿಸಿದಲ್ಲಿ ಅದು ಸುವ್ಯಕ್ತವಾಗಿ, ಪರಿಣಾಮಕರವಾಗಿ ತೋರದು. ಅದಕ್ಕಾಗಿ ಕಲಾವಿದನು ಕಲ್ಪಿತ ಸನ್ನಿವೇಶ ಒಂದನ್ನು ಸೃಜಿಸಿ ಅದರಲ್ಲಿ ತಾನು ಕಂಡ ಸತ್ಯಾನುಭವವನ್ನು ವ್ಯಕ್ತಗೊಳಿಸಬೇಕಾಗುತ್ತದೆ. ರತ್ನದ ಕಾಂತಿಯು ಎದ್ದು ಕಾಣುವಂತೆ ಸುವರ್ಣದಲ್ಲಿ ಅದನ್ನು ಮಂಡಿಸಬೇಕಾಗುವದಷ್ಟೆ. ಈ ಕಲ್ಪನಾಸೃಷ್ಟಿಗೂ ಅದರಲ್ಲಿ ಸತ್ಯದ ಅಧಿಷ್ಠಾನಗೊಳಿಸಲಿಕ್ಕೂ ಸಾಧನೆಯು ಅವಶ್ಯಕವಾಗಿದೆ. ಇಂಥ ಸಾಧನೆಯು, ಹೊಸದಾಗಿ ಬೆಳಕಿಗೆ ಬರುತ್ತಿರುವ ಕನ್ನಡ ಕಾದಂಬರಿಕಾರರಲ್ಲಿ ಕಡಿಮೆಯಾಗಿದೆ. ಮೊದಲೇ ಅನುಭವದ ಕೊರತೆ, ಅದೂ ಮಾಗಿರುವದಿಲ್ಲ, ಸತ್ಯದ ಒಪ್ಪ ಅದಕ್ಕೆ ಇನ್ನೂ ಬಂದಿರುವದಿಲ್ಲ. ಇಂಥ ಕಸಕು ಅನುಭವಲತೆಯನ್ನು ಹರಕುಮುರುಕಾದ ಕಲ್ಪನೆಯ ಹಂದರದ ಮೇಲೆ ಹಬ್ಬಿಸಿ ಬಿಡಲಾಗುತ್ತಿದೆ. ಹೀಗಾಗಿ ಕಾದಂಬರಿಗಳು ಕಲಾಪ್ರಪೂರ್ಣವಾಗುವದಿಲ್ಲ. ಈ ಅನುಭವ, ದರ್ಶನ, ಕಲ್ಪಕತೆಗಳನ್ನು ಬದಿಗಿಟ್ಟರೂ ಶುದ್ಧವಾದ ಭಾಷೆ, ಭಾವಕ್ಕೆ ತಕ್ಕ ಶೈಲಿ, ವಿಚಾರಗಳ ಸುಸಂಬದ್ಧತೆಗಳು ಕೂಡ ಕೆಲವು ಕೃತಿಗಳಲ್ಲಿ ಕಂಡು ಬರುವದಿಲ್ಲ. ಇಂಥ ಹಲವು ಕೃತಿಗಳು ಬೆಳಕಿಗೆ ಬರುವುದರಿಂದ ಕನ್ನಡ ಕಾದಂಬರಿಗಳ ಸಂಖ್ಯೆಯೇನೋ ಹೆಚ್ಚಬಹುದಾದರೂ ಗುಣವು ಹೆಚ್ಚಲಾರದು. ಕನ್ನಡ ಕಾದಂ-ಬರೀ ಪ್ರಪಂಚಕ್ಕೆ ಗೌರವವೂ ಉಂಟಾಗಲಾರದು.

ಸುಮಾರು ಇಪ್ಪತ್ತು ವರ್ಷಗಳ ಹಿಂದೆ ಕನ್ನಡ ಲೇಖಕರ ಎದುರಿಗೆ ಇದ್ದ ಸಮಸ್ಯೆಗಳು ಇಂದು ಇಲ್ಲ. ಅಂದು ಒಂದು ಕಾದಂ-ಬರಿಯನ್ನು ಬರೆದರೆ ಅದಕ್ಕೆ ಪ್ರಕಾಶಕರೇ ಲಭಿಸುವದು ಕಷ್ಟಸಾಧ್ಯವಾಗಿತ್ತು. ಪ್ರಕಟಿಸಿದ್ದನ್ನು ಓದುವವರೂ ವಿರಳವಾಗಿದ್ದರು. ಈಗ ಜನತೆಯಲ್ಲಿ ಓದುವ ಅಭಿರುಚಿಯು ಹೆಚ್ಚಿದೆ. ಪ್ರಕಾಶಕರೂ ಹೆಚ್ಚು ಸಂಖ್ಯೆಯಲ್ಲಿ ಮುಂದೆ ಬರುತ್ತಿದ್ದಾರೆ. ಅದರಂತೆ ಹೊಸ ಹೊಸ ಬರಹಗಾರರೂ ತಲೆಯೆತ್ತುತ್ತಲಿದ್ದಾರೆ. ವಾಚ-ನಾಲಯಗಳ ಪ್ರಸಾರ, ಸಾಕ್ಷರತಾ ಪ್ರಚಾರ, ಸರಕಾರದ ಪ್ರೋತ್ಸಾಹ ಇವೇ ಮೊದಲಾದವುಗಳಿಂದ ಸಾಹಿತ್ಯದ ಬೆಳವಣಿಗೆಗೆ ಸದವಕಾಶ ಒದಗಿದೆ. ಇದರಿಂದಾಗಿ ಮನನ, ನಿದಿಧ್ಯಾಸ, ಅಭ್ಯಾಸ, ಕಲಾ— ನೈಪುಣ್ಯಗಳಿಲ್ಲದಿದ್ದರೂ ಲೇಖಕರು ತಾವು ಬರೆದ ಬರಹಗಳನ್ನು ಸುಲಭವಾಗಿ ಪ್ರಕಟಿಸಿ ಬಿಡಬಹುದಾಗಿದೆ. ಕೃತಿರಚನೆಯೂ ಕೂಡ ಅಷ್ಟೇ ಹಗುರು ಎಂಬ ಭಾವನೆಯು ಬಂದುಬಿಟ್ಟಿದೆ. ಅದರಿಂದ ಏನನ್ನು ಬರೆದರೂ ಕನ್ನಡದಲ್ಲಿ ಸಾಹಿತ್ಯವೆನಿಸುವದು. ಪ್ರಜಾಪ್ರಭುತ್ವದ ಈ ಕಾಲದಲ್ಲಿ ಅದನ್ನು ಸಾಹಿತ್ಯವಲ್ಲವೆಂದು ಅಲ್ಲಗಳೆಯುವ ಸಾಹಸವೂ ಹಲವರಲ್ಲಿಲ್ಲ. ಕೆಲವರು ಹೇಳಿದ ಅಂಥ ನಿಷ್ಠುರ ಸತ್ಯಮಾತು, ಈ ಜಾತ್ರೆಯ ಗೊಂದಲದಲ್ಲಿ ಕೇಳಿಸುವದೂ ಇಲ್ಲ. ಹೇಳಿದ್ದು ಕೇಳದೆ, ಹೇಳುವ ಅಧಿಕಾರ ಇವರಿಗೇನು? ಎನ್ನುವ ಮನೋವೃತ್ತಿಯಲ್ಲಿಯೇ ಕನ್ನಡ ಕಾದಂಬರಿಗಳ ಬೆಳೆಯು ಕೂಡ ಹುಲುಸಾಗಿ ಬಂದಿದೆ, ಬರುತ್ತಲಿದೆ. ಅದರಿಂದ ಅವುಗಳಲ್ಲಿ ಗುಣಾಂಶ ಕಡಿಮೆಯಾಗಿ ಕಂಡರೆ ಆಶ್ಚರ್ಯಗೊಳ್ಳುವ ಕಾರಣವೇ ಇಲ್ಲ. ಅದೊಂದು ಯುಗಧರ್ಮ. ಬರುವದೆಲ್ಲ ಬರಲಿ, ಕಾಲ-ಪುರುಷ ಅದನ್ನು ತೂಗಿಯಾನು. ಜಾಣ ಓದುಗ ಆಯ್ದುಕೊಂಡು ಇಂದಿಲ್ಲ ನಾಳೆ ಓದಿಯಾನು. ಆಗ ಕಸ-ಕೊಳೆಗಳು ಕಣ್ಮರೆಯಾಗಿ ರಸವತ್ ಕೃತಿಗಳಿಗೆ ಅವಕಾಶವು ಲಭಿಸುವುದು.

### ಗೊಂದಲಮಯ ಸ್ಥಿತಿಯ ಪ್ರಭಾವ

ಕೇವಲ ಈ ಭವಿಷ್ಯವನ್ನು ನಂಬಿಯೇ ಸಮಾಧಾನವನ್ನು ಹೊಂದುವ ಸ್ಥಿತಿಯೇನು ಇಂದಿನ ಕನ್ನಡ ಕಾದಂಬರಿ ಪ್ರಪಂಚಕ್ಕೆ ಇಲ್ಲ. ಭಾರತೀಯ ಸ್ವಾತಂತ್ರ್ಯದ ತರುವಾಯ ರಾಷ್ಟ್ರ ಪುನರ್ನಿರ್ಮಾಣದಲ್ಲಿ ನಮ್ಮ ಸಾಮಾಜಿಕ ಜೀವನದಲ್ಲಿ ಅನೇಕ ಸ್ಥಿತ್ಯಂತರಗಳು ಸಂಭವಿಸುತ್ತಿವೆ. ಅದರಿಂದ ಎಲ್ಲ ಕ್ಷೇತ್ರಗಳಲ್ಲಿಯೂ ಒಂದು ಅವಸರದ, ಗೊಂದಲಮಯ ಸ್ಥಿತಿಯೇ ಉಂಟಾಗಿದೆಯೆನ್ನಬಹುದು. ಇದರ ಪ್ರಭಾವವು ನಮ್ಮ ಸಾಹಿತ್ಯದ ಮೇಲೂ ಆಗಿದೆಯೆಂದು ಹೇಳಿದರೆ ತೀರ ಅನುಚಿತವೆನಿಸಲಾರದು. ಅದರಿಂದ ಕಾದಂಬರಿ ಸೃಷ್ಟಿಯಲ್ಲಿ ತಾತ್ಪೂರ್ತಿಕವಾಗಿ ಇವೆಲ್ಲ ದೋಷಗಳು ಕೂಡಿ ಬಂದಿವೆ. ಆದರೂ ನಮ್ಮ ಕನ್ನಡ ಕಾದಂಬರಿಗಳ ಬೆಳವಣಿಗೆಗೆ ಸುಸಂಬದ್ಧವಾದ ಇತಿಹಾಸವು ಇದೆ. ಸುಮಾರು ಐವತ್ತು ವರ್ಷಗಳಿಂದಲೂ ಅನೇಕ ಕಾದಂಬರಿಕಾರರು ಕನ್ನಡ ಕಾದಂಬರಿಗಳ ಮೇಲ್ಮೆಯನ್ನು ಸಾಧಿಸುವದಕ್ಕಾಗಿ ಶ್ರಮಿಸಿದ್ದುಂಟು; ತಪಸ್ಸನ್ನಾಚರಿಸಿದ್ದುಂಟು. ಕಲಾದೇವತೆಯ ಆರಾಧನೆಯು ಭಕ್ತಿಯಿಂದ ನಡೆದುದನ್ನೂ ನಾವು ಕಾಣುತ್ತೇವೆ. ಅದೇ ಪರಂಪರೆಯನ್ನು ನಡೆಯಿಸಿಕೊಂಡು ಹೋಗುವ ಕಾದಂಬರಿಕಾರರನ್ನು ಈಗಲೂ ನಾವು ಗುರುತಿಸುತ್ತೇವೆ.

ಈ ದೃಷ್ಟಿಯಿಂದ ಕನ್ನಡ ಕಾದಂಬರಿಯ ಪರಂಪರೆಯನ್ನು ನಿರೀಕ್ಷಿಸಿದಾಗ ಅದರಲ್ಲಿ ಕೆಲವು ಒಲವುಗಳನ್ನು ಕಂಡು ಹಿಡಿಯಬಹುದಾಗಿದೆ. ಇವು ಕಾದಂಬರಿ ವೃಕ್ಷದ ವಿವಿಧ ಶಾಖೆಗಳಿದ್ದಂತೆ. ಗಿಡವು ಬೆಳೆಯುತ್ತ ಹೋ-ದಂತೆ ಅದು ಶಾಖೆ ಉಪಶಾಖೆಗಳಾಗಿ ವಿಸ್ತಾರಗೊಳ್ಳುವಂತೆ ಕನ್ನಡ ಕಾದಂಬರಿ ಪ್ರಪಂಚವಿದೆ. ಹೊಸಗನ್ನಡ ಕಾದಂಬರಿಗಳ ಆರಂಭವು ಐತಿಹಾಸಿಕ ವಸ್ತುಗಳಿಂದ ಆಯಿತು. ಆ ಮೇಲೆ ಅದು ಸಾಮಾಜಿಕ ವಸ್ತುಗಳತ್ತ ತಿರುಗಿತು. ಆ ಸಾಮಾಜಿಕ ಕಾದಂಬರಿಗಳ ಉಪ-

ಶಾಖೆಗಳೆಂದೇ ಕೌಟುಂಬಿಕ ಜೀವನ ಚಿತ್ರ, ಕಲಾವಿದರ ಜೀವನ ಚಿತ್ರಗಳನ್ನು ಕೊಡುವ ಕೃತಿಗಳ ಪರಂಪರೆಯನ್ನು ಇಟ್ಟುಕೊಳ್ಳಬಹುದಾಗಿದೆ. ಈ ಸಾಮಾಜಿಕ ಕಾದಂಬರಿಗಳಲ್ಲಿಯೇ ಆದರ್ಶವಾದ, ವಾಸ್ತವ ಮಾರ್ಗ, ಪ್ರಾದೇಶಿಕತೆ, ಬುದ್ಧಿವಿಲಾಸ, ಪ್ರಗತಿಶೀಲತೆ, ಪೌರಾಣಿಕತೆಯೇ ಮೊದಲಾದ ವಿವಿಧ ಒಲವುಗಳು ಹುಟ್ಟಿಕೊಂಡು ಬೆಳೆದುಬಂದಿವೆ. ಇವೆಲ್ಲ ಒಲವುಗಳು ತಮ್ಮ ತಮ್ಮ ಉದ್ದೇಶಗಳಿಗೆ ಅನುಸರಿಸಿ ಚಿಕ್ಕದೊಡ್ಡ ಕೃತಿಗಳ ಜನನಕ್ಕೆ ಕಾರಣವಾಗಿವೆ, ಪ್ರೇರಕಶಕ್ತಿಯಾಗಿವೆ.

### ಐತಿಹಾಸಿಕ ಕಾದಂಬರಿಗಳು

ಇಂಗ್ಲೀಷ ಭಾಷೆಯ ಅಭ್ಯಾಸ, ಪ್ರಭಾವಗಳಿಂದಾಗಿ ಹೊಸಗನ್ನಡ ಗದ್ಯ ಶೈಲಿಯೊಂದು ರೂಪುಗೊಂಡಿತು. ಆ ಶೈಲಿಯನ್ನೇ ಬಳಸಿಕೊಂಡು ಕನ್ನಡದಲ್ಲಿ ಬಂಗಾಲಿ ಹಾಗೂ ಮರಾಠಿ ಭಾಷೆಗಳಿಂದ ಐತಿಹಾಸಿಕ ಕಾದಂಬರಿಗಳ ಅನುವಾದ ಕಾರ್ಯವು ನಡೆಯಿತು. ಇಂಥ ಕಾದಂಬರಿಗಳು ಅಂದು ಕನ್ನಡಿಗರ ಮನಸ್ಸನ್ನು ಸೆಳೆದವು. ಅವುಗಳಿಗೆ ತಕ್ಕ ಪ್ರೋತ್ಸಾಹವೂ ಜನತೆಯಿಂದ ಸಿಕ್ಕಿತು. ಅದರಿಂದ ಹುರುಪುಗೊಂಡ ಕನ್ನಡ ಕಾದಂಬರಿಕಾರರು ತಮ್ಮ ನಾಡಿಗೆ ಸಂಬಂಧಿಸಿದ ಐತಿಹಾಸಿಕ ಘಟನೆಗಳನ್ನು ಆಯ್ದುಕೊಂಡು ಸ್ವತಂತ್ರ ಐತಿಹಾಸಿಕ ಕಾದಂಬರಿಗಳನ್ನು ಸಹ ರಚಿಸಲು ಆರಂಭಿಸಿದರು. ಹೀಗೆ ದಿವಂಗತ ಗಳಗನಾಥರ 'ಮಾಧವ ಕರುಣಾವಿಲಾಸ' ದಿಂದ ಆರಂಭವಾದ ಐತಿಹಾಸಿಕ ಕಾದಂಬರಿಗಳ ಪರಂಪರೆಯು "ಶ್ರೀ ಆನಂದಕಂದ"ರ "ಮಲ್ಲಿಕಾರ್ಜುನ"ದ ವರೆಗೆ ಬೆಳೆದುಬಂದಿದೆ. ಆದರೆ ಸಾಮಾಜಿಕ ಕಾದಂಬರಿಗಳು ವಿಪುಲವಾಗಿ ಬಂದಂತೆ ಐತಿಹಾಸಿಕ ಕಾದಂಬರಿಗಳು ಬರಲಿಲ್ಲ. ಬಿ. ವೆಂಕಟಾಚಾರ್ಯ ಮತ್ತು ಗಳಗನಾಥರ ತರುವಾಯ ಐತಿಹಾಸಿಕ ಕಾದಂಬರಿಗಳ ಬರವಣಿಗೆಯೇ ಕಡಿಮೆಯಾಗಿತ್ತು. ನಡುವೆ ಅಲ್ಲೊಂದು ಇಲ್ಲೊಂದು ಕಾದಂಬರಿಯು ಕಣ್ಣಿಗೆ ಬೀಳುತ್ತದೆ. ಆದರೆ ಇತ್ತೀಚಿನ ಹತ್ತು ವರ್ಷಗಳಲ್ಲಿ ಮತ್ತೆ ಐತಿಹಾಸಿಕ ಕಾದಂಬರಿಗಳು ಹೆಚ್ಚಾಗಿ ಬರುತ್ತಲಿವೆ. ಆರಂಭದಲ್ಲಿ ಕಥಾವಸ್ತುಗಳು ಹಾಗೂ ಪಾತ್ರಗಳು ಮಾತ್ರ ಐತಿಹಾಸಿಕ ಬಣ್ಣವನ್ನು ಬಳಿದುಕೊಂಡು ನಿಲ್ಲುತ್ತಿದ್ದುವು. ಆ ಕಾಲದ ಸಂಸ್ಕೃತ ಜನಜೀವನಗಳಿಗೆ ಕಾದಂಬರಿಗಳಲ್ಲಿ ಹೆಚ್ಚಿನ ಸ್ಥಾನವು ಲಭಿಸುತ್ತಿರಲಿಲ್ಲ. ಅದಕ್ಕೆ ಕಾರಣ ವಿಷ್ಟೆ. ಐತಿಹಾಸಿಕ ಕಾದಂಬರಿಗಳನ್ನು ಬರೆಯುವದಕ್ಕೆ ಬೇಕಾಗುವ ಆಳವಾದ ಅಭ್ಯಾಸವು ಇಲ್ಲದೆ ಹೋಗುತ್ತಿತ್ತು. ಅದರಿಂದ ಅನೇಕ ಕಡೆಗೆ ನೈಜತೆಯು ಕಂಡುಬರುತ್ತಿರಲಿಲ್ಲ. ಆದರೆ ಇತ್ತೀಚಿನ ಐತಿಹಾಸಿಕ ಕಾದಂಬರಿಗಳು ಈ ದೋಷಗಳನ್ನು ಕಳೆದುಕೊಂಡು, ಆಯಾ ಕಾಲದ ಸಾಂಸ್ಕೃತಿಕ ಚಿತ್ರವನ್ನು ಕೊಡುವ ಕಡೆಗೆ ಒಲಿದಿವೆ. 'ಆನಂದಕಂದ'ರ 'ರಾಜಯೋಗಿ' ಹಾಗೂ 'ಅಶಾಂತಿ ಪರ್ವ'ಗಳಿಂದ ಜಾಗೃತವಾದ ಈ ಸಾಂಸ್ಕೃತಿಕ ಪ್ರಜ್ಞೆಯು ಇಂದು ಮಾಸ್ತಿಯವರ 'ಚೆನ್ನಬಸವ ನಾಯಕ' ಮತ್ತು 'ಚಿಕವೀರ ರಾಜೇಂದ್ರ'ಗಳಲ್ಲಿ ಒಂದು ಹಂತಕ್ಕೆ ಬಂದು ನಿಂತಿದೆ. ಈ ಮಾರ್ಗದಲ್ಲಿ ಇನ್ನೂ ಅಭ್ಯಾಸವು ಹೆಚ್ಚಿ ಐತಿಹಾಸಿಕ ಕಾದಂಬರಿಗಳಲ್ಲಿ ಜೀವನದ ಹರವು, ಸಾಂಸ್ಕೃತಿಕ ಹಿನ್ನೆಲೆಗಳು ಸುವ್ಯಕ್ತಗೊಳ್ಳುವಂತೆ ರಚನಾಕೌಶಲ್ಯವು ಬೆಳೆಯಬೇಕಾಗಿದೆ.

### ಸಾಮಾಜಿಕ ಕಾದಂಬರಿಗಳು

ಇನ್ನು ಸಾಮಾಜಿಕ ಕಾದಂಬರಿಗಳ ಒಲವು ನಿಲುವುಗಳ ಕಡೆಗೆ ಹೊರಳಿದರೆ ಹೊಸ ಜೀವನದ ಪ್ರಜ್ಞೆಯಿಂದ ಕನ್ನಡದಲ್ಲಿ ಇಂಥ ಕಾದಂಬರಿಗಳ ಜನ್ಮವಾಯಿತೆಂದು ಹೇಳಬಹುದಾಗಿದೆ. ಹೊಸ ಬಾಳಿನಿಂದ ನಮ್ಮೆದುರಿಗೆ ಕೌಟುಂಬಿಕ, ಸಾಮಾಜಿಕ, ರಾಜಕೀಯ, ಆರ್ಥಿಕ ಇವೇ ಮೊದಲಾದ ಹಲವು ಸಮಸ್ಯೆಗಳು ಈ ಕಳೆದ ಕಾಲು ಶತಮಾನದಲ್ಲಿ ಉದ್ಭವಿಸುತ್ತಲಿವೆ. ನೈತಿಕ ಮೌಲ್ಯವೂ ವ್ಯತ್ಯಾಸಗೊಂಡು ಧಾರ್ಮಿಕ ಕಲ್ಪನೆಗಳೂ ತಲೆಕೆಳಗಾಗಿ ನಮ್ಮನ್ನು ಚಿಂತನಶೀಲರನ್ನಾಗಿ ಮಾಡಿದುವು; ವೈಚಾರಿಕಕ್ರಾಂತಿಗೆ ಅವಕಾಶವನ್ನು ಕಲ್ಪಿಸಿಕೊಟ್ಟುವು. ಇದರಿಂದಾಗಿ ಹೊಸ ಹೊಸ ಸಾಮಾಜಿಕ ವಿಚಾರಗಳಿಂದ ಕೂಡಿದ ಕಾದಂಬರಿಗಳು ಬೆಳಕಿಗೆ ಬಂದುವು. ನಾಡಿನಲ್ಲಿ ಶಿಕ್ಷಣ ಪ್ರಸಾರದಿಂದ ಮಧ್ಯಮ ವರ್ಗದ ಜನವು ಜಾಗೃತವಾಯಿತು. ಆ ಜನತೆಯಿಂದಲೂ ಕಾದಂಬರಿಕಾರರು ಮುಂದೆ ಬಂದರು. ಅವರ ಕಷ್ಟ-ಸಂಕಟಗಳನ್ನು ಕಾದಂಬರಿಗಳಲ್ಲಿ ಚಿತ್ರಿಸತೊಡಗಿದರು. ವ್ಯಕ್ತಿಯು ದೇಶ, ಸಮಾಜಗಳಿಗಾಗಿ ತನ್ನ ಸ್ವಾರ್ಥವನ್ನು ಬದಿಗಿಟ್ಟು ದುಡಿಯಬೇಕೆಂಬ ಭಾವನೆಯು ಧ್ಯೇಯವಾದವನ್ನು ಪ್ರತಿಬಿಂಬಿಸುವ ಕಾದಂಬರಿಗಳ ಜನನಕ್ಕೆ ಕಾರಣವಾಯಿತು. ದೇಶದ ಶ್ರಮಜೀವಿ ವರ್ಗದ ಆರ್ಥಿಕ ಏಳಿಗೆಯಾಗಬೇಕೆಂಬ ವಿಚಾರದ ಗಾಳಿಯು ಸಾಹಿತ್ಯದಲ್ಲಿ ಪ್ರಗತಿಶೀಲತೆಯ ತೆರೆಯನ್ನು ಎಬ್ಬಿಸಿತು. ಅದರಿಂದ ಪ್ರಚಾರವನ್ನೇ ಉದ್ದೇಶವಾಗಿ ಇಟ್ಟುಕೊಂಡ ಕೃತಿಗಳೂ ಜನಿಸಿದುವು. ಸ್ವಾತಂತ್ರ್ಯದ ಹೋರಾಟ ಅದಕ್ಕಾಗಿ ನಾಡು ನೀಡಿದ ಬಲಿದಾನ ಇತ್ಯಾದಿಗಳು ನಮ್ಮ ರಾಜಕೀಯ ಕಾದಂಬರಿಯ ವಸ್ತುಗಳಾಗಿ ನಿಂತುವು. ಹೀಗೆ ವಿವಿಧ ಮುಖವಾಗಿ ಕನ್ನಡ ಸಾಹಿತ್ಯವಾಹಿನಿಯು ಹರಿಯುತ್ತಲಿದೆ. ಕನ್ನಡ ಕಾದಂಬರಿಗಳಲ್ಲಿ ವೈವಿಧ್ಯ ಹೆಚ್ಚುತ್ತಲಿದೆ. ಅದರಂತೆ ಅದರಲ್ಲಿ ಮೂಡಿನಿಲ್ಲುವ ಜೀವನದ ಹರವು, ಗಾಂಭೀರ್ಯ ಆಳಗಳು ಇನ್ನು ಹೆಚ್ಚಬೇಕಾಗಿವೆ. ಸಮುಚಿತ ಶೈಲಿ, ಹೃದಯವಂತಿಕೆಗಳ ಒಪ್ಪ ಅವಕ್ಕೆ ಇನ್ನೂ ಒದಗುತ್ತ ಹೋಗಬೇಕಾಗಿದೆ.

### ಸಮಗ್ರಜೀವನದ ಚಿತ್ರಗಳು

ಸಮಗ್ರ ಜನಾಂಗದ ಆಶೋತ್ತರಗಳನ್ನು ಅವುಗಳ ಜನನವನ್ನು ಕಂಡು ಚಿತ್ತರಿಸುವ ಕನ್ನಡ ಕಾದಂಬರಿಗಳು ಹೇರಳವಾಗಿ ಬರಬೇಕು. 'ರಾವಬಹಾದ್ದೂರ'ರ 'ಗ್ರಾಮಾಯಣ' ದಂಥ ನಾಡಿನ ವಿವಿಧ ಸಮಾಜಗಳ ಬಾಳುವೆಯನ್ನು ಅವು ಕೂಡಿ ಬಾಳುವಾಗ ಸಮಷ್ಟಿ ದೃಷ್ಟಿಯಿಂದ ಉಂಟಾಗುವ ಜೀವನದ ಪರಿಣಾಮಗಳನ್ನು ಕಲಾತ್ಮಕವಾಗಿ ಚಿತ್ರಿಸುವ ಕೃತಿಗಳೂ ರೂಪುಗೊಳ್ಳಬೇಕು. ಹೀಗೆ ನಮ್ಮ ಕಾದಂಬರಿಗಳು ನಮ್ಮ ಇಂದಿನ ಸಂಸ್ಕೃತಿಯ ಕನೆಯಾಗಿ ಮೂಡಿನಿಲ್ಲಬೇಕು. ವೈಜ್ಞಾನಿಕ ದೃಷ್ಟಿಯು ಸತ್ಯದ ಸೆಲೆಯನ್ನು ಒಳಗೊಂಡಿರಬೇಕು. ಸಮಗ್ರ ಜೀವನದ ಉಸುರಾಗಿ ಅವು ಹೊರಹೊಮ್ಮಬೇಕು.

ಕನ್ನಡ ಕಾದಂಬರೀ ಪ್ರಪಂಚವು ಇಂದು ಅತ್ತ ಇತ್ತ ಹಾಯ್ದಾಡಿ ಹಾದಿಯನ್ನು ಹುಡುಕುವ ಅವಸ್ಥೆಯಲ್ಲಿ ಇಲ್ಲ. ಅದಕ್ಕಿಂದು ಪ್ರೌಢಾವಸ್ಥೆಯು ಒದಗಿದೆ. ಅದಕ್ಕಾಗಿ ಕಾದಂಬರಿಕಾರರ ಮುಂದಿನಹೆಜ್ಜೆಯು ನಮ್ಮ ಪರಂಪರೆಗೆ ಗೌರವ ತರುವ ರೀತಿಯಲ್ಲಿರಬೇಕು. ತಮ್ಮ ಕೃತಿಗಳನ್ನು ಜಗತ್ತಿನ ಕಾದಂಬರೀ ಪ್ರಪಂಚದಲ್ಲಿ ಇಟ್ಟು ಬೆಲೆಗಟ್ಟುವ ಕಾಲವು ಸನ್ನಿಹಿತವಾಗಿದೆ ಎಂಬುದನ್ನು ಅರಿತು ಅವರು ಕೃತಿರಚನೆಗೆ ಕೈಯಿಕ್ಕುವುದು ವಿಹಿತ. ಅದರಿಂದ ನಾಡಿಗೂ ಭೂಷಣ. ನುಡಿಗೂ ಭೂಷಣ. ಇದನ್ನು ಗಮನಿಸಿದಲ್ಲಿ ನಮ್ಮ ಕಾದಂಬರೀ ಪ್ರಪಂಚಕ್ಕೆ ಭವ್ಯ ಭವಿಷ್ಯತ್ತು ಕಾದಿದೆ. ಆ ಕಡೆಗೆ ನಮ್ಮ ಕಾದಂಬರಿಕಾರರು ತಮ್ಮ ಒಲವನ್ನು ಹರಿಯಿಸಲಿ.





ಲೇಖಕರು :
**ಪ್ರೊ. ಕೆ. ಟಿ. ಪಾಂಡುರಂಗಿ**
ಸಂಸ್ಕೃತ ಪ್ರಾಧ್ಯಾಪಕರು,
ಕರ್ನಾಟಕ ಕಾಲೇಜ, ಧಾರವಾಡ.

# ಭಾರತೀಯ ದರ್ಶನಗಳಲ್ಲಿ 'ಮೋಕ್ಷ'ದ ವಿವೇಚನೆ

ದುಃಖದಿಂದ ಹಾಗೂ ದುಃಖಮಯವಾದ ಜನನ ಮರಣರೂಪ ಸಂಸಾರದಿಂದ ಮುಕ್ತಿ-ಪಡೆಯುವುದೇ ಮೋಕ್ಷವೆಂದು ಜನಸಾಮಾನ್ಯ ತಿಳಿವಳಿಕೆ ಇರುವುದು. ಆದರೆ ಇಂದು ಈ ಕಲ್ಪನೆಯಲ್ಲಿ ವಿಶ್ವಾಸ ಕಡಿಮೆಯಾಗತೊಡಗಿರುವುದು. ಇಂದಿನ ಬದಲಾದ ಪರಿಸ್ಥಿತಿಯಲ್ಲಿ ಮೋಕ್ಷವು ಸಮಂಜಸ ಜೀವನದ ಗುರಿಯಾಗುವುದು ಸಾಧ್ಯವೆ? ಎಂಬುದರ ಪರಿಶೀಲನೆಯನ್ನು ಅದರ ಹಿನ್ನೆಲೆ, ಸ್ವರೂಪ ಇತರ ಮೌಲ್ಯಗಳೊಡನೆ ಅದರ ಹೊಂದಿಕೆಗಳನ್ನು ಲೇಖಕರಿಲ್ಲಿ ನಿರೂಪಿಸಿರುವರು.

'ಮೋಕ್ಷ' ವೆಂದರೆ ದುಃಖದಿಂದ ಬಿಡುಗಡೆ ಹಾಗೂ ದುಃಖಮಯವಾದ ಜನನ–ಮರಣ ರೂಪ ಸಂಸಾರದಿಂದ ಬಿಡುಗಡೆ ಎಂದು ಪ್ರತಿಯೊಬ್ಬ ಭಾರತೀಯನೂ ತಟ್ಟನೆ ಉತ್ತರ ಕೊಡುವನು. ಆದರೆ ಇಂಥ 'ಮೋಕ್ಷ' ದಲ್ಲಿ ಇಂದು ಸುಶಿಕ್ಷಿತ ಅಥವಾ ಅಶಿಕ್ಷಿತ ಭಾರತೀಯನಿಗೆ ವಿಶ್ವಾಸವಿಲ್ಲ. ಸುಶಿಕ್ಷಿತರಿಗೆ ಅದೊಂದು ಸಮಂಜಸವಾದ ಜೀವನದ ಗುರಿಯೆನಿಸುವದಿಲ್ಲ. ಅಶಿಕ್ಷಿತರಿಗೆ ಅದೊಂದು ಸಾಧ್ಯವಾದ ಜೀವನದ ಗುರಿಯೆನಿಸುವದಿಲ್ಲ.

ವಿಜ್ಞಾನ, ಯಾಂತ್ರಿಕ ಪ್ರಗತಿ ಮತ್ತು ಭಿನ್ನ ಸಂಸ್ಕೃತಿಗಳ ಸಂಪರ್ಕದಿಂದ ಇಂದು ಭಾರತೀಯನ ಜೀವನಕ್ರಮದಲ್ಲಿ ಎಷ್ಟೋ ಬದಲಾವಣೆಯಾಗಿದೆ. ಆದರ ಪರಿಣಾಮವು ಅವನ ಜೀವನ ದೃಷ್ಟಿಯ ಮೇಲೆಯೂ ಆಗುವದು ಸಹಜವಾಗಿದೆ. ನಮ್ಮ ಪೂರ್ವಜರು ಇಟ್ಟುಕೊಂಡ 'ಮೋಕ್ಷ' ವೆಂಬ ಜೀವನದ ಗುರಿಯು ಇಂದು ಅವನಿಗೆ ಅವಾಸ್ತವವಾದ ಜೀವನದೃಷ್ಟಿಯೆನಿಸತೊಡಗಿದೆ. ಆದುದರಿಂದ ಇಂದಿನ ಬದಲಾದ ಪರಿಸ್ಥಿತಿಯಲ್ಲಿ 'ಮೋಕ್ಷ' ವು ಸಮಂಜಸವಾದ ಜೀವನದ ಗುರಿಯಾಗಬಹುದೇ? ಎನ್ನುವದನ್ನು ಪರಿಶೀಲಿಸುವ ದೃಷ್ಟಿಯಿಂದ ಅದರ ಸ್ವರೂಪ, ಅದರ ಹಿನ್ನೆಲೆ, ಇನ್ನಿತರ ಜೀವನದ ಮೌಲ್ಯಗಳೊಡನೆ ಅದರ ಹೊಂದಿಕೆಗಳನ್ನು ಕುರಿತು ಆಲೋಚಿಸುವದು ಅವಶ್ಯವಾಗಿದೆ.

ಜೀವನದ ಮೌಲ್ಯವನ್ನು ಕುರಿತು ಆಲೋಚಿಸುವಾಗ ನಾವು ಜೀವನವು ಮೌಲ್ಯಯುತವಾದುದು ಎಂಬುದನ್ನು ಖಂಡಿತವಾಗಿ ಒಪ್ಪಿಕೊಳ್ಳುತ್ತೇವೆ. ಅದೊಂದು ಅಪ್ರಯೋಜಕವಾದ ಮತ್ತು ದುಃಖಮಯವಾದ ಕಾಲಯಾಪನೆ ಎಂಬ ಭಾವನೆಯಿದ್ದರೆ ಅದರ ಮೌಲ್ಯಗಳನ್ನು ಕುರಿತು ಚಿಂತಿಸುವ ಅವಶಕತೆಯೇ ಉಂಟಾಗುತ್ತಿರಲಿಲ್ಲ.

ನಮ್ಮ ಪ್ರಾಚೀನ ಋಷಿಗಳು, ದಾರ್ಶನಿಕರು ಮತ್ತು ಕವಿಗಳು ಜೀವನದ ಮಾಧುರ್ಯವನ್ನು ಸೊಗಸಾಗಿ ಹೊಗಳಿದ್ದಾರೆ.

> ಮಧು ವಾತಾ ಋತಾಯತೆ ಮಧುಕ್ಷರಂತಿ
> ಸಿಂಧವಃ। ಮಾಧ್ವೀಃ ನಃ ಸಂತು ಓಷಧೀಃ।
> ಮಧು ನಕ್ತಮ್ ಉತ ಉಷಸಃ ಮಧು-
> ಮತ್ ಪಾರ್ಥಿವಮ್ ರಜಃ। ಮಧು ಧ್ಯೌ
> ಅಸ್ತು ನಃ ಪಿತಾ
> ಮಧುಮಾನ್ ನಃ ವನಸ್ಪತಿಃ ಮಧು-
> ಮಾನ್ ಅಸ್ತುಸೂರ್ಯಃ। ಮಾಧ್ವೀಃ
> ಗಾವೋ ಭವಂತು ನಃ

ನಮ್ಮ ಸುತ್ತಲಿನ ಗಾಳಿ ಮಧುರ, ನಾವಿರುವ ನೆಲ ಮಧುರ, ಗಿಡಬಳ್ಳಿಗಳು ಮಧುರ, ದನಕರುಗಳು ಮಧುರ, ನಮ್ಮನ್ನಾವರಿಸಿದ ಆಕಾಶ ಮಧುರ, ಸೂರ್ಯ ಚಂದ್ರರು ಮಧುರ, ಪ್ರತಿಯೊಂದು ಹಗಲೂ ರಾತ್ರಿಯೂ ನಮಗೆ ಮಾಧುರ್ಯವನ್ನು ತರುತ್ತವೆ ಎಂದು ವೈದಿಕ ಋಷಿಗಳು ಜೀವನದ ಮಾಧುರ್ಯವನ್ನು ಹಾಡುತ್ತಾರೆ. 'ಜೀವೇಮ ಶರದಃ ಶತಮ್' ಎಂದು ನೂರು ವರುಷಗಳ ತುಂಬು ಜೀವನವನ್ನು ಅಪೇಕ್ಷಿಸುತ್ತಾರೆ.

## ಜೀವನದಲ್ಲಿ ವಿಶ್ವಾಸ

ಬೌದ್ಧಮತವು ಪ್ರಬಲವಾಗಿ ನಮ್ಮ ದೇಶದಲ್ಲಿ ಕೆಲಕಾಲ 'ಜಗತು ಕ್ಷಣಿಕ, ಸರ್ವಮ್ದುಃಖಮಯ' ಎಂಬ ವಿಚಾರವು ಹಬ್ಬಿದರೂ ನಮ್ಮ ದಾರ್ಶನಿಕರು ಜಗತ್ತು ಸಾಧನಭೂಮಿ, ಜೀವನು ಸ್ವಭಾವತಃ ಆನಂದಸ್ವರೂಪನು ಎಂಬ ಸಿದ್ಧಾಂತಗಳನ್ನು ಮಂಡಿಸಿ ನಿರಾಶಾವಾದವನ್ನು ಎದುರಿಸಿದ್ದಾರೆ. 'ಏತಿ ಜೀವಂತಮ್ ಆನಂದಃ ನರಮ್ ವರ್ಷ-ಶತಾದಪಿ' ಎಂದು ನಮ್ಮ ಕವಿಗಳು ಜೀವನದಲ್ಲಿ ವಿಶ್ವಾಸವುಳ್ಳವರಾಗಿದ್ದಾರೆ.

ಇಂಥ ಮೌಲ್ಯಯುತವಾದ ಜೀವನವನ್ನು ಘನವಾದ ರೀತಿಯಲ್ಲಿ ಮತ್ತು ತೃಪ್ತಿಕರವಾಗಿ ನಿರ್ವಹಿಸಬೇಕಾದರೆ ಅದನ್ನು ಸ್ವಚ್ಛಂದವೃತ್ತಿಯಿಂದ ಸಾಗಿಸದೆ ಜೀವನದಲ್ಲಿ ಕೆಲವು ಮೌಲ್ಯಗಳನ್ನು ಗೊತ್ತುಪಡಿಸಿ ಅದಕ್ಕನುಗುಣವಾಗಿ ಜೀವನವನ್ನು ನಿರ್ವಹಿಸಬೇಕಾಗುತ್ತದೆ. ಆ ಮೌಲ್ಯಗಳೇ ಪುರುಷಾರ್ಥಗಳು.

ಮಾನವರ ಸ್ವಭಾವ ಮತ್ತು ಪ್ರವೃತ್ತಿಗಳನ್ನೂ ಸಮಾಜ ಸ್ವಾಸ್ಥ್ಯವನ್ನೂ ಗಮನದಲ್ಲಿಟ್ಟುಕೊಂಡು ನಮ್ಮ ಪ್ರಾಚೀನ ಋಷಿಗಳು ಐಹಿಕ ಜೀವನದಲ್ಲಿ ಧರ್ಮ, ಅರ್ಥ, ಕಾಮಗಳೆಂಬ ಜೀವನದ ಮೂರು ಮೌಲ್ಯಗಳನ್ನು ಗೊತ್ತುಪಡಿಸಿದ್ದಾರೆ. ಇವುಗಳಿಗೆ ತ್ರಿವರ್ಗಗಳೆಂದು ಹೆಸರು.

ಧರ್ಮವು ತುಂಬ ವ್ಯಾಪಕಾರ್ಥವಿದ್ದ ಶಬ್ದವು ನೀತಿ, ಸದಾಚಾರ, ಮತಧರ್ಮ, ಕುಟುಂಬ ಹಾಗೂ ಸಮಾಜ ಋಣ, ನ್ಯಾಯನಿಷ್ಠುರತೆ ಇವೆಲ್ಲವೂ ಧರ್ಮದಲ್ಲಿ ಅಡಕವಾಗುವವು. ಆದರೆ ಇವೆಲ್ಲದಕ್ಕೂ ಸೂತ್ರವಾಗಿ ತಳಹದಿಯಾಗಿ ನಿಂತುದು ಸತ್ಯ. ಸತ್ಯದ ಅನುಷ್ಠಾನವೇ ಧರ್ಮ. ಚಿತ್ತ, ವಾಕ್, ಕ್ರಿಯೆಗಳಲ್ಲಿ ಏಕರೂಪತೆಯಿಂದ ಸತ್ಯದ ಅನುಷ್ಠಾನ ಮಾಡುವದು ಧರ್ಮದ ತಳಹದಿ. ಸೌಂದರ್ಯ ಪ್ರೀತಿಯೇ ಕಾಮ. ಅರ್ಥವು ಯೋಗಕ್ಷೇಮರೂಪವಾದುದು. ಯೋಗವೆಂದರೆ ಗಳಿಕೆ. ಕ್ಷೇಮವೆಂದರೆ ಉಳಿಕೆ. ಧರ್ಮಕ್ಕೆ ತತ್ತ್ವನಿಷ್ಠೆ ಮತ್ತು ತತ್ತ್ವಾನುಷ್ಠಾನಗಳೆಂಬ ಎರಡು ಮುಖಗಳಿವೆ. ಕಾಮಕ್ಕೆ ಪ್ರೀತಿ ಮತ್ತು ವಿರಹಗಳೆಂಬ ಎರಡು ಮುಖಗಳಿವೆ. ವಿರಹವು ಪ್ರೀತಿಯ ಆಳವನ್ನೂ ಸ್ಥೈರ್ಯವನ್ನೂ ಒರೆಹಚ್ಚುವ ಒಂದು ಅವಕಾಶವೇ ಹೊರತು ಕಾರ್ಪಣ್ಯರೂಪವಾದ ವ್ಯಥೆಯಲ್ಲ. ಅರ್ಥಕ್ಕೆ ಸಂಗ್ರಹ ಮತ್ತು ತ್ಯಾಗಗಳೆಂಬ ಎರಡು ಮುಖಗಳಿವೆ. ಸ್ವಪರ ಹಿತಸಾಧನೆಯೇ ಅರ್ಥದ ಮೂಲೋದ್ದೇಶ. ಅದು ಕೇವಲ ಸಂಗ್ರಹದಿಂದ ಸಾಧ್ಯವಾಗುವದಿಲ್ಲ. ಅದಕ್ಕೆ ತ್ಯಾಗದ ಜೋಡು ಬೇಕು. 'ವಿನಾ ದೈನ್ಯೇನ ಜೀವನಮ್' ಎಂಬುದು ಅರ್ಥದ ಉದ್ದೇಶ. ಅದು ಪೂರ್ಣವಾಗಬೇಕಾದರೆ ನಮಗೆ ದೈನ್ಯವಿರಬಾರದಲ್ಲದೆ ಬೇರೆಯವರಿಗೆ ದೈನ್ಯವುಂಟಾಗುವಂತೆ ನಮ್ಮ ವರ್ತನೆಯಿರಬಾರದು. ದೈವಮಾನುಷ ಕಾರಣಗಳಿಂದ ದೈನ್ಯವುಂಟಾಗಿದ್ದರೆ ಆಗ ಪರಸ್ಪರ ನೆರವಾಗುವ ಪ್ರವೃತ್ತಿಯಿರಬೇಕು.

## ಮೂರು ಪುರುಷಾರ್ಥಗಳು

ಧರ್ಮ ಅರ್ಥ ಕಾಮಗಳೆಂಬ ಈ ಮೂರು ಪುರುಷಾರ್ಥಗಳು ಗ್ರೀಕರು ಜೀವನದ ಮೌಲ್ಯಗಳೆಂದು ಒಪ್ಪಿಕೊಂಡಿರುವ ಸತ್ಯ, ಶಿವ, ಸೌಂದರ್ಯಗಳಿಗೆ ಹೋಲುತ್ತವೆ. ಧರ್ಮವೇ ಸತ್ಯ, ಕಾಮವು ಸೌಂದರ್ಯ. ಸ್ವಪರಹಿತಪರ್ಯವಸಾಯಿಯಾದ ಅರ್ಥವು ಶಿವ.

ಈ ಮೂರು ಪುರುಷಾರ್ಥಗಳನ್ನು ನಾವು ಜೀವನದ ಮೌಲ್ಯಗಳೆಂದು ಸುಲಭವಾಗಿ ಒಪ್ಪುತ್ತೇವೆ. ಇವು ಮಾನವಜೀವನವನ್ನು ಪಶು ಪಕ್ಷಿಗಳ ಜೀವನಕ್ಕಿಂತ ಹೆಚ್ಚು ಸಯುಕ್ತಿಕ ಮತ್ತು ಅರ್ಥಪೂರ್ಣವಾಗಿ ಮಾಡುತ್ತವೆ. ಪಶು ಪಕ್ಷಿಗಳಲ್ಲಿ ಇಲ್ಲದ ನೈತಿಕ ದೃಷ್ಟಿ ಮತ್ತು ಕಲಾದೃಷ್ಟಿ ಮಾನವನಲ್ಲಿ ಈ ಮೌಲ್ಯಗಳಿಂದ ಮೂಡಿಬರುತ್ತವೆ.

ಆದರೆ 'ಮೋಕ್ಷ'ವೆಂಬ ನಾಲ್ಕನೆಯ ಪುರುಷಾರ್ಥವನ್ನು ಜೀವನದ ಮೌಲ್ಯವೆಂದು ನಮ್ಮ ಪ್ರಾಚೀನ ಋಷಿಗಳು ಏಕೆ ಮತ್ತು ಹೇಗೆ ಕಲ್ಪಿಸಿದರೆಂಬುದು ಸುಲಭವಾಗಿ ಅರ್ಥವಾಗುವದಿಲ್ಲ.

ಮಾನವನು ನಿಸರ್ಗದ ಅನೇಕ ಆಶ್ಚರ್ಯಗಳನ್ನು ಅರ್ಥಮಾಡಿಕೊಂಡರೂ ಈ ವರೆಗೆ ಅವನು ಬಿಡಿಸಲಾರದ ಒಗಟು ಒಂದಿದೆ. ಅದು ಮರಣ 'ರಾತ್ರ್ಯಾಂ ರಾತ್ರ್ಯಾಂ ವ್ಯತೀತಾಯಾಮ್ ಆಯುಃ ಅಲ್ಪತರಮ್' (ಮ. ಭಾ) ಪ್ರತಿದಿನವೂ ಕಳೆದಂತೆ ಮರಣವು ಹತ್ತಿರ ಬರುವದು. 'ಸುಪ್ತಮ್ ವ್ಯಾಘ್ರೋ ಮೃಗಮಿವ ಮೃತ್ಯುರಾದಾಯ ಗಚ್ಛತಿ' (ಮ. ಭಾ) ಮಲಗಿದ ಚಿಗರಿಯನ್ನು ಹುಲಿಯು ಎತ್ತಿಕೊಂಡು ಹೋಗುವಂತೆ ಮರಣವು ಒಂದು ದಿನ ನಮ್ಮೆಲ್ಲರನ್ನು ಎತ್ತಿಕೊಂಡು ಹೋಗುವದು.

ದುರ್ಬಲಮ್ ಬಲವಂತಮ್ ಚ ಶೂರಮ್
ಭೀರುಮ್ ಜಡಮ್ ಕವಿಮ್।
ಅಪ್ರಾಪ್ತಮ್ ಸರ್ವಕಾಮಾರ್ಥಾನ್
ಮೃತ್ಯುಃ ಆದಾಯ ಗಚ್ಛತಿ॥ (ಮ. ಭಾ)

ಪ್ರಬಲರು, ದುರ್ಬಲರು, ಬುದ್ಧಿವಂತರು, ಮಂದರು, ಶೂರರು, ಅಂಜುಬುರುಕರು ಎಲ್ಲರನ್ನೂ ಅವರ ಅಪೇಕ್ಷೆಗಳು ಇನ್ನೂ ಅಪೂರ್ಣವಾಗಿರುವಾಗಲೇ ಮೃತ್ಯುವು ಎತ್ತಿಕೊಂಡು ಹೋಗುತ್ತದೆ.

ಇಂಥ ಈ ಮೃತ್ಯುವೆಂಬ ಅನಿರೀಕ್ಷಿತ ಮಿತ್ರನ ವರ್ತನೆಯು ನಮ್ಮ ಪೂರ್ವಜರನ್ನು ಅಂತರ್ಮುಖರನ್ನಾಗಿ ಮಾಡಿತು. ತತ್ವಚಿಂತನೆಯಲ್ಲಿ ತೊಡಗಿಸಿತು.

ಯದ್ವೃಕ್ಷಃ ವೃಕ್ಣಃ ರೋಹತಿ
ಮೂಲಾತ್ ನವತರಃ ಪುನಃ।
ಮರ್ತ್ಯಃ ಸ್ವಿತ್ ಮೃತ್ಯುನಾ ವೃಕ್ಣಃ
ಕಸ್ಮಾತ್ ಮೂಲಾತ್ ಪ್ರರೋಹತಿ
(ಬೃಹ. ಉಪ)

ಗಿಡವನ್ನು ಕಡಿದರೆ ಅದು ಅಡಿಯಲ್ಲಿದ್ದ ಬೇರುಗಳಿಂದ ಮತ್ತೆ ಬೆಳೆಯುತ್ತದೆ. ಮಾನವನ ದೇಹವು ಮೃತ್ಯುವಿನಿಂದ ಅಪಹೃತವಾದರೆ ಅವನಿಗೇನಾಗುವದು? ಎಂಬ ಶೋಧನೆಯಲ್ಲಿ ಅವರು ತೊಡಗಿದರು.

'ಯೇಯಮ್ ಪ್ರೇತೇ ವಿಚಿಕಿತ್ಸಾ
ಮನುಷ್ಯೇ 'ಅಸ್ತಿ' ಇತಿ ಏಕೇ ನ ಆಯಮ್
'ಅಸ್ತಿ' ಇತಿ ಅನ್ಯೇ' (ಕಠ. ಉಪ)

ಮರಣೋತ್ತರದಲ್ಲಿ 'ಅಸ್ತಿ' ಎಂದು ಕೆಲವರೆನ್ನುತ್ತಾರೆ 'ನಾಸ್ತಿ' ಎಂದು ಕೆಲವರೆನ್ನುತ್ತಾರೆ. ಇದರ ರಹಸ್ಯವನ್ನು ತಿಳಿಸು ಎಂದು ನಚಿಕೇತನು ಯಮನಿಗೇ ಕೇಳುವನು. ಹೀಗೆ ತಮ್ಮ ಪರಿಶೀಲನೆಯನ್ನು ಮುಂದುವರಿಸುತ್ತಾ ನಮ್ಮ ಪ್ರಾಚೀನ ಋಷಿಗಳು ದೇಹಾತಿರಿಕ್ತವಾಗಿ ನಿತ್ಯವಾದ 'ಜೀವಾತ್ಮ'ವೊಂದಿದೆ ಎಂಬ ನಿರ್ಣಯಕ್ಕೆ ಬಂದರು.

## ಜೀವನದ ಪರಮ ಮೌಲ್ಯ

ಈ ಶೋಧನೆಯಿಂದ ಜೀವನದ ಮೌಲ್ಯವನ್ನು ಕೇವಲ ಜನ್ಮ-ಮರಣಗಳ ಪರಿಮಿತ ಕಾಲಾವಧಿಯಲ್ಲಿಯ ಮಾನವನ ಕೃತಕೃತ್ಯತೆಯ ದೃಷ್ಟಿಯಿಂದ ನಿರ್ಧರಿಸದೆ ಜೀವನ ನಿತ್ಯಸ್ವರೂಪವನ್ನು ಗಮನದಲ್ಲಿಟ್ಟುಕೊಂಡು ನಿರ್ಧರಿಸಬೇಕಾಯಿತು. ನಿತ್ಯನಾದ ಜೀವನು ಮೃತ್ಯುವನ್ನೂ ಮೃತ್ಯುಭಯವನ್ನೂ ಜಯಿಸುವದೇ ಜೀವನದ ಗುರಿಯೆಂದು ಅವರು ನಿರ್ಧರಿಸಿದರು. ಈ ಅಮೃತತ್ವ ಮತ್ತು ಅಭಯದೆಶೆಯೇ ಮೋಕ್ಷದೆಶೆಯೆಂದರು. 'ಅಥ ಸಃ ಅಭಯಮ್ ಗತಃ ಭವತಿ' (ತೈ. ಉಪ.) 'ಅಮೃತತ್ವಮ್ ಚ

ಗಚ್ಛತಿ ' ( ಕಠ ಉಪ) ಎಂದು ಸಾರಿ ಮೋಕ್ಷವು ಪರಮ ಮೌಲ್ಯವೆಂದು ಗೊತ್ತುಪಡಿಸಿದರು.

ಜನ್ಮ-ಮರಣಗಳ ಪರಿಮಿತ ಕಾಲಾವಧಿಯಲ್ಲಿ ಮಾನವನ ಕೃತಕೃತ್ಯತೆಯನ್ನು ಸಾಧಿಸುವ ಧರ್ಮಾರ್ಥ ಕಾಮಗಳು ಜೀವಿತಕಾಲದಲ್ಲಿ ಜೀವನ ಕೆಲ ಆಕಾಂಕ್ಷೆಗಳನ್ನು ಪೂರೈಸಬಹುದು. ಆದರೆ ಅದು ದೊಡ್ಡದಲ್ಲ ಮತ್ತು ಅಷ್ಟರಿಂದ ಮೃತ್ಯುವಿನ ಜಯವಾದಂತಾಗಲಿಲ್ಲ. ಮೃತ್ಯುಭಯವು ಅವನನ್ನು ಯಾವಾಗಲೂ ನಿರ್ವಿಣ್ಣನನ್ನಾಗಿ ಮಾಡುವದು. ಆದುದರಿಂದ ಮೃತ್ಯುರಹಿತವಾದ ' ಮೋಕ್ಷ ' ವೆಂಬ ಪುರುಷಾರ್ಥವನ್ನು ಕಲ್ಪಿಸಿದರು. ಅಮೃತತ್ವದ ಈ ಗುರಿಯು ಕಣ್ಣೆದುರಿಗಿದ್ದರೆ ಮರಣ ಬಂದಾಗ ಜೀವನಿಗೆ ಸರ್ವಥಾ ನಾಶವಾಗುವನೆಂಬ ಅಂಜಿಕೆಯಿಲ್ಲದಂತಾಗಿ

ಬಹೂನಾಮ್ ಏಮಿ ಪ್ರಥಮಃ ಬಹೂ-
ನಾಮ್ ಏಮಿ ಮಧ್ಯಮಃ
ಕಿಂಸ್ವಿತ್ ಯಮಸ್ಯ ಕರ್ತವ್ಯಮ್ ಯತ್
ಮಯಾ ಅದ್ಯ ಕರಿಷ್ಯತಿ
(ಕಠ. ಉಪ)

ಪ್ರತಿ ದಿನ ಅನೇಕರು ಸಾಯುವರು, ಅವರಲ್ಲಿ ನಾನೂ ಒಬ್ಬ, ಮರಣವು ನಿರಂತರ ಪ್ರಯಾಣದ ದಾರಿಯಲ್ಲಿಯ ಒಂದು ಮೈಲುಗಲ್ಲು ಮಾತ್ರ ಎಂಬ ಭಾವನೆಯುಂಟಾಗಿ ಮೃತ್ಯುಭಯವು ಇಲ್ಲದಂತಾಗುವದು.

'ಸಸ್ಯಮಿವ ಮರ್ತ್ಯಃ ಪಚ್ಯತೇ ಸಸ್ಯಮಿವ
ಜಾಯತೇ ಪುನಃ '

ಮಾನವ ದೇಹವು ಗಿಡಬಳ್ಳಿಗಳಂತೆ ಉದುರುವದು. ಅದರಂತೆಯೇ ಚಿಗಿಯುವದು ಎಂಬ ತಿಳಿವಳಿಕೆ ಬರುವದು.

ಸೋಹಮ್ ಅ ಹಿಂಸ್ರಃ ಸತ್ಯಾರ್ಥೀ
ಕಾಮಕ್ರೋಧವಿವರ್ಜಿತಃ
ಸಮದುಃಖಸುಖಃ ಕ್ಷೇಮೀ ಮೃತ್ಯುಮ್
ಹಾಸ್ಯಾಮಿ ಅಮರ್ತ್ಯವತ್
(ಮ. ಭಾ.)

ಕಾಮ ಕ್ರೋಧರಹಿತನೂ ಸತ್ಯನಿಷ್ಠನೂ ಸಮದುಃಖ-ಸುಖಿಯೂ ಆಗಿ ಜೀವನವನ್ನು ಸಾಗಿಸಿ ಮೃತ್ಯುವು ನನ್ನ ಬಾಗಿಲಿಗೆ ಬಂದಾಗ ಅದನ್ನು ನಗುತ್ತ ಸ್ವಾಗತಿಸುವೆನು ಎಂದು ಹೇಳುವ ಧೈರ್ಯ ಬರುವದು.

## ಸ್ಥಿತಪ್ರಜ್ಞ ಮನೋಧರ್ಮ

ಹೀಗೆ ಮೋಕ್ಷದ ಕಲ್ಪನೆಯು ನಮಗೆ ಜೀವಿತ ಕಾಲದಲ್ಲಿ ಮೃತ್ಯುಭಯವನ್ನು ಜಯಿಸಲೂ ಬಳಿಕ ಮೃತ್ಯುವನ್ನೇ ಜಯಿಸಲೂ ಇಟ್ಟುಕೊಂಡ ಆದರ್ಶವಾಗಿದೆ. ಮೃತ್ಯುಭಯವನ್ನು ಜಯಿಸುವದೆಂದರೆ ಮೃತ್ಯುವು ಯಾವಾಗ ಬಂದರೂ ಸಿದ್ಧರಾಗಿರುವದು. ಇದೊಂದು ವಿಚಿತ್ರವಾದ ಮಾನಸಿಕ ಸಿದ್ಧತೆ. ಮೃತ್ಯುವಿನ ಕಡೆಗೇ ಲಕ್ಷ್ಯಕೊಟ್ಟು ಜೀವನವನ್ನು ಅಲಕ್ಷಿಸುವದೂ ಇದರ ಲಕ್ಷಣವಲ್ಲ. ಜೀವನದ ಕಡೆಗೇ ಲಕ್ಷ್ಯಕೊಟ್ಟು ಮೃತ್ಯುವನ್ನು ಮರೆಯುವದೂ ಇದರ ಲಕ್ಷಣವಲ್ಲ.

ನ ಅಭಿನಂದೇತ ಮರಣಮ್ ನ ಅಭಿನಂ-
ದೇತ ಜೀವಿತಮ್
ಕಾಲಮೇವ ಪ್ರತೀಕ್ಷೇತ ನಿರ್ದೇಶಮ್
ಭೃತಕೋ ಯಥಾ
(ಮನು)

ಜೀವನಕ್ಕೂ ಅಂಟಿಕೊಂಡಿರಬಾರದು. ಮೃತ್ಯುವನ್ನೂ ಬಯಸಬಾರದು. ಇಂಥ ಒಂದು ಸ್ಥಿತಪ್ರಜ್ಞ ಮನೋಧರ್ಮವನ್ನು ಬೆಳೆಯಿಸಿಕೊಳ್ಳುವದು 'ಅಮೃತತ್ವ' ರೂಪವಾದ ಮೋಕ್ಷವನ್ನು ಪುರುಷಾರ್ಥವೆಂದು ಇಟ್ಟುಕೊಂಡರೆ ಮಾತ್ರ ಸಾಧ್ಯವಾಗುವದು.

ಯಾವಜ್ಜೀವಮ್ ಸುಖಮ್ ಜೀವೇತ್
ನಾಸ್ತಿ ಮೃತ್ಯೋಃ ಅಗೋಚರಃ

' ಮೃತ್ಯುವನ್ನು ತಪ್ಪಿಸಿಕೊಳ್ಳುವದು ಯಾರಿಂದಲೂ ಸಾಧ್ಯವಿಲ್ಲ. ಆದ್ದರಿಂದ ಇದ್ದಷ್ಟು ಕಾಲ ಸುಖದಿಂದಿರಬೇಕು ' ಎಂಬ ಚಾರ್ವಾಕರ ವಾದದಲ್ಲಿ ಸುಖಾಪೇಕ್ಷೆಗಿಂತ ಮೃತ್ಯುಭಯವೇ ಹೆಚ್ಚಾಗಿ ಕಂಡು ಬರುವದು. ಈ ಮೃತ್ಯುಭಯವೆಂಬ ಸರ್ಪವು ತಲೆ ಮೇಲೆ ತೂಗಾಡುತ್ತಿರುವ ವರೆಗೆ ಐಹಿಕ ಸುಖಕ್ಕೆ ಸಕಲ ಸನ್ನಾಹ ಮಾಡಿದರೂ ಸುಖವಾಗಲಾರದು. ' ಇಂದ್ರಿಯಾರಾಮ ' ಪ್ರವೃತ್ತಿಯು ಮಾತ್ರ ಹೆಚ್ಚುತ್ತ ಹೋಗುವದು'ಇದಮ್ ಅದ್ಯ ಮಯಾ ಲಬ್ಧಮ್ ಇಮಮ್ ಪ್ರಾಪ್ಸ್ಯೇ ಮನೋರಥಮ್' ಎಂದು ಇಂದ್ರಿಯಗಳ ಚಾಪಲ್ಯವು ಬೆಳೆಯುತ್ತ ಹೋಗುವದು. ಲೌಕಿಕವಾದ, ' ನ್ಯಾಯಮಾರ್ಗ ' ದ ಉಪದೇಶದಿಂದ ಇದನ್ನು ತಡೆಯುವದು ಶಕ್ಯವಿಲ್ಲ. ಮರಣದಿಂದ ಸಂಪೂರ್ಣವಾಗಿ ನಾಶ ಹೊಂದುವದು ಖಂಡಿತವೆಂದೂ ಆದುದರಿಂದ ಆ ದುರ್ದಿನ ಬರುವದರೊಳಗಾಗಿ ಶಕ್ಯವಿದ್ದಷ್ಟು ಸುಖಗಳನ್ನು ಅನುಭವಿಸಬೇಕೆಂದೂ ಪ್ರವರ್ತಿಸುವವರಿಗೆ ' ನ್ಯಾಯಮಾರ್ಗ ' ದ ಉಪದೇಶವು ಪ್ರಯೋಜನವಾಗಲಾರದು. ಅವರಿಗೆ ಜೀವನದಲ್ಲಿ ಲೋಭವೂ ಮರಣದ ಭಯವೂ ಹೆಚ್ಚುತ್ತ ಹೋಗುವವು. ಧರ್ಮದ ಅಂಜಿಕೆಯಿಲ್ಲದಂತಾಗುವದು. ಅರ್ಥ ಕಾಮಗಳಲ್ಲಿ ಸ್ವಚ್ಛಂದ ಪ್ರವೃತ್ತಿಯು ಹೆಚ್ಚುವದು. ಅವು ಉಚಿತವಾದ ಜೀವನದ ಮೌಲ್ಯಗಳಾಗುವದರ ಬದಲಾಗಿ ವೈಯಕ್ತಿಕ ಮಹತ್ವಾಕಾಂಕ್ಷೆಗಳಾಗುವವು. ' ಅಮೃತತ್ವ ' ದೃಷ್ಟಿಯ ತಳಹದಿಯಿಲ್ಲದ ಧರ್ಮವು ಇವನ್ನು ತಡೆಯಲು ಅಸಮರ್ಥವಾಗುವದು. ಆದುದರಿಂದ ಜೀವನದಲ್ಲಿಯ ಅತಿಲೋಭವನ್ನೂ ' ಮೃತ್ಯು ' ವೇ ಕೊನೆಯೆಂಬ ಅಂಜಿಕೆಯನ್ನೂ ತಡೆಯಲು ' ಮೋಕ್ಷ 'ವೆಂಬ ಪುರುಷಾರ್ಥದ ಆದರ್ಶವು ಅವಶ್ಯವಾಗಿದೆ.

## ದಾರ್ಶನಿಕರ ಚರ್ಚೆ

ಹೀಗೆ ಲೋಭವನ್ನೂ ಮೃತ್ಯುಭಯವನ್ನೂ ಜಯಿಸುವದು ಮೋಕ್ಷದ ಮೊದಲುಹೆಜ್ಜೆಯಾದರೆ ಮೃತ್ಯುವನ್ನೇ ಜಯಿಸುವದು ಮೋಕ್ಷದ ಕೊನೆಯ ಹೆಜ್ಜೆ. ಈ ಕೊನೆಯ ಹೆಜ್ಜೆಯ ಸ್ವರೂಪವನ್ನೂ ಅದರ ಉಪಾಯಗಳನ್ನೂ ಭಾರತೀಯ ದಾರ್ಶನಿಕರು ಆಳವಾಗಿ ಚರ್ಚಿಸಿರುವರು.

ಕಪಿಲಸ್ಯ ಕಣಾದಸ್ಯ ಗೌತಮಸ್ಯ
ಪತಂಜಲೇಃ ।
ವ್ಯಾಸಸ್ಯ ಜೈಮಿನೇಶ್ಚೇತಿ ದರ್ಶನಾನಿ
ಷಡೇವ ಹಿ ॥

ಕಪಿಲ, ಪತಂಜಲಿ, ಕಣಾದ, ಗೌತಮ, ಜೈಮಿನಿ ಮತ್ತು ವ್ಯಾಸ ಇವರು ಆರು ಜನ ದರ್ಶನಕಾರರು. ಇವರಲ್ಲಿ ಕಪಿಲನ ದರ್ಶನವು ಸಾಂಖ್ಯದರ್ಶನವು. ಈ ದರ್ಶನದಲ್ಲಿ ದೇಹಾತಿರಿಕ್ತವಾದ ಆತ್ಮನನ್ನು ಅಂಗೀಕರಿಸಿದೆ. ಅದಕ್ಕೆ ಪುರುಷ ಎಂದು ಹೆಸರು. ಇಂಥ ಪುರುಷರು ಅನೇಕರು. ಪುರುಷನು ಸ್ವತಃ ಸುಖಿಯೂ ಅಲ್ಲ, ದುಃಖಿಯೂ ಅಲ್ಲ. ಅವನು ನಿರ್ಲಿಪ್ತನು. ಕರ್ತೃತ್ವ, ಭೋಕ್ತೃತ್ವ ಯಾವದೂ ಅವನಿಗಿಲ್ಲ. ಜಡಪ್ರಕೃತಿಯೇ ಸ್ವತಃ ಪರಿಣಾಮಹೊಂದಿ ಸೃಷ್ಟಿಯಾಗುವದು. ನರ್ತಕಿಯು ತನ್ನ ನೃತ್ಯವನ್ನು ತೋರಿಸುತ್ತ ಹೋಗುವಂತೆ ಪ್ರಕೃತಿಯು ತನ್ನ ಮಹದಾದಿ ಪರಿಣಾಮವನ್ನು ತೋರಿಸುತ್ತ ಹೋಗುವದು. ಈ ಪ್ರಕೃತಿಯ ಸಂಬಂಧದಿಂದ ಪುರುಷನು ತಾನೇ ಕರ್ತೃ ಮತ್ತು ಭೋಕ್ತೃ ಎಂದು ಭ್ರಮಿಸುವನು. ಇದರಿಂದ ಸೂಕ್ಷ್ಮ ಮತ್ತು ಸ್ಥೂಲ ಶರೀರಗಳನ್ನು ಹೊಂದಿ ಜನನ ಮರಣರೂಪ ಸಂಸಾರದಲ್ಲಿ ಸಿಲುಕುವನು. ಸುಖ ದುಃಖಗಳನ್ನನುಭವಿಸುವನು. ಇದು ಅನಾದಿಯಾಗಿ ನಡೆದುಬಂದಿರುವದು. ಪುರುಷನು ತಾನು ಕರ್ತೃವೂ ಭೋಕ್ತೃವೂ ಅಲ್ಲವೆಂದು ತಿಳಿದುಕೊಂಡು ಪ್ರಕೃತಿಗೂ ತನಗೂ ಇರುವ ವ್ಯತ್ಯಾಸವನ್ನು ತಿಳಿದುಕೊಳ್ಳುವದೇ ವಿವೇಕಜ್ಞಾನ. ಈ ವಿವೇಕಜ್ಞಾನೋದಯದಿಂದ ಪುರುಷನು ಜನ್ಮ-ಮರಣರೂಪ ಸಂಸಾರದಿಂದ ಮುಕ್ತನಾಗುವನು. ಇದಕ್ಕೆ ಕೈವಲ್ಯವೆನ್ನುವರು. ಈ ಕೈವಲ್ಯ ದಶೆಯಲ್ಲಿ ಅವನು ಸುಖ-ದುಃಖಾತೀತನಾಗಿರುವನು. ಸಾಂಖ್ಯರು ಈಶ್ವರನನ್ನು ಒಪ್ಪುವದಿಲ್ಲ.

## ಪ್ರಕೃತಿ ಪುರುಷರ ತತ್ತ್ವಜ್ಞಾನ

ಪತಂಜಲಿಯ ಯೋಗದರ್ಶನವೂ ಕೂಡ ಸಾಂಖ್ಯರಂತೆಯೇ ದೇಹಾತಿರಿಕ್ತನಾದ ಸ್ವಭಾವತಃ ಸುಖಿಯೂ ದುಃಖಿಯೂ ಅಲ್ಲದ ಪುರುಷ ಅಥವಾ ಜೀವಾತ್ಮರನ್ನು ಒಪ್ಪುತ್ತದೆ. ನಿತ್ಯರೂ ಕರ್ತೃತ್ವ, ಭೋಕ್ತೃತ್ವ ಸ್ವಭಾವರಹಿತರೂ ಆದ ಈ ಜೀವಾತ್ಮರು ಪ್ರಕೃತಿ ಸಂಬಂಧದಿಂದ ಸಂಸಾರದಲ್ಲಿ ಸಿಲುಕಿರುವರು. ಸ್ರಕ್ ಚಂದನ ವನಿತಾದಿಗಳನ್ನೇ ಸುಖವೆಂದೂ ದೇಹವೇ ಆತ್ಮವೆಂದೂ ಭ್ರಮಿಸಿರುವರು. ಪ್ರಕೃತಿಯ ಕರ್ತೃತ್ವ, ಭೋಕ್ತೃತ್ವಗಳು ತಮ್ಮವೆಂದು ತಿಳಿದುಕೊಳ್ಳುವರು. ಇದರಿಂದ ಅವಿದ್ಯಾ, ಅಸ್ಮಿತಾ, ರಾಗ, ದ್ವೇಷಾದಿ ಕ್ಲೇಶಗಳಿಗೆ ಒಳಗಾಗಿರುವರು. ಕರ್ಮಗಳು, ಕರ್ಮಫಲಗಳು ಇವುಗಳ ತೊಡಕಿನಲ್ಲಿ ಸಿಲುಕಿರುವರು. ಇವುಗಳ ಕಡೆಗೆ ಚಿತ್ತವು ಹರಿಯದಂತೆ ಅದನ್ನು ನಿರೋಧಿಸುವದೇ ಯೋಗವು. ಈ ಯೋಗವು ಯಮ, ನಿಯಮಾದಿ ಅಷ್ಟಾಂಗಯುಕ್ತವಾಗಿರುವದು. ಯೋಗದ ಕೊನೆಯ ಹಂತ ಸಮಾಧಿ. ಇದು ಸಂಪ್ರಜ್ಞಾತ ಮತ್ತು ಅಸಂಪ್ರಜ್ಞಾತ ಎಂದು ಎರಡು ವಿಧ. ಬಾಹ್ಯ ವೃತ್ತಿಯ ನಿರೋಧವು ಮೊದಲನೆಯದು. ಸರ್ವ ವೃತ್ತಿನಿರೋಧವು ಎರಡನೆಯದು. ಇದರಿಂದ ಪ್ರಕೃತಿ ಪುರುಷರ ತತ್ತ್ವಜ್ಞಾನವಾಗಿ ವಿವೇಕೋದಯವಾಗುವದು. ಪ್ರಕೃತಿಯ ಕಾರ್ಯಗಳೆಲ್ಲ ಪ್ರಕೃತಿಯಲ್ಲಿ ಲೀನವಾಗುವವು. ಪುರುಷನು ಸ್ವ-ಸ್ವರೂಪಾಧಿಷ್ಠಿತನಾಗುವನು. ಈ ದಶೆಯೇ ಕೈವಲ್ಯ ದಶೆ ಅಥವಾ ಮೋಕ್ಷದಶೆ. ಈ ದಶೆಯಲ್ಲಿದ್ದ ಪುರುಷನು ಸುಖದುಃಖಾತೀತನು. ಪತಂಜಲಿಯು ಜೀವಾತ್ಮರಲ್ಲದೆ ಅವರಂಥದೇ ಸ್ವರೂಪದ ಈಶ್ವರನನ್ನು ಅಂಗೀಕರಿಸುವನು. ಜೀವಾತ್ಮರಿಗೆ ಸಂಸಾರದಲ್ಲಿ ಚಿತ್ತಸಂಬಂಧದಿಂದ ಕ್ಲೇಶಗಳುಂಟು; ಈಶ್ವರನಿಗೆ ಇಲ್ಲ. ಈಶ್ವರನು ನಿರ್ಮಾಣಕಾಯವನ್ನು ತಾಳಿ ಜೀವಾತ್ಮರನ್ನು ಅಣಿಮಾದಿ ಐಶ್ವರ್ಯಗಳನ್ನು ಕೊಟ್ಟು ಅನುಗ್ರಹಿಸುವನು. ಉಳಿದಂಶಗಳಲ್ಲಿ ಅವನ ಸ್ವರೂಪ ಮೊದಲಾದವುಗಳು ಇತರ ಪುರುಷರಂತೆಯೇ ಇರುವವು.

ಕಣಾದನ ವೈಶೇಷಿಕದರ್ಶನವೂ ದೇಹಾತಿರಿಕ್ತವಾದ ಜೀವಾತ್ಮನನ್ನು ಒಪ್ಪುತ್ತದೆ. ಇಂಥ ಜೀವಾತ್ಮರು ಅನೇಕರು. ಈ ದರ್ಶನದಲ್ಲಿ ಜೀವಾತ್ಮರು ಸ್ವತಃ ಕರ್ತೃತ್ವ, ಭೋಕ್ತೃತ್ವವುಳ್ಳವರಾಗಿದ್ದಾರೆ. ಆದುದರಿಂದ ಆ ವಿಷಯದಲ್ಲಿ ಭ್ರಮೆಯಿಲ್ಲ. ಸಾಂಖ್ಯ ಯೋಗದ ಪುರುಷರಂತೆ ಈ ಜೀವಾತ್ಮರು ಚೇತನರಲ್ಲ. ಇವರು ಅಮೂರ್ತದ್ರವ್ಯರು. ಜ್ಞಾನ ಸುಖ ದುಃಖಾದಿಗಳು ಇವರ ಗುಣಗಳು. ಜೀವಾತ್ಮರಲ್ಲದೆ ಸೃಷ್ಟಿಕರ್ತನಾದ ಪರಮಾತ್ಮನಿರುವನು. ಅವನ ಇಚ್ಛೆಯಂತೆ ಪರಮಾಣುಗಳಿಂದ ಸೃಷ್ಟಿಯಾಗುವದು. ಜೀವರು ಶರೀರೇಂದ್ರಿಯಗಳನ್ನು ಪ್ರತಿಜನ್ಮದಲ್ಲಿಯೂ ಪಡೆಯುವರು. ದೇಹವೇ ಆತ್ಮವೆಂಬ ಭ್ರಮೆಗೆ ಸಿಲುಕಿ ಜನ್ಮ-ಮರಣರೂಪ ಸಂಸಾರದಲ್ಲಿ ತೊಡಕಿರುವರು ಇದು ಅನಾದಿಯಾಗಿ ನಡೆದುಬಂದಿರುವದು. ಪರಮೇಶ್ವರನ ಸಾಕ್ಷಾತ್ಕಾರದಿಂದ ಇದರ ಪರಿಹಾರವಾಗುವದು. ಅದಕ್ಕೆ ಶ್ರವಣ, ಮನನಗಳು ಬೇಕು. ಮನನಕ್ಕೆ ಅನುಮಾನವು ಬೇಕು. ಅದಕ್ಕೆ ವ್ಯಾಪ್ತಿಜ್ಞಾನವು ಬೇಕು. ಅದು ಸಪ್ತಪದಾರ್ಥಗಳ ಸ್ವರೂಪವನ್ನು ತಿಳಿದುಕೊಳ್ಳುವದರಿಂದಾಗುವದು. ಸಪ್ತಪದಾರ್ಥಗಳಲ್ಲಿ ವಿಂಗಡಿಸಬಹುದಾದ ಈ ಜಗತ್ತಿನ ಸರಿಯಾದ ಜ್ಞಾನದಿಂದ ದೇಹವೇ ಆತ್ಮವೆಂಬ ಭ್ರಮೆಯು ದೂರಾಗಿ ಪರಮಾತ್ಮನ ಜ್ಞಾನವಾಗುವದು. ಅದರಿಂದ ಆತ್ಯಂತಿಕ ದುಃಖ ನಿವೃತ್ತಿರೂಪವಾದ ಮೋಕ್ಷವು ದೊರೆಯುವದು. ಇದಕ್ಕೆ ಅಪವರ್ಗ ಅಥವಾ ನಿಃಶ್ರೇಯಸವೆಂದು ಹೆಸರು. ಈ ದಶೆಯಲ್ಲಿ ಜೀವಾತ್ಮನಿಗೆ ಸುಖವೂ ಇಲ್ಲ, ದುಃಖವೂ ಇಲ್ಲ. ಅವನು ಜ್ಞಾನಸ್ವರೂಪ ಅಥವಾ ಚೇತನನಲ್ಲವಾದ್ದರಿಂದ ಜ್ಞಾನವೂ ಇಲ್ಲ. ಈ ದರ್ಶನದಲ್ಲಿ ಈಶ್ವರನು ಸರ್ವಜ್ಞನು, ಸರ್ವಕರ್ತನು, ನಿತ್ಯಜ್ಞಾನವುಳ್ಳವನು. ಆದರೆ ಅವನೂ ಜೀವಾತ್ಮರಂತೆ ಅಮೂರ್ತದ್ರವ್ಯನು ಮತ್ತು ಜ್ಞಾನಸ್ವರೂಪನಲ್ಲ.

## ಮುಕ್ತಿಯ ಸ್ವರೂಪ

ಗೌತಮನ ನ್ಯಾಯದರ್ಶನವೂ ಕೂಡ ಜೀವಾತ್ಮ ಪರಮಾತ್ಮರ ಸ್ವರೂಪವನ್ನು ವೈಶೇಷಿಕರಂತೆಯೇ ವರ್ಣಿಸುತ್ತದೆ. ಮುಕ್ತಿಯ ಸ್ವರೂಪವೂ ಹಾಗೆಯೇ ಇದೆ. ಪದಾರ್ಥ ತತ್ತ್ವಜ್ಞಾನದಿಂದಲೇ ನಿಃಶ್ರೇಯಸವಾಗುವದು. ವೈಶೇಷಿಕರ ಪದಾರ್ಥಗಳು ಇವರಿಗೂ ಮಾನ್ಯವಿವೆ. ಇವರು ಹೇಳುವ ೧೬ ಪದಾರ್ಥಗಳು ವೈಶೇಷಿಕರ ೭ ಪದಾರ್ಥಗಳಲ್ಲಿಯೂ ಅವರ ೭

ಪದಾರ್ಥಗಳು ಇವರ ೧೬ ಪದಾರ್ಥಗಳಲ್ಲಿಯೂ ಪರಸ್ಪರ ಸಮನ್ವಯವಾಗುವವು. ವಿವರಗಳಲ್ಲಿ ಅಲ್ಲಲ್ಲಿ ಕೆಲವು ಭಿನ್ನಾಭಿಪ್ರಾಯಗಳಿವೆ. ಇವರ ಅಭಿಪ್ರಾಯದಲ್ಲಿಯೂ ದೇಹದಲ್ಲಿ ಆತ್ಮಬುದ್ಧಿಯನ್ನು ತಾಳುವದೇ ದುಃಖದ ಮೂಲ. ಇದರಿಂದ ದೇಹಕ್ಕೆ ಅನುಕೂಲವಾದವುಗಳಲ್ಲಿ ರಾಗವೂ ಪ್ರತಿಕೂಲವಾದವುಗಳಲ್ಲಿ ದ್ವೇಷವೂ ಉಂಟಾಗುವವು. ಇದರಿಂದ ನಾವು ದಾನ, ದಯೆ, ಅಹಿಂಸಾದಿ ಸತ್ಕರ್ಮಗಳಲ್ಲಿಯೂ ಸ್ತೇಯ, ಪರದ್ರೋಹ ಮತ್ತು ಹಿಂಸಾರೂಪವಾದ ಅಸತ್ಕರ್ಮಗಳಲ್ಲಿಯೂ ತೊಡಗುವೆವು. ಇವೇ ಪುಣ್ಯ ಪಾಪಗಳು. ಇದರಿಂದ ಜನ್ಮ-ಮರಣಗಳಚಕ್ರ ಮತ್ತು ದುಃಖ. ಆದುದರಿಂದ ಪದಾರ್ಥಗಳ ನಿಜಸ್ವರೂಪ ಜ್ಞಾನದಿಂದ ದೇಹಾತ್ಮಾಭಿಮಾನವು ದೂರಾಗಿ ಆತ್ಯಂತಿಕ ದುಃಖ ನಿವೃತ್ತಿರೂಪ ಮೋಕ್ಷವಾಗುವದು.

ಜೈಮಿನಿಯ ಪೂರ್ವಮೀಮಾಂಸಾದರ್ಶನವೂ ದೇಹಾತಿರಿಕ್ತವಾದ ಆತ್ಮವನ್ನು ಅಂಗೀಕರಿಸುತ್ತದೆ. ಇವರ ಮತದಂತೆ ಆತ್ಮದ ಸ್ವರೂಪವು ಸಾಂಖ್ಯ-ಯೋಗರಂತೆ ಕೇವಲ ಚೇತನಸ್ವರೂಪವೂ ಅಲ್ಲ. ನ್ಯಾಯ ವೈಶೇಷಿಕರಂತೆ ಜಡಪ್ರಾಯವೂ ಅಲ್ಲ. ಅದು ಬೋಧಾಬೋಧರೂಪ. ಆತ್ಮವು ಸ್ವತಃ ಜ್ಞಾನಸ್ವರೂಪವಲ್ಲ. ಆದರೆ ಜ್ಞಾನವು ಅದರ ಅಭಿನ್ನ ಧರ್ಮ. ನ್ಯಾಯ-ವೈಶೇಷಿಕರಂತೆಯೇ ಆತ್ಮವು ಕರ್ತೃತ್ವ, ಭೋಕ್ತೃತ್ವವುಳ್ಳದ್ದು. ಆ ವಿಷಯದಲ್ಲಿ ಭ್ರಮೆಯಿಲ್ಲ. ಇವರು ಈಶ್ವರನನ್ನು ಅಂಗೀಕರಿಸುವದಿಲ್ಲ. ಇಡೀ ವಿಶ್ವಕ್ಕೆ ಏಕಕಾಲದಲ್ಲಿ ಸೃಷ್ಟಿ ಅಥವಾ ಪ್ರಲಯವಿಲ್ಲ. ಜಗತ್ತು ನಡೆದೇ ಇರುವದು. ಆದುದರಿಂದ ಅದನ್ನು ಸೃಷ್ಟಿಸಲು ಅಥವಾ ವಿಸರ್ಜಿಸಲು ಈಶ್ವರನ ಅವಶ್ಯಕತೆಯಿಲ್ಲ. ಜೀವರ ಪುಣ್ಯ-ಪಾಪರೂಪವಾದ ಕರ್ಮಗಳು ಅವರನ್ನು ಅನಾದಿಯಾಗಿ ಸಂಸಾರದಲ್ಲಿ ತೊಡಕಿಸಿರುವವು. ಕಾಮ್ಯ ಮತ್ತು ನೈಮಿತ್ತಿಕ ಕರ್ಮಗಳನ್ನು ಬಿಟ್ಟು ನಿತ್ಯ ಕರ್ಮಗಳನ್ನು ಮಾತ್ರ ಮಾಡಿದರೆ ಭೋಗದಿಂದ ಹಿಂದಿನ ಕರ್ಮಕ್ಷಯವಾಗುವದು. ಕರ್ಮಕ್ಷಯವಾದರೆ ಮೋಕ್ಷವಾಗುವದು. ಮೋಕ್ಷವು ಸುಖವೂ ದುಃಖವೂ ಇಲ್ಲದ ದಶೆ. ವೇದಗಳು ಪರಮ ಪ್ರಮಾಣ. ವೇದವಿಹಿತವಾದ ಕಾಮ್ಯ ಮತ್ತು ನೈಮಿತ್ತಿಕ ಕರ್ಮಗಳನ್ನು ಮಾಡಿದರೆ ಸ್ವರ್ಗಾದಿ ಫಲಗಳು ದೊರೆಯುವವು. ನಿತ್ಯಕರ್ಮಗಳನ್ನು ಮಾಡಲೇಬೇಕು. ಅವು ಬಂಧನಕಾರಕವಲ್ಲ. ಕಾಮ್ಯ ಕರ್ಮಗಳ ಫಲಗಳನ್ನು ಅನುಭವಿಸಿ ತೀರಿಸುವ ವರೆಗೆ ಸಂಸಾರವು ತಪ್ಪಿದ್ದಲ್ಲ. ಭೋಗದಿಂದ ಕರ್ಮಕ್ಷಯವಾಯಿತೆಂದರೆ ಆತ್ಮನಿಗೆ ಸ್ವ-ಸ್ವರೂಪಾ ಸ್ಥಾನರೂಪ ಮುಕ್ತಿಯಾಗುವದು. ಅದು ಸುಖ ರೂಪವೂ ಅಲ್ಲ; ದುಃಖರೂಪವೂ ಅಲ್ಲ. ಜನ-ಮರಣಗಳಿಂದ ಪಾರಾದರಿಂದ ದುಃಖಾಭಾವರೂಪ.

## ವೇದವ್ಯಾಸರ ವೇದಾಂತದರ್ಶನ

ವೇದವ್ಯಾಸರ ವೇದಾಂತದರ್ಶನವು ಭಾರತೀಯ ದರ್ಶನಗಳಲ್ಲಿ ಮೂರ್ಧನ್ಯವಾಗಿದ್ದು ದರ್ಶನರಾಜವೆಂದು ಪ್ರಸಿದ್ಧವಾಗಿದೆ. ಈ ವರೆಗೆ ವಿವೇಚಿಸಿದ ದರ್ಶನಗಳಲ್ಲಿ ಸಾಂಖ್ಯರು ಮತ್ತು ಮೀಮಾಂಸಕರು ಈಶ್ವರನನ್ನೇ ಒಪ್ಪಿರುವದಿಲ್ಲ. ಉಳಿದವರು ಒಪ್ಪಿದರೂ ವೇದಾಂತದರ್ಶನದಲ್ಲಿ ಕೊಟ್ಟಿರುವ ಅನಿತರ ಸಾಧಾರಣವಾದ ಸ್ಥಾನವನ್ನು ಅವನಿಗೆ ಕೊಟ್ಟಿಲ್ಲ; ಅನಿತರ ಸಾಧಾರಣವಾದ ಸ್ವರೂಪವನ್ನು ಕಲ್ಪಿಸಿಲ್ಲ. ಅವರ ಪರಮಾತ್ಮನ ಕಲ್ಪನೆಯೇ ಲಘುವಾಗಿದ್ದು 'ಮೋಕ್ಷ'ಕ್ಕೆ ಅವನ ಸಾಕ್ಷಾತ್ಕಾರವಾಗಲಿ ಅನುಗ್ರಹವಾಗಲಿ ಅತ್ಯವಶ್ಯವೆಂಬ ಅಂಶವು ಪ್ರತಿಪಾದಿತವಾಗಿಲ್ಲ. ಅಲ್ಲದೆ ಇವರೆಲ್ಲರು ಕೇವಲ ತರ್ಕಬಲದಿಂದ 'ಜೀವನ ನಿತ್ಯತ್ವ' 'ಜಗತ್ತಿನ ಸ್ವರೂಪ' ಮೊದಲಾದವುಗಳನ್ನು ಪ್ರತಿಪಾದಿಸಿದ್ದಾರೆ. ನಮ್ಮ ಲೌಕಿಕಾನುಭವವನ್ನವಲಂಬಿಸಿ ರೂಪಿಸಿದ ಅನುಮಾನದ ಬಲದಿಂದ ಅಲೌಕಿಕವಾದ ಪದಾರ್ಥಗಳ ಸ್ವರೂಪವನ್ನು ಅಂತಿಮವಾಗಿ ನಿರ್ಧರಿಸಲು ಇವರೆಲ್ಲ ಪ್ರಯತ್ನಿಸಿದ್ದಾರೆ. ಆಗಮವನ್ನು ಅನುಕೂಲವಾದಾಗ ಮಾತ್ರ ಉದಾಹರಿಸುತ್ತಾರೆ. ಜೈಮಿನಿಯು ಶ್ರುತಿಪ್ರಾಮಾಣ್ಯವನ್ನು ಬಲವಾಗಿ ಪ್ರತಿಪಾದಿಸಿದರೂ ಈಶ್ವರನನ್ನು ಕೈಬಿಟ್ಟುಬಿಟ್ಟಿದ್ದಾನೆ. ನಾಸ್ತಿಕಯುಗವು ಪ್ರಬಲವಾದಾಗ 'ಈಶ್ವರನ ಅಸ್ತಿತ್ವ'ವನ್ನು ಸ್ಥಾಪಿಸಿದ ಶ್ರೇಯಸ್ಸು ನ್ಯಾಯವೈಶೇಷಿಕರಿಗೂ 'ವೇದಪ್ರಮಾಣ್ಯ'ವನ್ನು ಸ್ಥಾಪಿಸಿದ ಶ್ರೇಯಸ್ಸು ಪೂರ್ವಮೀಮಾಂಸಕರಿಗೂ ಹೋಗುವದಾದರೂ ಇವೆರಡನ್ನೂ ಅಂಗೀಕರಿಸಿ ಆಸ್ತಿಕರಿಗೆ 'ಮೋಕ್ಷ' ತತ್ತ್ವದ ರಹಸ್ಯವನ್ನು ತಿಳಿಸಿದ ಶ್ರೇಯಸ್ಸು ವೇದಾಂತಿಗಳಿಗೆ ಸೇರುವದು.

ಉಪನಿಷತ್ತುಗಳ ಸಮನ್ವಯವನ್ನು ಮಾಡಿ ಸೂತ್ರಗಳನ್ನು ಬರೆದು ಮತ್ತು ಮಹಾಭಾರತದಲ್ಲಿ ಗೀತೆಯನ್ನು ಸಂಕಲಿಸಿ ವೇದಾಂತದರ್ಶನವನ್ನು ವ್ಯಾಸರು ಪ್ರವರ್ತಿಸಿದರು. ಮುಂದೆ ಉಪನಿಷತ್ತು, ಸೂತ್ರ ಮತ್ತು ಗೀತೆಗಳ ಈ ಪ್ರಸ್ಥಾನತ್ರಯದ ಮೇಲೆ ಭಾಷ್ಯಗಳನ್ನು ಬರೆದು ಶ್ರೀ ಶಂಕರ, ಶ್ರೀ ರಾಮಾನುಜ ಮತ್ತು ಶ್ರೀ ಮಧ್ವಾಚಾರ್ಯರು ವೇದಾಂತ ದರ್ಶನದಲ್ಲಿಯ ಮೂರು ಮತಗಳನ್ನು ಪ್ರವರ್ತಿಸಿದರು.

## ಅದ್ವೈತ ಮತ

ಶ್ರೀ ಶಂಕರಾಚಾರ್ಯರ ಅದ್ವೈತಮತದಲ್ಲಿ ದೇಹಾತಿರಿಕ್ತನಾದ ಸಂಸಾರಿ ಜೀವಾತ್ಮನಿರುವನು. ಆದರೆ ಅವನೂ ಕೂಡ ಅವಿದ್ಯೆಯಿಂದ ಬ್ರಹ್ಮನಲ್ಲಿ ಕಲ್ಪಿತನು. ಬ್ರಹ್ಮವೊಂದೇ ಪಾರಮಾರ್ಥಿಕ ಸತ್ಯವು. ಈ ಬ್ರಹ್ಮನು ಅನಾದಿಯಾದ ಭಾವರೂಪ ಅಜ್ಞಾನದಿಂದ ಆಚ್ಛಾದಿತನಾಗಿದ್ದು ಜೀವ ಜಗತ್ತು ಮತ್ತು ಸಗುಣ ಬ್ರಹ್ಮರೂಪದಿಂದ ತೋರುವನು. ಈ ಮೂರೂ ವ್ಯಾವಹಾರಿಕ ಸತ್ಯಮಾತ್ರ. ಅಜ್ಞಾನಕ್ಕೆ ಆವರಣ ಮತ್ತು ವಿಕ್ಷೇಪ ಎಂದು ಎರಡು ವಿಧವಾದ ಶಕ್ತಿಗಳಿರುವವು. ಆವರಣ ಶಕ್ತಿಯಿಂದ ಬ್ರಹ್ಮನ ನಿಜ ಸ್ವರೂಪವು ಆಚ್ಛಾದಿತವಾಗಿರುವದು. ವಿಶೇಷ ಶಕ್ತಿಯಿಂದ ಜಗತ್ ಸೃಷ್ಟ್ಯಾದಿಗಳು ನಡೆಯುವವು. ಜೀವನು ಅವಿದ್ಯಾಸಂಬದ್ಧನಾದ್ದರಿಂದಲೇ ಸೂಕ್ಷ್ಮಶರೀರ ಮತ್ತು ಸ್ಥೂಲಶರೀರಗಳನ್ನು ಪಡೆದು ಜನ್ಮ-ಮರಣರೂಪ ಸಂಸಾರದಲ್ಲಿ ಸಿಕ್ಕಿರುವನು. ಆದುದರಿಂದ ಅವಿದ್ಯಾನಿವೃತ್ತಿಯೇ ಮೋಕ್ಷವು. ಆತ್ಮೈಕ್ಯಜ್ಞಾನದಿಂದ ಅವಿದ್ಯಾನಿವೃತ್ತಿಯಾಗುವದು. ಅದು 'ತತ್ತ್ವಮಸಿ' 'ಅಹಮ್ ಬ್ರಹ್ಮಾಸ್ಮಿ' ಇತ್ಯಾದಿ ವಾಕ್ಯಾರ್ಥದ ಶ್ರವಣ, ಮನನ, ನಿದಿಧ್ಯಾಸನಗಳಿಂದ ಆಗುವದು. ಆತ್ಮೈಕ್ಯಜ್ಞಾನದಿಂದ ಅವಿದ್ಯಾನಿವೃತ್ತಿಯಾಯಿತೆಂದರೆ ಸಂಸಾರಿಜೀವನೇ

ಉಳಿಯುವುದಿಲ್ಲ. ಅದ್ವಿತೀಯಾತ್ಮ ತತ್ತ್ವವಂತೂ ಇದ್ದೇ ಇರುವದು. ಆದುದರಿಂದ 'ಮೋಕ್ಷ'ವು ಜೀವನಿಗಾಗಲಿ, ಬ್ರಹ್ಮನಿಗಾಗಲಿ ಹೊಸದಾಗಿ ಬರುವ ದಶೆಯಲ್ಲ. ಮೊದಲಿನಿಂದಲೂ ಇದ್ದ ಆತ್ಮೈಕ್ಯದ ಅವಗಾಹನೆ. ಬ್ರಹ್ಮನು ಸಚ್ಚಿದಾನಂದ ಸ್ವರೂಪನಾದ್ದರಿಂದ ಈ ದಶೆ ಆನಂದಮಯವಾದ ದಶೆಯು.

## ವಿಶಿಷ್ಟಾದ್ವೈತ ಮತ

ಶ್ರೀ ರಾಮಾನುಜಾಚಾರ್ಯರ ವಿಶಿಷ್ಟಾದ್ವೈತ ಮತದಲ್ಲಿ ದೇಹಾತಿರಿಕ್ತರಾದ ಜ್ಞಾನಾನಂದೈಕಗುಣ ರೂಪರಾದ ಜೀವಾತ್ಮರನ್ನು ಪಾರಮಾರ್ಥಿಕವಾಗಿ ಒಪ್ಪಿಕೊಳ್ಳಲಾಗಿದೆ. ಈ ಜೀವರು ಚಿದ್ರೂಪರು. ಜಡಪ್ರಪಂಚವು ಅಚಿತ್ತು. ಈ ಚಿದಚಿತ್ತುಗಳ್ ಪರಮಾತ್ಮನ ಶರೀರಭೂತವಾದವು. ಚಿದಚಿದ್ವಿಶಿಷ್ಟನಾದ ಪರಮಾತ್ಮನೇ ಪರಮ ತತ್ತ್ವ. ಚಿದಚಿದ್ರೂಪವಾದ ಶರೀರಕ್ಕೂ ಪರಮಾತ್ಮನಿಗೂ 'ಅಪೃಥಕ್ ಸಿದ್ಧಿ' ರೂಪ ಸಂಬಂಧವುಂಟು. ಅಂದರೆ ಒಂದನ್ನು ಬಿಟ್ಟು ಇನ್ನೊಂದು ಎಂದಿಗೂ ಇರುವದಿಲ್ಲ. ಪರಮಾತ್ಮನು ಜಗತ್ತಿಗೆ ಉಪಾದಾನಕಾರಣ ಮತ್ತು ನಿಮಿತ್ತಕಾರಣನು. ನಾಮರೂಪ ವಿಭಾಗವಿಲ್ಲದ ಸೂಕ್ಷ್ಮ ಚಿದಚಿದ್ವಸ್ತುವಿಶಿಷ್ಟ ಬ್ರಹ್ಮನು ಕಾರಣ ನಾಮರೂಪ ವಿಭಕ್ತವಾದ ಸ್ಥೂಲ ಚಿದಚಿದ್ವಸ್ತು ವಿಶಿಷ್ಟ ಬ್ರಹ್ಮ ಕಾರ್ಯ. ಜೀವರು ನಿರ್ಮಲ ಜ್ಞಾನಸ್ವರೂಪರೇ ಆಗಿದ್ದರೂ ಕರ್ಮರೂಪ ಅವಿದ್ಯೆಯಿಂದ ದೇಹವನ್ನು ಪಡೆದು ದೇಹಗಳಲ್ಲಿಯೇ ಅಭಿಮಾನವುಳ್ಳವರಾಗಿ ಸುಖ-ದುಃಖಭೋಗಿಗಳಾಗಿ ಸಂಸಾರದಲ್ಲಿ ಸಿಲುಕಿಕೊಂಡಿರುವರು. ಪರಮಾತ್ಮನು ಅಂತರ್ಯಾಮಿಯಾಗಿ ನಿಯಾಮಕನಾಗಿರುವನು. ಅವನು ಎಲ್ಲ ಜೀವರಿಗೂ ಸಮಾನವಾಗಿ ಚಿತ್‌ಶಕ್ತಿ ಮತ್ತು ಪ್ರವೃತ್ತಿ ಶಕ್ತಿಗಳನ್ನು ಕೊಟ್ಟು ಒಳಗಿನಿಂದ ಅನುಮಂತೃವೆಂದು ನಿಯಾಮಕನಾಗಿರುವನು. ಜೀವರು ಆ ಶಕ್ತಿಗಳಿಂದ ಸ್ವಯಮೇವ ಪ್ರವೃತ್ತಿ ನಿವೃತ್ತಿಯಲ್ಲಿ ತೊಡಗುವರು. ಭಕ್ತಿ ಮತ್ತು ಶರಣಾಗತಿಗಳು ಮುಕ್ತಿಯ ಸಾಧನಗಳು. ಮುಕ್ತಿಯಲ್ಲಿ ಜೀವಾತ್ಮನು ಅದ್ವೈತಮತದಂತೆ ಬ್ರಹ್ಮೈಕ್ಯವನ್ನು ಪಡೆಯುವದಿಲ್ಲ ಅಥವಾ ಇನ್ನಿತರ ದರ್ಶನಗಳಲ್ಲಿಯಂತೆ ಸುಖದುಃಖಹೀನನಾಗಿ ಜಡಪ್ರಾಯನಾಗಿರುವದಿಲ್ಲ. ಆಗ ಪ್ರಾಕೃತ ದೇಹವನ್ನು ಬಿಟ್ಟು ಶುದ್ಧಸತ್ವರೂಪವಾದ ಅಪ್ರಾಕೃತ ದೇಹವನ್ನು ಪಡೆದು ಆನಂದವನ್ನನುಭವಿಸುವನು.

## ದ್ವೈತಮತ

ಶ್ರೀ ಮಧ್ವಾಚಾರ್ಯರ ದ್ವೈತಮತದಲ್ಲಿ ಜೀವರು ಪರಮಾತ್ಮನ ಪ್ರತಿಬಿಂಬರು. ಬಿಂಬರೂಪನಾದ ಪರಮಾತ್ಮನು ನಿತ್ಯನಾದ್ದರಿಂದ ಪ್ರತಿಬಿಂಬರಾದ ಜೀವರೂ ನಿತ್ಯರು; ಜ್ಞಾನಸ್ವರೂಪರು. ಆದರೆ ಅಜ್ಞಾನಾದಿ ದೋಷಯುಕ್ತರು. ಪ್ರತಿಬಿಂಬರಾದ್ದರಿಂದಲೇ ಸ್ವರೂಪ, ಸತ್ತಾ, ಪ್ರಮಿತಿಗಳಲ್ಲಿ ಪರಮಾತ್ಮನಿಗೆ ಅಧೀನರು. ಆದರೆ ಅವನಿಂದ ಅತ್ಯಂತ ಭಿನ್ನರು. ದ್ರವ್ಯ, ಕರ್ಮ, ಕಾಲ, ಸ್ವಭಾವ, ಜೀವ ಇವು ಪರಮಾತ್ಮನ ಅಧೀನವಾದವುಗಳು. ಅವನು ಸ್ವತಂತ್ರನು, ಗುಣಪೂರ್ಣನು, ದೋಷವರ್ಜಿತನು. ಸೃಷ್ಟ್ಯಾದ್ಯಷ್ಟಕರ್ತನು. ಪರಮಾತ್ಮನ ಇಚ್ಛೆಯಿಂದಲೇ ಜೀವನಿಗೆ ಸಂಸಾರ. ಸ್ವಸ್ವರೂಪವನ್ನೂ ಪರಮಾತ್ಮನ ಸ್ವರೂಪವನ್ನೂ ಆಚ್ಛಾದಿಸುವ ಅವಿದ್ಯೆಯಿಂದ ಜೀವನು ಸಂಸಾರದಲ್ಲಿ ತನ್ನ ಮತ್ತು ಪರಮಾತ್ಮನ ಜ್ಞಾನವಿಲ್ಲದಿರುವನು. ಕಾಮ್ಯ ಕರ್ಮಗಳು, ಸೂಕ್ಷ್ಮ ಶರೀರ, ಮನಸ್ಸು ಮತ್ತು ಸ್ಥೂಲಶರೀರಗಳು ಅವನಿಗೆ ಬಂಧಕಗಳಾಗಿರುವವು. ವೈರಾಗ್ಯ, ಶಮದಮಾದಿಗಳು, ಶಾಸ್ತ್ರಾಧ್ಯಯನ, ಶ್ರವಣಮನನಾದಿಗಳು, ಗುರುಭಕ್ತಿ, ಸ್ವೋತ್ತಮರಲ್ಲಿ ಭಕ್ತಿ, ಸ್ವಸಮರಲ್ಲಿ ಸ್ನೇಹ, ಸ್ವಾಧಮರಲ್ಲಿ ದಯೆ, ನಿಷ್ಕಾಮ ಕರ್ಮಾನುಷ್ಠಾನ, ನಿಷಿದ್ಧಸಂಗತ್ಯಾಗ, ತಾರತಮ್ಯ ಜ್ಞಾನ, ಪಂಚಭೇದಜ್ಞಾನ, ಅಯೋಗ್ಯನಿಂದಾ, ಪರಮಾತ್ಮಭಕ್ತಿ, ಉಪಾಸನಾ, ಸರ್ವಸಮರ್ಪಣ ಭಾವಗಳಿಂದ ಅಪರೋಕ್ಷಜ್ಞಾನವಾಗುವದು. ಇದರಿಂದ ಅತ್ಯರ್ಥಭಕ್ತಿಯುಂಟಾಗಿ ಪರಮಾತ್ಮನ ಪ್ರಸಾದವು ದೊರೆತು ಸ್ವಸ್ವರೂಪಾನಂದಾವಿರ್ಭಾವರೂಪವಾದ ಮೋಕ್ಷವು ದೊರೆಯುವದು. ಮೋಕ್ಷದಶೆಯಲ್ಲಿ ಜೀವನು ಪರಮಾತ್ಮನಿಂದ ಭಿನ್ನನಾಗಿಯೇ ಇರುವನು. ಜೀವನ ಸ್ವರೂಪಕ್ಕೆ ಉಚ್ಛಿತ್ತಿಯಿಲ್ಲ. ಮುಕ್ತದಶೆಯಲ್ಲಿಯೂ ಪರಮಾತ್ಮನ ಉಪಾಸನೆಯಲ್ಲಿ ತೊಡಗಿ ಆನಂದಾತಿಶಯವನ್ನು ಪಡೆಯುವನು. ಆಗಲೂ ಭಗವದಧೀನನಾಗಿರುವನು.

## ದೇಹಾತಿರಿಕ್ತನಾದ ಆತ್ಮ

ಹೀಗೆ ಭಾರತೀಯ ದರ್ಶನಕಾರರು ವಿವಿಧವಾಗಿ ವರ್ಣಿಸಿದ 'ಮೋಕ್ಷ' ದ ಸ್ವರೂಪ ಮತ್ತು ಉಪಾಯಗಳನ್ನು ಪರಿಶೀಲಿಸಿದರೆ ಅವರೆಲ್ಲರೂ 'ದೇಹಾತಿರಿಕ್ತನಾದ ಆತ್ಮನಿರುವನು. ಅವನು ಒಂದಿಲ್ಲೊಂದು ರೀತಿಯಿಂದ ತನ್ನ ಸ್ವರೂಪ ಮತ್ತು ಕರ್ತವ್ಯಗಳ ವಿಷಯದಲ್ಲಿ ಅಜ್ಞಾನದಲ್ಲಿರುವನು. ಆದುದರಿಂದ ಈ ದೇಹ ಮತ್ತು ಸದ್ಯದ ಪರಿಸರದಲ್ಲಿ ಅಭಿಮಾನವನ್ನು ತಾಳಿರುವನು ಮತ್ತು ರಾಗದ್ವೇಷವುಳ್ಳವನಾಗಿರುವನು.' ಎಂದು ಹೇಳಿರುವದು ಸ್ಪಷ್ಟವಾಗುವದು.

ದೇಹಾತಿರಿಕ್ತವಾದ ಆತ್ಮನನ್ನು ಅಂಗೀಕರಿಸದ ಚಾರ್ವಾಕರು 'ಯಾವಜ್ಜೀವಮ್ ಸುಖಮ್ ಜೀವೇತ್' ಎಂದು ಜೀವನದಲ್ಲಿ ಹೆಚ್ಚು ಹೆಚ್ಚು ರಾಗವನ್ನು ಉಪದೇಶಿಸುವರು. ತದ್ವಿರುದ್ಧವಾಗಿ 'ಸರ್ವಮ್ ದುಃಖಮಯಮ್' ಎಂದು ಶೂನ್ಯವಾದಿಗಳು ದ್ವೇಷವನ್ನು ಉಪದೇಶಿಸುವರು. ಆದುದರಿಂದ ನಿತ್ಯಜೀವಾತ್ಮನನ್ನು ಅಂಗೀಕರಿಸದೆ ಜನನ ಮರಣಗಳ ಪರಿಮಿತಕಾಲಾವಧಿಯ ದೃಷ್ಟಿಯಿಂದ ಮಾತ್ರ ಜೀವನದ ಮೌಲ್ಯವನ್ನು ನಿರ್ಧರಿಸಲು ಪ್ರಯತ್ನಿಸಿದರೆ ಅದು ರಾಗದಲ್ಲಿಯಾಗಲಿ ದ್ವೇಷದಲ್ಲಿಯಾಗಲಿ ಪರ್ಯವಸಾನವಾಗುವದು.

ಆದುದರಿಂದ ನಿತ್ಯಜೀವಾತ್ಮನನ್ನು ಅಂಗೀಕರಿಸಿ ಅವನು 'ಅಮೃತತ್ವ' ವನ್ನೂ ಅಭಯವನ್ನೂ ಪಡೆಯುವದು ಪುರುಷಾರ್ಥವೆಂದು ಸ್ವೀಕರಿಸಿದರೆ ಈ ದೇಹ ಮತ್ತು ಸದ್ಯದ ಪರಿಸರಗಳ ಮಹತ್ವವು ಕಡಿಮೆಯಾಗಿ ರಾಗವಾಗಲಿ ದ್ವೇಷವಾಗಲಿ ಇಲ್ಲದಂತಾಗುವದು. ಮೃತ್ಯು ಭಯವು ಇಲ್ಲದಂತಾಗುವುದು; ಮೃತ್ಯುಜಯವಾಗುವದು.

ಎಲ್ಲ ದಾರ್ಶನಿಕರ ಈ ಸ್ಥೂಲಭೂಮಿಕೆಯನ್ನು ತಿಳಿದುಕೊಂಡ ಮೇಲೆ ಕೇವಲ ತರ್ಕದಿಂದ ಪದಾರ್ಥಜ್ಞಾನವನ್ನು ಮಾಡಿಕೊಂಡರೆ ಮುಕ್ತಿ, ಅಜ್ಞಾನವನ್ನು ಕಳೆದುಕೊಂಡರೆ ಮುಕ್ತಿ, ಪರಮಾತ್ಮ ಜ್ಞಾನದಿಂದ ಮುಕ್ತಿ, ಪರಮಾತ್ಮ ಪ್ರಸಾದದಿಂದ ಮುಕ್ತಿ ಎಂಬ ಹೆಜ್ಜೆಗಳು ಸುಲಭವಾಗಿ ಅರ್ಥವಾಗುವವು. ರಾಗ್ವದ್ವೇಷಗಳನ್ನು ಬಿಟ್ಟು ನಿರ್ವೈರ ವೃತ್ತಿಯಿಂದ ಜೀವನ ಸಾಗಿಸಲು ನೆರವಾಗುವವು.

ಮತ್ಕರ್ಮಕೃತ್ ಮತ್ಪರಮಃ ಮದ್ಭಕ್ತಃ
ಸಂಗವರ್ಜಿತಃ।
ನಿರ್ವೈರಃ ಸರ್ವಭೂತೇಷು ಯಃ ಸ
ಮಾಮ್ ಏತಿ ಪಾಂಡವ॥

(ಭ. ಗೀ.)

ಎಂಬಲ್ಲಿ ಮೋಕ್ಷವೆಂಬ ಪುರುಷಾರ್ಥದ ಎಲ್ಲ ಅಂಶಗಳೂ ಅಡಕವಾಗಿವೆ.



ಲೇಖಕರು : **ದ. ಬಾ. ಕುಲಕರ್ಣಿ,**
ಧಾರವಾಡ

# ಧೋಂಡಪ್ಪ ಧಣಿ



ಧೋಂಡಪ್ಪ ಧಣಿ ಏರು ಜವ್ವನದಲ್ಲಿ ಮನ್ಮಥನಂತೆ ಮೆರೆದಾಡಿದವ; ಭೀಮನಂತೆ ಶಕ್ತಿ ಸಂಪನ್ನ; ಧರ್ಮರಾಯನಂತೆ ಕೊಡುಗೈ ದೊರೆ. ಜೀವನದಲ್ಲಿ ನಿಯಮಿತ ರೀತಿಯಲ್ಲಿ ಸಾಗಿದ ಅವನ ಹೆಂಡತಿ ಗಂಗವ್ವ ಅವನಿಗೆ ತಕ್ಕ ಜೊತೆ. ಆದರೆ ಗಂಗವ್ವ ಕಾಯಿಲೆ ಬಿದ್ದಾಗ ಅವಳ ಅಕ್ಕನಾಗಿ ಬಂದ ಮುರಿಗೆವ್ವ ಅವರ ಜೀವನದಲ್ಲಿಯೂ ಪ್ರವೇಶಿಸಿದಳು. ಹಳ್ಳಿಗಾಡಿನ ದೇಸಗತಿಯ ಒಂದು ಹೃದಯಂಗಮವಾದ ಚಿತ್ರವನ್ನು ಈ ಕಥೆಯಲ್ಲಿ ಕಾಣಬಹುದು.

ಎರಡು ಕತ್ತೆಗಳು. ಕಾಳಿನ ಒಜ್ಜೆಯನ್ನು ಹೊತ್ತು ತಿಣಕುತ್ತಸಾಗಿವೆ. ಅವುಗಳ ಹಿಂದಿನಿಂದ ನೀಲಕಂಠ ಒಂದು ಹಸೀ ಹುಣಸೆಯ ಜಬರು ಹಿಡಿದು ಅವುಗಳನ್ನು ಸಾಗಿಸಿಕೊಂಡು ಹೊರಟಿದ್ದಾನೆ. ಊರ ಅಗಸಿಗೆ ಬರುವಾಗ ಹೊರಿ ಹೊತ್ತ ಕತ್ತೆಗಳಿಂದ ಬಸವಳಿದ ನೀಲಕಂಠ ಒಂದು ಕ್ಷಣ ನಿಂತ. ಪಾವುಡದ ಚುಂಗು ಎತ್ತಿ ಮುಖ ಒರಸಿಕೊಂಡ. ಬಂಕಣದಿಂದ ಕನ್ನಡಿಯಿದ್ದ ಸುಣ್ಣದ ಕಾಯಿ ತೆಗೆದು ತನ್ನ ಮುಖ ನೋಡಿ ಪಾವುಡ ತಿದ್ದಿಕೊಂಡ. ತಂಬಾಕುತಿಂದ ಬಾಯನ್ನು ಅಗಲಿಸಿ ಕೆಂಪಡರಿದ ಹಲ್ಲು ಸಾಲುಗಳನ್ನು ಜೋಡಿಸಿ ನೋಡಿಕೊಂಡ. ಖೇಕರಿಸಿ, ಗ್ಯಾರಿ ಉಗುಳಿ ಮುಂದೆ ನೋಡಿದ. ಕತ್ತೆಗಳು ಊರ ಅಗಸಿಯ ಭೋರ್ಗಲ್ಲ ಬದಿಗೆ ಬಂದು ಸುಂಕದ ಕಟ್ಟೆಗೆ ಗಾಡಿಗಳು ಬಂದು ನಿಲ್ಲುವಂತೆ ನಿಂತುಬಿಟ್ಟವೆ. "ಹೇ-ಹೂ" ಎಂದು ಅವುಗಳನ್ನು ಮುನ್ನಡೆಸಿಕೊಂಡು ಪಾಳು ಬಿದ್ದ ದೇಸಾಯರ ವಾಡೆಯ ಬಾಗಿಲಿಗೆ ಬಂದುನಿಂತ. ಸುತ್ತಲ ಗೋಡೆ ಬಿದ್ದು ಬಾಗಿಲು ಮಾತ್ರ ನಿಂತಿದೆ. ಆ ಮಹಾದ್ವಾರವನ್ನು-ಅದರ ಹೊಸತಿಲನ್ನು ದಾಟಲಾರದೆ ಮನೆಯ ಜನ, ಊರದೈವ ದೇಸಾಯರ ಗೃಹಪ್ರವೇಶಕ್ಕೆ ಬಿದ್ದ ಆವಾರದ ಗೋಡೆಯನ್ನೇ ತುಳಿದು, ನೆಲಸಮ ಮಾಡಿ ದಾರಿ ಮಾಡಿಕೊಂಡಿದ್ದಾರೆ.

ನೀಲಕಂಠ ಸುತ್ತಲ ಆವಾರವನ್ನು ಕಂಡವ. ಆ ಮಹಾದ್ವಾರದ ಮಧ್ಯದ ದಿಡ್ಡಿ ಬಾಗಿಲಿನಿಂದ ಓಡಿಯಾಡಿದವ. ಆ ದಿನಗಳನ್ನು ನೆನೆದು, ಮುನ್ನಡೆಯದೆ ನಿಂತುಬಿಟ್ಟ. ಕತ್ತೆಗಳು ಒಳಸೇರಿ, ದೇಸಾಯರ ಬಯಲ ಚಾವಡಿಯ ಜಗಲಿಗೆ ಬಂದು ನಿಂತುಕೊಂಡಿವೆ.

ದೇಸಾಯರ ಮಗ ತಿರಕಪ್ಪ ಮಧ್ಯಾಹ್ನದ ಊಟ ತೀರಿಸಿ ಪಡಸಾಲೆಯ ತುದಿಗಟ್ಟೆಯವರೆಗೆ ಬಂದು ನಿಂತು, ಈ ಹೊರಿಹೊತ್ತ ಕತ್ತೆಗಳನ್ನು ನೋಡಿದ. ಯಾರ ಕತ್ತೆಗಳಿವು ? ಇಲ್ಲೇಕೆ ಬಂದವು—ಎಂಬ ಅಚ್ಚರಿಯಿಂದ ಅಂಗಳಕ್ಕಿಳಿದ. ಅಗಸಿಯ ಬಾಗಿಲೆದುರು ನಿಂತ ನೀಲಕಂಠನನ್ನು ಕಂಡು, "ಯಾರು—ಯಾವೂರು ?" ಎಂದ ಕೇಳಿದ. ನೀಲಕಂಠ ಗುರುತು ಹಿಡಿದು.

"ಯಾಕ ಯಣ್ಣಾ ನನ್ನ ಗುರ್ತ ಹತ್ತಲಿಲ್ಲೇನ"? ಎನ್ನುತ್ತ ಮುಂದೆ ಬಂದು ಬಾಗಿ ನಮಸ್ಕರಿಸಿದ.

ತಿರಕಪ್ಪ ಸಾವರಿಸಿಕೊಂಡು, ಹಿಂದೆ ಸರಿದು ಮುಖವನ್ನು ಹುಳು-ಹುಳು ನೋಡಿ, ಗುರುತ ಸಿಕ್ಕದೆ ಮತ್ತೆ "ಯಾರು ? ಯಾವೂರು ?" ಎಂದ.

"ನಾ ನಿನ್ನ ತಮ್ಮ ನೀಲ್ಯಾ. ಇಪ್ಪತ್ತು ವರ್ಸಾತು ನೋಡಿ. ನೀ ಮರೀಚೌದು ಯಣ್ಣಾ; ನಾನು, ನಮ್ಮ ಹಿರ್‍ಯಾಳು ಈ ಮನೀ ಅನ್ನಾ ಉಂಡವರು ಮರತೇವ ? ಮುದುಕಿ ಹೋಗಿ ಬಾ ಅಂದ್ಳು—ಬಂದ್ನಿ"

ತಿರಕಪ್ಪ ತಲೆ ಕೊಡವಿ ನೋಡಿದ. "ನೀಲಕಂಠ" ಎಂದ. ನೀಲಕಂಠ ಕೈ ಹೊಸೆಯುತ್ತ ನಿಂತಿದ್ದ. "ಆ ಕತ್ತೆಗಳಾರವು— ನಿನ್ನವೇನು ?" ಎಂದ.

"ಹೌದು; ನಾನs ಅsಸ ಕಾಳ ತಂದ್ನಿ. ಮುದಕಿ ಹೋಗಿ ಬಾ ಅಂದ್ಳು." ತಿರಕಪ್ಪ ಮುಖ ಕಿವುಚಿದ. ಆದರೂ ಸಾವರಿಸಿಕೊಂಡು,

"ಬಾ, ನೀಲಕಂಠ, ಒಳಗ ನಡಿ. ಮುರಿಗೆವ್ವ ಹ್ಯಾಂಗ ಇದ್ದಾಳ ? ಹೂ; ಬಾ; ನಡೀ ಒಳಗ." ಎಂದು ಯಾಂತ್ರಿಕವಾಗಿ ನುಡಿದ.

"ಧಣಿ ಪುಣ್ಯಾ ಉಣತೇವು: ನೆಟ್ಟಗದೇವು ಯಣ್ಣಾ. ಧಣಿ ಎಲ್ಲಿ ಅದಾನು ? ಹ್ಯಾಂಗದಾನು ?"

"ಹ್ಯಾಂಗೇನು? ನೆಟ್ಟಗಿದ್ದಾನ. ಹೂಂ—ನಡೀ. ಹಿಂದ ಬಾ. ಮೊದಲ ಊಟಾಮಾಡು. ಆಮೇಲೆ ಮುಂದಿನ ಮಾತು."

"ಕತ್ತೀ ಹೊರಿ ಇಳಸತೀನಿ. ಒಂದೀಟ ಕುಂದ್ರತೇನಿ. ಕೈ-ಕಾಲ ಮುಕ ತೊಳದ ಧಣೀನ್ನ ನೋಡತೇನಿ. ಆಮ್ಯಾಗ ಉಣ್ಣೂದು ಐತೇಐತಿ."

"ಬ್ಯಾಡ ನೀಲಕಂಠ; ಕತ್ತೀ ಹೊರೀ ಇಳಸಬ್ಯಾಡ. ಅಪ್ಪಗ ಹುಚ್ಚೂ ಮಬ್ಬೂ ಕೂಡೇದ; ಅವನ್ನೇನ ನೋಡಬ್ಯಾಡ. ಹಿಂದ ನಡಿ; ಕಾಲ ತೊಳದು ಊಟಾ ಮಾಡು. ಕತ್ತಿಗೆ ಮೇವು ಹಾಕಸತೀನಿ. ಉಂಡಬಂದ ಹೊಡಕೊಂಡು ಹೋಗು. ಕಾಳ ಇಳಿಸಿದಿ ಅಂದ್ರ, ನಾ ಹೋಗತೀನಿ, ನೀನsಮನ್ಯಾಗ ಇದ್ದಬಿಡು."

"ಯಪ್ಪಾ, ಹಾಂಗನ್ನ ಬ್ಯಾಡ, ನಿನ್ನ ಕಾಲ ಬೀಳತೇನಿ. ಈ ಮನೀ ನೆಳ್ಳಾಗ ಬೆಳದೇನಿ. ಇಲ್ಲೀ ರೊಟ್ಟೀತಿಂದ ದೊಡ್ಡವ ಆಗೇನಿ. ನೀ ಮನೀ ಮಗ; ನಾ ಬಿಟ್ಟೀ ಮಗ. ಹಾಂಗs ಹೊರಗಟ್ಟಬ್ಯಾಡ. ಹಿರೇ ಅಣ್ಣಾ ನೀ ತಂದೀ ಸಮಾನ. ನಿನ್ನ ಕಾಲ ಬೀಳತೇನಿ. ನನ್ನ ಮೈ ಚರ್ಮ ಸುಲಿದು ಅಟ್ಟೀ ಮಾಡಿ ನೀ ಕಾಲಾಗ ಮೆಟ್ಟಿದರೂ ನಿನ್ನ ಮನೀ ಉಪಕಾರ ತೀರೋದಿಲ್ಲ."

ನೀಲಕಂಠ ತಿರಕಪ್ಪನ ಕಾಲು ಹಿಡಿದು, ಅಲ್ಲೇ ಬಿದ್ದು ಹೊರಳಾಡಿ ಅಳತೊಡಗಿದ. ತಿರಕಪ್ಪನ ಕಣ್ಣಲ್ಲೂ ನೀರೂರಿತು. ಅವನೇ ಬಾಗಿ, ನೀಲಕಂಠ ನನ್ನೆಬ್ಬಿಸಿ,

"ಏಳು ನೀಲಕಂಠ, ನಿನಗ ತಿಳಿದ್ಹಂಗ ಮಾಡು ಮೊದಲು ಏಳು." ಎಂದ.

೨

ಧೋಂಡಪ್ಪ ಧಣಿ ತನ್ನ ಏರು ಜವ್ವನದಲ್ಲಿ ಮನ್ಮಥನಂತೆ ಮೆರೆದಾಡಿದವ; ಭೀಮನಂತೆ ಶಕ್ತಿಸಂಪನ್ನ; ಧರ್ಮರಾಯನಂತೆ ಕೊಡುಗೈ ದೊರೆ. ಕುದುರೆ ಏರಿ ಬೆಳಗ್ಗೆ ಹೊರಟನೆಂದರೆ ತನ್ನ ದೂರದ ಹೊಲಗಳನ್ನೆಲ್ಲ ಸುತ್ತು ಹಾಕಿ, ಬೆಳೆ ನೋಡಿಕೊಂಡು, ನಡೆದ ಕಾಯ-ಕಷ್ಟಗುರುತಿಸಿಕೊಂಡು, ಹಾಗೇ ಓಟಬಿಟ್ಟು ಬೆಟ್ಟದ ತಾಯಮ್ಮನ ದರ್ಶನ ಪಡೆದು ವಾಡೆಗೆ ಬರುವಾಗ ಹೊತ್ತು ನಡುನೆತ್ತಿಗೆ ಬಂದಿರುವುದು. ಕುದುರೆ ಹಣ್ಣುಗಾಯಿ ನೀರುಗಾಯಿ ಆಗಿರಬೇಕು. ಧಣಿ ಬಂದು ಬಿಚ್ಚುಪಡಸಾಲೆಯಲ್ಲಿ ಡೊಳ್ಳಾರಿಯ ಮೇಲೆ ಕಾಲಗಲಿಸಿ ಕೂತು ಕಾಲುಗಂಟೆ ವಿಶ್ರಮಿಸುವ. ಮತ್ತೆ ಎದ್ದವನೇ ಎರಡು ಹಂಡೆ ನೀರು ಹುಯ್ದುಕೊಂಡು ಮನೆಯ ದೇವರಿಗೆ ಕೈ ಮುಗಿದು, ಊರ ಹನುಮಂತದೇವರಿಗೆ ಊದುಬತ್ತಿಯೊಡನೆ ಹೋಗಿ, ಅರ್ಚನೆ ಸಲ್ಲಿಸಿ ಬರುವ. ಬಂಗಾರದ ಬರಿಮೈ ಬಿಸಿಲ ಬೆಳಕಿನಲ್ಲಿ ಹೊಳೆಯುವದನ್ನು ಊರ ನರ-ನಾರಿಯರು ಮರೆಗೆ ನಿಂತು ನೋಡುವರು. ಹಿಂದೆ-ಹಿಂದೆ ಪುರೋಹಿತ ಓಡುತ್ತಬರುವ ಪೂಜಾರಿ ನಡೆಗುತ್ತ ಪ್ರಸಾದ ಕೊಟ್ಟನೆಂದರೆ ಒಂದು ಹೂವನ್ನು ಕಿವಿಗೆ ಸಿಕ್ಕಿಸಿಕೊಂಡು ಮನೆ ಸೇರುವ ಪಡಸಾಲೆಯಲ್ಲಿ ಕಾದು ನಿಂತ ದಾರಿಹೋಕ ಅತಿಥಿಗಳು, ನಿತ್ಯಾವಳಿ ಬ್ರಾಹ್ಮಣರು, ಆಶ್ರಯಕ್ಕೆ ಸೇರಿದ ಬಡಪಾಯಿಗಳು, ಪುರೋಹಿತ, ಕಾರಭಾರಿಕ್ಕೆ ಧಣಿಯನ್ನು ಹಿಂಬಾಲಿಸುವರು. ಯಥೇಷ್ಟವಾದ ಊಟ ನಡೆದು ಹೊರ ಬರಬೇಕಾದರೆ ಒಂದು ಗಂಟೆ. ಡೊಳ್ಳಾರಿಯ ಮೇಲೆ ಕೂತು ತಾಂಬೂಲ ಸಮಾರಂಭ ನಡೆಸುವ. ಆಗಲೆ ನೆರೆದವರೊಡನೆ ಕುಶಲ ಸಂಭಾಷಣೆ ನಡೆಯಬೇಕು. ಸಹಾಯಕ್ಕೆ ಕೈಯೊಡ್ಡಿದವರಿಗೆ ಉಚಿತ ಸಂಭಾವನೆ ಕೊಡಲು ಕಾರಭಾರಿಗೆ ಆಜ್ಞೆಯಾಗಬೇಕು. ಅನುಚಿತ ಅನುಸಂಧಾನದ ಮಾತುಬಂದರೆ ಧಣಿ ಗುಡುಗು ಹಾಕುತ್ತಾನೆ. ಗಾಬರಿಸಿ ಅರ್ಥಜನ ಏಳುತ್ತಾರೆ. ಮತ್ತೆ ಸುತ್ತುಬಳಸಿ ದೇಶಕಾಲಗಳ ಜೊಳ್ಳುಮಾತುಗಳ ಹರಟೆ ಎದ್ದಿತೆಂದರೆ ಧಣಿ "ಛಿ—ಥೂ" ಹಾಕಿ "ಹೊರಡಿರಿಲ್ಲಿಂದ—" ಎಂದು ಎಲ್ಲರನ್ನು ಚದರಿಸಬೇಕು. ಅನಂತರ ಆನೆಯ ದೇಹ ಡೊಳ್ಳಾರಿಯ ತುಂಬ ಅಡ್ಡಾಗಬೇಕು. ತೈನಾತಿ ಆಳು ಕಲ್ಲಪ್ಪ ತೆರೆಬಿಟ್ಟು, ಬೆಳಕು ಕುಗ್ಗಿಸಿ ಕಾಲಿಗೆರಡು, ಮಗ್ಗುಲಿಗೆರಡು ದಿಂಬುತಂದು ಇಡಬೇಕು. ತನ್ನ ಮೈಮೇಲಿನ ವಲ್ಲಿಯನ್ನೇ ಹೊದ್ದ ಧಣಿಯ ವಾಮಕುಕ್ಷಿ ಗಾಢನಿದ್ರೆಯಲ್ಲಿಯೇ ಪರ್ಯವಸಾನ ಹೊಂದುತ್ತದೆ. ಆಗ ಧಣಿಯ ಗೊರಕೆಯದೊಂದೇ ಸದ್ದು. ಗುಬ್ಬಿಯ ಹಾರಾಟದ ಸದ್ದೂ ಆಗದಂತೆ ಕಲ್ಲಪ್ಪನ ಅಜ್ಞಗಾವಲು! ಕಟ್ಟೆಯ ತುದಿಗೆ ಕೆಂಗಣ್ಣು ತೆರೆದು, ತೆನ್ನಾಲಿಗೆ ಜೋಲಿಸಿ ಬಿದ್ದುಕೊಂಡ ನಾಯಿಯನ್ನು ಕಂಡು, ಒಳಅಂಗಳಕ್ಕೆ ಕಾಲಿಟ್ಟವರು ಯಾರೂ ಮುಂದೆ ಹೆಜ್ಜೆಯಿಡಲಾರರು.

ಹೊತ್ತು ಕಂತುತ್ತಿರುವಾಗ ಧಣಿಯ ಸಭೆ ಮಹಾದ್ವಾರದ ಹೊರಗಿನ ಜಗಲಿಯ ಮೇಲೆ ನಡೆಯುತ್ತದೆ. ಊರ ಹಿರಿಯರು ಒಬ್ಬೊಬ್ಬರಾಗಿ ಬಂದು, ಮುಜುರೆ ಸಲ್ಲಿಸಿ ಉಚಿತವಾದ ಸ್ಥಳದಲ್ಲಿ ಪವಡಿಸುತ್ತಾರೆ. ಹಿರಿಯಕಮತಿಗ ಧಣಿಯ ಕಾಲಬದಿಗೆ ಕುಳಿತು ಮಳೆ-ಬೆಳೆಯ ವರದಿ ಒಪ್ಪಿಸುತ್ತಾನೆ. ನೆರೆದ ದೈವ ಒಂದೊಂದು ಸಲಹೆ-ಸೂಚನೆ ಮಾಡುತ್ತದೆ. ಅದೇ ಸಮಯ ಧಣಿಯ ಹದಿನಾರೆತ್ತುಗಳು ಹೊಲದಿಂದ ಸಾಲುಗಟ್ಟಿಬರುತ್ತವೆ. ಹಿಂದಿನಿಂದ ಆಕಳಹಿಂಡು; ಚಿನ್ನಾಟದ ಕರು-ಹೋರಿಗಳು! ಧಣಿ ಎದ್ದುಬಂದು ಒಂದೊಂದನ್ನೂ ಸ್ವಾಗತಿಸುವಂತೆ ಮುಟ್ಟಿ ಮುಟ್ಟಿ ನೋಡಿ, ಮೈಸವರಿ, ಕಿವಿಜಗ್ಗಿ, ಬಾಲತಿರುವಿ ನೋಡಿ ನೋಡಿ ಬಿಡುತ್ತಾನೆ. ಕಮತಿಗರು ಅವನ್ನು ಎಳೆದುಕೊಂಡೇ ಕೊಟ್ಟಿಗೆಯ ಮನೆಗೆ ಸಾಗಿಸಬೇಕು. ಧಣಿ ಮನದಲ್ಲೇ ತನ್ನ ಸಂಪತ್ತನ್ನು ಎಣಿಸಿ—ಎಣಿಸಿ ನೋಡಿ ಮತ್ತೆ ಜಗಲಿಗೆ ಬರುವ. ದೇಸಗತಿಯ ಸುಧಾರಣೆಯನ್ನು ಕುರಿತು ಗುರುಲಿಂಗಯ್ಯ ಮಾಸ್ತರರು ನಿತ್ಯದ ಪುರಾಣ ಬಿಚ್ಚುತ್ತಾರೆ. ಧಣಿ ಒಮ್ಮೆ ಹಾಸ್ಯದಿಂದ ತನ್ನ ಸಮ್ಮತಿ ಸೂಚಿಸಿದರೆ ಮತ್ತೊಮ್ಮೆ ಅಪಹಾಸ್ಯದಿಂದ ಮಾಸ್ತರರ ಬಾಯಿ ಕಟ್ಟುತ್ತಾನೆ. ಎದುರಿನ ಬಯಲಲ್ಲೇ ಕಲ್ಲು-ಗುಂಡು ಎತ್ತುವ ಸ್ಪರ್ಧೆ ನಡೆದಿರುತ್ತದೆ. ಧಣಿ ಇಲ್ಲಿ ಕೂತು ಮಾತುಕೇಳುವವನಾದರೂ ದೃಷ್ಟಿ ಅತ್ತಕಡೆಗೇ ಇರುತ್ತದೆ. ಬಿಮ್ಮನೆಕುಳಿತ ಧಣಿ ಒಮ್ಮೆಲೆ ಎದ್ದುಹೋಗಿ ಸ್ಪರ್ಧಾಳುಗಳ ಮುಂದೆ ನಿಂತು "ಹಾಗಲ್ಲ ಹರಾಮಿ ಮಕ್ಕಳೇ ಹೀಗೆ"ಎಂದು ಒಂದು ಗುಂಡನ್ನೆತ್ತಿ ಹೆಗಲ ಮೇಲಿಂದ ಉರುಳಿಸುತ್ತಾನೆ. ಅಲ್ಲಿನ ಒಂದು 'ಇರಸ'ನ್ನು ಕೋಲನೆತ್ತಿದಂತೆ ಎತ್ತಿಬೀಸುತ್ತಾನೆ. ಜಗಲಿಯ ಸಭಾಸದಸ್ಯರು ಬಂದು ಕೈಕಟ್ಟಿ ನಿಂತಿರುತ್ತಾರೆ. ಧಣಿಯ ಕೈಚಳಕ, ಶಕ್ತಿಪ್ರದರ್ಶನ ಅವರಿಗೆ ನಿತ್ಯಕೌತುಕ.

ಜಟ್ಟಿಹನುಮ ದಿನವೂ ಜೋಡುಗಾಯಿ ಒಡೆದು ಪನಿವಾರಮಾಡಿ,ನೆರೆದವರಿಗೆಲ್ಲ ಹಂಚುವಾಗ ಮಬ್ಬುಗತ್ತಲೆ. ಜನ ಚದುರುವಮುನ್ನ ತೈನಾತಿ ಕಲ್ಲಪ್ಪ ಜೋಡುಕಂದೀಲ ಹಿಡಿದು ಧಣಿಯ ಮುಂದೆ ನಿಂತಿರುತಾನೆ. ಧಣಿ ಆನೆಯ ನಡಿಗೆಯಲ್ಲಿ ಅಗಸಿಬಾಗಿಲು ದಾಟಿ ಮನೆಯ ಜಗಲಿ ಏರುತ್ತಾನೆ.

ಇದು ದೇಸಗತಿ ಧೋಂಡಪ್ಪ ಧಣಿಯ ನಿತ್ಯಕ್ರಮ ಮಳೆ ಇರಲಿ; ಚಳಿ ಇರಲಿ—ಇದೆಲ್ಲ ದಿನವೂ ನಡೆಯುವಂಥದೇ.

೩

ಗರತಿ ಗಂಗವ್ವ ದೇಸಾಯಿತಿ ಬೆಳಿಗ್ಗೆ ಯಾವಾಗ ಏಳುವಳೋ ಯಾರೂ ಕಂಡರಿಯರು. ಎದ್ದು ನೋಡುವ ಮೊದಲಿಗೆ ಅಂಗಳ ಗುಡಿಸಿದ್ದನ್ನು ತುಳಸಿ ಕಟ್ಟೆಯ ಮುಂದೆ ಸಾರಣೆ-ಕಾರಣೆಯಾದದ್ದನ್ನು ಕಾಣುತ್ತಾನೆ. ಒಳಗೆ ದೇವರಮನೆ ಗುಡಿಸಿ, ಉಪಕರಣ ಬೆಳಗಿ, ದೇವರ ಮುಂದೆ ದೀಪ ಬೆಳಗುತ್ತಿರುತ್ತದೆ. ಅವಳು ಗೋಶಾಲೆಗೆ ಬಂದು, ಮೊದಲು ಕಪಿಲೆಯ ಕರು ಬಿಟ್ಟು, ಎರಡು ತಂಬಿಗೆ ಹಾಲು

ಕರೆದು ನೊರೆಬಸಿಯುವ ತಂಬಿಗೆಗಳನ್ನು ಒಳಗೆ ತರುವುದಕ್ಕೂ ದೇಸಾಯಿ ಧಣಿ ಎದ್ದು ಪ್ರಾತರ್ವಿಧಿ ಮುಗಿಸಿ ದೇವರಿಗೆ ಕೈಮುಗಿಯಲು ಬರುವುದಕ್ಕೂ ಚಾಟಿಯಾಗುತ್ತದೆ. ಮಡದಿಯ ಕೈಯ ನೊರೆ ಹಾಲನ್ನು ತಂಬಿಗೆಯನ್ನೆತ್ತೇ ಧಣಿ ಸೇವಿಸುತ್ತಾನೆ. ಒಂದೇ ತಂಬಿಗೆ ಅವನು ಸೇವಿಸುವುದು. ಆದರೆ ಗಂಗವ್ವ ತಂದಿರುವುದು ಎರಡುತಂಬಿಗೆ. ಬಾಯಿಗೂ ಮೀಸೆಗೂ ಹತ್ತಿದ ನೊರೆಯನ್ನು ಮಡದಿಯ ಸೆರಗಿಗೆ ಒರಸಿದವನೇ ಧಣಿ ಅಂಗಳಕ್ಕೆ ಹೋಗುವುದು. ಅಲ್ಲಿ ಲಾಯದಿಂದ ತಂದ ಕುದುರೆಗೆ ಜೀನು ಹಾಕಿ ತ್ಯೆನಾತಿ ಕಲ್ಲಪ್ಪ ಹಿಡಿದು ನಿಂತಿರುತ್ತಾನೆ. ಧಣಿ ಹಾರಿ ಕುದುರೆಯೇರಿ ಹೊರಡುವುದನ್ನು ಗಂಗವ್ವ ನೋಡುತ್ತಾಳೆ. ಅಗಸಿ ದಾಟಿ ವಾಡೆ ಸುತ್ತಿಬರುವ ಸವಾರಿಯನ್ನು ಹಿತ್ತಲದಲ್ಲಿ ನಿಂತು ಕಾಯ್ದು, ಉದಿಸುವ ಸೂರ್ಯನ ಹೊಂಬೆಳಕಿನಲ್ಲಿ ಮರೆಯಾಗುವವರೆಗೂ ನೋಡುತ್ತಿದ್ದು ಮೆಲ್ಲನೆ ಜಡವಾದ ಕಾಲಿನಿಂದ ಒಳಕ್ಕೆ ಬರುತ್ತಾಳೆ. ಹಾಲಿಗಾಗಿ ಊರ ಮಕ್ಕಳ ನೆರವಿ ನೆರೆದಿರುತ್ತದೆ. ನಾಲ್ವರು ಕೆಲಸಗಿತ್ತಿಯರು ಹಾಲು ಕರೆದುಕರೆದು ಒಡತಿಯ ಎದುರಿನ ಪಾತ್ರೆಗೆ ಸುರುವುತ್ತಾರೆ. ಊರ ಮಕ್ಕಳು ಸಾಲುಗಟ್ಟಿ ನಿಂತು ಒಂದೊಂದು-ಎರಡೆರಡು ಪಾವು ಹಾಲು ಪಡೆದು ಹೋಗುತ್ತಾರೆ. ಮತ್ತವಳು ಗೋ-ಶಾಲೆಯ ಉಸ್ತುವಾರಿ ನೋಡಿಕೊಂಡು ಒಳಬಂದು ಅಂದಿನ ಅಡಿಗೆಗೆ ಪಡಿ ಅಳೆದುಕೊಟ್ಟು, ಇಂಥದು ಆಗಬೇಕೆಂದು ಹೇಳಿ, ಅಲ್ಲೇ ನಿಂತು ಮೊಸರು ಕಡೆಯುತ್ತ ಅಡಿಗೆಯ ಮೇಲ್ವಿಚಾರಣೆ ಮಾಡುತ್ತಾಳೆ. ಪುರೋಹಿತರು ಬರುವಾಗ ಅವರ ಪೂಜೆಗೆ ಎಲ್ಲಾ ಸಿದ್ಧವಾಗಿರುತ್ತದೆ. ಅವರ ಪೂಜೆ ನಡೆದಾಗ ಇವಳು ಮೈತೊಳೆದು ಮಡಿಯುಟ್ಟು ಬಂದು ಅಡಿಗೆಗೆ ನೆರವಾಗುತ್ತಾಳೆ. ನೈವೇದ್ಯಕ್ಕೆ ಅಣಿಮಾಡುತ್ತಾಳೆ. ಮಧ್ಯೆ-ಮಧ್ಯೆ ಹೊರಬಂದು ಕಾಣಲುಬಂದ ಮಹಿಳೆಯರ ಬೇಕು-ಬೇಡಗಳನ್ನು ನಿಂತೇ ವಿಚಾರಿಸುತ್ತಾಳೆ. ಯಾರಿಗೋ ಅಕ್ಕಿ, ಯಾರಿಗೋ ಹಿಟ್ಟು. ಬೆಲ್ಲ-ಪಲ್ಯ ಸರಬರಾಯಿಯಾಗುತ್ತದೆ. ಯಾರಾದರೂ ಕಾಯಿಲೆಯ ಸುದ್ದಿ ತರುತ್ತಾರೆ. ನೀರಿನ ನಾರಾಯಣನಿಂದ ಮದ್ದು ತೆಗೆಸಿಕೊಡುತ್ತಾಳೆ; ಪಥ್ಯ ಹೇಳಿ ಕಳಿಸುತ್ತಾಳೆ. ಬಂದವರು ಬಂದಾಗೊಮ್ಮೆ, ಹೊರಡುವಾಗೊಮ್ಮೆ ನೆಲಮುಟ್ಟಿ ನಮಿಸಿ, ಹಡೆದವ್ವ ಎಂದು ಕರೆದು ಹರಸಿ, ಹಾರೈಸಿ ಹೋಗುತ್ತಾರೆ. ಮತ್ತವಳು ಹಿತ್ತಲಕಡೆ ಬಂದು ಪತಿಯ ಮಾರ್ಗಪ್ರತೀಕ್ಷೆ ಮಾಡುವಾಗ ಸಮಯಕ್ಕೆ ಧೂಳಿನಿಂದ ಕುದುರೆಯ ಖುರಪುಟದ ಸದ್ದು ಕೇಳುತ್ತದೆ. ಬರಬರುತ್ತ ಧಣಿಯ ಮೂರ್ತಿ ಕಾಣುತ್ತದೆ. ಅವರು ಬಂದು ಕೂತು, ಎದ್ದು ಸ್ನಾನಮಾಡುವಾಗ ಅವರ ಅರ್ಚನೆಗೆ ವ್ಯವಸ್ಥೆಯಿರುತ್ತದೆ. ಅವರು ಹನುಮನಗುಡಿಗೆ ಹೋಗಿ ಬರುವಾಗ ಭೋಜನಶಾಲೆಯಲ್ಲಿ ಸಾಲು ಎಲೆಬಡಿಸಿ ಇಟ್ಟಿರುತ್ತದೆ. ಪಂಗ್ತಿ ಭೋಜನಕ್ಕೆ ಅವಳೊಬ್ಬಳೇ ನಿಂತುಬಡಿಸುವುದು ಕ್ರಮ. ಅವಳಿಗೆ ಸಾಮಾನು ಒದಗಿಸುವುದು ಮಾತ್ರ ಅಡಿಗೆಯ ಗುಂಡಮ್ಮ; ನೀರಿನ ನಾರಪ್ಪನ ಕೆಲಸ.

ಎಲ್ಲರಿಗೂ ಅನ್ನಸಂತರ್ಪಣೆಯಾದ ಮೇಲೆ ಅವಳ ಊಟ. ಅದನ್ನೂ ಯಾರೂ ಕಂಡಿಲ್ಲ. ಮಧ್ಯಾಹ್ನ, ಸಂಜೆ ಕಮತದ ಮನೆಯಲ್ಲಿ, ಕಾಳಿನ ಕಣಜದ ಬಳಿ ಅವಳಿಗೆ ಕೆಲಸವಿದ್ದೇ ಇದೆ. ಸಂಜೆ ಸಮಯ ಹಿತ್ತಲ ತೋಟದಲ್ಲಿ ಅವಳು ತಾನು ನೆಟ್ಟು ಬೆಳಸಿದ ಫಲವೃಕ್ಷಗಳ ಕ್ಷೇಮವನ್ನು ಕಣ್ಣಾರೆ ಕಂಡು ಬರುತ್ತಾಳೆ. ಹೂಬಳ್ಳಿಗಳಿಗೆ ನೀರು ಹಾಕಿಸುತ್ತಾಳೆ. ಪಲ್ಲೆ-ಕಾಯಿಯ ಮಡಿಗಳತ್ತ ಹಾಯ್ದು ನೋಡಿ ಇಂದಿಗಾವುದು, ನಾಳೆಗಾವುದು ಎಂದು ಎಣಿಕೆ ಮಾಡಿಕೊಳ್ಳುತ್ತಾಳೆ. ಅಲ್ಲಿ ಇರುವ ಮಂಚಿಕೆಯನ್ನೇರಿ ನೋಡುತ್ತಾಳೆ. ಕಪ್ಪಲಿಬಾವಿಯ ಬಳಿಬಂದು ಗಿಡದಡಿ ಕುಳಿತು ಆಳುಮಕ್ಕಳೊಡನೆ ನಕ್ಕುನಲಿದು ಒಂದು ಆಟ ಚೌವಂಗ ಆಡಿದರೂ ಆಡಿದಳೇ. ಹೊತ್ತು ಕಂತುವಾಗ ಅವಳು ವಾಡೆ ಸೇರಿದಳೆಂದರೆ ಬರುವ ದನಕರುಗಳನ್ನು ಮಾತನಾಡಿಸಿ, ಅವುಗಳಿಗೆ ಹತ್ತಿದ ಮುಳ್ಳು-ಹಂಜಿಗಳನ್ನು ಕಿತ್ತಿ ತೆಗೆದು, ಮೈಸವರಿ ಒಳಕ್ಕೆ ಸೇರಿದಳೆಂದರೆ ಮತ್ತೆ ಸಂಜೆಯ ಸಂತರ್ಪಣೆಯ ವ್ಯವಸ್ಥೆ. ಅವಳು ಯಾವಾಗ ಮಲಗಲು ಹೋಗುವಳೆಂದು ಯಾರೂ ಕಂಡಿಲ್ಲ.

೪.

ಗಂಡ-ಹೆಂಡಿರ ಈ ನಿತ್ಯಕ್ರಮಗಳು ಬರಬರುತ್ತ ಬರಡಾದವು. ಉಲ್ಲಾಸವೇ ಇಲ್ಲದ ಯಾಂತ್ರಿಕತೆ ತಲೆದೋರಿತು. ಆದರೂ ರೂಢಿಯಂತೆ ಎಲ್ಲಾ ನಡೆಯುತ್ತಲೇ ಇದೆ.

ಮನೆಯ ಬೆಳಕಾಗಿ ಅವರಿಗೊಂದು ಮಗುವಾಗಲಿಲ್ಲ. ಹತ್ತುದಿಕ್ಕಿನ ದೇವತೆಗಳಿಗೆ ಹರಕೆ ಹೊತಾಯಿತು. ಬೆಟ್ಟದ ತಾಯಮ್ಮನ ಗರ್ಭಗುಡಿಯ ಬಾಗಿಲಿಗೆ ಬೆಳ್ಳಿಯ ತಗಡುಬಡಿಸಿಯಾಯಿತು. ದಾನಧರ್ಮವಾಯಿತು.

ಧಣಿ ಮತ್ತೊಂದು ಮದುವೆಯಾಗಲೆಂದು ಗಂಗ-ವ್ವನೇ ಸೂಚಿಸಿದವಳು. ಆ ಮನೆಗೆ ಆಗಿಬಂದುದು ಒಂದೊಂದೇ ಸಂತಾನ. ಧಣಿಗಳು ಮದುವೆಯಾದದ್ದೂ ಒಂದೊಂದೇ. ಈ ಧಣಿಗೆ ಈ ಒಂದು ಸಂಸಾರದಿಂದ ಒಂದು ಸಂತಾನವೂ ಇಲ್ಲ. ಅವನ ಅನಾಸ್ಥೆ ಕಂಡು ಗಂಗವ್ವ ಪ್ರಸ್ತಾಪಮಾಡಿದಾಗ ಧಣಿ ಸಿಡಿನುಡಿದ :

" ಆ ಹೊಲಸುಪದ್ಧತಿ ಈ ದೇಸಗತಿಯಲ್ಲಿಲ್ಲ."

"ಹೌದು ; ಹಿಂದಿನವರಿಗೆ ಒಂದೊಂದಾದರೂ ಸಂತಾನವಾಗಿತ್ತು. ಆದರೆ ನನ್ನಿಂದ ಅದೂ ಇಲ್ಲ."

" ಇಲ್ಲವಾದರೆ ಇಲ್ಲ. "

" ಮುಂದೆ ಗತಿ ? ವಾಡೆಗೆ ಯಾರು ? ನಮಗೆ ನೀರು ಬಿಡುವವರು ಯಾರು ? "

" ನಿನಗೆ ನಾನೇ ನೀರುಬಿಡುತ್ತೇನೆ. ನನಗೆ ದೇವರು ಬಿಟ್ಟಾನು. "

*

ದಿನಗಳೆದಂತೆ ಚಟುವಟಿಕೆ ಕಳೆದುಕೊಂಡ ಗಂಗವ್ವ ಸೊರಗಿದ ಹಸುವಿನಂತಾದಳು. ಅವಳು ವಾಡೆಯಲ್ಲಿ ಅಡ್ಡಾಡುವದಕ್ಕೂ ಆಯಾಸಗೊಂಡಳು.

ಅವಳನ್ನು ಕಂಡ ಧಣಿ ಮರುಗಿದ. ಧಣಿಯನ್ನು ನೋಡಿಕೊಳ್ಳಲಾಗದೆ ಅವಳು ಮರುಗಿದಳು. ದೇಸಗತಿ ವಾಡೆ ತನ್ನ ಕಳೆಯನ್ನೇ ಕಳೆದುಕೊಂಡಿತು.

*

ಗಂಗವ್ವನ ತವರೂರಿಂದ ಬರುವವರು ಯಾರೂ ಇಲ್ಲ. ಅವಳ ಅಣ್ಣ-ತಮ್ಮ ಜಗಳಮಾಡಿಕೊಂಡು ಹೊಲ-ಮನೆ ಮಾರಿಕೊಂಡು ದೇಶಾಂತರ ಹೋದವರ ಪತ್ತೆಯೇ ಇದ್ದಿಲ್ಲ. ಧೋಂಡಪ್ಪ ಧಣಿ ಬೇಡ

ವೆನ್ನುತ್ತಿದ್ದಿಲ್ಲವಾದರೂ ತವರಿನವರನ್ನು, ಅವರೆಲ್ಲ ಇರುವ ಕಾಲದಲ್ಲಿ ಮನೆಗೆ ಕರೆದವಳಲ್ಲ ಗಂಗವ್ವ. ತಾನೂ ಹೋಗಿಬಂದವಳಲ್ಲ. ತಾಯಿ-ತಂದೆ ತೀರಿದ ಮೇಲೆ ಅವಳು ತವರನ್ನು ಬಾಯಿಬಿಟ್ಟು ನೆನೆಸಲಿಲ್ಲ. ಈಗ ಅದೇಕೋ ಅವಳಿಗೆ ತನ್ನ ಬಾಲ್ಯದ ದಿನದ ನೆನಪುಬಂದು, ಒಡಹುಟ್ಟಿದ, ಒಡನಾಡಿದ ಅಕ್ಕ ತಂಗಿಯರ ನೆನಪುಬಂದು, ಅವರಳಿದ ದಿನಗಳ ನೆನವು— ಅವರು ಅನುಭೋಗಿಸಿದ ಬಡತನದ ನೆನವು ಎದ್ದುಬಂದು ಅವಳನ್ನು ಕಾಡಿದಂತಾಯಿತು. ಕಣ್ಣು ಹಸಿಯಾಯಿತು. ತನ್ನದು ತುಂಬಿದ ಮನೆ. ತನ್ನ ಅಕ್ಕತಂಗಿ ತಿನ್ನಲು ಕೂಳುಕಾಣದೆ, ಉಡಲು ವಸ್ತ್ರಕಾಣದೆ, ರೋಗಕ್ಕೆ ಮದ್ದುಕಾಣದೆ, ಉಪಚಾರ ಹೊಂದದೆ ಹೆತ್ತೂ ಹೆತ್ತೂ ಬೇನೆಯಿಂದ ಸತ್ತರು. ಆ ಸುದ್ದಿ ಕೇಳಿದ ಗಂಗವ್ವ ಕಣ್ಣೀರ್ಗರೆದು ನೀರು ಹಾಕಿಸಿಕೊಂಡಿದ್ದಳು ಮಾತ್ರ. ಈ ಮನೆ ಧಣಿಯದು—ತನ್ನದಲ್ಲವೆಂದೇ ತಿಳಿದ ಎಳವೆಯ ಕಾಲವದು. ಇಂದವಳು ಊರಜನಕ್ಕೆ ತಾನಾಗಿ ದಾನ-ಧರ್ಮ ಮಾಡಿದಂತೆ ಆಗ ತನ್ನವರಿಗೆ ಕರೆದು ಒಂದು ತುತ್ತು ಅನ್ನ ನೀಡಲಾಗದಿದ್ದ ತನ್ನನ್ನು ಹಳಿದುಕೊಂಡಳು. ಆಗ ಇದ್ದ ಅತ್ತೆಯ ಮುಂದೆ ತಾನೂ ಮನೆಯೊಡತಿ—ಎಂಬ ತಿಳಿವು ಮೂಡುವುದು ಸಾಧ್ಯವಿದ್ದಿಲ್ಲ. "ದರಿದ್ರರ ಮನೆಯ ಹೆಣ್ಣು" ಎಂದು ಒಂದೇಸಲ ನುಡಿದ ಅತ್ತೆಯ ಮಾತು ಅವಳಿಗೆ ಸಾಕಾಗಿತ್ತು. ತಾನು ಹುಟ್ಟಿ ಬೆಳೆದ ಮನೆಯ ನೆನಪನ್ನು, ತನ್ನ ಒಡಹುಟ್ಟಿದವರ ನೆನಪನ್ನು, ಹಡೆದವರ ನೆನಪನ್ನು ಮನದಾಳಕ್ಕೆ ನೂಕಿ, ತಾನು ಬಂದ ಮನೆಯ ಊಳಿಗದಾಳಾಗಿ ದುಡಿದಳು. ಅವಳ ಅತ್ತೆ ಗೌರವ್ವ ವಿಧವೆಯಾಗಿ ಚಿಕ್ಕ ಮಗುವಾಗಿದ್ದ ಧೋಂಡುವನ್ನು ತಂದೆಯಾಗಿಯೇ ಬೆಳೆಸಿದಳು. ಕುದುರೆ ಏರಿ ದೇಸಗತಿಯ ಕಾರಭಾರ ನೋಡಿಕೊಂಡಳು. ಧೋಂಡುವಿನ ಸಣ್ಣ ಪ್ರಾಯಕ್ಕೇ ಸಮಪ್ರಾಯದ ಈ ಹೆಣ್ಣನ್ನು ತೆಗೆದು ಮದುವೆ ಮಾಡಿದಳು. 'ಬಡವರ ಮನೆಯ ಹೆಣ್ಣು ತರಬೇಕು'— ಎಂದಾಡಿದ ಪತಿಯ ಈ ಒಂದು ಮಾತನ್ನು ನಡೆಸುವದಕ್ಕೆಂದೇ ಅವಳು ಗಂಗವ್ವನನ್ನು ಹುಡುಕಿ ತಂದಳು. ಅವಳ ಪತಿ ಬಿಷ್ಟಪ್ಪ ದೇಸಾಯಿ ಗೌರವ್ವನ ಗಡಸುತನ, ರಾಜಸಸ್ವಭಾವಕ್ಕೆ ಹೆದರಿ, ಒಮ್ಮೆ ಧೈರ್ಯ ತಂದುಕೊಂಡು ಆಡಿದ ಮಾತದು. ಅದನ್ನು ಸಾಧಿಸಿ, ತಾನು ಸಾಯುವವರೆಗೆ ಗಂಗವ್ವನನ್ನು ತಿವಿದು ಮಾತಾಡಿ, "ಬಂಜೆಮುಂಡೇದು" ಎಂದು ಶಪಿಸಿ ಸತ್ತಳು. ಆದರೆ ಅವಳೂ ಮಗನಿಗೆ ಮತ್ತೊಂದು ಮದುವೆಯನ್ನು ಬಯಸಿ ಆಡಿರಲಿಲ್ಲ.

ಈ ಕಾರಣದಿಂದಲೇ ಕರುಳು ಕಡಿದುಕೊಂಡ ಗಂಗವ್ವ ತವರಿನ ಸಂಬಂಧದ ನೆನಪನ್ನು ತನ್ನಲ್ಲೇ ಹೂಳಿಕೊಂಡಿದ್ದಳು.

ಇಂದು ಅವಳ ಸೋತು-ಸೊರಗಿದ ಮೈಮನಗಳು ಕರುಳಿನ ಬಳ್ಳಿಗಾಗಿ ತವಕಿಸುತ್ತಿವೆ.

ಗಂಗವ್ವನ ಕಾಯಿಲೆಯ ಸುದ್ದಿಕೇಳಿ ಮುರಿಗೆವ್ವ ಬಂದಳು. ಅದು ಹೇಗೆಬಂದಳೋ ಬಂದಳು. ಬಂದು ಗಂಗವ್ವನನ್ನು ಮುಟ್ಟಿ ಮುದ್ದಾಡಿದಳು.

ಮುರಿಗೆವ್ವ ಗಂಗವ್ವನ ಸಮಪ್ರಾಯದವಳು. ನಡತೆಯಿಂದ ಗಂಗವ್ವನಿಗೆ ಅವಳು ಅಕ್ಕನಾಗಬೇಕು. ಆದರೆ ಜಾತಿ ಬೇರೆ!

ಅವಳಿಂದ ತಿಳಿದದ್ದು: ಗಂಗವ್ವನ ತವರಿನ ಕುಲಕ್ಕೆ ಒಂದು ಎಳೆಯೂ ಉಳಿದಿಲ್ಲ. ಎಲ್ಲಾ ನೆಲಸಮ—ನಿಸ್ಸಂತಾನ! ಬಡವನ ಕುಲ ನಾಶವಾಗುವದಿಲ್ಲ. ಸಂತಾನ ಹೆಚ್ಚು, ಬಡತನವೂ ಹೆಚ್ಚು. ಜೀವಚ್ಛವಗಳು ಎಲ್ಲಾದರೂ ನೆಪಕ್ಕಾದರೂ ಇದ್ದೇ ಇರುತ್ತವೆ. ಆದರೆ ಗಂಗವ್ವನ ತವರಿನ ಬಳ್ಳಿ ಹರಿದೇ ಹೋಗಿದೆ.

ಇದ್ದಬಿದ್ದ ಒಂದು ಕುಡಿಯೆಂದರೆ ಈ ಮುರಿಗೆವ್ವ ಜಾತಿಯಲ್ಲ; ಗೋತ್ರವಲ್ಲ!

ಅವಳು ಬಂದವಳು ಗಂಗವ್ವನನ್ನು ನೋಡಿಕೊಂಡಳು. ಅವಳು ನೋಡುತ್ತಿದ್ದ ಮೇಲ್ಗೆಲಸಗಳನ್ನು ನೋಡಿಕೊಂಡಳು. ದೇಸಾಯರ ದೇವರ ಮನೆಯನ್ನವಳು ನೋಡಲಿಲ್ಲ. ಅಡುಗೆಮನೆಯ ಬಾಗಿಲಲ್ಲೇ ನಿಂತು ಕಾರಭಾರ ಮಾಡಿದಳು.

ಧಣಿಗೆ ಮುರಿಗೆವ್ವನ ಬರವು ಮನೆಯ ವ್ಯವಸ್ಥೆಯಿಂದಲೇ ತಿಳಿದದ್ದು. ಅವನು ಅವಳನ್ನು ಎದುರು ನಿಂತು ನೋಡಲೇ ಇಲ್ಲ.

ಗಂಗವ್ವ ಸ್ವಲ್ಪ ಗೆಲುವಾಗಿದ್ದಾಳೆ. ಅವಳ ಬಾಡಿದ ಮುಖದಲ್ಲಿ ಕಿರುನಗೆ ಮೂಡಿದೆ. ಧಣಿಯ ಕೆಲಸ, ದೇವರ ಕೆಲಸಕ್ಕೆ ಈಗ ಗಂಗವ್ವನ ಸೇವೆ ಸಲ್ಲುತ್ತಿದೆ.

ಧೋಂಡಪ್ಪ ಧಣಿ ಮತ್ತೆ ಗೆಲುವನ್ನು ತಂದುಕೊಂಡ. ಬೆಟ್ಟದ ತಾಯಮ್ಮನಿಗೆ ಸಮಾರಾಧನೆಯಾಯಿತು. ಊರಿಗೆ ಊರೇ ಉಂಡು ತೇಗಿತು. ಸುತ್ತಲಿನ ಜನಕ್ಕೆ ಪಡಿ ಹೋಯಿತು. ಪ್ರಸಾದ ಹೋಯಿತು. ಅಂದು ರಾತ್ರಿ ಗಂಗವ್ವ ಧಣಿಯನ್ನು ಕಂಡು ತೃಪ್ತಿಯ ನಗುವನ್ನು ಬೀರಿದಳು. ಆದರೆ ಅವಳ ತುಂಬಿದ ದೇಹ ಹೋದದ್ದು ಹೋಯಿತು; ಮತ್ತೆ ಬರಲೇ ಇಲ್ಲ.

"ಗಂಗಿ ಕೋಲಿಗೆ ಸೀರೆಯುಡಿಸಿದಂತಾಯಿತು—ನಿನ್ನ ಪಾಡು"

"ಹೌದು; ಧಣಿ! ನಾನಿನ್ನು ಹೀಗೇ. ನಿಮಗೆ ಇನ್ನೊಂದು ಮದುವೆ ಮಾಡಿ ನಾನು ಹೋಗುತ್ತೇನೆ"

"ಎಲ್ಲಿ ಹೋಗುತ್ತೀ?"

"ಶಿವನ ಮನೆಗೆ."

"ನಿನ್ನನ್ನಾರು ಬಿಡುತ್ತಾರೆ?—ಯಾವ ಶಿವ ಅವ ಬಂದಾರೆ ಬರಲಿ...."

"ಹಾಗನ್ನಬೇಡ ಧಣಿ; ನಿಮಗೆ ಸುಖ ಕೊಡದವಳು...."

"ಬಾಯಿ ಮುಚ್ಚು!"

*

ಅಂದು ರಾತ್ರಿ ಉರಿಯುವ ದೀಪ ಆರಿದೆ. ಧಣಿಯ ಕಾಲನ್ನು ಹಿಡಿದ ಕೈ ಅವನನ್ನು ಎಚ್ಚರಿಸಿತು. ಆ ಕೈ ಹಿಡಿದೆಳೆದ ಧಣಿಗೆ ಗಂಗವ್ವನಿಗಿಂತ ಭಾರವಾದ ಹೆಣ್ಣು ದೇಹ ಮೈದಡವಿತು. "ಗಾಬರಿಯಾಗಬೇಡ ಧಣಿ; ನಾನು ಮುರಿಗಿ" ಎಂದಿತದು.

"ದೀಪವನ್ನೇಕೆ ಆರಿಸಿದಿ. ಗಂಗೆಯೆಲ್ಲಿ?"

"ಅವಳೇ ಕಳಿಸಿ ದೀಪ ಒಯ್ದಳು, ಧಣಿ"

"ಥೂ—ಸರಿ, ಹೂಂ—ಹೊರಡು."

ಗಂಗವ್ವ ದೀಪ ತಂದಿಟ್ಟಳು. "ಅವಳು ನನ್ನಕ್ಕ" ಎಂದು ಹೇಳಿ ಹೊರಗೆ ಹೋದಳು.

ಗೋಡೆಗೆ ಒರಗಿ ನಿಂತ ಮುರಿಗಿಯನ್ನು ಧಣಿ ನೋಡಿದ!

ಹೌದು; ಅವಳು ಗಂಗೆಯ ಅಕ್ಕ. ಅದೇ ರೂಪ! ಅವಳ ಅಂದಿನ ಅದೇ ಗಾತ್ರ.

ಅದರಿಂದು ಅವಳೇ ಅಕ್ಕ; ಇವಳೇ ತಂಗಿ.

" ದೀಪ ಬೇಡ ಧಣಿ. "

" ನೀನೂ ಬೇಡ—ಹೊರಡು " ಎಂದ ಧಣಿಯ ಧ್ವನಿ ಆಜ್ಞೆಯಾಗಿದ್ದಿಲ್ಲ; ಸ್ವಾಗತವಾಗಿತ್ತು.

" ಒಂದು ಸುದ್ದಿ ಹೇಳಲು ಬಂದೆ ಧಣಿ; ನೀನು ತಂದೆಯಾಗುತ್ತೀ. ಗಂಗವ್ವನಿಗೆ ಮೂರುತಿಂಗಳು! "

—ಎಂದವಳೇ ಮುರಿಗೆವ್ವ ಸಾವರಿಸಿಕೊಂಡು ಹೊರಟಳು.

" ಹಾಂ! ಏನಂದಿ ? "

—ಎಂದು ಹಾರಿ ಬಂದ ಧಣಿ ಬಾಗಿಲಿಗೆ ನಿಂತು ನುಸುಳಿ ಹೋಗುವ ಮುರಿಗೆವ್ವನನ್ನು ಅದುಮಿಹಿಡಿದು ನುಡಿದ:

" ಈ ಸುದ್ದಿ ತಂದ ನಿನಗೇನು ಕೊಡಲಿ ? "

ಅವಳು ಬಾಗಿ, ಧಣಿಯ ಪಾದ ಹಿಡಿದು " ಇದು ಸಾಕು" ಎಂದು ಹೊರಳಾಡಿದಳು. ಅವಳನ್ನೆಬ್ಬಿಸಿ ಎತ್ತಿ ಹಿಡಿದ ಧಣಿ ಅಪ್ಪಿ ಮುತ್ತಿಟ್ಟು, " ಇದು ಬೇಡವೇ?" ಎಂದ. ಅವಳು ಬೆವರಿ ಮುದ್ದೆಯಾದಳು ಧಣಿ ಗಾಳಿದುಂಬಿದ ಕುದುರೆಯಾಗಿದ್ದ. ಕೆನೆದಂತೆ ನಗುವ ಅವನ ಅಟ್ಟಹಾಸವನ್ನು ದೂರ ಮರೆಗೆನಿಂತ ಗಂಗವ್ವ ಕೇಳಿದಳು. ನಿಲ್ಲಲಾರದೆ ನಡೆದುಬಂದಳು. ಮುನ್ನಡೆಯಲಾರದೆ ನೆಲಕ್ಕೆ ಕುಪ್ಪಳಿಸಿದಳು. ಸಪ್ಪಳ ಕೇಳಿ ಮುರಿಗೆವ್ವ ಹೊರಗೆ ಓಡಿ ಬಂದು ಅವಳನ್ನೆತ್ತಿ ಹಿಡಿದಳು. ಕೈ ಹಿಡಿದು ನಡೆಸಿ ತಂದು ಧಣಿಯ ಹಾಸಿಗೆಯಲ್ಲಿ ಮಲಗಿಸಿ ಕಾಲ ಬದಿಗೆ ಕುಳಿತು ಉಪಚರಿಸಿದಳು. ನಿಂತ ಧಣಿಯನ್ನು ಕೈಹಿಡಿದು ತಂದು ಕೂಡಿಸಿ ಕಾಲುಮುಟ್ಟಿ ನಮಿಸಿದಳು.... ಹೊರಕ್ಕೆ ಬಂದಳು.

ಗಂಗವ್ವ ಗಂಡು ಹಡೆದು ಮಲಗಿದ್ದಾಳೆ. ಮೊದಲೇ ಕೋಲಾಗಿದ್ದವಳು ಇಂದು ಕಡ್ಡಿಯಾಗಿದ್ದಾಳೆ. ಆ ಮಗು ತಾಯಿಯ ರೂಪವನ್ನೂ ಅವಳದೇ ನಿಶ್ಶಕ್ತಿಯನ್ನೂ ಪಡೆದು ಹಾಸಿಗೆಗೆ ಹತ್ತಿದೆ. ಮುರಿಗೆವ್ವ ತಾಯಿ-ಮಕ್ಕಳನ್ನು ತನ್ನ ಪ್ರಾಣಕ್ಕೆಪಣವಾಗಿ ಸಾಕುತ್ತಿದ್ದಾಳೆ.

ಧೋಂಡಪ್ಪನಿಗೆ ಸಾಯುವ ಮಡದಿಯ ಲಕ್ಷ್ಯವಿಲ್ಲ. ಹುಟ್ಟಿದ ಮಗುವನ್ನು ನೋಡಲಿಲ್ಲ. ಅವನಿಗೊಂದೇ ಲಕ್ಷ್ಯ: " ಮುರಿಗಿ—ಮುರಿಗಿ ! "

ಮಗುವಿಗೆ ನಾಮಕರಣವಾಗಬೇಕು. ಮೂರು ತಿಂಗಳಾದರೂ ಹೆಸರು ಕಾಣದು ಮಗು. ಗಂಗವ್ವನನ್ನು ಕೇಳಿದರೆ " ನೀ ಇದ್ದೀಯಲ್ಲ ; ಏನು ಮಾಡುತ್ತೀ ಮಾಡಿಸು. ನಾನು ಇಂದು ಇಲ್ಲಿ; ನಾಳೆ ಅಲ್ಲಿ" ಎನ್ನುತ್ತಾಳೆ.

ಮುರಿಗೆವ್ವನಿಗೆ ಇದು ಚುಚ್ಚು ಮಾತೋ—ಬಿಚ್ಚು ಮಾತೋ ತಿಳಿಯದು. ಆದರೂ ಅವಳೇ ನಿಂತು ನಾಮಕರಣ ಮಾಡಿಸಿದಳು.

"ತ್ರಿಕೂಟೇಶ್ವರ"ನೆಂದು ಇಟ್ಟ ಹೆಸರು ಯಾರಿಗೂ ಕರೆಯಲು ಬರದೆ ಅವನು ತಿರಕಪ್ಪನೇ ಆದ.

ಗಂಗವ್ವನಿಗಂಟಿದ ಬಾಣಂತಿಬೇನೆ ಅವಳನ್ನು ಕೊಂಡುಹೋಯಿತು.

ಅತ್ತವಳು ಮುರಿಗೆವ್ವ ಒಬ್ಬಳೇ.

ಧಣಿ ಅಳಲಿಲ್ಲ; ಕಣ್ಣೀರಿಡಲಿಲ್ಲ; ಮಾತೇ ಆಡಲಿಲ್ಲ.

ಮಗು ಒಂದು ಅಳುತ್ತಲೇ ಇದೆ.

ಮುರಿಗೆವ್ವ ಅಳುತ್ತಾಳೆ. ಮಗುವನ್ನು ಮುದ್ದಾಡುತ್ತಾಳೆ. ಅದು ಕಿರುನಗೆ ಸೂಸಿದರೆ ಅವಳು ಅಟ್ಟಹಾಸ ಬೀರುತ್ತಾಳೆ.

ತಿರಕಪ್ಪ ಒಂದು ವರ್ಷದವನಾದ. ತಪ್ಪು ಹೆಜ್ಜೆಯಿಟ್ಟು ದೇಸಾಯಿವಾಡೆಯಲ್ಲೆಲ್ಲಾ ನಡೆದಾಡುತ್ತಾನೆ ಮುರಿಗೆವ್ವ ಅವನ ಹಿಂದೆ-ಮುಂದೆ ಇದ್ದವಳೇ. ಗಂಗವ್ವ ಬಾರದಿದ್ದ ಬಿಚ್ಚು ಪಡಸಾಲೆಗೂ ಇಂದವಳು ಧಣಿ ಇಲ್ಲದಾಗಲೂ ಬರುತ್ತಾಳೆ; ಇದ್ದಾಗಲೂ ಬರುತ್ತಾಳೆ.

ಧಣಿ ಇನ್ನೊಂದು ಮದುವೆಯಾಗಲು ಒಪ್ಪಲಿಲ್ಲ. ಹೇಳಿದ ಮುರಿಗೆವ್ವನಿಗೆ " ನನಗೆ ನೀನು ಸಾಕು" ಎಂದ.

ತಿರಕಪ್ಪನಿಗೆ ಎರಡು ವರ್ಷವಾಗುವಾಗ ಮುರಿಗೆವ್ವನೂ ಒಂದು ಗಂಡು ಹಡೆದಳು. " ನೀನು ಹಡೆಯುವದು ಬೇಡ" ಎಂದ ಧಣಿಯ ಮಾತನ್ನವಳು ಕೇಳಲಿಲ್ಲ.

ಆ ವಾಡೆಯ ಮೂಲೆಯ ಒಂದು ಕೋಣೆ ಮುರಿಗೆವ್ವನ ಮನೆಯಾಯಿತು. 'ನೀಲಕಂಠ' ತಿರಕಪ್ಪನ ಕೂಡ ವಾಡೆಯಲ್ಲೆಲ್ಲ ಅಡ್ಡಾಡಿ ಬೆಳೆದ. ವಾಡೆಯ ಅಡಿಗೆಮನೆಯಲ್ಲಿ ತಿರಕಪ್ಪ ಉಂಡವನೇ ಅಲ್ಲ. ನೀಲಕಂಠನೊಡನೆ ಮುರಿಗೆವ್ವನ ಮೂಲೆಯ ಕೋಣೆಯಲ್ಲಿ ಹಾಲು ತುಪ್ಪ ಉಂಡು ಬೆಳೆದ.

ಒಂದು ದಿನ ಮುರಿಗೆವ್ವ ಧಣಿಯ ಪಾದ ಹಿಡಿದು ನುಡಿದಳು :

" ಧಣಿ, ಇನ್ನು ನಾನಿಲ್ಲಿ ಬೇಡ. ನಾಳೆ ತಿರಕಪ್ಪನಿಗೆ ಹೆಣ್ಣು ಬರಬೇಕು; ಮದುವೆಯಾಗಬೇಕು; ಮನೆ ನಿಲ್ಲಬೇಕು. ನನಗೆ ಅಪ್ಪಣೆ ಕೊಡು ನಿನ್ನ ಸೇವೆಗೆ ಇನ್ನೊಂದು ಮದುವೆ ಮಾಡಬೇಕೆನ್ನುತ್ತೇನೆ. "

" ಕತ್ತೆರಂಡೇ, ನೀನು ಹೋಗುವದಿದ್ದರೆ ಹೋಗು. ನನ್ನ ಮದುವೆಯ ಚಿಂತಿ ಮಾಡಿದಿ. ಇನ್ನು ಮಗನ ಮದುವೆಯ ಚಿಂತೆ ನಿನಗೆ. ಅವನ ಚಿಂತಿ, ಮನೆಯ ಚಿಂತಿ ನನಗಿರಲಿ "

—ಎಂದು ಮುರಿಗೆವ್ವನನ್ನು ದೂಡಿ ಹೊರಬಿದ್ದ ಧಣಿ ವಾಡೆಗೆ ಬರುವಾಗ ಹದಿನೈದು ದಿನವಾಯಿತು.

ಅಂದೇ ರಾತ್ರಿ ತಿರಕಪ್ಪನನ್ನು ಮಲಗಿಸಿ, ಮುತ್ತಿಟ್ಟು ಹರಸಿ, ಹರಕೆ ಹೊತ್ತು ಮುರಿಗೆವ್ವ ಗಾಡಿ ಕಟ್ಟಿಸಿಕೊಂಡು, ನೀಲಕಂಠನನ್ನು ಕರೆದುಕೊಂಡು ಹೊರಟು ಹೋದಳು.

❖

ತಿರಕಪ್ಪ ಇದೀಗ ಪರದೇಶಿಯಾದ. ಧೋಂಡಪ್ಪನಿಗೆ ಈಗ ಯಾವ ಕ್ರಮವೂ ಇಲ್ಲ. ವರುಷಕ್ಕೊಮ್ಮೆ ಶಹರಕ್ಕೆ ಹೋಗದವನು ಈಗಲೀಗ ಶಹರದಲ್ಲೇ ಇರುತ್ತಾನೆ. ನೆನವು ಬಂದಾಗೊಮ್ಮೆ ವಾಡೆಗೆ ಬರುತ್ತಾನೆ. ಹನ್ನೆರಡು ವರುಷದ ಮಗ ತಿರಕಪ್ಪ ಈಗ ಗುರುಲಿಂಗಯ್ಯ ಮಾಸ್ತರರ ಶಿಷ್ಯ. ಆತನಿಗೆ ಎದೆ ಸೀಳಿದರೂ ಮೂರು ಅಕ್ಷರ ಬರಲಿಲ್ಲ. ಮನೆಗೆ ಬಂದರೆ ಬಾ—ಎಂದು ಕರೆಯುವವರಿಲ್ಲ. ಇಂದಿಗೂ ಮಧ್ಯಾಹ್ನಕ್ಕೆ ನಡೆಯುವ ಬ್ರಾಹ್ಮಣರ ಭೋಜನ ಸಮಾರಂಭದ ಜತೆಗೆ ಅವನ ಊಟ. ಸಂಜೆ ಕಮತಿಗರೊಡನೆ ಅವರ ಮನೆಗೇ ಹೋಗಿ ಕೊಟ್ಟದ್ದು ತಿಂದು ಬರುತ್ತಾನೆ; ಅವರೊಟ್ಟಿಗೇ ಮಲಗುತ್ತಾನೆ. ಕಾರಭಾರಿ ಜಬರಿಸುತ್ತಾನೆಂದು ಅವನ ಮುಖವನ್ನೇ ನೋಡುವದಿಲ್ಲ. ಅಡೆಗೆಯಾಳು, ನೀರಿನಾಳು ಮಧ್ಯಾಹ್ನ ಸಾಗಿಸಿ ಸಂಚಾರ ಬಿಡುತ್ತಾರೆ. ಹದಿನಾರೆತ್ತಿನ ಕಮತ ಹೆಸರಿಗೆ ನಡೆದಿದೆ. ಧಣಿ ಬಂದಾಗ ಅದನ್ನು ನೋಡಿ ಉರಿದೇಳುತ್ತಾನೆ; ಕಂಡಹಾಗೆ ಕೂಗಾಡುತ್ತಾನೆ. ಕೈ ಬೀಸಿ ಎದುರು ಬಂದವರನ್ನು ಹೊಡೆಯುತ್ತಾನೆ. ಮತ್ತೆ ಆ ಮನೆಯಲ್ಲಿ ನಿಲ್ಲಲಾರದೆ ಶಹರಕ್ಕೆ ಓಡುತ್ತಾನೆ.

ದೇಸಗತಿಯ ಚಿನ್ನ-ಬೆಳ್ಳಿ ಎಲ್ಲ ಹೋಯಿತು. ಹೊಲಗಳು ಒಂದೊಂದಾಗಿ ಹೋದವು. ಎತ್ತು-ಕುದುರೆಗಳೆಲ್ಲ ಹೋದವು. ಧಣಿಯ ಕಮತಿಗರೇ ಹೊಲದೊಡೆಯರಾದರು. ನೀರಿನವನಿಗೊಂದು ಅಡಿಗೆಯವಳಿಗೊಂದು ಹೊಲವಾಯಿತು. ಕಾಳಿನ ಕಣಜ ಬರಿದಾಯಿತು.

ತಿರಕಪ್ಪ ವಯಸ್ಸಿಗೆ ಬಂದ. ಅವನಿಗೆ ವಿದ್ಯೆ ಬರಲಿಲ್ಲ. ಬುದ್ಧಿ ಬಂತು, ತಂದೆಯ ಪೋಲುಗಾರಿಕೆಗೆ ಅಡಿಯಾಗಿ ನಿಂತು ಉಳಿದ ಹೊಲ-ಮನೆ ಉಳಿಸಿಕೊಂಡ. ಮತ್ತೆ ಕಮತ ಕಟ್ಟಲಾಗಲಿಲ್ಲ. ಕುದುರೆಯಿಡಲಿಲ್ಲ. ಬೀಳು ಮನೆಯ ದುರಸ್ತಿ ಮಾಡಿಸಲಿಲ್ಲ. ನಾಲ್ಕು ಆಕಳುಗಳನ್ನುಳಿಸಿಕೊಂಡು, ಅವನ್ನೇ

ಮೇಯಿಸಿ, ಅದರ ಹಾಲನ್ನೇ ಕುಡಿದು ಅಡಿಗೆಯವಳು ಅಟ್ಟ ಕೂಳನ್ನುಂಡು ಜೀವ ಹಿಡಿದುಕೊಂಡ.

ಥೋಂಡಪ್ಪನಿಗೆ ಈಗ ವಾಡೆಯೇ ಗತಿಯಾಯಿತು. ಮಗ ಮದುವೆ ಕಾಣಲಿಲ್ಲ. ಅವ ಮದುವೆ ಕಾಣಬೇಕೆಂದು, ಮನೆ ನಿಲ್ಲಬೇಕೆಂದು ಮನೆ ಬಿಟ್ಟುಹೋದ ಮುರಿಗೆವ್ವ ಇದನ್ನು, ಹೀಗಾದೀತೆಂಬುದನ್ನು ನೆನಸಲಿಲ್ಲ. ಗಂಗವ್ವ ಇರುವಷ್ಟು ದಿನ ತನ್ನ ಪತಿಯ ಪಾಡು, ದೇಸಗತಿಯ ಪಾಡು ಹೀಗಾದೀತೆಂದು ಚಿಂತಿಸಿ ಸಾಯಲಿಲ್ಲ. ಅವಳ ಆರೋಗ್ಯ ಯಾಕೆ ಕೆಟ್ಟಿತೆಂದು ಅವಳೇ ಅರಿಯಳು. ಸತ್ತುಗೆಲ್ಲುತ್ತೇನೆಂದು ನಡೆದಳು.

ಹೀಗಾದೀತೆಂದು ಥೋಂಡಪ್ಪ ನೆನಸಿದ್ದನೆ? ಇಂದಾದರೂ ಅವನು ತಾನು ಏನಾಗಿದ್ದೇನೆಂಬುದನ್ನಾದರೂ ಬಲ್ಲನೆ?

ಹಗಲೆಲ್ಲ ಮಲಗುತ್ತಾನೆ. ರಾತ್ರಿಯ ಎಚ್ಚರ ಸವೆಸಲು ಅವನಿಗಿಂದು ಆಧಾರವೇ ಇಲ್ಲ. ಬಾಯಿ ಒಣಗುತ್ತದೆ; ಹಸಿಮಾಡಿಕೊಳ್ಳಲು ಸುರೆಯಿಲ್ಲ. ಮೈ ತುರಿಸುತ್ತದೆ; ಸವರಲು ಜನವಿಲ್ಲ. ನರಕವಾಸವನ್ನು ಅನುಭವಿಸಿದಂತೆ ರಾತ್ರಿ ಗೋಡೆ ಗೋಡೆ ಹಾಯುತ್ತಾನೆ. ಮಗ ಮಲಗಿದಲ್ಲಿ ಹೋಗಿ ಮುಗಿಸಬೇಕೆನ್ನುತ್ತಾನೆ. ಆಗ ತಾನು ಬಂಧಿತನೆಂದು ಎಚ್ಚರ ಬರುತ್ತದೆ.

ಅವನ ನೆನಪಿನ ಮಾಲೆ ಬಹಳ ಹಿಂದಿನ ದಿನಕ್ಕೆ ಹೋಗುವಷ್ಟು ಸ್ಥೈರ್ಯವೇ ಇಲ್ಲ- ಅವನಿಗೆ. ಅದೇ ಶಹರದ ಕುಣಿತ, ಕುಡಿತದ ನೆನಪಿನಲ್ಲೇ ಅವನ ಮನಸ್ಸು ಗರ ಹೊಡೆದು ನಿಲ್ಲುತ್ತದೆ. ಹಗಲಾಗುವಾಗ ಚಿಂತನೆಯ ದಣಿವಿನಿಂದ ಕಣ್ಣು ಮುಚ್ಚುತ್ತದೆ. ಯಾರಾದರೂ ಎಬ್ಬಿಸಿದರೆ ನಿದ್ದೆಯಲ್ಲೇ ಹೊಲಸು ಮಾತನಾಡುತ್ತಾನೆ. ಊಟಕ್ಕೆಬ್ಬಿಸಿದರೆ 'ಇಲ್ಲೇ ಬರಲಿ'— ಎಂದು ಹಸಿದ ಹುಲಿಯಂತೆ ತಂದದ್ದು ತುಂಬಿಕೊಂಡು ಮತ್ತೆ ಬಿದ್ದನೆಂದರೆ ಸಂಜೆಗೇ ಎಚ್ಚರ. ಒಂದು ಸ್ನಾನವಿಲ್ಲ, ಒಂದು ಪೂಜೆಯಿಲ್ಲ. ತೈನಾತಿ ಕಲ್ಲಪ್ಪ ಬಂದರೆ ಒಮ್ಮೆ ಹೊಡೆಯಹೋದನೆಂದು ಅವನು ಈಗ ಧಣಿಯ ಬಳಿ ಬಂದು ಸುಳಿಯುವದೇ ಇಲ್ಲ. ಅವನೂ ಇಂದು ಒಂದು ಹೊಲದೊಡೆಯ.

ತಿರಕಪ್ಪನಿಗೆ ಇಂದು ಬುದ್ಧಿ ಬಂದಿದೆ— ಅದೇ ತರ ಬುದ್ಧಿ? ತಂದೆಯನ್ನು ಸೆರೆಹಿಡಿದಿಡುವ ಮುಂದೆ ಅವನ ಬುದ್ಧಿ ಓಡುವದಿಲ್ಲ. ತನ್ನ ಭವಿತವ್ಯದ ವಿಚಾರ ಅವನಿಗೆ ಹರಿಯುವದೇ ಇಲ್ಲ. ಉಳಿದ ಹೊಲ ಮಾರಬಾರದೆಂದು ಗೊತ್ತು. ಆದರವನ್ನು ಉತ್ತಿ, ಬಿತ್ತಿ ಬೆಳೆಯುವದೂ ತಿಳಿಯದು. ಯಾರಲ್ಲೂ ನಂಬುಗೆಯಿಡದಂಥ ಸಂಶಯದ ಸ್ವಭಾವ ಅವನದು. ತನ್ನ ಬುದ್ಧಿಗೆ ಹೆಚ್ಚಿನದಾವುದೂ ತೋಚುವದಿಲ್ಲ- ಎಂಬುದನ್ನೂ ಅವನು ಕಾಣದವ.

ಇನ್ನೂ ಮಧ್ಯಾಹ್ನಕ್ಕೆ ನಾಲ್ಕೆಂಟು ಜನ ಕವಳ ಕತ್ತರಿಸುತ್ತಾರೆ. ಅವರನ್ನು ಓಡಿಸಲಾರ. ಇಟ್ಟುಕೊಳ್ಳಲಾರ.

ಹರೆಯ ಬಂದಿದೆ ಅವನಿಗೆ, ಏನೇನೋ ಬಯಕೆಗಳು ಹುಟ್ಟಿ ನಿಲುಗಡೆ ಕಾಣದೆ ಹೋದವು. ಹಲವರು ಹೇಳಿದ ಮಾತು ಒಂದೂ ಅವನ ಮನಸ್ಸಿಗೆ ಅಂಟಲಿಲ್ಲ. ಯಾವುದನ್ನು ಅಂಟಿಸಿಕೊಳ್ಳಬೇಕಾದರೂ ಮನಸ್ಸಿಗೆ ಧೃತಿ ಬೇಕಲ್ಲ! ಅದೇ ಇಲ್ಲ ಅವನಿಗೆ. ಒಳ್ಳೆಯದೂ ತಿಳಿಯದು, ಕೆಟ್ಟದ್ದೂ ತಿಳಿಯದು.

೬

ಅಂದು ನೀಲಕಂಠನನ್ನು ಕಟ್ಟಿಕೊಂಡು ರಾತ್ರೋರಾತ್ರಿ ಹೊರಟು ಹೋದ ಮುರಿಗೆವ್ವ ತಾನು ಹುಟ್ಟಿ ಬೆಳೆದ ಹಳ್ಳಿಗೇ ಬಂದಳು. ತನ್ನ ತಾಯಿ ತನಗೆಂದು ಬಿಟ್ಟುಹೋಗಿದ್ದ ಜೋಪಡಿಯಲ್ಲೇ ತಳ ಊರಿದಳು. ಮರುದಿನದಿಂದಲೇ ಕೂಲಿ ಕೆಲಸಕ್ಕೆ ನಿಂತಳು. ತನ್ನ ಜೋಪಡಿಗೆ ಮಣ್ಣಿನ ಸಾರಣೆ-ಕಾರಣೆ ಮಾಡಿದಳು. ಗಡಿಗೆ-ಮಡಕೆಗಳಲ್ಲಿ ಅಟ್ಟುಂಡು ತಟ್ಟು ಹಾಯ್ದಳು.

ದೇಸಗತಿ ಮನೆಯಿಂದ ಅವಳು ತಂದದ್ದೆಂದರೆ ತನ್ನ ಗುಡಿಸಲು ಬೆಳಗಲೆಂದು ನೀಲಕಂಠನನ್ನು ಮಾತ್ರ. ಜತೆಗೇ ಅವನ ಹುಟ್ಟಿನ ಹಿಂದಿನ ದಿನಗಳ ಸುಖದ ನೆನಪನ್ನು. ಅನಂತರದ ದೇಸಗತಿಯ ಹೊಣೆಗಾರಿಕೆಯನ್ನು ಹೊತ್ತು ನಡೆಸಿದ ವ್ಯಾಪಕ ಕಥಾಸ್ಮೃತಿಯನ್ನು,—ಧಣಿಯ ಹುಚ್ಚು ಔದಾರ್ಯವನ್ನು ನಂಬಿಕೆಯ ಸ್ಥೈರ್ಯವನ್ನು, —ಏಕಮುಖವಾಗಿ ಓಡುವ ಅವನ ಮನೋ-ಲಹರಿಯನ್ನು ಯಾವುದೊಂದು ಬದಲನ್ನು ನಿಸ್ತರಿಸಲಾರದ ದೌರ್ಬಲ್ಯವನ್ನು,- ಮುಂದಿನ- ಅಂದಾಜನ್ನು ಕಾಣಲಾಗದ ಅವಿವೇಕವನ್ನು ಅವಳು ವಿಚಾರಮುಖದಿಂದ ಮೆಲುಕಾಡಿಸುತ್ತಾಳೆ. ತಾನು ಬಿಟ್ಟು ಬಂದುದರ ವ್ಯಾವಹಾರಿಕತೆಯನ್ನು ತಾನೇ ಮೆಚ್ಚಿಕೊಳ್ಳುತ್ತಾಳೆ. ಆದರೆ ಆ ಅಳತೆಗೋಲು ದೇಸಗತಿಯ ಭವಿಷ್ಯವನ್ನಳೆಯಲು ಸರ್ವಥಾ ತ್ಯಾಜ್ಯವಾಗಿತ್ತೆಂದೂ ಒಮ್ಮೊಮ್ಮೆ ವಿವಶಳಾಗುತ್ತಾಳೆ. ಮತ್ತೆ ಜೀವ ತುಡಿಯುತ್ತದೆ. ಅಲ್ಲೇ ಹೋಗಿ ನಿಂತು ಬಿಡಲೇ – ಎಂದುಕೊಳ್ಳುತ್ತಾಳೆ ಗಂಗವ್ವನ ನೆನಪು ಬಂದು ಚೇಳು ಕುಟುಕಿದಂತೆ ನೋವುಗೊಳ್ಳುತ್ತಾಳೆ. ಅವಳ ಜೀವ ಏನು ನೆನಸಿತ್ತು- ಎಂಬುದೇ ಅವಳ ಆಲೋಚನೆಗೆ ನಿಲುಕದ ತೊಡಕಾದ ಭಾವನೆ. ತನ್ನ ಸ್ಥಿತಿ-ಗತಿಗಳು, ತನ್ನ ಹುಟ್ಟು-ಅವಸ್ಥೆಗಳು ಅಂಥ ಚಿರಸ್ಥಾಯಿಯಾದ ವ್ಯವಸ್ಥೆಗೆ ಪ್ರೇರಕವಾಗಬಾರದೆಂದವಳ ವಿವೇಕ ಸೂಚಿಸುವುದು. ನಿರುಪಾಯಳಾದ ಅವಳು ಹಗಲಿನೊಡನೆ ತನ್ನ ಮಗನ ಭವಿಷ್ಯಚಿಂತನೆಯನ್ನು ಹಿಡಿದು ನಡೆಯುತ್ತಾಳೆ. ಅವಳ ಕ್ರಿಯಾಶೀಲ ಮೈ-ಮನಗಳಿಗೆ ತನ್ನದೊಂದು, ಮಗನದೊಂದು, ಬದುಕು ಲೀಲಾಜಾಲ, ಅವಳ ಬಯಕೆಯ ಬಳ್ಳಿ ತನ್ನ ಪರಿಮಿತವಾದ ಕ್ಷೇತ್ರದಲ್ಲಿ ಕಡಿ ಬಿಟ್ಟು ಅಲ್ಲಲ್ಲೇ ಮುರಗಿ ಮುರಗಿಯಾಗಿ ಸಿಂಬಿಯಂತೆ ಸುತ್ತಿಕೊಂಡು, ಸ್ಥಳದ ಸಂಕೋಚವನ್ನು ಲೆಕ್ಕಿಸಿಯೂ ಲೆಕ್ಕಿಸದೆಯೂ ತನ್ನ ಸ್ವಭಾವ ಗತಿಯನ್ನು ಕ್ರಮಿಸುತ್ತಲೇ ಇದೆ. ಅವಳು ಹಗಲಿನ ದುಡಿತದಿಂದ ದಣಿದು, ಮಲಗಿ, ಗಂಗವ್ವ, ಧಣಿ ಮತ್ತು ತಿರಕಪ್ಪ ಇವರ ಕನಸಿನಲ್ಲೇ ಆಯಾಸವನ್ನು ಹರಿಸಿಕೊಳ್ಳುತ್ತಾಳೆ. ದೇಸಗತಿಯ ಭವಿಷ್ಯದ ಮಾತು ಅವಳ ಆಲೋಚನೆಗೆ ನಿಲುಕದ್ದೆಂದು ಅವಳು ಬಲ್ಲಳು. ಆದರೆ ತಿರಕಪ್ಪ ನೀಲಕಂಠನಂತಾದರೂ ಮನುಷ್ಯನಾಗಿ ಬೆಳೆಯದಿದ್ದರೆ— ಎಂಬ ಚಿಂತೆಗೆ ಅವಳು ಗಡಬಡಿಸಿ ಎಚ್ಚರಾಗುತ್ತಾಳೆ. ಅದರಲ್ಲಿ ತನ್ನ ಪಾತ್ರವೇನು- ಎಂಬುದೇ ಅವಳನ್ನು ಸುಡುವ ಕಿಚ್ಚು. ಹಿಂದೆ ತಾನು ನಡೆದದ್ದು, ಮುಂದೆ ತಾನಿಲ್ಲದಿದ್ದದ್ದು,— ಆಗ ನಡೆದದ್ದು ಹೇಗೆ— ಏನು ಎಂಬುದು ಅವಳ ವಿಚಾರವ್ಯಾಪ್ತಿಯನ್ನು ಮೀರಿ ಹಬ್ಬಿದ ದಾವಾನಲ. ಆ ಉರಿಯಲ್ಲಿ ಬೆಂದು, ಬಸವಳಿದ ಮುರಿಗೆವ್ವ ದೇಸಗತಿಯ ಸುದ್ದಿಯನ್ನು ಕಂಡವರಿಂದಕೇಳಿ, ಅದರಅಧೋಗತಿಯ ಹೆಸರಿನಲ್ಲಿ ತನ್ನ ಹೆಸರೂ ಸೇರಿಕೊಂಡದ್ದನ್ನರಿತು, ಜೀವವೇ ಬೇಡವಾಗಿ ಬಾವಿಗೆ ಹಾರಹೋಗಿ, ನೀರಲ್ಲಿ ನೀಲಕಂಠನ ನೆರಳನ್ನು ಕಂಡು ಹಿಂದಿರುಗುತ್ತಾಳೆ. ಬೆಳೆದ ಮಗನನ್ನು ಮುಂದೆ ಕೂಡಿಸಿಕೊಂಡು ಎಲ್ಲಾ ಕಥೆಯನ್ನು ಕಣ್ಣೀರ ಕಾಲುವೆ ಹರಿಸಿ ಹೇಳುತ್ತಾಳೆ.

ತಾನು ಹೋಗಿ ಪಾಳು ಬಿದ್ದ ದೇಸಗತಿಯನು ಕಾಣಲಾರಳು; ಮಗನನ್ನೂ ಕಳಿಸಲಾರಳು. ಆದರೆ ಕೇಳಿದ ಮಗ ಹುಚ್ಚು ಹುಮ್ಮಸ್ಸಿನಲ್ಲಿ ಎರಡು ಕತ್ತೆಹೊರೆ ಕಾಳು ಹೊರಸಿಕೊಂಡು ಹೊರಟು ಬಿಟ್ಟ. ಅದು ಬೇಡವೆಂದು ಮುರಿಗೆವ್ವ ಹೇಳಿದಳು; ಮತ್ತೇನು ಮಾಡಬೇಕೆಂದು ಹೇಳದಾದಳು.

ನೀಲಕಂಠ ಆ ಸಂದಿಗ್ಧದಲ್ಲಿ ಕುಳ್ಳಿರಲಾರದೆ ಹೊರಟುಬಿಟ್ಟ. ಅವನು ದೇಸಗತಿಯ ಎತ್ತರವನ್ನೂ ಅರಿಯ; ಸೂಕ್ಷ್ಮವನ್ನೂ ತಿಳಿಯಲಾರ.

ಆದರೆ ಅವನು ತವಕಿಸಿದ್ದು ಅದರ ಪ್ರತ್ಯಕ್ಷ ದರ್ಶನಕ್ಕೆ ಮಾತ್ರ.

ಲೇಖಕರು: ಶ್ರೀ. ವಿ. ಎಸ್. ಕುಸನೂರ, ಎಂ. ಈಡಿ.
ಹುಬ್ಬಳ್ಳಿ

# ಮೈಸೂರ ರಾಜ್ಯದಲ್ಲಿ ಉಚ್ಚ ಮಾಧ್ಯಮಿಕ ಶಿಕ್ಷಣ

ವಿದ್ಯಾರ್ಥಿಗಳ ಮುಖ್ಯ ಜೀವನವು ರೂಪುಗೊಳ್ಳುವುದು ಮಾಧ್ಯಮಿಕ ಶಿಕ್ಷಣದ ಸಮಯದಲ್ಲೆಂಬುದನ್ನು ಮನದಂದರೆ— ಈ ಶಿಕ್ಷಣದ ಮಹತ್ವವು ತಿಳಿಯುವುದು. ಭಾವೀ ಜೀವನ ರೂಪಿಸಿಕೊಳ್ಳಲು ವಿದ್ಯಾರ್ಥಿ ಸನ್ನದ್ಧನಾಗಿರುವಂತ ಶಿಕ್ಷಣದಲ್ಲಿ ಈಗ ಏರ್ಪಾಡು ಮಾಡಲಾಗಿರುವುದು. ಇದೇ ಹಾಯರ ಸೆಕೆಂಡರಿ ಶಿಕ್ಷಣ. ಈ ಶಿಕ್ಷಣ ಪದ್ಧತಿಯ ಪ್ರಾರಂಭಿಕ ಅಭ್ಯಾಸಕ್ರಮದ ಬಗ್ಗೆ ಲೇಖಕರು ಇಲ್ಲಿ ವಿವರಿಸಿರುವರು.

ಜಗತ್ತು ಮಾರ್ಪಾಡು ಹೊಂದುತ್ತ ಹೋಗುತ್ತಿರುವಂತೆ ಅದರ ಹಿಂದೆಯೇ ಶಿಕ್ಷಣ ಕ್ರಮವೂ ಮಾರ್ಪಾಡು ಹೊಂದುತ್ತ ಹೋಗಬೇಕಾಗುತ್ತದೆ. ಹಿರಿಯರಾದವರು, ಜ್ಞಾನಿಗಳು ಇಂದು ತಾವು ಪಡುವ ಅನುಭವವನ್ನು ತಮ್ಮ ಮುಂದೆ ಬರುವ ಪೀಳಿಗೆಗೆ ತಿಳಿಸಿ ಹೇಳುವದು ಮತ್ತು ತಾವು ಈಗ ಅನುಭವಿಸುತ್ತಿರುವ ಕಷ್ಟ ನಷ್ಟಗಳನ್ನು ಮುಂದೆ ಬರುವ ಪೀಳಿಗೆಯು ಅನುಭವಿಸದಂತೆ ಜಾಗ್ರತೆ ವಹಿಸಿ ಅವರನ್ನು ಆದಷ್ಟು ಮಟ್ಟಿಗೆ ಸುಖಿಯಾಗುವಂತೆ ಮಾಡುವದೂ ಜಗತ್ತನ್ನೂ ಜನಾಂಗವನ್ನೂ ಒಂದು ಸುಂದರ ರೂಪಕ್ಕೆ ತರುವಂತೆ ಮಾಡಿ ಎಲ್ಲೆಲ್ಲಿಯೂ ಸುಖ, ಶಾಂತಿ, ತುಷ್ಟಿಪುಷ್ಟಿಯನ್ನು ಮಾನವ ಜೀವನದಲ್ಲಿ ಬೀರುವುದೇ ಶಿಕ್ಷಣದ ಮೂಲ ಉದ್ದೇಶ.

ಇಂದು ಜಗತ್ತು ಬಹು ವೇಗದಿಂದ ಮುಂದುವರಿಯುತ್ತಿದೆ. ಅದರ ಬೆಂಬತ್ತುವುದು ಶಿಕ್ಷಣ ಕ್ರಮಕ್ಕೆ ಬಹು ತೊಂದರೆಯಾಗತೊಡಗಿದೆ. ಜಗತು ಮುಂದುವರಿಯುತ್ತಿರುವಂತೆ ಶಿಕ್ಷಣ ಯೋಜನೆಗಳು ಅದರ ಹಿಂದೆಯೇ ಮೇಲಿಂದ ಮೇಲೆ ಬದಲಾಗುತ್ತಲೇ ಬಂದಿವೆ. ಅದರಲ್ಲೂ ನಮ್ಮ ಭಾರತದಲ್ಲಿ ಬ್ರಿಟಿಶರು ಕಾಲಿಟ್ಟಾಗಿನಿಂದ ಶಿಕ್ಷಣದಲ್ಲಿ ಮಾರ್ಪಾಡು ನಿರಂತರವಾಗಿ ನಡದೇ ಇದೆ. ಸರಕಾರವು ಶಿಕ್ಷಣದಲ್ಲಿ ಕೈಹಾಕತೊಡಗಿದರೆ ಇದು ಅನಿವಾರ್ಯ. ಶಿಕ್ಷಣದಲ್ಲಿ ಇಷ್ಟೊಂದು ಸಮಸ್ಯೆಗಳೂ ಬದಲಾವಣೆಗಳೂ ಭಾರತದಲ್ಲಿ ಹಿಂದೆ ಎಂದೂ ಆದುದು ಕಂಡು ಬಂದಿಲ್ಲ.

ಸರಕಾರವು ಶಿಕ್ಷಣ ಕ್ಷೇತ್ರದಲ್ಲಿ ಇಂದು ಕೆಲ ಮಟ್ಟಿಗೆ ಕೈಹಾಕಲೇಬೇಕಾಗುತ್ತದೆ. ತನ್ನ ಪ್ರಜೆಗಳನ್ನು ಸುಶಿಕ್ಷಿತರನ್ನಾಗಿ, ಸುಸಂಸ್ಕೃತರನ್ನಾಗಿ, ಯೋಗ್ಯ ನಾಗರಿಕರನ್ನಾಗಿ, ಮಾಡಿ ತಮ್ಮ ರಾಜ್ಯಕ್ಕೆ ತಮ್ಮ ದೇಶಕ್ಕೆ ಅವರಿಂದ ಸಹಾಯವಾಗುವಂತೆ ನೋಡಿಕೊಳ್ಳುವುದು ಮತ್ತು ತನ್ನ ಪ್ರಜೆಗಳನ್ನು ಶಿಕ್ಷಣದ ಮೂಲಕ ಸುಧಾರಿಸುವುದು ಇಂದು ಸರಕಾರದ ಆದ್ಯ ಕರ್ತವ್ಯವಾಗಿದೆ. ಅಲ್ಲದೆ ಎಲ್ಲ ದೇಶಗಳೂ ಒಂದರೊಡನೆ ಒಂದು ಸಂಪರ್ಕ ಬೆಳೆಸುತ್ತಿರುವುದರಿಂದ ಅವುಗಳಿಗೆಲ್ಲ ಸರಿಹೋಗುತ್ತಿರುವಂತೆ ಶಿಕ್ಷಣದಲ್ಲಿ ಕೆಲಮಟ್ಟಿಗೆ ಮೇಲಿಂದ ಮೇಲೆ ಮಾರ್ಪಾಡು ಮಾಡುವ ಪ್ರಸಂಗಗಳೂ ಬರುತ್ತವೆ.

## ಬ್ರಿಟಿಶರ ಕಾಲದಲ್ಲಿ

ಬ್ರಿಟಿಶರ ಆಡಳಿತದಲ್ಲಿ ಭಾರತದಲ್ಲಿ ಅನೇಕ ಸುಧಾರಣೆಗಳು ಕಂಡು ಬಂದರೂ ನಿರುದ್ಯೋಗದಿಂದ ಬಡತನದ ಭೂತವು ಪ್ರವೇಶಿಸಿ ಜನರ ಬುದ್ಧಿ ಭ್ರಂಶವನ್ನು ಮಾಡಿತು. ಜೀವನವನ್ನು ಸುಸೂತ್ರವಾಗಿ ಸಾಗಿಸುವುದೇ ಸಾಮಾನ್ಯ ಜನಕ್ಕಾಗಲಿ ಮುಂದುವರಿದ ಜನಾಂಗಕ್ಕಾಗಲಿ ಒಂದಿಲ್ಲೊಂದು ರೀತಿಯಿಂದ ದುಸ್ತರವಾಯಿತು. ಒಂದೇ ಮಾತಿನಲ್ಲಿ ಹೇಳಬೇಕೆಂದರೆ ಭಾರತವು ತನ್ನ ವೈಶಿಷ್ಟ್ಯ ಮತ್ತು ವ್ಯಕ್ತಿತ್ವವನ್ನು ಕಳೆದುಕೊಂಡಿತು.

ಇದು ಮೊದಲಿನಿಂದಲೂ ಭಾರತೀಯರಿಗೆ ತಿಳಿದು ಬರುತ್ತಿದ್ದರೂ ಇಂಗ್ಲೀಷ ಪದ್ಧತಿಯ ಜೀವನ ಮತ್ತು ಶಿಕ್ಷಣಕ್ಕೆ ಬುದ್ಧಿವಂತರಾದವರನೇಕರು ಮಾರುಹೋಗಿ ಅವರನ್ನೇ ಅನುಸರಿಸತೊಡಗಿದರು. ಬ್ರಿಟಿಶರಾದರೂ ತಮ್ಮ ರಾಜಕೀಯ ಸೂತ್ರಗಳಿಗೆ ಅನುಕೂಲವಾಗುವಂತೆ ಶಿಕ್ಷಣ ಕ್ರಮದಲ್ಲಿ ಅನೇಕ ಬದಲಾವಣೆಗಳನ್ನು ಮಾಡುತ್ತ ಬಂದರು.

೧೮೩೫ ರಿಂದ ಲಾರ್ಡ್ ಮೆಕಾಲೆಯವರ ಕಾಲದಿಂದ ೧೯೪೪ ರಲ್ಲಿ ಎರಡನೇ ಮಹಾಯುದ್ಧ ಮುಗಿಯುವ ವರೆಗೂ ಮೇಲಿಂದ ಮೇಲೆ ಅನೇಕ ವಿಚಾರಣಾ ಸಮಿತಿಗಳನ್ನು ನಿಯಮಿಸಿ ಶಿಕ್ಷಣ ಪದ್ಧತಿಯಲ್ಲಿ ಅನೇಕ ಬದಲಾವಣೆಗಳನ್ನು ಮಾಡುತ್ತ ಬಂದಿದ್ದರೂ ಶಿಕ್ಷಣವು ಹೆಚ್ಚಾಗಿ ಸಿರಿವಂತರಿಗೂ ಬುದ್ಧಿವಂತರಿಗೂ ಮೀಸಲಾಗಿ ಸಾಹಿತ್ಯದಲ್ಲಿಯೇ ಹೆಚ್ಚು ಮುಂದುವರೆಯುತ್ತಿತ್ತೇ ಹೊರತು ವಿಜ್ಞಾನ, ತಾಂತ್ರಿಕ, ಕೈಗಾರಿಕೆ, ವ್ಯಾಪಾರ, ಉದ್ಯೋಗಗಳ ಶಿಕ್ಷಣದಲ್ಲಿ ಅದು ಹಿಂದೆ ಉಳಿಯಿತು. ಇದರ ಜೊತೆಯಲ್ಲಿ ಹೆಣ್ಣುಮಕ್ಕಳಿಗಿದ್ದ ಗೃಹ-ವಿಜ್ಞಾನವೂ ವೈದ್ಯಕೀಯ ವಿಜ್ಞಾನವೂ ಅಸ್ತ-ವ್ಯಸ್ತವಾಗಿ ಪ್ರತಿಯೊಬ್ಬರ ಗೃಹಕೃತ್ಯದಲ್ಲಿಯೂ ಅಸಮಾಧಾನ, ಅತೃಪ್ತಿ, ಅಸಂತೋಷಗಳು ತೋರಹತ್ತಿದವು.

೧೯೪೪ ರಲ್ಲಿ ಭಾರತ ಸರಕಾರಕ್ಕೆ ಶಿಕ್ಷಣ ರಂಗದಲ್ಲಿ ಸಲಹೆ ಸೂಚನೆಯನ್ನು ನೀಡಲಿಕ್ಕೆ ನಿಯಮಿಸಿದ ಕೇಂದ್ರ ಶಿಕ್ಷಣ ಮಂಡಳವು ಎರಡನೇ ಮಹಾಯುದ್ಧಾನಂತರದಲ್ಲಿ ಶಿಕ್ಷಣದಲ್ಲಿ ಅವಶ್ಯವಾಗಿ ಮಾಡಬೇಕಾದ ಮಾರ್ಪಾಟುಗಳ ಬಗ್ಗೆ ಒಂದು ವರದಿಯನ್ನು ಒಪ್ಪಿಸಿತು. ಇದಕ್ಕೆ "ಸಾರ್ಜಂಟ ಕಮಿಟಿ ರಿಪೋರ್ಟ" ಎನ್ನುವರು.

ಇದರಲ್ಲಿ ಭಾರತದಲ್ಲಿ ೬ ರಿಂದ ೧೪ ವರುಷಗಳ ವರೆಗಿನ ಮಕ್ಕಳಿಗೆ ಕಡ್ಡಾಯವಾಗಿ ಪುಕ್ಕಟೆ ಪ್ರಾಥಮಿಕ ಶಿಕ್ಷಣವನ್ನು ಜಾರಿಯಲ್ಲಿ ತರಬೇಕು. ವಿದ್ಯಾರ್ಥಿಗಳ ೧೧ ನೇ ವಯಸ್ಸಿನಿಂದ ಅಂದರೆ ೫ನೇ ವರ್ಗದಿಂದ ೧೦ನೇ ವರ್ಗದವರೆಗಿನ ಅಭ್ಯಾಸ ಕ್ರಮದಲ್ಲಿ ಔದ್ಯೋಗಿಕ, ತಾಂತ್ರಿಕ, ವಾಣಿಜ್ಯ, ಒಕ್ಕಲುತನ ಮುಂತಾದ ಶಿಕ್ಷಣಗಳ ಏರ್ಪಾಡಾಗಬೇಕಲ್ಲದೆ ವಿಶ್ವವಿದ್ಯಾಲಯದ ಅಭ್ಯಾಸ ಮುಂದುವರಿಸುವವರಿಗೂ ಇದರಲ್ಲಿ ಅನುಕೂಲತೆಗಳಿರಬೇಕೆಂದು ಅದು ಸೂಚಿಸಿತು.

ಶಾಲೆಯಲ್ಲಿಯ ವಿದ್ಯಾಭ್ಯಾಸ ಮುಗಿಸಿದೊಡನೆಯೇ ಯಾರಿಗಾದರೂ ತಮ್ಮ ಉಪಜೀವನ ಮಾರ್ಗವನ್ನು ಅನಾಯಾಸವಾಗಿ ಕಂಡುಕೊಳ್ಳಲಿಕ್ಕೆ ಅನುವು ಮಾಡಿಕೊಡುವುದೇ ಇದರ ಉದ್ದೇಶವಾಗಿತ್ತು. ಇದರಿಂದಾಗಿ ಪ್ರಾಥಮಿಕ ಶಾಲೆಗಳಲ್ಲಿ ಮೂಲ ಶಿಕ್ಷಣವು ಪ್ರಾರಂಭವಾಯಿತು. ಮತ್ತು ಸರಕಾರವು ಅಲ್ಲಲ್ಲಿ ತಾಂತ್ರಿಕ ಶಾಲೆಗಳನ್ನು ತೆರೆಯಿತು.

## ಮುದಲಿಯಾರ ಆಯೋಗದ ವರದಿ

೧೯೫೨-೫೩ ರಲ್ಲಿ "ಮುದ್ಲಿಯಾರ ಆಯೋಗವು ಮಾಧ್ಯಮಿಕ ಶಿಕ್ಷಣವನ್ನು ಪುನಃ ಸಮಗ್ರ ದೃಷ್ಟಿಯಿಂದ ಪರಿಶೀಲಿಸಿ ಸರಕಾರಕ್ಕೆ ತನ್ನ ವರದಿಯನ್ನು ಒಪ್ಪಿಸಿತು. ಅದನ್ನೇ ಬಹು ಅಂಶವಾಗಿ ಸರಕಾರವು ಈಗ ಪ್ರತಿಯೊಂದು ರಾಜ್ಯದ "ಶಿಕ್ಷಣ ಸಮೀಕರಣ ಸಮಿತಿಯ" ಮುಖಾಂತರ ಜಾರಿಯಲ್ಲಿ ತರುತ್ತಿದೆ.

ಈ ಮೇರೆಗೆ ಈಗ ಮೈಸೂರು ರಾಜ್ಯದಲ್ಲಿ ೧ ರಿಂದ ೭ ನೇ ವರ್ಗದ ವರೆಗೆ ಪ್ರಾಥಮಿಕ ಶಾಲೆ. ೮ ರಿಂದ ೧೧ ರ ವರೆಗಿನ ವರ್ಗಗಳುಳ್ಳ ಶಾಲೆ ಉಚ್ಚ ತರಗತಿಯ ಮಾಧ್ಯಮಿಕ ಶಾಲೆಯೆಂದೂ ೮ ರಿಂದ ೧೦ ರ ವರೆಗಿನ ಶಾಲೆ ಮಾಧ್ಯಮಿಕ ಶಾಲೆಯೆಂದೂ ಪರಿವರ್ತಿಸಲಾಗಿರುವುದು. ಎಲ್ಲ ಮಾಧ್ಯಮಿಕಶಾಲೆಗಳೂ ಉಚ್ಚ ತರಗತಿಯ ಮಾಧ್ಯಮಿಕ ಪಾಠಕ್ರಮವನ್ನೇ ಅನುಸರಿಸುತ್ತವೆ. ೧೦ ನೇ ಇಯತ್ತೆಯನ್ನು ಪೂರ್ತಿಗೊಳಿಸಿ ಮಾಧ್ಯಮಿಕ ಶಿಕ್ಷಣವನ್ನು ಮುಗಿಸಬಹುದು.

ಮಾಧ್ಯಮಿಕ ಶಿಕ್ಷಣಗಳ ಮಂಡಳ ಪರೀಕ್ಷೆಗಳನ್ನು ನಡಸುವುದು. ಉತ್ತೀರ್ಣರಾದವರಿಗೆ ಪ್ರಶಸ್ತಿ ಪತ್ರವನ್ನು ಕೊಡುವುದು. ಮಾಧ್ಯಮಿಕ ಶಾಲೆಗಳಲ್ಲಿ ೧೧ನೇ ವರ್ಗದಲ್ಲಿ ಮಾತ್ರ ವಿಶ್ವವಿದ್ಯಾಲಯದ ಅಭ್ಯಾಸವನ್ನು ಮುಂದುವರಿಸಲಿಕ್ಕೆ ಅರ್ಹತೆಯನ್ನು ಪಡೆಯಬೇಕಾದ ( Pre university Course ) ವಿಷಯಗಳಲ್ಲಿ ತರಬೇತಿಯನ್ನು ಕೊಡಲಾಗುವುದು. ಈ ಪರೀಕ್ಷೆಯನ್ನು ಮಾಧ್ಯಮಿಕ ಶಿಕ್ಷಣ ಮಂಡಳವೇ ಏರ್ಪಾಡುಮಾಡಿ ಅದರಲ್ಲಿ ಉತ್ತೀರ್ಣರಾದವರಿಗೆ ವಿಶ್ವವಿದ್ಯಾಲಯದ ಅಭ್ಯಾಸಕ್ಕೆ ಅರ್ಹತೆಯನ್ನು ಪಡೆದ ಬಗ್ಗೆ ಪ್ರಶಸ್ತಿಪತ್ರವನ್ನು ದಾನ ಮಾಡುತ್ತದೆ.

ಇದರಿಂದಾಗಿ ಅಲ್ಪ ವೆಚ್ಚದಲ್ಲಿಯೇ ವಿದ್ಯಾರ್ಥಿಗಳು ತಮ್ಮ ಮುಂದಿನ ವಿದ್ಯಾಭ್ಯಾಸದ ಯೋಗ್ಯತೆಯನ್ನು ಕಂಡುಕೊಳ್ಳಬಹುದಲ್ಲದೆ ಇಂಥ ಶಾಲೆಯಲ್ಲಿ ಹೆಚ್ಚಿನ ಪದವೀಧರರಾದ ಶಿಕ್ಷಕರು ಇರುವುದರಿಂದ ಮಾಧ್ಯಮಿಕ ಶಾಲೆಯಲ್ಲಿಯ ಶಿಕ್ಷಣ ಮಟ್ಟವು ಬಹು ಅಂಶದಿಂದ ಸುಧಾರಣೆಯನ್ನು ಹೊಂದುತ್ತದೆ. ಇದರಿಂದ ಮಾಧ್ಯಮಿಕ ಶಿಕ್ಷಣವನ್ನು ಪಡೆಯುವ ವಿದ್ಯಾರ್ಥಿಗಳಿಗೆ ಹೆಚ್ಚು ಅನುಕೂಲವೂ ಆಗುತ್ತದೆ. ಇವೆರಡು ದೊಡ್ಡ ಅನುಕೂಲತೆಗಳು ಮಾಧ್ಯಮಿಕ ಶಾಲೆಗಳನ್ನು ಉಚ್ಚತರಗತಿಯ ಮಾಧ್ಯಮಿಕ ಶಾಲೆಗಳನ್ನಾಗಿ ಪರಿವರ್ತಿಸುವುದರಿಂದ ದೊರಕುತ್ತವೆ.

ಈಗ ಸದ್ಯ : ಮುಂಬೈ ಕರ್ನಾಟಕದಲ್ಲಿಯ ವಿವಿಧ ಶಾಲೆಗಳಲ್ಲಿ ಈ ವ್ಯಾಸಂಗಕ್ರಮ ಪ್ರಾರಂಭಿಸಿದ್ದು ೧೯೬೩—೬೪ ರಿಂದ ಹಾಯರ ಸೆಕೆಂಡರಿ ೧೧ನೇ ವರ್ಗವು ಪ್ರಾರಂಭವಾಗುವುದು.

ಇದರಿಂದ ವರುವರುಷವೂ ಉಚ್ಚತರದ ಮಾಧ್ಯಮಿಕ ಶಾಲೆಗಳಲ್ಲಿ ಈಗಿರುವ ಕೆಳಗಿನ ವರ್ಗಗಳನ್ನು ಅಂದರೆ ೫-೬-೭ ಈ ವರ್ಗಗಳನ್ನು ತೆಗೆದು ಹಾಕಿ ಅವುಗಳನ್ನು ಪ್ರಾಥಮಿಕ ಶಾಲೆಯಲ್ಲಿಯೇ ಸಮಾವೇಶವಾಗುವಂತೆ ಮಾಡಿ ಪ್ರಾಥಮಿಕ ಶಾಲೆಗಳನ್ನು ೧ ರಿಂದ ೭ನೇ ವರ್ಗದವರೆಗೆ ಪೂರ್ಣವಾಗಿ ಮಾಡಲಾಗುವದು.

## ಹೊಸ ಮೈಸೂರಲ್ಲಿ ಇಂದಿನ ಸ್ಥಿತಿ

ಇನ್ನು ಒಂದು ಹೊಸದಾಗಿ ಮಾರ್ಪಡಿಸಿದ ಉಚ್ಚ ತರಗತಿಯ ಮಾಧ್ಯಮಿಕ ಶಾಲೆಗಳಲ್ಲಿ ಯಾವ ಯಾವ ಉದ್ದೇಶದಿಂದ ಯಾವ ಯಾವ ವಿಷಯಗಳನ್ನು ಕಲಿಸುವ ಏರ್ಪಾಡು ಮಾಡಲಾಗಿದೆಂಬುದನ್ನು ಅರಿಕೆ ಮಾಡಿಕೊಳ್ಳುವ ಮೊದಲು ಹೊಸ ಮೈಸೂರರಾಜ್ಯದಲ್ಲಿ ವಿವಿಧ ಭಾಗಗಳು ಸೇರ್ಪಡೆಯಾದಾಗ್ಗೆ ಅವುಗಳಲ್ಲಿಯ ಶೈಕ್ಷಣಿಕ ಸ್ಥಾನಮಾನಗಳು ಹೇಗಿದ್ದವೆಂಬುದನ್ನು ತಿಳಿದುಕೊಂಡರೆ ಇಂದಿನ ಶಿಕ್ಷಣ ಸಮೀಕರಣ ಸಮಿತಿಯು ತಯಾರಿಸಿದ ಪಾಠಕ್ರಮವೂ ಪಠ್ಯಪುಸ್ತಕಗಳೂ ಸರಿಯಾಗಿವೆಯೋ ಇಲ್ಲವೋ ಎಂಬುದನ್ನು ಅರಿಕೆ ಮಾಡಿಕೊಳ್ಳಲಿಕ್ಕೆ ಅವಕಾಶ ದೊರೆಯುತ್ತದೆ.

ಭಾರತದಲ್ಲಿ ಓದು ಬರಹ ಬಲ್ಲವರ ಸಂಖ್ಯೆ ೧೦೦ ಕ್ಕೆ ೧೬.೬೧ ಇದೆ.

| | | | | |
|---|---|---|---|---|
| ಅದರಲ್ಲಿ ಮೈಸೂರ ರಾಜ್ಯದಲ್ಲಿ | ,, | ೧೯.೩೦ | ,, |
| ,, | ಧಾರವಾಡ ಜಲ್ಲೆಯಲ್ಲಿ | ,, | ೨೭.೫ | ,, |
| ,, | ಕೊಡಗು | ,, | ೨೭.೨ | ,, |
| ,, | ಬೆಂಗಳೂರು | ,, | ೨೬.೩ | ,, |
| ,, | ಮಂಡ್ಯ | ,, | ೧೪.೨ | ,, |
| ,, | ಬಳ್ಳಾರಿ | ,, | ೧೨.೫ | ,, |
| ,, | ರಾಯಚೂರ | ,, | ೯.೭ | ,, |
| ,, | ಗುಲಬುರ್ಗಾ | ,, | ೮.೪ | ,, |
| ,, | ಬೀದರ | ,, | ೭.೨ | ,, |

ಹೀಗೆ ಪರಿಸ್ಥಿತಿ ಇರುವದು.

ಇದರಂತೆ ಸಮಗ್ರ ಮೈಸೂರು ರಾಜ್ಯದಲ್ಲಿ ಸಮಾವೇಶಗೊಂಡ, ಮುಂಬಯಿ ಕರ್ನಾಟಕ, ಮದ್ರಾಸ ಕರ್ನಾಟಕ, ಹೈದರಾಬಾದ ಕರ್ನಾಟಕ, ಕೊಡಗು ಮತ್ತು ಮೊದಲಿನ ಮೈಸೂರು ರಾಜ್ಯಗಳಲ್ಲಿ ಭಿನ್ನಭಿನ್ನವಾದ ಶಿಕ್ಷಣ ಕ್ರಮವೂ ಇದ್ದಿತು. ಇವೆಲ್ಲವುಗಳನ್ನು ಒಂದೇ ವಿಧವಾದ ಶಿಕ್ಷಣದ ಕೆಳಗೆ ತರುವಂತೆ ಮತ್ತು ಅಲ್ಲಲ್ಲಿ ಹೆಚ್ಚು ಕಡಿಮೆಯಾಗಿದ್ದ ಶಿಕ್ಷಣದ ಮಟ್ಟವನ್ನು ಒಂದು ಸಮತೂಕಕ್ಕೆ ತರುವಂತೆ ಆಯಾ ಭಾಗಕ್ಕೆ ಆದಷ್ಟು ಸರಿ ಹೋಗುವಂತೆ ಪಾಠಕ್ರಮ. ಮತ್ತು ಪಠ್ಯ ಪುಸ್ತಕಗಳನ್ನು ತಯಾರಿಸಿದ್ದಾರೆ. ಎಲ್ಲ ಪ್ರದೇಶಗಳೂ ಒಂದು ಮಟ್ಟಕ್ಕೆ ಬರಲಿಕ್ಕೆ ಇನ್ನು ಮೂರು ನಾಲ್ಕು ವರುಷಗಳು ಹಿಡಿಯಬಹುದೆಂದೂ ಅನಂತರ ಎಲ್ಲ ಕಡೆಯಲ್ಲಿಯೂ ಒಂದೇ ಮಟ್ಟದ ಶಿಕ್ಷಣವನ್ನು ಪ್ರಚಾರದಲ್ಲಿ ತರಬಹುದೆಂದೂ ಶಿಕ್ಷಣ ಸಮೀಕರಣ ಸಮಿತಿಯು ಅಭಿಪ್ರಾಯಪಟ್ಟಿದೆ. ಅಲ್ಲಲ್ಲಿ ಪಠ್ಯಪುಸ್ತಕಗಳು ಬೇರೆ ಬೇರೆಯಾಗಿರುವದರಿಂದ ಇದನ್ನು ತಿಳಿಸಬೇಕಾಯಿತು. ಮುಂದಾದರೂ ಶಿಕ್ಷಣಮಟ್ಟವು ಒಂದೇ ಆಗುತ್ತಿದ್ದರೂ ಎಸ್.ಎಸ್.ಎಲ್.ಸಿ. ವರೆಗಿನ ಪಠ್ಯ ಪುಸ್ತಕಗಳು ಬೇರೆಯಾಗಿರಬಹುದು. ಇದರಿಂದಾಗಿ ಬಹು ಜನರಿಗೆ ಪಠ್ಯಪುಸ್ತಕವನ್ನು ಬರೆಯುವದಕ್ಕೆ ಅನುಕೂಲವಾಗುವದೆಂದು ಸಮಿತಿಯ ಅಭಿಪ್ರಾಯವಿದೆ.

ಅದರಂತೆಯೆ ಮಾಧ್ಯಮಿಕ ಶಿಕ್ಷಣವು ಹಿತ-ಮಿತವಾಗುವಂತೆಯೂ ಶಿಕ್ಷಣದ ನಂತರ ಮುಂದೇನು ? ಎಂಬ ಪ್ರಶ್ನೆ ಆದಷ್ಟು ಉದ್ಭವಿಸದಂತೆ ವ್ಯರ್ಥವಾಗಿ ಸಮಯ, ಹಣದ ಅಪವ್ಯಯವಾಗದಂತೆ ಇಂದಿನ ನಾಗರಿಕ ಜೀವನಕ್ಕೂ ಸ್ವಂತಕ್ಕೂ ಅವಶ್ಯವಾಗಿ ಬೇಕಾಗುವ ವಿಷಯಗಳನ್ನೊಳಗೊಂಡ ಪಾಠಕ್ರಮಗಳನ್ನೂ ಪಠ್ಯಪುಸ್ತಕಗಳನ್ನೂ ಜೊತೆಯಲ್ಲಿಯ ಕೈಗಾರಿಕೆ, ಉದ್ಯೋಗಗಳನ್ನೂ ವ್ಯವಸಾಯಗಳ ತರಬೇತಿ ಶಿಕ್ಷಣವನ್ನೂ ಕೊಡುವಂತೆ ಕೆಳಗಿನ ವಿಷಯಗಳನ್ನು ಇಂದಿನ ಹೊಸ ಮಾಧ್ಯಮಿಕ ಶಿಕ್ಷಣ ಪದ್ಧತಿಯಲ್ಲಿ ಯೋಜನೆಮಾಡಿದ್ದಾರೆ

ಹೋದ ವರುಷದ ಮಾಧ್ಯಮಿಕ ೮ನೇ ತರಗತಿ ಉತ್ತೀರ್ಣರಾದವರನ್ನು ಈ ವರುಷ ಉಚ್ಚ ಮಾಧ್ಯಮಿಕ ಶಿಕ್ಷಣ ೮ ನೇ ವರ್ಗದಲ್ಲಿ ಸೇರಿಸಲಾಗಿದೆ. ಈ ವರುಷದಿಂದ ಅವರು ಹಾಯರ ೮ ನೇ ವರ್ಗದಲ್ಲಿ ಮುಂದಿನ ವರುಷ ಹಾಯರ್ ೯ನೇ ವರ್ಗದಲ್ಲಿ ಅದರ ಮುಂದಿನ ವರುಷ ಹಾಯರ್ ೧೦ ನೇ ವರ್ಗದಲ್ಲಿ ಅಭ್ಯಾಸ ಮಾಡಿ ಎಸ್. ಎಸ್. ಎಲ್. ಸಿ. ಪರೀಕ್ಷೆಗೆ ಅರ್ಹರಾಗುತ್ತಾರೆ. ಹೀಗೇಯೇ ಮುಂಬರುವ ಮೂರು ವರುಷ ನಡೆದು ೧೯೬೩ ರಲ್ಲಿ ಪ್ರಾಥಮಿಕ ೭ ನೇ ವರ್ಗವನ್ನು ಮುಗಿಸಿದವರು ನೇರವಾಗಿ ಹಾಯರ ಸೆಕೆಂಡರಿ ೮ ನೇ ವರ್ಗಕ್ಕೆ ಸೇರುತ್ತಾರೆ.

## ಎಂಟನೆ ವರ್ಗದ ಅಭ್ಯಾಸ ಕ್ರಮ

ಈ ೮ನೇ ವರ್ಗದ ಶಿಕ್ಷಣದಲ್ಲಿ—

(೧) ಭಾಷಾಭ್ಯಾಸ (ಇದರಲ್ಲಿ ಕನ್ನಡ, ತೆಲುಗು, ಉರ್ದು, ಪರ್ಶಿಯನ್, ಅರೇಬಿಕ್, ಸಂಸ್ಕೃತ, ಹಿಂದೀ, ತಮಿಳು, ಮರಾಠಿ, ಪ್ರಾಕೃತ, ಮತ್ತು ಪಾಲಿ ಇಷ್ಟು ಭಾಷೆಗಳ ಗುಂಪು.) (೨) ಇಂಗ್ಲೀಷ. (೩) ಹಿಂದೀ, (೪) ಸೋಶಲ್ ಸ್ಟಡೀಸ್, (೫) ಜನರಲ್ ಸಾಯನ್ಸ, (೬) ಜನರಲ್ ಮೆಥಮೆಟಿಕ್ಸ, (೭) ಕೈಗಾರಿಕೆ ( crafts ) (೮) ಶರೀರ ಶಿಕ್ಷಣ, (೯) ಲಲಿತ ಕಲೆಗಳು (fine arts) ಇಷ್ಟು ವಿಷಯಗಳು ಅಡಕವಾಗಿವೆ.

ಇವುಗಳಲ್ಲಿ ಕನ್ನಡ, ಇಂಗ್ಲೀಷ, ಹಿಂದೀ, ಸೋಶಲ್ ಸ್ಟಡೀಸ್, ಜನರಲ್ ಸಾಯನ್ಸ ಮತ್ತು ಎಲಿಮೆಂಟರೀ ಮೆಥಮೆಟಿಕ್ಸ ಇವು ಕಡ್ಡಾಯದ

ವಿಷಯಗಳೂ ಇವುಗಳ ಜೊತೆಯಲ್ಲಿ, ಹ್ಯುಮ್ಯಾನಿಟೀಸ್, ಸಾಯನ್ಸ್, ಟೆಕ್ನಿಕಲ್, ಕಾಮರ್ಸ್, ಲಲಿತಕಲೆ ಗೃಹವಿಜ್ಞಾನ, ಒಕ್ಕಲುತನ ಇವುಗಳಲ್ಲಿ ಒಂದನ್ನು.

ಇವುಗಳಲ್ಲಿ ಭಾಷಾಭ್ಯಾಸವನ್ನು ಹೀಗೆ ಜೋಡಣೆ ಮಾಡಿ ತೆಗೆದುಕೊಳ್ಳಬೇಕೆಂದು ಕೆಳಗೆ ತೋರಿಸಿದೆ.

ಒಂದು ರಾಜ್ಯದಲ್ಲಿ ಆ ರಾಜ್ಯದ ಮುಖ್ಯ ಭಾಷೆ ಇರುತ್ತದೆ. ಅದಕ್ಕೆ ಪ್ರಾದೇಶಿಕ ಭಾಷೆ ಎನ್ನುವರು. ಅದರ ಹೊರತಾಗಿ ಅಲ್ಲಿ ವಾಸಿಸುವ ವಿವಿಧ ಜನಾಂಗಗಳ ಮಾತೃಭಾಷೆ ಬೇರೆ ಬೇರೆಯಾಗಿ ಇರುವದು. ಇದರ ಹೊರತಾಗಿ ಈಗ ಮಾತನಾಡುವ ಬಳಕೆಯಲ್ಲಿ ಇಲ್ಲದ ಪೂರ್ವದ ಭಾಷೆಗಳ ಉದ್ಗ್ರಂಥಗಳು ನಮಗೆ ದೊರೆಯುತ್ತವೆ. ಆ ಭಾಷೆಯ ಗ್ರಂಥಾಭ್ಯಾಸಕ್ಕೆ ಅಭಿಜಾತ ಭಾಷೆ (Classical) ಅಭ್ಯಾಸವೆಂದು ಹೆಸರು. ಈಗ ಸಂಸ್ಕೃತ, ಪ್ರಾಕೃತ ಪಾಲೀ, ಅರೇಬಿಕ್, ಉರ್ದು, ಪರ್ಸಿಯನ್ ಮುಂತಾದ ಭಾಷೆಗಳು ಭಾರತದಲ್ಲಿ ಬಳಿಕೆಯಲ್ಲಿವೆ.

ಭಾಷಾಭ್ಯಾಸದಲ್ಲಿ— ಪ್ರಾಂತಿಕ ಭಾಷೆ ಅಥವಾ ಮಾತೃಭಾಷೆ ಅಥವಾ ಪ್ರಾಂತಿಕ ಮತ್ತು ಮಾತೃಭಾಷೆಯನ್ನು ಕೂಡಿಕೊಂಡು ಅಥವಾ ಪ್ರಾಂತಿಕ ಭಾಷೆ ಮತ್ತು ಅಭಿಜಾತ ಭಾಷೆಯಲ್ಲಿ ಒಂದು ಕೂಡಿಸಿಕೊಂಡು ಅಥವಾ ಮಾತೃಭಾಷೆ ಮತ್ತು ಅಭಿಜಾತ ಭಾಷೆ ಇವೆರಡನ್ನು ಜೋಡಣೆ ಮಾಡಿ ಭಾಷಾಭ್ಯಾಸವನ್ನು ತೆಗೆದುಕೊಳ್ಳಬಹುದು.

ಈ ವಿಧವಾದ ಭಾಷಾಭ್ಯಾಸ ಕ್ರಮವು ಪ್ರಾಂತ ಭಾಷೆಯನ್ನಾಗಲಿ ಅಥವಾ ಮಾತೃಭಾಷೆಯನ್ನಾಗಲಿ ವಿವರವಾಗಿ ಅಭ್ಯಾಸ ಮಾಡಲಿಕ್ಕೂ ಇವುಗಳ ಜೊತೆಯಲ್ಲಿ ಭಾಷೆಗಳ ಬೆಳವಣಿಗೆಗಾಗಿ ಅವಶ್ಯವಾಗಿ ಬೇಕಾಗುವ ಅಭಿಜಾತ ಭಾಷೆಯ ಅಭ್ಯಾಸ ಮಾಡಲಿಕ್ಕೂ ಮತ್ತು ಅಭಿಜಾತ ಭಾಷೆಯಲ್ಲಿ ಅಭಿರುಚಿಯನ್ನು ಹುಟ್ಟಿಸಲಿಕ್ಕೂ ಬಹಳ ಅನುಕೂಲವಾಗುತ್ತದೆ.

ಅದೇ, ಕನ್ನಡ ಕಂಪೋಜಿಟ್ ಮಾದರಿಯನ್ನು ಇಲ್ಲಿ ತೋರಿಸಿದೆ.

ಮಾತೃಭಾಷೆ + ಅಭಿಜಾತ ಭಾಷೆ (ಯಾವುದಾದರೊಂದು)

ಮಾತೃಭಾಷೆ + ಪ್ರಾಂತಭಾಷೆ

ಪ್ರಾಂತಭಾಷೆ + ಅಭಿಜಾತ ಭಾಷೆ

ಇದರಲ್ಲಿ ಮಾತೃಭಾಷಾಭ್ಯಾಸವು ಯಾವಾಗಲೂ ವಿವರವಾಗಿರುತ್ತದೆ.

ಹಿಂದೀ ಮರಾಠಿ ಮಾತೃಭಾಷೆಯಾಗಿದ್ದವರು ಅದರ ಜೊತೆಯಲ್ಲಿ ಕನ್ನಡವನ್ನು ಅಂದರೆ ಪ್ರಾಂತ ಭಾಷೆಯನ್ನು ಅವಶ್ಯವಾಗಿ ಅಭ್ಯಾಸ ಮಾಡಬೇಕಾಗುತ್ತದೆ. ಪ್ರಾಂತ ಭಾಷೆಯ ಅಭ್ಯಾಸವನ್ನು ಕಡ್ಡಾಯವಾಗಿ ಪ್ರಾಥಮಿಕ ೬ ನೇ ೭ ನೇ ವರ್ಗದಲ್ಲಿ ಕಲಿಸಲಾಗುವದು. ಇವರಿಗೆ ಪ್ರಾಂತಭಾಷೆಯ ಪರೀಕ್ಷೆಯು ಬರಹಮೂಲಕವಿಲ್ಲ.

ಅರ್ಧಮಾಗಧಿ, ಪಾಲೀಭಾಷೆಯನ್ನು ೯ ನೇ ವರ್ಗದಲ್ಲಿ ತೆಗೆದುಕೊಳ್ಳುವವರಿಗೆ ೮ ನೇ ವರ್ಗದಲ್ಲಿ ಸಂಸ್ಕೃತ ಅಭ್ಯಾಸವನ್ನು ಕಡ್ಡಾಯವಾಗಿರಿಸಲಾಗಿದೆ.

## ಇಂಗ್ಲೀಷ ಭಾಷಾಜ್ಞಾನ

ಇಂಗ್ಲೀಷ ಭಾಷಾಜ್ಞಾನವು ಇಂದು ವ್ಯವಹಾರದಲ್ಲಿಯೂ ಅತ್ಯವಶ್ಯವಾಗಿದೆಂದು ಆ ಭಾಷೆಯನ್ನು ವ್ಯವಹಾರದ ಅನುಕೂಲತೆಗಾಗಿ ಕಡ್ಡಾಯವಾಗಿ ಮಾಧ್ಯಮಿಕ ಶಾಲೆಗಳಲ್ಲಿ ಕಲಿಸಲಾಗುತ್ತಿದೆ. ಅದರಂತೆ ಹಿಂದೀ ಭಾಷೆಯನ್ನು ರಾಷ್ಟ್ರಭಾಷೆಯೆಂದು ಕಡ್ಡಾಯವಾಗಿ ಕಲಿಸಲಾಗುತ್ತದೆ.

ಕಂಪೋಜಿಟ್ ಕೋರ್ಸಿನಲ್ಲಿ ಮಾತೃಭಾಷೆಯ ಅಭ್ಯಾಸಕ್ರಮವನ್ನು ವಿಶಾಲವಾಗಿರಿಸಿ ಪೂರಕ ಭಾಷೆಗಳನ್ನು ಪರಿಚಯ ದೃಷ್ಟಿಯಿಂದ ಮೊದಲು ಸಣ್ಣ ಪ್ರಮಾಣದಲ್ಲಿ ಸುರುವು ಮಾಡಿ ಕ್ರಮೇಣ ಹೆಚ್ಚು ವಿಸ್ತಾರಗೊಳಿಸಲಾಗಿದೆ.

ಈ ಮೊದಲು ಇತಿಹಾಸ ಭೂಗೋಲುಗಳ ಅಭ್ಯಾಸದ ದೃಷ್ಟಿಯು ಬೇರೆಯಾಗಿತ್ತು. ಹಲಕೆಲವು ದೇಶದ ರಾಜರುಗಳ ಕಾಲ; ಅವರ ಕಾಲದಲ್ಲಿ ಆದ ಯುದ್ಧಗಳು ಅದರ ಕಾರಣ ಪರಿಣಾಮ ಅವರ ಕಾಲದಲ್ಲಿ ರಾಜ್ಯದಲ್ಲಿ ಆದ ಸುಧಾರಣೆ ಮುಂತಾದವುಗಳು ಇತಿಹಾಸದಲ್ಲಿಯೂ ಒಂದೊಂದು ದೇಶದಲ್ಲಿಯ ರಾಜಧಾನಿ, ಅಲ್ಲಿಯ ಮೂಲ ಉದ್ಯೋಗ, ಉತ್ಪತ್ತಿ ಗುಡ್ಡ, ನದಿ, ಮಳೆ, ಹವಾಮಾನ, ರೈಲು ಮಾರ್ಗ, ಆಕಾಶಮಾರ್ಗ, ಜಲಮಾರ್ಗ, ಆ ದೇಶದ ಪ್ರಾಕೃತಿಕ ವಿಭಾಗ, ರಾಜಕೀಯವಿಭಾಗ, ಜನಾಂಗ ಮುಂತಾದವುಗಳು ಭೂಗೋಲಿನಲ್ಲಿ ಅಡಕವಾಗಿದ್ದವು. ಇಂದು ಪ್ರಜಾರಾಜ್ಯಕ್ಕನುಸರಿಸಿ, ಪ್ರತಿಯೊಬ್ಬನು ಉತ್ತಮ ನಾಗರಿಕನಾಗಲು ಬೇಕಾಗುವ ಗುಣ ಮತ್ತು ಜ್ಞಾನ, ಮನುಷ್ಯನು ಸಮಾಜಜೀವಿ, ಸಮಾಜಕ್ಕೆ ಹೊಂದಿಕೊಂಡು ಬಾಳುವೆ ಮಾಡುವುದರಿಂದಾಗುವ ಲಾಭಗಳು, ಸಮಾಜದಲ್ಲಿ ತನ್ನ ಹೊಣೆಗಾರಿಕೆ, ಪ್ರಜಾರಾಜ್ಯದಲ್ಲಿ ವ್ಯಕ್ತಿಗಿರುವ ಸ್ವಾತಂತ್ರ್ಯ ಮತ್ತು ಅವನ ಕರ್ತವ್ಯ ಮೊದಲಾದವುಗಳನ್ನು ಮೊದಲು ಅರಿಕೆ ಮಾಡಿ ಕೊಟ್ಟು, ಅನೇಕ ಪ್ರವಾಸಗಳನ್ನು ಕೈಕೊಂಡು ಅವುಗಳ ನಕ್ಷೆಯನ್ನು ತಯಾರಿಸುವದು, ಪ್ರದರ್ಶನಗಳನ್ನು ಏರ್ಪಡಿಸುವದು ಮೊದಲಾದವುಗಳಿಂದ ಸುರುವಾಗಿ ನಮ್ಮ ದೇಶ, ಅದರ ಆಕೃತಿ, ಅದರ ಉದ್ದಗಲತೆ, ಹವಾಮಾನ, ಮಳೆ, ಬೆಳೆ, ನೀರಾವರಿ ಯೋಜನೆ, ಒಕ್ಕಲುತನ, ಆಹಾರ ಉತ್ಪತ್ತಿ, ಕೈಗಾರಿಕೆಯ ಸಾಮಾನುಗಳ ಉತ್ಪತ್ತಿ, ಅರಣ್ಯಸಂಪತ್ತು, ಖನಿಜಸಂಪತ್ತು ರಾಜಕೀಯ ವಿಭಾಗ, ನೈಸರ್ಗಿಕ ವಿಭಾಗ, ನೋಡತಕ್ಕ ಮುಖ್ಯಸ್ಥಳಗಳು ಮುಂತಾದ ವಿಷಯಗಳ ಅಭ್ಯಾಸದ ಜೊತೆಯಲ್ಲಿ ನಮ್ಮ ರಾಜ್ಯದ ವಿವರಣಾತ್ಮಕ ಅಭ್ಯಾಸವನ್ನು ಮಾಡುವದು. ಇದರಲ್ಲಿ ನಮ್ಮ ರಾಜ್ಯದಲ್ಲಿಯ ವಿವಿಧ ಪ್ರದೇಶದಲ್ಲಿಯ ಜನರ ಜೀವನ, ಶಿಕ್ಷಣ ಸೌಕರ್ಯ ಪಂದ್ಯಾಟಗಳು, ಸಂಗೀತ ನೃತ್ಯ ನಾಟಕಗಳಿಗೆ ದೊರಕುವ ಸೌಲಭ್ಯ ಮುಂತಾದವುಗಳನ್ನೊಳಗೊಂಡ; (ಅ) ವ್ಯಕ್ತಿ ಮತ್ತು ಸಮಾಜ (ಬ) ಭೌಗೋಲಿಕ ಮತ್ತು ಆರ್ಥಿಕ ದೃಷ್ಟಿಯಿಂದ ನಮ್ಮ ಮೂಲ ಅಗತ್ಯಗಳು. (ಕ) ನಮ್ಮ ರಾಜ್ಯ (ಪ್ರಾಂತ) ಮತ್ತು ಅಲ್ಲಿಯ ಭೂಮಿ ಮತ್ತು ಜನಾಂಗ ಇವೇ ಮೊದಲಾದವುಗಳ ವಿವರವಾದ ಅಭ್ಯಾಸವು ಸೋಶಲ್ ಸ್ಟಡೀಜನಲ್ಲಿ ಅಡಕವಾಗಿದೆ. ಸಾಮಾನ್ಯ ವಿಜ್ಞಾನ ಇದು ಪ್ರಾಣಿ ಜೀವನ, ಸಸ್ಯ ಜೀವನ, ನಮ್ಮ ವಿಶ್ವವಸ್ತುಗಳ ಸ್ವರೂಪ, ಶಕ್ತಿ ಮತ್ತು ಕೆಲಸ ಈ ವಿಷಯಗಳ ವಿಶಾಲವಾದ ಅಭ್ಯಾಸವನ್ನೊಳಗೊಂಡಿದೆ.

ಗಣಿತ ವಿಷಯದಲ್ಲಿ ಎಂದಿನಂತೆ, ಗಣಿತ, ಬೀಜ ಗಣಿತ, ಭೂಮಿತಿಗಳು ಒಳಗೊಂಡಿವೆ.

## ವೃತ್ತಿ ಶಿಕ್ಷಣ

ಇನ್ನು ಪ್ರಾಥಮಿಕ ಶಿಕ್ಷಣದಲ್ಲಾಗಲಿ, ಮಾಧ್ಯಮಿಕ ಶಿಕ್ಷಣದಲ್ಲಾಗಲಿ ಹೊಸತಾಗಿ ಹೆಚ್ಚಿನ ಏರ್ಪಾಡು ಎಂದರೆ ಏನಾದರೊಂದು ವ್ಯವಸಾಯ ಕಸುಬು ಕಲಿಸಿಕೊಡುವ ಏರ್ಪಾಡು. ಕೇವಲ ಓದು ಬರಹದಿಂದ ಜೀವನ ನಡೆಯದು. ಜೀವನಕ್ಕೆ ಅವಶ್ಯವಾಗಿ ಬೇಕಾಗುವ ಅನೇಕ ವ್ಯವಹಾರ ಉದ್ಯೋಗಗಳಿವೆ. ಅವುಗಳ ಅರಿವು ಇಂದಿನ ವಿದ್ಯಾರ್ಥಿಜೀವನದಲ್ಲಿ ಆಗದೇ ಹೋದರೆ ಶಾಲೆ ಕಾಲೇಜುಗಳು ಮುಗಿದನಂತರ ಏನು ಮಾಡಬೇಕೆಂಬ ಒಂದು ದೊಡ್ಡ ಸಮಸ್ಯೆಯಾಗುತ್ತದೆ. ಇಂದು ಅದು ಆಗಿದೆ. ಇಷ್ಟೆಲ್ಲ ವಿದ್ಯಾಭ್ಯಾಸ ಮಾಡಿದರೂ ಕೂಡ ಉಪಜೀವನಕ್ಕೆ ಯಾವ ಮಾರ್ಗವು ಸರಿಹೋಗುತ್ತದೆಂಬುದರ ಅರಿವೇ ಆಗದೆ ಯಾವದಾದರೊಂದು ಮಾರ್ಗ ಹಿಡಿದು ಅದು ಸರಿಹೋಗದೇ ಮುಂದಿನ ಬಾಳೆಲ್ಲವೂ ನಿರಾಶಮಯವಾಗುತ್ತದೆ. ಹೀಗೆ ಆಗುವದನ್ನು ಆದಷ್ಟುಮಟ್ಟಿಗೆ ತಡೆದು ವಿದ್ಯಾರ್ಥಿಗಳಲ್ಲಿ ಉಪಜೀವನದ ಸರಿಯಾದ ಮಾರ್ಗದರ್ಶನವಾಗುವಂತೆ ಇಂದು ಶಾಲೆ ಕಾಲೇಜುಗಳಲ್ಲಿ ಅನೇಕ ವ್ಯವಸಾಯಗಳ ತರಬೇತಿಯ ಏರ್ಪಾಡುಮಾಡಲಾಗಿದೆ. ಇಂದು ಉಚ್ಚ ತರಗತಿಯ ಮಾಧ್ಯಮಿಕ ಶಾಲೆಯಲ್ಲಿ ಹೊಸತಾಗಿ ಸುರುವುಮಾಡಿದ ಶಿಕ್ಷಣಪದ್ಧತಿಯಲ್ಲಿ ಕೆಳಗಿನ ಕಸಬುದಾರಿಕೆಯ ತರಬೇತಿಯ ಏರ್ಪಾಡುಮಾಡಲಾಗಿದೆ. (ಇವೆಲ್ಲವನ್ನು ಒಂದೇ ಶಾಲೆಯಲ್ಲಿ ಏರ್ಪಾಡು ಮಾಡಲಿಕ್ಕೆ ಸಾಧ್ಯವಿಲ್ಲ. ಒಂದೊಂದು ಶಾಲೆಯಲ್ಲಿ ಆಯಾ ಶಾಲೆಗಳ ಅನುಕೂಲತೆಯಂತೆಯೂ ಆಯಾ ಸ್ಥಾನಕ್ಕೆ ಅವಶ್ಯವಾಗಿ ಬೇಕಾಗುವಂತೆಯೂ ಎಲ್ಲ ಶಾಲೆಯವರು ಒಂದೋ ಎರಡೋ ಕಸುಬುದಾರಿಕೆಯ ಶಿಕ್ಷಣದ ಏರ್ಪಾಡು ಮಾಡಿಕೊಳ್ಳಬಹುದು)

ನೂಲುವದು, ನೇಯುವದು, ಬಡಿಗತನ, ಕಮ್ಮಾರಿಕೆ, ಸಿಂಪೀ, ಯಂತ್ರಗಳ ಸಾಮಾನು ಜೋಡಿಸುವುದು ( fitters ). ಪುಸ್ತಕ ಬೈಂಡ ಮಾಡುವದು, ಅಚ್ಚು ಹಾಕುವದು ( printing ) ಮಣ್ಣಿನ ಪಾತ್ರೆಗಳನ್ನು ತಯಾರಿಸುವದು. ಅಚ್ಚಿನ ಮೊಳೆಗಳನ್ನು ತಯಾರಿಸುವದು ತೊಗಲು ಹದಮಾಡಿ ಅದರಿಂದ ಸಾಮಾನುಗಳನ್ನು ತಯಾರಿಸುವುದು. ಫೋಟೋಗ್ರಾಪ, ಇಲೆಕ್ಟ್ರಿಕ್ ವಾಯರಮನ್, ಲಾಂಡ್ರಿ, ತೋಟಗಾರಿಕೆ,ಕೃಷಿ, ಹಾಲು ಕೊಡುವ ಪ್ರಾಣಿಗಳ ಸಂರಕ್ಷಣೆ ಮತ್ತು ಅದರ ವ್ಯವಸಾಯ, ಇದರ ಹೊರತಾಗಿ, ಮನೆ ಕಟ್ಟುವದು, ಸಾಬಾಣ ತಯಾರಿಸುವದು, ಖಡು ತಯಾರಿಸುವುದು. ಬಿದಿರಿನಿಂದ ಹೆಣೆಯುವುದು, ಟೆಂಗಿನ ನಾರಿನಿಂದ ಚೇಪೆ, ಹಗ್ಗಗಳನ್ನು ತಯಾರಿಸುವುದು, ರಬ್ಬರ ಸ್ಟ್ಯಾಂಪ ತಯಾರಿಸುವದು, ಗಂಧದ ಕಟ್ಟಿಗೆ ಮತ್ತು ಹಸ್ತಿದಂತಗಳಲ್ಲಿ ಕೆತ್ತನೆಯ ಕೆಲಸ ಬಟ್ಟೆಗಳಿಗೆ ಬಣ್ಣ ಹಾಕುವದು, ಅಚ್ಚು ಹಾಕುವದು.

ಹೆಣ್ಣು ಮಕ್ಕಳಿಗಾಗಿ ಗೃಹವಿಜ್ಞಾನ ಶಾಸ್ತ್ರವನ್ನು ಕಲಿಸುವುದು. ಇದರಲ್ಲಿ ಮನೆಯನ್ನು ಸುವ್ಯವಸ್ಥಿತವಾಗಿ ಎಷ್ಟರ ಮಟ್ಟಿಗೆ ತಮ್ಮ ಯೋಗ್ಯತೆಯಲ್ಲಿ ಇಡಬಹುದು, ಸರಿಯಾದ ಆಹಾರವನ್ನು ಹೇಗೆ ತಯಾರಿಸುವುದು, ಮಕ್ಕಳ ಮತ್ತು ತಮ್ಮ ಬಟ್ಟೆ ಬರೆಗಳನ್ನು ಹೊಲೆದುಕೊಳ್ಳುವುದು, ಹೆರಿಗೆಯ ಜ್ಞಾನ, ಮಕ್ಕಳ ಜೋಪಾನ, ಮುಂತಾದ ವಿಷಯಗಳು ಅಡಕವಾಗಿವೆ.



ಶರೀರ ಶಿಕ್ಷಣವನ್ನು ಎಲ್ಲ ವರ್ಗಗಳಲ್ಲಿಯೂ ಕಡ್ಡಾಯವಾಗಿ ಮಾಡಿದ್ದಾರೆ. ಈ ವಿಷಯವು ಎಸ್. ಎಸ್. ಎಲ್. ಸಿ. ಪರೀಕ್ಷೆಗಾಗಿ ಇಲ್ಲದಿದ್ದರೂ ಆ ಪರೀಕ್ಷೆಗೆ ಕೂಡುವಾಗ್ಗೆ ಪ್ರತಿಯೊಬ್ಬ ವಿದ್ಯಾರ್ಥಿ ವಿದ್ಯಾರ್ಥಿನಿಯು ಆಯಾ ವರ್ಗಗಳಲ್ಲಿ ಸರಿಯಾಗಿ ಶರೀರ ಶಿಕ್ಷಣವನ್ನು ಪಡೆದಿದ್ದಾರೆಂಬ ಬಗ್ಗೆ ಆಯಾ ಶಾಲೆಗಳ ಮುಖ್ಯಾಧ್ಯಾಪಕರಿಂದ ಪ್ರಶಸ್ತಿ ಪತ್ರವನ್ನು ಪಡೆದಿರಬೇಕು. ಅದಿಲ್ಲದವರು ಕೊನೆಯ ಪರೀಕ್ಷೆಗೆ ಅರ್ಹತೆಯನ್ನು ಪಡೆಯಲಾರರು.

ಇವೆಲ್ಲವುಗಳ ಜೊತೆಯಲ್ಲಿ ಲಲಿತ ಕಲೆಗಳೆಂದೆನಿಸಿದ ಸಂಗೀತ, ನೃತ್ಯ ಮತ್ತು ತೈಲಚಿತ್ರಗಳನ್ನೊಳಗೊಂಡ ಚಿತ್ರಕಲೆ ಇವುಗಳನ್ನು ಕಲಿಸುವ ಏರ್ಪಾಡು ಮಾಡಲು ಅವಕಾಶವಿದ್ದು ಈ ವಿಷಯಗಳನ್ನು ಎಸ್. ಎಸ್. ಎಲ್. ಸಿ. ಯಲ್ಲಿ ಐಚ್ಛಿಕವಾಗಿ ತೆಗೆದುಕೊಳ್ಳಬಹುದು.

## ಒಂಬತ್ತನೇ ವರ್ಗದಲ್ಲಿ

ಈ ವಿಷಯಗಳೆಲ್ಲವೂ ೮ ನೇ ವರ್ಗದಲ್ಲಿ ಬಂದು ಮುಂದೆ ೯ ನೇ ವರ್ಗದಲ್ಲಿ, ವ್ಯಕ್ತಿಯ ಒಲವಿಗನುಸಾರವಾಗಿ ಒಂದು ಕಸಬುದಾರಿಕೆಯ ವಿಷಯದ ವಿವರವಾದ ಅಭ್ಯಾಸದೊಂದಿಗೆ ವ್ಯಾಸಂಗಿಕ ವಿಷಯಗಳ ಜೋಡಣೆಯಾಗಿದೆ.

ಅದು ಹೀಗಿದೆ:—

ಅ ಗುಂಪು— ಇದರಲ್ಲಿ (೧) ರಾಜ್ಯಭಾಷೆ ಅಥವಾ ಮಾತೃಭಾಷೆ ಅಥವಾ ರಾಜ್ಯಭಾಷೆ+ಮಾತೃಭಾಷೆ ಅಥವಾ ರಾಜ್ಯಭಾಷೆ+ಅಭಿಜಾತ ಭಾಷೆ, ಅಥವಾ ಮಾತೃಭಾಷೆ+ಅಭಿಜಾತ ಭಾಷೆ ಹೀಗೆ ಜೋಡಣೆಯಾಗಿ ಒಂದು ಭಾಷೆ. ಇದರ ಜೊತೆಯಲ್ಲಿ (೨) ಇಂಗ್ಲೀಷ, (೩) ಹಿಂದೀ (೪) ಸೋಶಲ್ ಸ್ಟಡೀಸ್, (ಇತಿಹಾಸ ಭೂಗೋಲ) (೫) ಜನರಲ್ ಮೆಥಮೆಟಿಕ್ಸ (೬) ಜನರಲ್ ಸಾಯನ್ಸ, (೭) ಕೈಗಾರಿಕೆಗಳು (ಕ್ರಾಫ್ಟ) (೮) ಶರೀರ ಶಿಕ್ಷಣ.

ಬ ಗುಂಪು— ಹಿಂದೀ ಮಾತೃಭಾಷೆಯಾಗಿದ್ದವರು ಕನ್ನಡವನ್ನು ಕಡ್ಡಾಯವಾಗಿ ತೆಗೆದುಕೊಳ್ಳಬೇಕು. ಮೇಲೆ ಹೇಳಿದ ವಿಷಯಗಳ ಜೊತೆಯಲ್ಲಿ ಕೆಳಗೆ ಕಾಣಿಸಿದ ವ್ಯವಸಾಯದ ವಿಷಯಗಳಲ್ಲಿ ಯಾವುದಾದರೊಂದನ್ನು ಅಭ್ಯಾಸ ಮಾಡಬೇಕು. ಇದು ಐಚ್ಛಿಕ ವಿಷಯಗಳ ಗುಂಪಾಗಿದ್ದು ಇದರಲ್ಲಿ ಏಳು ವಿಷಯಗಳ ಗುಂಪುಗಳಿವೆ.

ಅವು ಯಾವವೆಂದರೆ—

## (೧) ಹ್ಯುಮ್ಯಾನಿಟೀಸ್

ಇದರಲ್ಲಿ (೧) ಅಭಿಜಾತ ಭಾಷೆ (ಸಂಸ್ಕೃತ, ಪಾಲಿ, ಪ್ರಾಕೃತ, ಪರ್ಶಿಯನ್ ಅಥವಾ ಅರೇಬಿಕ್) ಇವುಗಳಲ್ಲಿ ಒಂದು. (೨) ಇಂದಿನ ಭಾಷೆ (modern language). ಇವುಗಳಲ್ಲಿ ಕನ್ನಡ, ತೆಲಗು, ಹಿಂದೀ, ಮರಾಠಿ, ತಮಿಳು, ಉರ್ದು, ಅಥವಾ ಇಂಗ್ಲೀಷ, ಫ್ರೆಂಚ, ಜರ್ಮನಿ ಇವು ಅಡಕವಾಗಿವೆ ಇವುಗಳಲ್ಲಿ ಒಂದು. (೩) ಗಣಿತ. (೪) ಇತಿಹಾಸ. (೫) ಭೂಗೋಲ. (೬) ಅರ್ಥಶಾಸ್ತ್ರ. (೭) ರಾಜಕಾರಣ ಮತ್ತು ಪೌರನೀತಿ. (೮) ಸಮಾಜ ಶಾಸ್ತ್ರ (ಸೋಸಿಯಾಲಜಿ). (೯) ಗೃಹವಿಜ್ಞಾನ. ಹೀಗೆ ಒಂಭತ್ತು ವಿಷಯಗಳು ಅಡಕವಾಗಿವೆ. ಇವುಗಳಲ್ಲಿ ಬೇಕಾದ ಮೂರು ವಿಷಯಗಳನ್ನು ಆರಿಸಿಕೊಳ್ಳಬಹುದು.

## (೨) ವಿಜ್ಞಾನ

ಇವುಗಳಲ್ಲಿ (೧) ಪದಾರ್ಥ ವಿಜ್ಞಾನಶಾಸ್ತ್ರ-ರಸಾಯನ ಶಾಸ್ತ್ರ. ( ಫಿಜಿಕ್ಸ, ಕೆಮಿಸ್ಟ್ರಿ ) ಮತ್ತು ಗಣಿತ (ಮೆಥಮೆಟಿಕ್ಸ). (೨) ಫಿಜಿಕ್ಸ, ಕೆಮಿಸ್ಟ್ರಿ ಮತ್ತು ಬಾಯೊಲಜಿ. (೩) ಫಿಜಿಕ್ಸ, ಮೆಥಮೆಟಿಕ್ಸ ಮತ್ತು ಬಾಯೊಲಜಿ. ಹೀಗೆ ಮೂರು ಗುಂಪುಗಳಿದ್ದು ಇವುಗಳಲ್ಲಿ ಬೇಕಾದ ಒಂದನ್ನು ಆರಿಸಿಕೊಳ್ಳಬಹುದು.




## (೩) ತಾಂತ್ರಿಕ ( Technical )

ಇದರಲ್ಲಿ (೧) ಮೆಥಮೆಟಿಕ್ಸ. (೨) ಫಿಜಿಕ್ಸ (೩) ಕೆಮಿಸ್ಟ್ರೀ. (೪) ಇಂಜನಿಯರಿಂಗ ಡ್ರಾಯಿಂಗ ಮತ್ತು (೫) (a) ಫಿಟರ, (b) ಕಾರಪೆಂಟರಿ, (c) ಟರ್ನಿಂಗ, (d) ಟೆಕ್ಸಟಾಯಲ್ಸ್, (e) ಸಿವ್ಹಿಲ್ ಡ್ರಾಫ್ಟಮನ್‌ಶಿಪ್, (f) ಇಲೆಕ್ಟ್ರಿಕ್ ವಾಯರಿಂಗ ಮತ್ತು ಸರ್ವ್ಹಿಸಿಂಗ, (g) ಜನರಲ್ ಮೆಕಾನಿಕ್ಸ, (h) ಪ್ರಿಂಟಿಂಗ ಮತ್ತು ಬುಕ್ಕ ಬಾಯಿಂಡಿಂಗ, ಹೀಗೆ ೫ ವಿಷಯಗಳು ಒಳಗೊಂಡಿವೆ. ಇದರಲ್ಲಿ ಮೊದಲಿನ ನಾಲ್ಕು ವಿಷಯಗಳೊಂದಿಗೆ ೫ನೇದರಲ್ಲಿಯ ಯಾವುದಾದರೊಂದು ವಿಷಯವನ್ನು ಜೋಡಣೆ ಮಾಡಬೇಕು.

## (೪) ಕೃಷಿ (Agriculture)

ಇದರಲ್ಲಿ (೧) ಅಗ್ರಿಕಲ್ಚರಲ್ ಕೆಮಿಸ್ಟ್ರಿ, (೨) ಬಾಯಾಲಜಿ, (೩) ಪಶು ಸಂಗೋಪನ, ತೋಟಗಾರಿಕೆ, ಕೃಷಿ ( ಇವುಗಳಲ್ಲಿ ಒಂದು ), (೪) ಇದಕ್ಕೆ ಸಂಬಂಧಿಸಿದ, ಗ್ರುಪ್ A ದಲ್ಲಿಯ ಒಂದು ವಿಷಯ. ಹೀಗೆ ನಾಲ್ಕು ವಿಷಯಗಳು ಒಳಗೊಂಡಿವೆ.

## (೫) ವಾಣಿಜ್ಯ

ಇದರಲ್ಲಿ (೧) ಎಲಿಮೆಂಟ್ಸ ಆಫ್ ಕಾಮರ್ಸ, (೨) ಬುಕ್ ಕೀಪಿಂಗ ( ಲೆಕ್ಕಪತ್ರ ), (೩) ಟಾಯಿಪ ರಾಯಟಿಂಗ, (೪) ಅರ್ಥಶಾಸ್ತ್ರ (ಎಕಾನಾಮಿಕ್ಸ), (೫) ಸಹಕಾರ (ಕೋಆಪರೇಶನ್) (೬) ಶಾರ್ಟಹಾಂಡ ( ಕನ್ನಡ, ಇಂಗ್ಲೀಷ ಇದರಲ್ಲಿ ಒಂದು, (೭) ಕಮರ್ಷಿಯಲ್ ಜಾಗ್ರಫಿ ಹೀಗೆ ಏಳು ವಿಷಯಗಳು ಅಡಕವಾಗಿವೆ.

## (೬) ಗೃಹವಿಜ್ಞಾನ

ಇದರಲ್ಲಿ (೧) ಮನೆಯ ವ್ಯವಸ್ಥೆ, ನೇಯಿಗೆ (Textile) ಮತ್ತು ಅರಿವೆ ಹೊಲಿಯುವದು. (೨) ಸಮತೋಲನ ಆಹಾರ ಪದಾರ್ಥಗಳನ್ನು ತಯಾರಿಸುವದು. (೩) ಶಿಶು ಸಂಗೋಪನ ಶಾಸ್ತ್ರ. (Home nursing, child development and mother craft ) ಈ ವಿಷಯಗಳು ಅಡಕವಾಗಿವೆ. ಈ ಗುಂಪನ್ನು ತೆಗೆದುಕೊಳ್ಳುವವರಿಗೆ, ಹೊಲಿಗೆಯ ಕೆಲಸ ಮತ್ತು ಕಸೂತಿಯ ಕೆಲಸಗಳು ಕಡ್ಡಾಯವಾದವುಗಳಾಗಿವೆ.

## (೭) ಲಲಿತ ಕಲೆ ( fine art )

ಇದರಲ್ಲಿ (೧) ಚಿತ್ರಕಲೆ ಮತ್ತು ತೈಲಚಿತ್ರ. (೨) ಸಂಗೀತ ( ಕರ್ನಾಟಕಿ ಅಥವಾ ಹಿಂದುಸ್ತಾನಿ) (೩). ನೃತ್ಯ- (ಭರತನಾಟ್ಯ ಅಥವಾ ಕಥಕ್ಕಳಿ) (೪) ಶಿಲ್ಪಕಲೆ ಇಷ್ಟು ವಿಷಯಗಳು ಅಡಕವಾಗಿವೆ. ಇವುಗಳಲ್ಲಿ ಯಾವುದಾದರೊಂದನ್ನು ಆರಿಸಿಕೊಳ್ಳಬಹುದು.

ಹೀಗೆ ಬಹುಮುಖವಾದ ವಿಷಯಗಳನ್ನೊಳಗೊಂಡ ಹೊಸಪದ್ಧತಿಯ ಉಚ್ಚ ತರಗತಿಯ ಮಾಧ್ಯಮಿಕ ಶಿಕ್ಷಣವು ಯಾರು ಯಾರಿಗೆ ಯಾವ ಯಾವ ವಿಷಯಗಳಲ್ಲಿ ಅಭಿರುಚಿ ಇದೆ ಎಂಬುದನ್ನು ಅರಿಕೆ ಮಾಡಿಕೊಟ್ಟು ಆಯಾ ವಿಷಯಗಳಲ್ಲಿಯೇ ತರಬೇತಿಯನ್ನು ಹೊಂದಿ ತಮ್ಮ ಜೀವನದ ಸರಿಯಾದ ಮಾರ್ಗವನ್ನು ಅನುಸರಿಸುವಂತೆ ಅವಕಾಶವನ್ನು ಶಕ್ಯವಿದ್ದ ಮಟ್ಟಿಗೆ ಎಲ್ಲರಿಗೂ ಒದಗಿಸಿಕೊಡುವಂತಹದಾಗಿದೆ. ೧೦ ನೇ ವರ್ಗದ ಯೋಜನೆಯು ಶೀಘ್ರದಲ್ಲಿಯೇ ಬರುವದಿದೆ.

ಸಂಸ್ಕೃತ ಸಾಹಿತ್ಯದಲ್ಲಿ

ಲೇಖಕರು :
ಪಂಡಿತ ಕೇಶವಶರ್ಮಾ ಗಲಗಲಿ
ಧಾರವಾಡ

# ಕರ್ನಾಟಕ ದರ್ಶನ

ಕನ್ನಡ ಕವಿಗಳು ಉಭಯಭಾಷಾವಿಶಾರದರೆಂದು ಹೆಸರು ಪಡೆದು ಸಂಸ್ಕೃತ ಕನ್ನಡಗಳೆರಡರಲ್ಲಿಯೂ ಕೃತಿಗಳನ್ನು ರಚಿಸಿರುವರು. ಕರ್ನಾಟಕದ ಸೊಬಗನ್ನು ಮೆಚ್ಚಿಕೊಂಡು ಬಣ್ಣಿಸಿದ ಇತರ ಕವಿಗಳೂ ಇರುವರು. ಇವರ ಕೃತಿಗಳಲ್ಲಿ ಕರ್ನಾಟಕ ದರ್ಶನ ಹೃದಯಂಗಮವಾಗಿ ಮೂಡಿಬಂದ ಬಗೆಯನ್ನು ಇಲ್ಲಿ ವಿವರಿಸಲಾಗಿರುವುದು. . . . . . .

卐

ಕರ್ನಾಟಕದ ಕೆಲವು ಕವಿಗಳು ಕನ್ನಡದಲ್ಲಿಯಂತೆ ಸಂಸ್ಕೃತದಲ್ಲಿಯೂ ಕಾವ್ಯಗಳನ್ನು ಬರೆದು ಉಭಯ ಭಾಷಾವಿಶಾರದರೆಂಬ ಮಾತನ್ನು ಸಾರ್ಥಕ ಪಡಿಸಿರುವರು. ಅಲ್ಲದೆ ಕರ್ನಾಟಕದ ಪ್ರೇಕ್ಷಣೀಯ ಸ್ಥಳ, ರೀತಿ, ನೀತಿಗಳಿಗೆ ಮಾರುಹೋಗಿ ಕೆಲ ಸಂಸ್ಕೃತ ಕವಿಗಳು ಇಲ್ಲಿ ನೆಲಸಿ, ಈ ಸಂಗತಿಗಳನ್ನು ತಮ್ಮ ಕಾವ್ಯಗಳಲ್ಲಿ ಸೇರಿಸಿಕೊಂಡುದೂ ಉಂಟು. ಯಾವುದೇ ಕಾರಣದಿಂದ ಕರ್ನಾಟಕದ ಸಂಪರ್ಕ ಬಂದ ಸಂಸ್ಕೃತ ಕವಿಗಳ ಕಾವ್ಯಗಳಲ್ಲಿ ಕರ್ನಾಟಕದ ದರ್ಶನವನ್ನು ನಾವು ಕಾಣಬಹುದು.

ಮಹಾಭಾರತದಿಂದಲೂ ಸಂಸ್ಕೃತ ಕಾವ್ಯಗಳಲ್ಲಿ ಕರ್ನಾಟಕದ ಉಲ್ಲೇಖವಿದ್ದಂತೆ ತೋರುತ್ತದೆ. ಮಹಾಭಾರತದ ಕಾಲದಲ್ಲಿ ಈ ಪ್ರದೇಶದಲ್ಲಿ ಕರ್ನಾಟಕನೆಂಬ ರಾಕ್ಷಸನು ಆಳುತ್ತಿದ್ದನಂತೆ. ಆದರೆ ಈ ಜನರಲ್ಲಿ ಕರ್ನಾಟಕವನ್ನು ಉಲ್ಲೇಖಿಸಿದವರಲ್ಲಿ ವರಾಹಮಿಹಿರರೇ ಮೊದಲಿನವರೆನ್ನಬೇಕು. (ಅವರ ಕಾಲ ಕ್ರಿ. ಶ! ೬ ನೇ ಶತಮಾನವೆಂದು ಕೆಲವರು ಹೇಳಿದರೆ ಕ್ರಿ. ಪೂ. ೧ ನೇ ಶತಮಾನವೆಂದು ಕೆಲವರು ಹೇಳುವರು.) ಅವರು ತಮ್ಮ ಮೇದಿನೀ ಜ್ಯೋತಿರ್ವಿದ್ಯೆಯ ಆಕರಗ್ರಂಥವಾದ ಬೃಹತ್ಸಂಹಿತೆಯ ನಕ್ಷತ್ರ ಕೂರ್ಮಾಧ್ಯಾಯದಲ್ಲಿ ದಕ್ಷಿಣದ ಜನಪದವಿಭಾಗವನ್ನು ಹೇಳುವಾಗ,

" ಆಕರ ವೇಣಾವರ್ತಕ ದಶಪುರ ಗೋನರ್ದ
ಕೇರಲಕಾಃ ಕರ್ನಾಟ ಮಹಾಟವಿ ಚಿತ್ರಕೂಟ
ನಾಸಿಕ್ಯ ಕೋಲ್ಲಗಿರಿ ಚೋಲಾಃ "

ಎಂದು ಕರ್ನಾಟಕದ ದರ್ಶನವನ್ನು ಮೂಡಿಸಿರುವರು.

'ನಲಚಂಪು' ವನ್ನು ಬರೆದ ಪ್ರಾಚೀನ ಕವಿ ತ್ರಿವಿಕ್ರಮ ಭಟ್ಟನು 'ಕವಿರಾಜಮಾರ್ಗ' ಕಾರನಾದ ನೃಪತುಂಗನ ಸಮಕಾಲೀನನೆಂದೇ ಹೇಳಬಹುದು. ಗೋದಾವರಿ ತೀರದಲ್ಲಿರುವ ವಿದರ್ಭರಾಜ, ಭೀಮನನ್ನು ಬಣ್ಣಿಸುವಾಗ,

" ದೇವೊ ದಕ್ಷಿಣದಿಙ್ಮುಖಸ್ಯತಿಲಕಃ
ಕರ್ನಾಟಕಾಂತಾ ಕುಚ ।
ಕ್ರೀಡಾಶೈಲಮೃಗಃ ಪ್ರತಾಪಕದಲೀ
ಕಂದಃ ಸ ಕಿಂ ವರ್ಣ್ಯತೇ ॥
ಯಸ್ಯಾಽರಾತಿ ಕರೀಂದ್ರಕುಂಭರುಧಿರ-
ಕ್ಲಿನ್ನಾಸಿದಂಷ್ಟ್ರಾಂಕುರಾ ।
ಶೌರ್ಯಶ್ರೀ ಭುಜದಂಡಮಂಡಪತಲೇ
ಸಿಂಹೀವ ವಿಶ್ರಾಮ್ಯತಿ ॥

ಎಂದು ವರ್ಣಿಸಿರುವದು ಕನ್ನಡಿಗರಿಗೆ ನಿಜವಾಗಿ ಅಭಿಮಾನಾಸ್ಪದವಾಗಿರುವುದು.

ಜ್ಯೋತಿಷ್ಯಶಾಸ್ತ್ರದಲ್ಲಿ ಇನ್ನೊಂದು ಪ್ರಸಿದ್ಧವಾದ ಗ್ರಂಥ ಕಾಲಿದಾಸನ ಉತ್ತರ ಕಾಲಾಮೃತ. ಇವನು ಕವಿ ಕಾಲಿದಾಸನಲ್ಲ. ದಕ್ಷಿಣ ಭಾರತದ ಓರ್ವ ಕಾಲಿಯ ಭಕ್ತನು ಬರೆದ ಗ್ರಂಥವಿದೆಂದು ಬೆಂಗಳೂರಿನ ಶ್ರೀ ಸುಬ್ರಮಣ್ಯ ಶಾಸ್ತ್ರಿಗಳು ಅಭಿಪ್ರಾಯ ವ್ಯಕ್ತಪಡಿಸಿರುವರು.

"
. . . . . . . . . . . . . . . . . . . . . . . . . . .
ಪನ್ನೀರಾದಿ ಮಿಲತ್‌ಸುಕುದ್ರುಮ ರಜೋ
ಲಿಪ್ತಾಂಗ ಜಾತಾಲಯಾಂ ॥

ಎಂಬಲ್ಲಿ ಪನ್ನೀರ ಎಂಬ ಸ್ಪಷ್ಟವಾದ ಕರ್ನಾಟಕ ಶಬ್ದವಿರುವುದು. ಈ ಶಬ್ದವು ಸಂಸ್ಕೃತವಂತೂ ಅಲ್ಲವೆಂಬುದು ಸ್ಪಷ್ಟವಿರುವುದು. ಜಾತಕ ಪಾರಿಜಾತದಲ್ಲಿ ವೈದ್ಯನಾಥನು ಕರ್ನಾಟಕದ ಮೇಲೆ ವೃಷಭರಾಶಿಯ ಅಧಿಕಾರವಿರುವುದೆಂದು ಹೇಳಿದ್ದಾನೆ.

## ರಾಜಶೇಖರ

ಕಾವ್ಯ-ಮೀಮಾಂಸಾಕಾರನಾದ ರಾಜಶೇಖರನು ಕವಿಗಳಿಗೆ ಅವರವರ ಗುಣಧರ್ಮಗಳಿಗನುಸರಿಸಿ ಅನುಷ್ಟುಪ್ ಪದ್ಯಗಳಿಂದ ಪ್ರಶಸ್ತಿ ಪತ್ರಗಳನ್ನು ಕೊಟ್ಟಿರುವನು. ಅದರಲ್ಲಿ,

"ಸರಸ್ವತೀವ ಕರ್ಣಾಟೀ ವಿಜಯಾಂಕಾ
ಜಯತ್ಯಸೌ ।
ಯಾ ವೈದರ್ಭಗಿರಾಂ ವಾಸಃ ಕಾಲಿದಾಸಾದ
ನಂತರಂ ॥

ಎಂದು ಕರ್ನಾಟಕ ಕವಯಿತ್ರಿ ವಿಜಯಾಂಕೆಗೆ ಪ್ರಶಸ್ತಿಪತ್ರವನ್ನು ಕೊಟ್ಟಿರುವನು.

ಕರ್ಣಾಟ ಕವಯಿತ್ರಿಯಾದ ವಿಜಯಾಂಕೆ ಸರಸ್ವತಿಯಂತೆ ಶೋಭಿಸುತ್ತಿರುವಳು. ಕಾಲಿದಾಸನ ನಂತರ ವೈದರ್ಭೀ ರೀತಿಗೆ ಇವಳು ಆಸ್ಪದಳಾಗಿರುವಳು ಎಂದವನು ಹೇಳಿರುವನು. ರಾಜಶೇಖರನು ಕರ್ನಾಟಕ ಕವಯಿತ್ರಿಯನ್ನು ಹೊಗಳಿರುವುದು ಹೆಮ್ಮೆಯ ವಿಷಯವೇ ಸರಿ. ಈಕೆ ಇಮ್ಮಡಿ ಪುಲಿಕೇಶಿಯ ಸೊಸೆ; ಚಂದ್ರಾದಿತ್ಯನ ಹೆಂಡತಿ. ಸಾವಂತವಾಡಿಯನ್ನು ಆಳಿದಳೆಂದು ಹೇಳುವರು. ವಿಜಯಾಂಕೆ ಬರೆದ ಕಾವ್ಯಗಳಾವುವೆಂದು ತಿಳಿದಿರುವುದಿಲ್ಲ. ಉದ್ದಾಮ ಪದ್ಯವೊಂದು ಉಪಲಬ್ಧವಿದ್ದು ಅದು ಈ ರೀತಿಯಾಗಿರುವುದು,

"ಏಕೋಽಭೂತ್ ನಲಿನಾತ್ ತತಶ್ಚ
ಪುಲಿನಾತ್ ವಲ್ಮೀಕತಶ್ಚಾಪರಃ ।
ತೇ ಸರ್ವೇ ಗುರವೊ ಭವಂತಿ
ಕವಯಸ್ತೇಭ್ಯೊ ನಮಸ್ಕುರ್ಮಹೇ ॥
ಅರ್ವಾಂಚೋ ಯದಿ ಗದ್ಯಪದ್ಯರಚನಾ
ಚಾತುರ್ಯಮಾಗುದ್ಧತಾಃ ।
ತೇಷಾಂ ಮೂರ್ಧ್ನಿ ದದಾಮಿ ವಾಮ
ಚರಣಂ ಕರ್ಣಾಟ ರಾಜಪ್ರಿಯಾ ॥

ಒಬ್ಬ ಕವಿ ಹುಟ್ಟಿದ ಕಮಲದಿಂದ (ವಿಷ್ಣುವಿನ ನಾಭಿಕಮಲದಿಂದ ಬ್ರಹ್ಮ) ಇನ್ನೊಬ್ಬ ಕವಿ ಹುಟ್ಟಿದ. ಪುಲಿನ (ಉಸುಕಿನ) ದಿಂದ ( ವ್ಯಾಸಃ ಸತ್ಯವತೀ ಸುತಃ ಪರಾಶರಸುತೆ ). ಹುತ್ತಿನಿಂದ ಹುಟ್ಟಿದ ಕವಿಯೋರ್ವ (ವಾಲ್ಮೀಕಿ). ಈ ಕವಿಗಳೆಲ್ಲ ಗುರುಗಳು. ಅವರಿಗೆ ನಮಸ್ಕಾರವಿರಲಿ. ಈಗಿನವರು ಯಾರಾದರೂ ಗದ್ಯಪದ್ಯ ರಚನೆಯಲ್ಲಿ ಉದ್ಧತರಾಗಿದ್ದರೆ ಅವರೆಲ್ಲರ ತಲೆಯ ಮೇಲೆ ನನ್ನ ಎಡಗಾಲನ್ನಿ-

ಡುವೆನು. ಈ ಕವಿಯಿತ್ರಿಯ ಧೈರ್ಯವನ್ನು ನಾವು ನಿಜವಾಗಿಯೂ ಮೆಚ್ಚಿಕೊಳ್ಳಬೇಕು.

ರಾಜಶೇಖರನು ಇನ್ನೊಂದು ಪ್ರಸಂಗದಲ್ಲಿ,

"ಕರ್ಣಾಟೀ ದಶನಾಂಕಿತಃ ಶ್ರುತ
ಮಹಾರಾಷ್ಟ್ರೀ ಕಟಾಕ್ಷಾಹತಃ ।
ಪ್ರೌಢಾಂಧ್ರೀ ಸ್ತನಪೀಡಿತಃ ಪ್ರಣಯಿನೀ
ಭ್ರೂಭಂಗ ವಿತ್ರಾಸಿತಃ ।
ಲಾಟೀಬಾಹು ವಿವೇಷ್ಟಿತಃ ಮಲಯಸ್ತ್ರೀ
ತರ್ಜನೀ ತರ್ಜಿತಃ ।
ಸೋಯಮ್ ಸಂಪ್ರತಿ ರಾಜಶೇಖರಕವಿಃ
ವಾರಾಣಸೀಂ ವಾಂಛತಿ ।

ಎಂದು ಹೇಳಿರುವನು.

ಅವನ ಅಂತಃಪುರದಲ್ಲಿ ಇಷ್ಟು ಸ್ತ್ರೀಯರು ಇದ್ದರೋ ಎಂಬುದು ಸಂಶಯಾಸ್ಪದ. ಆದರೆ ಕರ್ನಾಟಕ ಸ್ತ್ರೀ ಅವನ ಪ್ರಿಯಳಾಗಿದ್ದಿರಬೇಕೆಂದು ಊಹಿಸಬಹುದು.

ರಾಜಶೇಖರನ ಇನ್ನೊಂದು ಪದ್ಯದಲ್ಲಿಯೂ ಕರ್ನಾಟಕದ ಸಂಬಂಧವಾಗಿ ಉಲ್ಲೇಖವಿರುವುದು :

"ನಾಂಧ್ರೀಪಯೋಧರ ಇವಾತಿತರಾಂ
ಪ್ರಕಾಶಃ ।
ನೋ ಗುರ್ಜರೀಸ್ತನ ಇವಾತಿತರಾಂ
ಪ್ರಗೂಢಃ ।
ಅರ್ಥೋ ಗಿರಾಮ್ ಅಪಿಹತಃ ಪಿಹಿತಶ್ಚ
ಕಶ್ಚಿತ್ ।
ಸೌಭಾಗ್ಯಮೇತಿ ಮರಹಟ್ಟವಧೂ
ಕುಚಾಭಃ ।

ಕೊನೆಯಸಾಲಿನಲ್ಲಿ ಕೊನೆಯ ಪದಕ್ಕೆ 'ಕರನಾಟ ವಧೂಕುಚಾಭಃ ಎಂದು ಪಾಠಾಂತರವೂ ಇರುವುದು

ಕಾವ್ಯಾರ್ಥವು, ಆಂಧ್ರ ಸ್ತ್ರೀಸ್ತನಗಳಂತೆ ತೀರ ತೆರೆದಿರಬಾರದು; ಗುರ್ಜರ ಸ್ತ್ರೀಸ್ತನದಂತೆ ತೀರ ನಿಗೂಢವಾಗಿರಬಾರದು. ಮಹಾರಾಷ್ಟ್ರ (ಕರ್ನಾಟ) ಸ್ತ್ರೀಯರಂತೆ ಸ್ವಲ್ಪ ತೆರೆದಿರಬೇಕು. ಸ್ವಲ್ಪಮುಚ್ಚಿರಬೇಕು. ಅಂದರೆ ಅದಕ್ಕೆ ಸೌಭಾಗ್ಯ ಬರುವುದು. ಕಾವ್ಯವು ತೀರ ವ್ಯಂಗ್ಯವಾಗಿರಬಾರದು; ತೀರ ವಾಚ್ಯವಾಗಿರಬಾರದೆಂದು ರಾಜಶೇಖರನು ರಸಿಕನಾಗಿ ಹೇಳಿರುವದನ್ನು ನೋಡಬೇಕು. ಆ ಕಾಲಕ್ಕೆ ಕರ್ನಾಟಕ ಮಹಾರಾಷ್ಟ್ರಗಳು ಅಷ್ಟೊಂದು ಭಿನ್ನವಾಗಿರಲಿಲ್ಲ. ಐಹೊಳೆಯ ಶಿಲಾಲೇಖವೊಂದರಲ್ಲಿ ಇದಕ್ಕೆ ಆಧಾರವಿದ್ದು ಪುಲಿಕೇಶಿಯು ಮೂರು ಮಹಾರಾಷ್ಟ್ರಗಳ ಒಡೆಯನಾಗಿದ್ದನೆಂದು ಹೇಳಲಾಗಿದೆ. ಕರ್ನಾಟಕವೂ ಇವುಗಳಲ್ಲಿ ಅಂತರ್ಭೂತವಾಗಿರುವುದು ಸಹಜವಾಗಿರುವುದು.

## ವಿಜಯನಗರದ ಕಾಲದಲ್ಲಿ

ಕರ್ನಾಟಕದ ಕೀರ್ತಿಪತಾಕೆಯನ್ನು ಹಾರಿಸಿದ ವಿಜಯನಗರ ಸಾಮ್ರಾಜ್ಯದ ಕೃಷ್ಣದೇವರಾಯನ ಬಗ್ಗೆ ಸಂಸ್ಕೃತ ಗ್ರಂಥಗಳಲ್ಲಿ ಉಲ್ಲೇಖಗಳಿರುವವು. ಅವನ ರಾಣಿಯೊಬ್ಬಳು ಬರೆದ ಪದ್ಯಗಳು ಮಾರ್ಮಿಕವಾಗಿರುವವು. ಓಡಿಸಾದ ಅರಸನ ಮಗಳಾದ ಈ ರಾಣಿ ಜಗನ್ಮೋಹಿನಿ. ಕೃಷ್ಣದೇವರಾಯನ ಪ್ರೇಮ ಇವಳಲ್ಲಿ ಹಿಂದಿನಿಂದ ಕಡಿಮೆಯಾದ್ದರಿಂದ ಅವಳು ಏಕಾಂತದಲ್ಲಿ ಕಾಲಕಳೆಯಬೇಕಾಯಿತು. ವಿರಹ ವೇದನೆಯಿಂದ ಅವಳ ಪ್ರೇಮವು, ಕಾವ್ಯದ ಕಡೆಗೆ ಹರಿಯಿತು. ತುಕ್ಕಾ ಎಂಬುದು ಅವಳ ಕವಿತ್ವನಾಮ. ಅವಳ ಗ್ರಂಥಗಳಾವವೂ ಉಪಲಬ್ಧವಿಲ್ಲ. ಆದರೆ 'ತುಕ್ಕಾ ಪಂಚಕ' ವೆಂದು ಪ್ರಸಿದ್ಧವಾದ ೫ ಪದ್ಯಗಳು ಉಪಲಬ್ಧವಿದ್ದು ಶ್ರೀ ಶಂಕರಾಚಾರ್ಯರ ಕೌಪೀನಪಂಚಕದಂತೆ ಆಕರ್ಷಕವಾಗಿರುವವು. ಅವಳ ಪದ್ಯಗಳನ್ನು ನಾವು ಅವಲೋಕಿಸಬಹುದು.

ಭ್ರಮನ್ ವನಾಂತೇ ನವಮಂಜರೀಷು
ನ ಷಟ್ಪದೋ ಗಂಧಫಲೀಮಜಿಘ್ರತ್ ।
ಸಾಕಿಂ ನ ರಮ್ಯಾ ಸಚ ಕಿಂ ನರಂತಾ ?
ಬಲೀಯಸಿ ಕೇವಲಮೀಶ್ವರೇಚ್ಛಾ ॥

ಉಪವನಗಳಲ್ಲಿ ನವಪುಷ್ಪಗುಚ್ಛಗಳಲ್ಲಿ ಸಂಚರಿಸುವಾಗ ಪರಮ ಗಂಧಫಲಿಯನ್ನು ಮೂಸಲಿಲ್ಲ. ಏಕೆ? ಇದು ರಮ್ಯವಾಗಿರಲಿಲ್ಲವೆ? ಭ್ರಮರದಲ್ಲಿ ರಸಿಕತೆ ಇರಲಿಲ್ಲವೊ? (ಭ್ರಮರವೆಂದರೆ ಇಲ್ಲಿ ಕೃಷ್ಣದೇವರಾಯ) ಈಶ್ವರನ ಇಚ್ಛೆ ಬಲವತ್ತರವಲ್ಲವೆ?

ಭ್ರಮರ ಭ್ರಮತಾ ದಿಗಂತರಾಲೀ ।
ಕ್ವಚಿದಾಸ್ವಾದಿತಮೀಕ್ಷಿತಂ ಶ್ರುತಂ ವಾ ।
ವದ ಸತ್ಯಮಪಾಸ್ಯ ಪಕ್ಷಪಾತಂ ।
ಯದಿ ಜಾತೀ ಕುಸುಮಾನುಕಾರಿ ಪುಷ್ಪಂ ॥

ಎಲೈ ಭ್ರಮರವೇ ನೀನು ದಿಗಂತರಾಳದಲ್ಲಿ ಸಂಚರಿಸುವೆ. ಅನೇಕ ಪುಷ್ಪಗಳ ರಸದ ರುಚಿಯನ್ನು ನೋಡಿರುವೆ. ಹಲವು ಹೂಗಳನ್ನು ನೋಡಿರುವೆ. ಹಲವುಗಳ ಖ್ಯಾತಿಯನ್ನು ಕೇಳಿರುವೆ. ಪಕ್ಷಪಾತವನ್ನು ಬಿಟ್ಟು ಸತ್ಯವನ್ನು ಹೇಳು. ಈ ಜಾಜಿ ಹೂವನ್ನು ಅನುಕರಿಸುವ ಕುಸುಮವು ನಿನಗೆಲ್ಲಿಯಾದರೂ ಸಿಕ್ಕಿರುವದೇ? (ಕೃಷ್ಣರಾಜ ಭ್ರಮರ ತುಕ್ಕಾ ಜಾತೀ ಕುಸುಮವು.)

ಕೊನೆಯ ಪದ್ಯದಲ್ಲಿ ಒಂದು ಬಗೆಯ ಸಮಾಧಾನ ಹಚ್ಚಿಕೊಳ್ಳಲಾಗಿರುವುದು.

ಕಿಂ ಮಾಲತಿಮ್ಲಾಯಸಿ ಮಾಂ ವಿಹಾಯ
ಚುಚುಂಬತುಂಬೀ ಕುಸುಮಂ
ಷಡಂಘ್ರಿಃ ।
ಲೋಕೇ ಚತುರ್ಭಿಶ್ಚರಣೈಃ ಪಶುಃಸ್ಯಾತ್
ಷಡ್ಭಿರತ್ಯಂತ ಪಶುಃ ನ ಕಿಮ್ ಸ್ಯಾತ್ ।

ಎಲೈ ಮಾಲತಿಯೆ, ನಿನ್ನನ್ನು ಆರಡಿ ಚುಂಬಿಸದೆ ತೋಂಡೀ ಹೂವನ್ನು ಚುಂಬಿಸಿತೆಂದು ಏಕೆ ಬಾಡುವೆ? ಜಗತ್ತಿನಲ್ಲಿ ನಾಲ್ಕು ಕಾಲಿನ ಪ್ರಾಣಿಗೆ ಪಶು ಎನ್ನುವರು. ಭ್ರಮರವಂತೂ ಆರಡಿ. ಅದರಲ್ಲಿ ಅತ್ಯಂತ ಪಶುತ್ವವಿರುವದೆಂದು ಏಕೆ ಭಾವಿಸಬಾರದು. (ವ್ಯಾಜನಿಂದೆ)

ಇದರಿಂದ ಕೃಷ್ಣರಾಜನು ರಸಿಕನಿದ್ದಿಲ್ಲವೆಂದಲ್ಲ. ಅವನು 'ಜಾಂಬವತೀ ಕಲ್ಯಾಣಂ' ಎಂಬ ಸಂಸ್ಕೃತ ನಾಟಕವೊಂದನ್ನು ಬರೆದಿದ್ದು ಅದರಲ್ಲಿ ಅವನ ಕವಿತ್ವಶಕ್ತಿ ರಸಿಕತೆ ವ್ಯಕ್ತವಾಗಿರುವವು. ಈ ನಾಟಕಾರಂಭದಲ್ಲಿಯ ಸೂತ್ರಧಾರನ ಮಾತುಗಳನ್ನು ಇಲ್ಲಿ ಲಕ್ಷಿಸಬಹುದು.

"ಕರ್ನಾಟ ರಾಜ್ಯ ರಕ್ಷಾಮಣೇಃ
ಶ್ರೀವಿರೂಪಾಕ್ಷ ದೇವಸ್ಯ
ಚೈತ್ರೋತ್ಸವಾವಲೋಕನಾಯ ಸಂಗತಾ
ಪರಿಷತ್
............"

"ಸಮಾಪ್ತಮಿದಂ ರಾಜಾಧಿರಾಜ
ರಾಜಪರಮೇಶ್ವರ

". . . . ಮೂರರೂರ ರಾಯರ ಗಂಡ
ಶ್ರೀ ಕೃಷ್ಣರಾಯ
ಮಹಾರಾಯ ವಿರಚಿತ
ಜಾಂಬವತೀಕಲ್ಯಾಣಂನಾಮ ನಾಟಕಂ"

ಅಂತು ಕರ್ನಾಟಕದ ರಾಜರಾಣಿಯರು ಕೂಡ ಸರಸ ಕವಿಗಳಾಗಿದ್ದರೆಂಬುದು ಕನ್ನಡಿಗರಿಗೆ ನಿಜವಾಗಿಯೂ ಸ್ಫೂರ್ತಿದಾಯಕವಲ್ಲವೆ?

ಕಂಪನರಾಯನ ಪತ್ನಿ ಗಂಗಾದೇವಿ ತನ್ನ ಪತಿಯ ವಿಜಯಯಾತ್ರೆಯನ್ನು ಬಣ್ಣಿಸುವ "ವೀರ ಕಂಪನರಾಯ ಚರಿತ್ರಂ" ಗ್ರಂಥವನ್ನು ವೈದರ್ಭೀ ಶೈಲಿಯಲ್ಲಿ ಬರೆದಿರುವಳು.

"ಅಥ ಲಂಘಿತ ಕರ್ನಾಟಃ ಪಂಚಕ್ಷೈರೇವ
ವಾಸರೈಃ ।
ಪ್ರಾಪತ್ ಕಂಪಮಹಿಪಾಲಃ ಕಂಟಕಾನನ
(ಮುಳಬಾಗಿಲ) ಪತ್ತನಂ"

ಗಂಗಾದೇವಿಯು ಅವನ ಪರಾಕ್ರಮವನ್ನು ಬಣ್ಣಿಸಿದ್ದು ಅವಳು ಕೇವಲ ಕವಯಿತ್ರಿಯಾಗಿರದೆ ವೀರಪತ್ನಿಯೂ ಆಗಿದ್ದಳೆನ್ನುವುದಕ್ಕೆ ನಿದರ್ಶನವಾಗಿರುವುದು.

ಒಂದನೇ ಬುಕ್ಕನ ಮೊಮ್ಮಗ ಎರಡನೇ ಹರಿಹರನ ಮಗ ರಾಜಕುಮಾರ ವಿರೂಪಾಕ್ಷನು "ನಾರಾಯಣ ವಿಲಾಸಂ" ಎಂಬ ಸಂಸ್ಕೃತ ಗ್ರಂಥವನ್ನು ಬರೆದಿರುವನು. ಇವನು ಸೂತ್ರಧಾರನ ಮುಖದಿಂದ ತಾನು "ಕರ್ನಾಟ ತುಂಡೀರ ಚೋಳ ಪಾಂಡ್ಯ ಮಂಡಲದ ಅಧಿಪತಿಯೆಂದೂ ಸಿಂಹಲದ್ವೀಪದಲ್ಲಿ ಜಯಸ್ತಂಭವನ್ನು ನೆಲಿಸಿದವನೆಂದೂ" ಹೇಳಿಕೊಂಡಿರುವನು.

ಒಂದನೇ ಬುಕ್ಕನ ಆಶ್ರಯದಲ್ಲಿದ್ದ ಅಗಸ್ತ್ಯಕವಿ ೭೪ ಕಾವ್ಯಗಳನ್ನು ಬರೆದಿದ್ದನಂತೆ. ಗಂಗಾದೇವಿಯು ಇವನನ್ನು ಮಧುರಾವಿಜಯದಲ್ಲಿ

"ಚತುಃ ಸಪ್ತತಿಕಾವ್ಯೋಕ್ತಿ ವ್ಯಕ್ತ ವೈದುಷ್ಯ
ಸಂಪದೇ ।
ಅಗಸ್ತ್ಯಾಯ ಜಗತ್ಯಸ್ಮಿನ್ ಸ್ಪೃಹಯೇತ್
ಕೋ ನ ಕೋವಿದಃ॥

ಎಂದು ಹೊಗಳಿರುವಳು. ಇದೇ ಕಾಲದ ಇನ್ನೊಬ್ಬ ವಿದ್ವಾಂಸ ರತ್ನಖೇಟ ದೀಕ್ಷಿತನು. ಅವನ ಸೊಸೆ ದಿನಾಲು ಅನ್ನುತ್ತ ಥಳಿಹೊಡೆಯುತ್ತಿದ್ದಳೆಂದು ಹೇಳಲಾಗುವ ಪದ್ಯವನ್ನು ನಾವು ನೋಡೋಣ.

" ವಿಪಶ್ಚಿತಾಮುಪಶ್ಚಿಮೋಽಥ ರತ್ನಖೇಟಿ
ದೀಕ್ಷಿತೇ ।
. . . . ವಿವಾದ ಕೇಲಿಮಾಗತೇ । ಬೃಹಸ್ಪತಿಃ
ಪ್ರಜಲ್ಪತಿ ಪ್ರಸರ್ಪತಿ ಕ್ವಸರ್ಪರಾಟ್
(ಪತಂಜಲಿ) ಷಡಾನನೋ ನತಾನನಶ್ಚತು
ರ್ಮುಖಶ್ಚದುರ್ಮುಖಃ। "

ವಿಜಯನಗರ ರಾಜರ ಆದಿ ಗುರುಗಳಾದ ವಿದ್ಯಾರಣ್ಯರಲ್ಲಿ ಪಾಂಡಿತ್ಯ ರಾಜಕಾರಣ ಕವಿತ್ವ ಇವುಗಳ ಅದ್ಭುತ ದರ್ಶನವನ್ನು ಕಾಣಬಹುದು. ಇವರ ಶಂಕರ ದಿಗ್ವಿಜಯ ಕಾವ್ಯವು ಕಾವ್ಯಾಭ್ಯಾಸಿಗಳಿಗೆ ಅವಶ್ಯವಾಗಿ ಬೇಕೇ ಬೇಕು.



## ಧಾರ್ಮಿಕ ವಿದ್ವಾಂಸರ ಕೃತಿಗಳಲ್ಲಿ

ಈ ಕಾಲದಲ್ಲಿ ದ್ವೈತ, ಅದ್ವೈತ ಮತ್ತು ವಿಶಿಷ್ಟಾದ್ವೈತ ಈ ಮೂರುಮತದವರ ಪಾಂಡಿತ್ಯದ ದುಂದುಭಿಗಳು ಮೊಳಗಿದವು. ಮಳಖೇಡದ ಹತ್ತಿರವಿರುವ ಎರಗೋಳದ ಗುಹೆಯಲ್ಲಿ ಕುಳಿತು ಜಯತೀರ್ಥರು 'ಸುಧಾಗ್ರಂಥ' ವನ್ನು ಬರೆದರು. ವೈಷ್ಣವರು ಇಂದಿಗೂ ಇದನ್ನು ಪ್ರೇಮದಿಂದ ಅಧ್ಯಯನ ಮಾಡುವರು. ಈ ಗ್ರಂಥದ ಬಗ್ಗೆ ಒಂದು ಗಾದೆ ರೂಢವಾಗಿರುವುದು.

"ವಸುಧಾ ವಾ ಪಾಲನೀಯಾ ಸುಧಾ ವಾ ಪಠನೀಯಾ" ಮಾನವನು ಹುಟ್ಟಿದಬಳಿಕ ಜನ್ಮಸಾರ್ಥಕ್ಯ ಮಾಡಿಕೊಳ್ಳಬೇಕು; ಭೂಮಿಯನ್ನಾದರೂ ಆಳಬೇಕು ಇಲ್ಲವಾದರೆ ಸುಧಾ ಗ್ರಂಥವನ್ನಾದರೂ ಓದಬೇಕು. ಇಂತಹ ಗ್ರಂಥಗಳು ಕರ್ನಾಟಕದ ವಿದ್ವಾಂಸರ ಉಜ್ವಲ ಪ್ರತಿಭೆಯ ದ್ಯೋತಕವಾಗಿರುವವು.

ಶ್ರೀ ಮನ್ಮಧ್ವಾಚಾರ್ಯರ ಶಿಷ್ಯರಾದ ಅಕ್ಷೋಭ್ಯ-

ತೀರ್ಥರಿಗೂ ವಿದ್ಯಾರಣ್ಯರಿಗೂ ವಾದವಿವಾದವಾಯಿತಂತೆ. ವೇದಾಂತ ದೇಶಿಕರು ಮಧ್ಯಸ್ಥರಾಗಿದ್ದರು. ಅಕ್ಷೋಭ್ಯತೀರ್ಥರು ಗೆದ್ದರೆಂದು ಮುಳಬಾಗಿಲ ಶಾಸನವು ಹೇಳುವುದು. ಆದರೆ ವಿದ್ಯಾರಣ್ಯರೇ ಗೆದ್ದರೆಂದು ಅದ್ವೈತಿಗಳು ಹೇಳುವರು. ಇದೇನೇ ಇರಲಿ. ಇಂತಹ ತಾತ್ತ್ವಿಕ ಚರ್ಚೆಯಿಂದ ಬುದ್ಧಿ ಪ್ರಕರ್ಷವುಂಟಾಗುವುದು ನಿಜ.

ಜಯತೀರ್ಥರ ನಂತರ ವ್ಯಾಸತೀರ್ಥರು ಮಾಧ್ವ ಮತದ ತತ್ತ್ವಗಳನ್ನು ಪ್ರಚುರಪಡಿಸಿದರು. ಕೃಷ್ಣ ದೇವರಾಯ, ಅಚ್ಯುತರಾಯರಿಗೆ ಉಪದೇಶದಿಂದ ರಾಜಕಾರಣದಲ್ಲಿಯೂ ಇವರು ಸಹಕಾರಿಗಳಾಗಿದ್ದರು. ವ್ಯಾಸತೀರ್ಥರ ಮಹಿಮೆಯ ಬಗ್ಗೆ ಒಂದು ಆಖ್ಯಾಯಿಕೆ ಇರುವದು. ಅಚ್ಯುತರಾಯನ ಆಳಿಕೆಯಲ್ಲಿ ಮೂರು ಗಳಿಗೆಯ ಕುಮುಹೂರ್ತವಿರುವದೆಂದೂ ಆ ವೇಳೆಯಲ್ಲಿ ಸಿಂಹಾಸನದ ಮೇಲೆ ಕೂಡಬಾರದೆಂದೂ ಜ್ಯೋತಿರ್ವಿದರು ಅಚ್ಯುತರಾಯನಿಗೆ ಸೂಚಿಸಿದ್ದರು. ಅವನು ಗಾಬರಿಯಾಗಿ ವ್ಯಾಸ-ತೀರ್ಥರ ಬಳಿ ಬರಲು, ಅವರು ಒಳ್ಳೆಯದು ಎಂದು ಹೇಳಿ ತಾವೇ ಬಂದು ಆ ಮೂರು ಗಳಿಗೆಯ ವರೆಗೆ ತಾವೇ ಸಿಂಹಾಸನದಲ್ಲಿ ಕುಳಿತರು. ಆ ವೇಳೆಯಾದ ಬಳಿಕ ಅವರು ಎದ್ದು ಬಿಟ್ಟರು. ಕೂಡಲೇ ಸಿಂಹಾಸನವು ಸುಟ್ಟು ಹೋಯಿತಂತೆ. ಹೀಗೆ ವ್ಯಾಸತೀರ್ಥರು ಯೋಗಶಕ್ತಿಯಿಂದ ಅವನನ್ನು ಕಾಪಾಡಿದರು.

ವೀರಶೈವರೂ ತಾವು ರಚಿಸಿದ ಸಂಸ್ಕೃತ ಸಾಹಿತ್ಯದಲ್ಲಿ ಕರ್ನಾಟಕದ ಪ್ರತಿಭೆಯನ್ನು ಚೆನ್ನಾಗಿ ಪ್ರದರ್ಶಿಸಿರುವರು. ಮಲಪ್ರಭಾ ತೀರದಲ್ಲಿರುವ ಮಾಗಿಯ ಮಗ್ಗಿಯ ಮಾಯದೇವನು (ಇವನಕಾಲ ಸು. ೧೪೩೦) ಒಳ್ಳೇ ಸಂಸ್ಕೃತ ಪಂಡಿತನಾಗಿದ್ದನು. ಬಹು ಬಿಗಿಯೆನಿಸಿರುವ ಸೂತ್ರಗಳಲ್ಲಿ ಇವನು ವೀರ-ಶೈವ ಧರ್ಮವನ್ನು ನಿರೂಪಿಸಿರುವನು. ಸಂಸ್ಕೃತ ಶಬ್ದಗಳಿಗೆ ವೀರಶೈವ ಮತಕ್ಕನುಸಾರವಾಗಿ ಸರಿಯಾದ ಅರ್ಥ ಹೊರಡುವುದಕ್ಕಾಗಿ 'ವಿಶೇಷಾರ್ಥ ಪ್ರಕಾಶ'ವೆಂಬ ಗ್ರಂಥವನ್ನು ಬರೆದಿರುವನು. ಇದರಿಂದ ಇವನು ಉಪನಿಷತ್ತು ಆಗಮಗಳನ್ನು ಚೆನ್ನಾಗಿ ಬಲ್ಲವನಿದ್ದನೆಂದು ತಿಳಿದುಬರುವದು.

ಲಿಂಗ ಶಬ್ದದ ಅರ್ಥವನ್ನು ಹೇಳುವಾಗ ವೀರಶೈವರು ಸಂಸ್ಕೃತ ಭಾಷೆಯನ್ನೇ ಬಳಸಿಕೊಂಡಿರುವರು.

ಲಯಂ ಗಚ್ಛತಿ ಯತ್ರೈವ ಜಗದೇತಚ್ಚ-
ರಾಚರಂ
ಪುನಃ ಪುನಃ ಸಮುತ್ಪತ್ತಿಂ ತಲ್ಲಿಂಗಂ
ಬ್ರಹ್ಮಶಾಶ್ವತಂ।
ತಸ್ಮಾಲ್ಲಿಂಗಂ ಪರಂಬ್ರಹ್ಮ ಸಚ್ಚಿದಾನಂದ
ಲಕ್ಷಣಂ
—ವೀರಶೈವ ಚಿಂತಾಮಣಿ

ತದಾಗಮಾನುಸಾರೇಣ ಲಿಂಗಂವಕ್ಷ್ಯಾಮಿ
ಸಾಂಪ್ರತಂ।
ಯತೋಜಗದಿದಂ ಸರ್ವಂ ತ್ರೈಲೋಕ್ಯಂ
ಸಚರಾಚರಂ।
ಲೀಯತೇ ಪ್ರಲಯೇ ಯತ್ರತದಿದಂ
ಲಿಂಗಮುಚ್ಯತೇ।
ಲಿಂಗಂ ಗಮಕಮಿತ್ಯಾಹುಃ ಅಪರೇ
ಲಿಂಗವಿತ್ತಮಾಃ।
ಗಮ್ಯತೇ ಯೋಗಿಭಿರ್ಧ್ಯಾತೋರ್ಗಮೋ
ಜ್ಞಾನಾರ್ಥ ದರ್ಶನಂ
ಶಿವ ಏವ ಭವೇಲ್ಲಿಂಗಾ ಗಮಕಮೇವ ಹಿ
ಶಿವೇನ ಗಮ್ಯತೆ ಸರ್ವಂ ಶಿವೇನಾನ್ಯೇನ
ಗಮ್ಯತೆ।
ಪರಮಾತ್ಮಾ ಶಿವ ಏವ ಲಿಂಗಮಿತಿ ವಕ್ತವ್ಯ
ವೇದಾಂತಸಾರ — ವೀರಶೈವ ಚಿಂತಾಮಣಿ.

## ವೆಂಕಟಾಧ್ವರಿಯ ಬಣ್ಣನೆ

ಸಂಸ್ಕೃತ ಸಾಹಿತ್ಯದಲ್ಲಿಯ ಇನ್ನೊಬ್ಬ ಪ್ರಖ್ಯಾತ ಕವಿ ವೆಂಕಟಾಧ್ವರಿಯು ತನ್ನ ಚಂಪೂಕಾವ್ಯದಲ್ಲಿ ಆರಂಭದಲ್ಲಿಯೇ ತಾನು ಕರ್ನಾಟ ಅರಸನ ಗುರುವಾದ ತಾತಾಚಾರ್ಯನ ಭಾಗಿನೇಯ ವಂಶಜನೆಂದು ಅಭಿಮಾನದಿಂದ ಹೇಳಿಕೊಂಡಿರುವನು. ಅವನ ವಿಶ್ವಗುಣಾದರ್ಶವು ವಿಮರ್ಶಕ ದೃಷ್ಟಿಯಿಂದ ಕೂಡಿದ್ದು ಕರ್ನಾಟಕದ ವರ್ಣನೆಯು ಇದರಲ್ಲಿರು-ವುದು. ಗುರ್ಜರ, ಮಹಾರಾಷ್ಟ್ರ, ಆಂಧ್ರ ದೇಶಗಳನ್ನು, ಬಣ್ಣಿಸಿದ ನಂತರ ಕವಿ ಕರ್ನಾಟಕವನ್ನು ಬಣ್ಣಿಸಿರುವನು.

" ವ್ಯೋಮಯಾನಂ ಅನ್ಯತಃ ಸ್ಪಂದಯನ್
ದೃಷ್ಟ್ವಾ ಸಪ್ರತ್ಯಭಿಜ್ಞಂ
ಕರ್ನಾಟದೇಶೋಯಂ ಪೂರ್ವಂ ಕರ್ಣ
ದೇಶಮಭೂಷಯತ್।
ಸ ಏವ ಸಾಂಪ್ರತಂ ಪಶ್ಯ ಚಕ್ಷುಷೋಃ
ಭೂಷಣಾಯತೇ
ಲೋಚನಾ ಸೇಚನಕಂ ದೇಶಸ್ಯಾಸ್ಯ
ರಾಮಣೀಯಕಂ।

ಕರ್ನಾಟ ಶಬ್ದವು ಅಥವಾ ದೇಶವು ನಮಗೆ ಮೊದಲು ಕರ್ಣಭೂಷಣವಾಗಿತ್ತು ; ಕೇಳಿ ತಿಳಿದಿದ್ದೆವು. ಈಗ ಕಣ್ಣಿಗೆ ಭೂಷಣವಾಗುವುದು. ನೋಡು. ಇದರ ಸೌಂದರ್ಯವು ದೃಷ್ಟಿಗೆ ತೃಪ್ತಿಯ-ನ್ನುಂಟುಮಾಡುವುದು.

ಇಲ್ಲಿಯ ಮಲೆನಾಡಿನ ನೈಸರ್ಗಿಕ ಸೌಂದರ್ಯವನ್ನು ಬಣ್ಣಿಸುತ್ತ ಉಪವನಗಳು ಅಧಿಕ ಸಂಖ್ಯೆಯಲ್ಲಿದ್ದವೆಂದು ಹೇಳುತ್ತಾನೆ. ಪವಿತ್ರವಾದ ಯದುಗಿರಿ ಇಲ್ಲಿರುವುದು.

ಅಚ್ಛೈಃ ದ್ವಿಜೇಂದ್ರೈರಮೃತಾಭಿಲಾಷಾತ್
ಆಸೇವಿತೋ ಭುವ್ಯಭಿಜಾತಕೀರ್ತಿಃ।
ಆನಂದತೀರ್ಥಾಹ್ವಯಮತ್ರ ಕಶ್ಚಿತ್
ಅನ್ವರ್ಥಯನ್ ಆವಿರಭೂನ್ಮುನೀಂದ್ರಃ।

ಕರ್ನಾಟಕದಲ್ಲಿ ರಜತಪೀಠ ಮಠವು ಇರುವುದು (ಇದು ಸುವನೂರೆಂದು ವಿಶ್ವಗುಣಾದರ್ಶ ಟೀಕಾಕಾರರು ಹೇಳುತ್ತಾರೆ) ಇದು ಕಾಂಚನದಂತೆ ಶೋಭಿಸುವುದು. ಇಲ್ಲಿ ಆನಂದತೀರ್ಥರೆಂಬ ಜ್ಞಾನಿಗಳಿದ್ದಾರೆ.

ಇದರಲ್ಲಿ ಸಂನ್ಯಾಸಿಗಳ ಟೀಕೆ ಇದ್ದರೂ ಅದು ವೇಷಧಾರಿಗಳಿಗೆ ಅನ್ವಯಿಸುವುದು. ಕನ್ನಡಿಗರು ತಾರತಮ್ಯವನ್ನು ಅರಿಯದವರೆಂದೂ ಅವನು ಹೇಳಿರುವನು.

ಚಂದ್ರಾಲೋಕಚಯಾಂಧಕಾರ ಭರ-
ಯೋಶ್ಚಾಂಪೇಯ ಕಿಂ ಪಾಕಯೋಃ।
ರಾಜತ್ ಕುಂಡಲಿರಾಜ ರಾಜಲಿಕಯೋ
ರಾಜೀವ ಧತ್ತೂರಯೋಃ।
ಖೇಲತ್ಕೋಕಿಲ ಲೋಕಕಾಕಕುಲಯೋಃ
ಕ್ಷೀರಾರ್ಣವಾಂಧ್ವೋರಿವ।
ವ್ಯಕ್ತಂ ಪಂಡಿತಮೂರ್ಖಯೋಃ ಸಮ-
ದೃಶೋ ವ್ರಾತ್ಯಾ * ಇಹತ್ಯಾ ಅಮೀ॥

ವ್ರಾತ್ಯರು (ಸಂಸ್ಕಾರ ಹೀನರು) ಎಂದು ಹೇಳಿದ್ದು ಸರ್ವಥಾ ಉಚಿತವಾಗಿರಲಿಕ್ಕಿಲ್ಲ. ಆದರೆ ತಾರತಮ್ಯ ಜ್ಞಾನ ಅವಶ್ಯವೆಂಬುದರಲ್ಲಿ ಸಂದೇಹವಿಲ್ಲ.

ಹದಿನೆಂಟನೆ ಶತಮಾನದಲ್ಲಿ ವೀರಶೈವರು ಕರ್ನಾಟಕದಲ್ಲಿ ಸಂಸ್ಕೃತದಲ್ಲಿ ಗ್ರಂಥಗಳನ್ನು ಬರೆದಿರುವರು. ನಂಜರಾಜಯ್ಯನು 'ಚಂದ್ರಕಲಾ ಪರಿಣಯ' ಎಂಬ ನಾಟಕವನ್ನು ಬರೆದಿರುವನು. ಇವನಿಗಿಂತ ಒಂದು ಶತಮಾನ ಹಿಂದಿದ್ದ ಷಡಕ್ಷರದೇವನು ಸಂಸ್ಕೃತ ಭೂಯಿಷ್ಟವಾದ ಕನ್ನಡ ಕಾವ್ಯವನ್ನು ಬರೆದಿರುವುದಲ್ಲದೆ ಸಂಸ್ಕೃತದಲ್ಲಿಯೂ ಗ್ರಂಥಗಳನ್ನು ಬರೆದಿರುವನು. ಶಿಲಾಧಿಕ್ಯ, ಭಕ್ತಾ-ಧಿಕ್ಯ, ಅಂಬಾಷ್ಟಕ, ಭದ್ರಸ್ತವ, ಕವಿಕರ್ಣರಸಾಯನಗಳು ಇವನ ಸಂಸ್ಕೃತ ಗ್ರಂಥಗಳಾಗಿರುವವು.

ಶೂದ್ರಕನ ಮೃಚ್ಛಕಟಿಕ ನಾಟಕದ ೪ ನೇ ಅಂಕದಲ್ಲಿ ಮತ್ತು ಮಾರ್ಕಂಡೇಯ ಪುರಾಣದ-ಲ್ಲಿಯೂ ಕರ್ನಾಟಕದ ಕೊಂಚ ದರ್ಶನವನ್ನು ಕಾಣಬಹುದು. ೧೭ನೆ ಶತಮಾನದಲ್ಲಿ ರಂಗನಾಥನು ಬರೆದ 'ಅನುಭವಾಮೃತ'ವನ್ನು ೧೯ನೆ ಶತಮಾನದ ಆರಂಭದಲ್ಲಿ ಬಾಲಕೃಷ್ಣ ಬ್ರಹ್ಮಾನಂದನು ಸಂಸ್ಕೃತಕ್ಕೆ ಭಾಷಾಂತರಿಸಿರುವನು. ಅದು ವಿಶ್ವ ವಾಙ್ಮಯಕ್ಕೆ ತಕ್ಕದ್ದೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು.

ಕನ್ನಡಿಗರು ಸಂಸ್ಕೃತ ಸಾಹಿತ್ಯದಲ್ಲಿ ಕನ್ನಡ-ಕರ್ನಾಟಕದ ದರ್ಶನ ನೀಡಿದಂತೆ ಇನ್ನಿತರರೂ ಕರ್ನಾಟಕದ ನಿಸರ್ಗಸೊಬಗನ್ನು ಮೆಚ್ಚಿಕೊಂಡು ಬಣ್ಣಿಸಿರುವರು. ಇಂಥ, ಸಂಸ್ಕೃತ ಸಾಹಿತ್ಯದಲ್ಲಿ ಕರ್ನಾಟಕದ ದರ್ಶನವು ಹೃದಯಂಗಮವಾಗಿ ಮೂಡಿಬಂದಿದೆಯೆಂದು ಹೇಳಿದರೆ ತಪ್ಪಾಗಲಾರದು.

* ವ್ರಾತ್ಯವೆಂದರೆ ಕುಲಗೆಟ್ಟವರೂ ಪುನಃ ವ್ರತದಿಂದ (ಸಂಸ್ಕಾರ) ಶುದ್ಧರಾದವರು ಎಂದೂ ಈ ಶಬ್ದದ ಅರ್ಥವನ್ನು ಹೇಳುವರು.

# ಮಾನವ ಕಲ್ಯಾಣಕ್ಕೆ ಅಣುಶಕ್ತಿಯ ಬಳಕೆ

ಮಾನವನ ಕೈಯಲ್ಲಿ ಇಂದು ಅತ್ಯಂತ ಪ್ರಬಲವಾದ ಶಕ್ತಿಯೊಂದು ದೊರಕಿರುವುದು. ಎರಡನೇ ಮಹಾಯುದ್ಧ ಮುಗಿಯಲು ಕಾರಣವಾದ ಈ ಅಣುಶಕ್ತಿ ವಿಧ್ವಂಸಕವಾಗಿರುವಂತೆ ಮಾನವ ಕಲ್ಯಾಣಕಾರಿಯೂ ಆಗಿರುವುದು. ವಿವಿಧ ರೀತಿಯಲ್ಲಿ ಅದು ತನ್ನ ಸೇವೆಯನ್ನು ಸಲ್ಲಿಸಬಹುದಾಗಿದೆ. ಅದರ ಬಹುಮುಖ ಪ್ರಯೋಜನವನ್ನೇ ಲೇಖಕರು ಇಲ್ಲಿ ವಿಶದಪಡಿಸಿರುವರು.

ಲೇಖಕರು :
**ಪ್ರೊ. ಎಂ. ಎಸ್. ಎಸ್. ರಾವ, ಎಂ. ಎಸ್‌ಸಿ.**
ಬಸವೇಶ್ವರ ಕಾಲೇಜ, ಬಾಗಲಕೋಟೆ.

ಈ ಪೃಥ್ವಿಯ ಮೇಲೆ ಎಂದೂ ಇಲ್ಲದ ಮತ್ತು ಅತ್ಯಂತ ದೊಡ್ಡ ಪ್ರಮಾಣದ ಶಕ್ತಿಯನ್ನು ಇಂದು ಮಾನವನು ತನ್ನ ಕೈಯಲ್ಲಿ ಇಟ್ಟುಕೊಂಡಿದ್ದಾನೆ. ಆ ಅಪಾರ ಶಕ್ತಿಯನ್ನು ಆತನು ಹೇಗೆ ಬೇಕಾದರೂ ಬಳಸಬಹುದು. ಅದು ರಚನಾತ್ಮಕವಾಗಿಯೇ ಇರಬಹುದು. ಇಲ್ಲವೆ ವಿನಾಶಕಾರಿಯಾಗಿಯೇ ಇರಬಹುದು.

ಕಾಲಾನುಕಾಲದಿಂದ ಅಣುವಿನಲ್ಲಿ ಅಡಗಿರುವ ಅತ್ಯಂತ ನಿಗೂಢ ಶಕ್ತಿ ಒಳಗೇ ಹುದುಗಿಕೊಂಡು ಕಾದು ಕುಳಿತಿದೆ. ಏಕೆ? ಮಾನವನು ಹೇಳಿದ ಕೆಲಸಗಳನ್ನು ಮಾಡುವುದಕ್ಕೆ. ಇಂದು ಮಾನವನು ತನ್ನ ಕಣ್ಣೆದುರಿಗೇ ಅಣುಯುಗದ ಉದಯವನ್ನು ವೀಕ್ಷಿಸುತ್ತಿದ್ದಾನೆ.

ಏಕೆಂದರೆ ಇಂದು ವಿಜ್ಞಾನಿಗಳು ಈ ಶಕ್ತಿಯನ್ನು ಬಳಿಸಿಕೊಳ್ಳುವ ರಹಸ್ಯದ ಬಗೆಯನ್ನು ಅರಿತುಕೊಂಡಿದ್ದಾರೆ. ಕೆಲವು ಕ್ಲಿಷ್ಟ ಹಾಗೂ ತೊಡಕಿನ ಉಪಕರಣಗಳಿಂದ ಅವರು ಅಣುಗಳನ್ನು ಸ್ಫೋಟಗೊಳಿಸಿ ವಿಭಜಿಸಿ ನಂತರ ಅದರಲ್ಲಿ ಹುದುಗಿರುವ ಮತ್ತು ಈ ಜಗತ್ತನ್ನೇ ಬದಲಿಸಬಲ್ಲ ಅಪಾರ ಶಕ್ತಿಯನ್ನು ಬಿಡುಗಡೆ ಮಾಡುತ್ತಾರೆ.

ಅಣುವೆಂಬುದೇನೋ ಅತ್ಯಂತ ಕಿರಿದೇ ಸರಿ! ಆದರೆ ಅದರ ಶಕ್ತಿ ಅಪಾರ. ಅದನ್ನು ಕಣ್ಣಿಗೆ ಗೋಚರವಾಗುವಂತೆ ಮಾಡಬೇಕಾದರೆ ಕೋಟ್ಯಂತರ ಅಣುಗಳನ್ನು ಜತೆಗೂಡಿಸಬೇಕು. ಆದರೆ ಸುಮಾರು ೪೦ ದಶಲಕ್ಷ ಪೌಂಡುಗಳಷ್ಟು ಕಲ್ಲಿದ್ದಲಿನಿಂದ ಉತ್ಪಾದನವಾಗುವ ಶಕ್ತಿಯಷ್ಟನ್ನು ಉತ್ಪಾದಿಸಬೇಕಾದರೆ, ಕೇವಲ ೧೫ ಪೌಂಡುಗಳಷ್ಟು ಬಲವರ್ಧಿತ ಅಣುವಿನ ಉರುವಲುಶಕ್ತಿ ಸಾಕು.

ಈ ಅಣುಶಕ್ತಿಯು ಹಚ್ಚ ಹಸಿರು ಬೆಳೆಯ ಜಮೀನುಗಳನ್ನು ಬೇಕಾದರೆ ಕ್ಷಣಾರ್ಧದಲ್ಲಿ ಮರುಭೂಮಿಯನ್ನಾಗಿ ಮಾಡಬಲ್ಲದು; ಅಥವಾ ಆ ಅಣುಶಕ್ತಿಯನ್ನೇ ಆಹಾರಾಭಾವ ಇದ್ದಲ್ಲಿ ಹೊಸ ಹಾಗೂ ಉತ್ತಮ ತರದ ಬೆಳೆಯನ್ನು ತೆಗೆಯಲು ಉಪಯೋಗಿಸಬಹುದು. ಈ ಅಣುಶಕ್ತಿಯೇ— ವಿನಾಶಕ್ಕೆ ಬಳಸಿದಾಗ—ಎಂತೆಂತಹ ದೊಡ್ಡ ದೊಡ್ಡ ನಗರಗಳನ್ನು ಕೂಡ ಕೆಲವೇ ನಿಮಿಷಗಳಲ್ಲಿ ಸುಟ್ಟು ಬೂದಿ ಮಾಡಿ ನೆಲಸಮಮಾಡಬಲ್ಲದು. ಅದನ್ನೇ ರಚನಾತ್ಮಕವಾಗಿ ಬಳಸಿದರೆ ಇಡೀ ದೊಡ್ಡ ನಗರಗಳನ್ನೇ ಬೆಳಗಿ ಸಾಕಷ್ಟು ಶಾಖ ಮತ್ತು ಶಕ್ತಿಯನ್ನು ಒದಗಿಸಬಲ್ಲದು. ಇದೇ ಅಣುಶಕ್ತಿಯನ್ನು ವಿಧ್ವಂಸಕ ಕೃತಿಗಳಿಗೆ ಬಳಸಿದರೆ, ಸಹಸ್ರಾರು ಮಕ್ಕಳನ್ನು ಸಂಪೂರ್ಣ ಅಂಗವಿಕಲರನ್ನಾಗಿ ಮಾಡಬಲ್ಲದು. ಅದೇ ಶಾಂತಿಗಾಗಿ ಬಳಸಿದರೆ ಎಷ್ಟೋ ದೀರ್ಘ ಕಾಲದ ರೋಗರುಜಿನಗಳನ್ನು ವಾಸಿ ಮಾಡಲು ದಾರಿ ತೋರಬಹುದು. ಅಷ್ಟೇ ಅಲ್ಲ! ಹೊಸ ಜೀವನವನ್ನೂ ತಂದು ಕೊಡಬಲ್ಲದು.

ಹೀಗಿದೆ ಅಣುವಿನ ಅಪಾರ ದೈವಿಕ ಅಥವಾ ಪಾಶವೀಶಕ್ತಿ !

ಇಂತಹ ಶಕ್ತಿಯನ್ನು ಮಾನವನು ಜಗತ್ತಿನ ಕಲ್ಯಾಣಕ್ಕೆ ಉಪಯೋಗಿಸಬೇಕೇ, ಇಲ್ಲವೆ ವಿನಾಶಕ್ಕೆ ಉಪಯೋಗಿಸಬೇಕೇ? ಇದನ್ನು ನಿರ್ಧರಿಸುವವರು ಹಾಗೂ ನಿಯಂತ್ರಿಸುವವರು ಯಾರು?

## ವೈದ್ಯಕೀಯ ರಂಗದಲ್ಲಿ ಅಣುಗಳ ಉಪಯೋಗ :

ಪ್ರತಿಯೊಂದು ರಾಷ್ಟ್ರವೂ ತನ್ನ ಪ್ರಜೆಗಳನ್ನು ರೋಗರುಜಿನಗಳಿಂದ ಮುಕ್ತರನ್ನಾಗಿ ಮಾಡಲು ಅನೇಕ ಸಾಧನೋಪಕರಣಗಳನ್ನು ಬಯಸುವುದು ಸಹಜವೇ! ಕೆಲವು ಜನರಿಗೆ ರೋಗಗಳು ಬಂದರೂ ಅವನ್ನು ಕ್ರಮೇಣ ಗುಣಪಡಿಸಬಹುದು. ಇನ್ನು ಕೆಲವು ರೋಗಗಳನ್ನು ಸೂಕ್ಷ್ಮವಾಗಿ ಪರೀಕ್ಷಿಸಿ ಯೋಗ್ಯ ರೀತಿಯಲ್ಲಿ ವಾಸಿಮಾಡಬಹುದು. ಇಂದು ಮಾನವನ ಆಸೆ ಆಕಾಂಕ್ಷೆಗಳಲ್ಲಿ ರೋಗಗಳನ್ನು ಸಂಪೂರ್ಣ ನಿಯಂತ್ರಿಸುವುದೂ ಒಂದಾಗಿದೆ. ತಾಯಂದಿರು ಇನ್ನು ತಮ್ಮ ಕೂಸುಗಳ ಬಾಲಗ್ರಹದೋಷಗಳ ಬಗ್ಗೆ ಅಂಜಬೇಕಾದ ಕಾರಣವಿಲ್ಲ ದುಡಿಯುವ ಪುರುಷ ಹಾಗೂ ಸ್ತ್ರೀ ಇನ್ನು ಅಕಾಲ ಮರಣಕ್ಕೆ ತುತ್ತಾಗುವ ಕಾರಣವಿಲ್ಲ. ಒಟ್ಟಿನಲ್ಲಿ ರೋಗಗಳನ್ನು ಸಂಪೂರ್ಣ ನಿಯಂತ್ರಿಸಲು ಇಂದು ಎಂದಿಗಿಂತಲೂ ಅತ್ಯಂತ ಹೆಚ್ಚಿನ ಅವಕಾಶಗಳಿವೆ. ಮನುಷ್ಯನ ದೇಹದ ವಿವಿಧ ಕಾರ್ಯಗಳನ್ನು ತಿಳಿದುಕೊಳ್ಳುವಲ್ಲಿಯೂ ಮತ್ತು ರೋಗಗಳನ್ನು ಹೊಡೆದೋಡಿಸುವಲ್ಲಿಯೂ ವೈದ್ಯರಿಗೆ ಅತ್ಯಂತ ಉಪಯುಕ್ತವಾದ ಈ ಅಣುಶಕ್ತಿ ಒಂದು ಸೋಜಿಗವಾದ ಸಾಧನವಾಗಿದೆ.

ಸೂಕ್ಷ್ಮದರ್ಶಕವೊಂದು ಕಂಡುಹಿಡಿಯಲ್ಪಟ್ಟ ಮೇಲೆ, ಈ ರೇಡಿಯೋ ಐಸೊಟೋಪುಗಳು (Radio Isotopes) ಅತ್ಯಂತ ಮಹತ್ವವಾದ ಸಂಶೋಧನೆಯೆಂದು ವೈದ್ಯರು ಹೇಳುತ್ತಾರೆ. ಈ ಹೊಸ ಸಾಧನವೇ ರೋಗಗಳನ್ನು ಗುಣಪಡಿಸುವುದಕ್ಕೆ ಮತ್ತು ಹೆಚ್ಚೆಚ್ಚು ಸಂಶೋಧನೆಗಳನ್ನು ನಡೆಸುವುದಕ್ಕೆ ಅವನಿಗೆ ಉಪಯುಕ್ತವಾಗಿದೆ.

ಗಾಯಗಳನ್ನು ಮಾಯಿಸುವಲ್ಲಿ ಕೆಲವು ತೀಕ್ಷ್ಣ ಕಿರಣಗಳುಳ್ಳ ಐಸೋಟೋಪುಗಳು ದೇಹದ ಯಾವುದೇ ಭಾಗದಲ್ಲಿರುವ ಗಾಯದಲ್ಲಿ ಒಳಪ್ರವೇಶಿಸಿ ಅಲ್ಲಿ ಆ ಗಾಯ ಅಥವಾ ರೋಗಕ್ಕೆ ಕಾರಣವಾದ ವಸ್ತುಗಳನ್ನು ಹೊಡೆದೋಡಿಸುತ್ತವೆ.

ಸಂಶೋಧನೆಗಳಲ್ಲಿ ಲಘುತರ ಮತ್ತು ಅಪಾಯಕಾರಿಯಲ್ಲದ ಕಿರಣಗಳುಳ್ಳ ಐಸೋಟೋಪುಗಳನ್ನು ದೇಹದಲ್ಲಿ ಒಳನುಗಿಸಿದಾಗ ಆ ಕಿರಣಗಳು ದೇಹದಲ್ಲಿ ಕಣ್ಣಿಗೆ ಕಾಣದೆ ಉಂಟಾಗುವ ಬದಲಾವಣೆಗಳನ್ನು ಗುರುತಿಸಬಲ್ಲವು.

ಅಣುಶಕ್ತಿಯು ವೈದ್ಯಕೀಯದಲ್ಲಿ ಏನೇನು ಪ್ರಗತಿಯನ್ನು ಸಾಧಿಸಬಲ್ಲದೆಂಬುದನ್ನು ವೈದ್ಯರು ಈಗೀಗ ಮನಗಾಣುತ್ತಿದ್ದಾರೆ. ಇಂತಹ ಒಂದು ಹೊಸ ಅಮೋಘ ಸಾಧನದ ಮೂಲಕ ಎಲ್ಲ ದೇಶಗಳ ವೈದ್ಯರು ರೋಗಗಳನ್ನು ಸಂಪೂರ್ಣ ನಿವಾರಿಸಲು ಸಾಧ್ಯವಾಗುವದನ್ನು ಅತ್ಯಂತ ಆಸೆ ಉತ್ಸಾಹಗಳಿಂದ ಎದುರು ನೋಡುತ್ತಿದ್ದಾರೆಂದರೆ ತಪ್ಪೇನು?

## ಕ್ಯಾನ್ಸರಕ್ಕೆ ಮದ್ದು

ಅಣುವಿಕಿರಣಗೊಳಿಸಿದ 'ಕೋಬಾಲ್ಟ' (cobalt) ಹಿಂದೆ ಒಂದು ಕಾಲಕ್ಕೆ ಪರಿಹಾರವೇ ಇಲ್ಲವೆನ್ನಿಸಿಕೊಂಡಿದ್ದ 'ಕ್ಯಾನ್ಸರ್' ರೋಗವನ್ನು ನಿರ್ಮೂಲ ಮಾಡಲು ಅತ್ಯಂತ ಆಧುನಿಕ ಸಾಧನವೆಂದು ಪರಿಗಣಿಸಲಾಗಿದೆ. ಕ್ಯಾನ್ಸರ್‌ನಿಂದ ಬಳಲುವ ರೋಗಿಗೆ ಏನೂ ಅನಿಸದಿದ್ದರೂ ಕೋಬಾಲ್ಟ ಕಿರಣಗಳು ಅನೇಕ ದಶಲಕ್ಷ ಎಲೆಕ್ಟ್ರಾನ್ ವೋಲ್ಟಗಳಿಗೆ ಸರಿಸಮಾನವೆಂದು ಭಾವಿಸಲಾಗಿದ್ದು ಅದು ಕ್ಯಾನ್ಸರ್ ರೋಗಕ್ಕೆ ಸಂಬಂಧಿಸಿದ ಗಂಟೆಗೆ ಬಡಿ

ಯುತ್ತದೆ. ಕೋಬಾಲ್ಟ್ ಚಿಕಿತ್ಸಾ ಯಂತ್ರಗಳು, ದೇಹದ ಹೊರಗಿನ ಚರ್ಮವನ್ನು ಸುಡದೆ ಒಳಗಡೆ ಇರುವ ಕ್ಯಾನ್ಸರ್ ರೋಗಾಣುಗಳನ್ನು ನಾಶಪಡಿಸಿ ರೋಗವನ್ನು ಗುಣಪಡಿಸಬಲ್ಲದು.

ಗಂಟಲು ಬೇನೆ ( ಥೈರಾಯಿಡ್ ಕ್ಯಾನ್ಸರ್ ) ಯಿಂದ ನರಳುವ ರೋಗಿಗಳಿಗೆ ಅಮೇರಿಕದ ಮೆಸಾಚುಚೆಟ್ಸ್ ದವಾಖಾನೆಯಲ್ಲಿ ವಿಕಿರಣಗೊಳಿಸಿದ ಅಯೋಡೀನನ್ನು ಕುಡಿಸಲಾಯಿತು. ಆ ವಸ್ತುವಿನಲ್ಲಿರುವ ವಿಕಿರಣವಸ್ತು ಕ್ಯಾನ್ಸರ್‌ಗೆ ಕಾರಣವಾದ ಕೋಶವ್ಯೂಹಗಳೊಡನೆ ಹೋರಾಡುತ್ತದೆ. ಆಗ ಅಲ್ಲಿ ಉಂಟಾಗುವ ವಿಕಿರಣದ ಮೊತ್ತವನ್ನು ಹೊರಗೆ ಇರಿಸಿದ ಕೊಳವೆಯಂತಹ ಒಂದು ಸಾಧನದಿಂದ ಪರೀಕ್ಷಿಸಲಾಗುತ್ತದೆ. ಇದರಿಂದ ಅಣುಶಕ್ತಿಯುಳ್ಳ ಸಾಮಗ್ರಿಗಳು ಅನೇಕ ವಿಧದ ಕ್ಯಾನ್ಸರ್ ರೋಗಗಳನ್ನು ಶೋಧಿಸಲು ಮತ್ತು ಗುಣಪಡಿಸಲು ಅತ್ಯಂತ ಯೋಗ್ಯ ವಸ್ತುವೆಂದು ವೈದ್ಯರ ಅಭಿಪ್ರಾಯವಾಗಿದೆ.

ಅಮೇರಿಕದ ಮತ್ತೊಂದು ಸ್ಥಳದಲ್ಲಿ ( ಬ್ರೂಕ್ ಹೇವನ್ ) ಒಂದು ದವಾಖಾನೆಯುಂಟು. ಅದು ಅಣು ಸಂಬಂಧದ ವೈದ್ಯಕೀಯ ಸಂಶೋಧನೆಗಳಿಗೆ ಮೀಸಲಾದ ಮೊಟ್ಟ ಮೊದಲನೆಯ ಸಂಸ್ಥೆ. ಅಲ್ಲಿರುವ ತಜ್ಞರು ಗಂಟಲಿನ ಬೇನೆಗಳಿಂದ ಬಳಲುವ ರೋಗಿಗಳಿಗೆ ಅಣುವಿಸರಣಗೊಳಿಸಿದ ಅಯೋಡೀನನ್ನು ಕುಡಿಸಿ, ಆ ವಸ್ತು ಥೈರಾಯಿಡ್ ಕ್ಯಾನ್ಸರ್ ಕೋಶ ಸಮೂಹಗಳ ಮೇಲೆ ಧಾಳಿಮಾಡಿ ಅಲ್ಲಿಯ ಕೋಶವ್ಯೂಹಗಳನ್ನು ಸಂಪೂರ್ಣ ನಾಶಮಾಡುವ ಇಲ್ಲವೆ ಅದರ ಬೆಳವಣಿಗೆಯನ್ನು ಕುಂಠಿತಗೊಳಿಸುವ ವಿಧಾನಗಳನ್ನು ಪರೀಕ್ಷಿಸುತ್ತಾರೆ. ಕೆಲವು ಉಪಕರಣಗಳ ಸಹಾಯದಿಂದ ಅಯೋಡಿನ್ ಯಾವ ಯಾವ ಪ್ರದೇಶಗಳಲ್ಲಿ ಎಷ್ಟೆಷ್ಟು ಸಂಗ್ರಹಗೊಳ್ಳುತ್ತದೆಯೆಂಬುದನ್ನು ಪರೀಕ್ಷಿಸಬಲ್ಲದು.ಅಥವಾ ನಿರ್ಧರಿಸಬಹುದು.



ಅದೇ ಸಂಸ್ಥೆಯಲ್ಲಿ ಇನ್ನೂ ಕೆಲವು ಪ್ರಯೋಗಗಳು ಜರುಗುತ್ತಲಿವೆ. ಕೋಳಿಯ ತತ್ತಿಗಳ ಮೇಲೆ ಕೆಲವು ಪ್ರಯೋಗಗಳನ್ನು ನಡೆಸಿ,ಅಣುವಿಜ್ಞಾನಿಗಳು ರೋಗಿಗಳಿಗೆ ಸಂಬಂಧಿಸಿದ ವರದಿಗಳನ್ನು ಕಲಿ ಹಾಕುತ್ತಿದ್ದಾರೆ. ಅಷ್ಟೇ ಏಕೆ? ಜೀವಕ್ಕೆ ಸಂಬಂಧಿಸಿದ ಅನೇಕ ಮೂಲಭೂತ ವಿಷಯಗಳನ್ನೂ ಕೂಡ ಅಲ್ಲಿ ಸಣ್ಣ ತತ್ತಿಗಳನ್ನು ತೆಗೆದುಕೊಂಡು, ಅದರೊಳಗಿರುವ ಭ್ರೂಣಕ್ಕೆ 'ವೈರಸ್' (virus) ಸಂಬಂಧದ ರೋಗ ಲಸಿಕೆಗಳನ್ನು ಒಳನುಗ್ಗಿಸಿ, ರೋಗಗಳ ಮೇಲೆ ಅಣುವಿಕಿರಣದ ಪರಿಣಾಮವನ್ನು ಪರಿಶೀಲಿಸಿದ್ದಾರೆ. ರೋಗಿಗಳಿಗೆ ಸಂಬಂಧಿಸಿದ ಪ್ರಯೋಗಗಳಲ್ಲಿ ಅವರು ಯಶಸ್ವಿಯಾದರೆ, ಅದರಿಂದ ಎಲ್ಲೆಲ್ಲಿಯೂ ಜನತೆ ಹೆಚ್ಚು ದೀರ್ಘಕಾಲವೂ ಮತ್ತು ದೃಢಕಾಯರಾಗಿಯೂ ಬಾಳುವ ಆಸೆ ಹೊರಮೂಡುತ್ತದೆ.

'ಹಾರ್ಕೆಟ್' ಎಂಬ ಕೀಟಗಳ ಮೇಲೆ ಜೀವಶಾಸ್ತ್ರಜ್ಞರು ಕೆಲವು ಪ್ರಯೋಗಗಳನ್ನು ನಡೆಸುತ್ತಿದ್ದಾರೆ. ಆ ಕೀಟಗಳಿಗೆ ಅಣುವಿಸರಣಗೊಂಡ 'ಬೇರಿಯಂ' ಧಾತುವನ್ನು ಮಧುವಿನಲ್ಲಿ ಕೂಡಿಸಿ ಅಂತಹ ವಸ್ತುವನ್ನು ಅದರ ಬಾಯೊಳಗೆ ನಳಿಕೆಗಳ ಮೂಲಕ ಕುಡಿಸುತ್ತಾರೆ. ಮಧುವಿನಲ್ಲಿರುವ ಈ ಬೇರಿಯಂ ಧಾತು ಅವರ ದೇಹದಲ್ಲಿ ಒಂದು ಕಡೆಯಿಂದ ಒಂದುಕಡೆ ಚಲಿಸುತ್ತಿದ್ದಂತೆ, ಅದರ ಮಾರ್ಗವನ್ನು ಕೆಲವು ಸಾಧನೋಪಕರಣಗಳಿಂದ ಗುರುತಿಸಬಹುದು. ಹೀಗೆ ಬ್ರೂಕ್‌ಹೇವನ್ ಪ್ರಯೋಗಮಂದಿರದಲ್ಲಿ ಕೀಟಗಳ ಜೀವನಕ್ಕೆ ಧಾತುಗಳು ಯಾವ ಪ್ರಮಾಣದಲ್ಲಿ ಮತ್ತು ಎಷ್ಟರ ಮಟ್ಟಿಗೆ ಅವಶ್ಯ ಎಂಬುದನ್ನು ಕೀಟವಿಜ್ಞಾನಿಗಳು ಶೋಧಿಸುತ್ತಿದ್ದಾರೆ. ಇದರಿಂದ ಮುಂದೆ ಮಾನವನ ದೈವಿಕ ಕಾರ್ಯಗಳಲ್ಲಿ ( life-processes ) ಧಾತುಗಳ ಪಾತ್ರದ ಹಿರಿಮೆಯನ್ನು ಅರಿಯಲು ಬಹು ಸಹಾಯಕವಾಗುವುದೆಂದು ನಂಬಲಾಗಿದೆ.

## ಒಕ್ಕಲುತನದಲ್ಲಿ ಅಣುಶಕ್ತಿಯ ಬಳಕೆ

ಪ್ರತಿಯೊಂದು ರಾಷ್ಟ್ರವೂ ತನ್ನ ಕಕ್ಷೆಯಲ್ಲಿ ಬರುವ ಅರೆಹೊಟ್ಟೆ ಉಣ್ಣುವ ಜನರ ಬಗ್ಗೆ ಕಾತುರ ಪಡುವುದು ಸಹಜವೇ ! ಆದರೂ ಇಂತಹ ಅರೆಹೊಟ್ಟೆ ಉಣ್ಣುವ ಜನರ ಕುಟುಂಬಗಳಿಗೆ ಇನ್ನೂ ಉತ್ತಮತರದ ಬೆಳೆಗಳನ್ನು ಬೆಳೆದುದಾದರೆ ಹೆಚ್ಚೆಚ್ಚು ಮತ್ತು ಶ್ರೇಷ್ಠ ತರಗತಿಯ ಆಹಾರವನ್ನು ಒದಗಿಸುವುದು ಸಾಧ್ಯವಿದೆ. ಅದಕ್ಕೆ ಒಕ್ಕಲತನ ಮಾಡುವವರು ಸಸ್ಯಜೀವನ ಹಾಗೂ ಬೆಳವಣಿಗೆಗಳ ಬಗ್ಗೆ ಇರುವ ರಹಸ್ಯವನ್ನು ಇನ್ನೂ ಹೆಚ್ಚೆಚ್ಚು ಅರ್ಥ ಮಾಡಿಕೊಳ್ಳಬೇಕು.

ಮುಂದೆ ಕಾಲ ಗತಿಸಿದಂತೆ ಈ ಅಣುಶಕ್ತಿಯೆಂಬುದು ಜಗತ್ತಿನ ಎಲ್ಲ ಭಾಗಗಳಲ್ಲಿ ಹಾಗೂ ಮನೆಗಳಲ್ಲಿ ಕಾಡುವ 'ಹಸಿವು' ಎಂಬ ಪಿಡುಗನ್ನು ಹೊಡೆದೋಡಿಸುವಲ್ಲಿ ಸಹಾಯಕಾರಿಯಾಗಬಲ್ಲದು. ಈ ಅಣುಶಕ್ತಿಯಿಂದ ಬೆಳೆಗಳನ್ನು ಹೇಗೆ ಹೆಚ್ಚೆಚ್ಚು ಸುಧಾರಿಸಿದ ರೀತಿಯಲ್ಲಿ ತೆಗೆಯಬಹುದು, ಸಸ್ಯಗಳ ರೋಗಗಳನ್ನೂ, ಹಾನಿಕಾರಕವಾದ ಕೀಟಾದಿಗಳನ್ನೂ ಹೇಗೆ ಹೆಚ್ಚೆಚ್ಚು ಯಶಸ್ವಿಯಾಗಿ ಹೊಡೆದೋಡಿಸಬಹುದು, ದೊಡ್ಡದೊಡ್ಡ ಪ್ರಮಾಣದಲ್ಲಿ ಶ್ರೇಷ್ಠ ಗುಣಗಳುಳ್ಳ ಬೆಳೆಗಳನ್ನು ಕೊಡಬಲ್ಲ ಹೊಸ ಹೊಸ ಸಸ್ಯಗಳನ್ನು ಕೂಡ ಹೇಗೆ ಉತ್ಪಾದಿಸಬಹುದು ಎಂಬ ಅನೇಕ ಸಮಸ್ಯೆಗಳ ಬಗ್ಗೆ ಸಸ್ಯಶಾಸ್ತ್ರತಜ್ಞರಿಗೆ ಉಪಯುಕ್ತವಾದ ಮಾಹಿತಿ ಹಾಗೂ ಮಾರ್ಗದರ್ಶನ ನೀಡುತ್ತಿದೆ.

ಈ ರೇಡಿಯಂ ಐಸೋಟೋಪುಗಳ ಬಳಕೆಯಿಂದ ಅಂದರೆ ಕಿರಣಗಳನ್ನು ಹೊರಚೆಲ್ಲುವ ಅಣುಗಳನ್ನೊಳಗೊಂಡ ವಸ್ತುಗಳನ್ನು ಬಳಸುವುದರಿಂದ ಸಸ್ಯಗಳು ನೀರು ಮತ್ತು ಅಂಗಾರಾಮ್ಲವಾಯುವನ್ನು ಮತ್ತು ಸೂರ್ಯನ ಬೆಳಕನ್ನು ಹೇಗೆ ಸಂಯೋಗಿಸಿ ಅತ್ಯಂತ ತೊಡಕಾದ ಆಹಾರವನ್ನು ತಯಾರಿಸಬಲ್ಲವು ಎಂಬ ಪ್ರಕೃತಿಯ ರಹಸ್ಯವನ್ನು ಈಗಲೂ ವಿಜ್ಞಾನಿಗಳು ಅನೇಕ ಪ್ರಯೋಗಗಳಿಂದ ಭೇದಿಸುತ್ತಿದ್ದಾರೆ. ಇಂತಹ ಒಂದು 'ದ್ಯುತಿಸಂಶ್ಲೇಷಣ'ದಂತಹ ಆಶ್ಚರ್ಯಕರವಾದ ವಿಧಾನ ಈ ಐಸೋಟೋಪುಗಳ ಬಳಕೆ ಹಾಗೂ ಸಂಶೋಧನೆಗಳಿಂದ ಒಂದಲ್ಲ ಒಂದು ದಿನ ಬೆಳಕಿಗೆ ಬರುವುದರಲ್ಲಿ ಸಂಶಯವಿಲ್ಲ. ಆದಾದ ಮೇಲೆ, ಪ್ರಯೋಗ ಶಾಲೆಗಳಲ್ಲಿಯೇ ಸಸ್ಯಗಳಿಂದ ದೊರೆಯುವಂತಹ ಆಹಾರ ವಸ್ತುಗಳನ್ನು ಉತ್ಪಾದಿಸಬಹುದೆಂದು ವಿಜ್ಞಾನಿಗಳು ಆಶಾವಾದಿಗಳಾಗಿದ್ದಾರೆ. ಆಗ ಹಸಿದ ಮತ್ತು ಅರೆಹೊಟ್ಟೆ ಉಣ್ಣುವ ಜನರಿಗೆ ಸಾಕಷ್ಟು ಪುಷ್ಟಿದಾಯಕವಾದ ಆಹಾರವನ್ನು ಒದಗಿಸುವ ದಿನ ಬಹುದೂರವೇನೂ ಉಳಿಯಲಾರದು. ಅದಕ್ಕೆ ಈ ಅಣುಶಕ್ತಿಯ ಜ್ಞಾನವನ್ನು ಎಲ್ಲರಿಗೂ ಲಭ್ಯವಾಗುವಂತೆ ಅಂತಾರಾಷ್ಟ್ರೀಯ ಮಟ್ಟದಲ್ಲಿ ಕಲೆಹಾಕಬೇಕಾಗಿದೆ.

## ವಿಶಿಷ್ಟ ಪ್ರಯೋಗಗಳು

ಹಸಿರೆಲೆಗಳು ಸೂರ್ಯನ ಬೆಳಕು ನೀರು ಮತ್ತು ಗಾಳಿ ಇವುಗಳನ್ನು, ಸಕ್ಕರೆ ಮತ್ತು ಪಿಷ್ಟ ಪದಾರ್ಥಗಳನ್ನು ತಯಾರಿಸಲು ಹೇಗೆ ಉಪಯೋಗಿಸಿಕೊಳ್ಳಬಲ್ಲವು, ಎಂಬುದು ಇನ್ನೂ ಒಂದು ರಹಸ್ಯವೇ ಆಗಿ ಉಳಿದಿದೆ. ಅದನ್ನೇ, 'ದ್ಯುತಿಸಂಶ್ಲೇಷಣ' ಎನ್ನಲಾಗುತ್ತದೆ. ಈಗ ಈ ರಹಸ್ಯವನ್ನು ಭೇದಿಸಲು ಅಣು ಸಂಬಂಧದ ಸಾಮುಗ್ರಿಗಳಿಂದ ಪರಿಶೀಲಿಸಲಾಗುತ್ತಿದೆ. ಈ ದ್ಯುತಿಸಂಶ್ಲೇಷಣದಂತಹ ಅತ್ಯಂತ ತೊಡಕಿನ ವಿಧಾನವನ್ನು ಅಥವಾ ಜಿಜ್ಞಾಸೆಯನ್ನು ವಿಜ್ಞಾನಿಗಳು ಬಿಡಿಸಬಲ್ಲವರಾದರೆ, ಆಗ ಅವರಿಗೆ ಪ್ರಯೋಗಶಾಲೆಗಳಲ್ಲಿ ಸಸ್ಯಗಳಂತೆಯೇ ಆಹಾರ ವಸ್ತುಗಳನ್ನು ತಯಾರಿಸುವುದು ಅಸಾಧ್ಯವೇನಲ್ಲ.

ರೇಡಿಯೋ ಐಸೋಟೋಪುಗಳಿಂದ ಅಂದರೆ ವಿಸರಣಗೊಳ್ಳಬಲ್ಲ ಅಂಗಾಂಗಗಳನ್ನೊಳಗೊಂಡ ವಸ್ತುಗಳ ಬಳಕೆಯಿಂದ, ಗೊಬ್ಬರವನ್ನು ಹೆಚ್ಚು ಫಲದಾಯಕವಾಗಿ ಉಪಯೋಗಿಸಿಕೊಳ್ಳಬಹುದು. ಉದಾಹರಣೆಗೆ – ವಿಕಿರಣಗೊಂಡ ರಂಜಕವನ್ನು

(Radio phosphorus) ಬಳಸುವುದರಿಂದ ಸಸ್ಯಗಳು ಎಷ್ಟರ ಮಟ್ಟಿಗೆ ಅಂತಹ ಗೊಬ್ಬರವನ್ನು ಲಾಭದಾಯಕವಾಗಿ ಹೀರಿಕೊಳ್ಳಬಲ್ಲವು ಎಂಬುದನ್ನು ಒಕ್ಕಲಿಗರು ಅರಿತುಕೊಳ್ಳಬಹುದು. ಅಮೇರಿಕದ ಸಂಯುಕ್ತ ಸಂಸ್ಥಾನದ 'ನಾರ್ಥ್ ಕೆರೊಲಿನಾ' ಎಂಬಲ್ಲಿ ತಂಬಾಕು ಬೆಳೆಯುವ ರೈತರಿಗೆ ಐಸೋಟೋಪುಗಳನ್ನು ಉಪಯೋಗ ಮಾಡಿದ್ದರಿಂದ ವರ್ಷಂಪ್ರತಿ ೪,೦೦೦ ಟನ್‌ಗಳಷ್ಟು ಗೊಬ್ಬರವನ್ನು ಉಳಿಸಲು ಸಾಧ್ಯವಾಗಿದೆಯಂತೆ.

ಅಮೇರಿಕದ 'ಬ್ರೂಕ್ ಹೀವನ್' ಪ್ರಯೋಗಶಾಲೆಯಲ್ಲಿ ಅಣುವಿಸರಣದ ಸಂಬಂಧದಲ್ಲಿ ನಡೆಸುವ ಪ್ರಯೋಗಗಳಿಗೆ ಒಂದು ವಿಶಾಲ ಹಾಗೂ ದುಂಡಾಕಾರದ ಜಮೀನನ್ನು ಬಿಟ್ಟುಕೊಡಲಾಗಿದೆ. ಅಲ್ಲಿ ನಟ್ಟ ನಡುವೆ ವಿಸರಣಗೊಂಡ ಕೋಬಾಲ್ಟನ್ನು (Radio Cobalt) ಒಂದು ಕೊಳವೆಯಲ್ಲಿ ಹಾಕಿ ಅದನ್ನು ಜನರು ಹೊಲದಲ್ಲಿ ಕೆಲಸ ಮಾಡುತ್ತಿದ್ದಾಗ ನೆಲದೊಳಗೆ ಇಳಿಬಿಟ್ಟಿದ್ದು ನಂತರ ಆ ಹೊಲಗಳಲ್ಲಿ ಯಾರೂ ಇಲ್ಲದಾಗ ಆ ಕೊಳವೆಯನ್ನು ಮೇಲಕ್ಕೆ ಎತ್ತಿ ಅದರಲ್ಲಿರುವ ಕೋಬಾಲ್ಟ್ ಕಿರಣಗಳನ್ನು ಬೆಳೆಗಳ ಮೇಲೆ ಹರಿಯುವಂತೆ ಮಾಡುತ್ತಾರೆ. ಹೀಗೆ ವಿಜ್ಞಾನಿಗಳು ಸಸ್ಯಗಳನ್ನು ಅಣು ವಿಸರಣಗಳಿಗೆ ಒಳಪಡಿಸಿ ಹೊಸ ಹೊಸ ತಳಿಗಳನ್ನು ಉತ್ಪಾದಿಸಲು ಹಾಗೂ ಹೆಚ್ಚೆಚ್ಚು ಉತ್ತಮ ಗುಣಗಳುಳ್ಳ ಸಸ್ಯಗಳನ್ನು ಉತ್ಪಾದಿಸಲು ಶ್ರಮಿಸುತ್ತಿದ್ದಾರೆ.

ಅವರೆಯಂತಹ ಗಿಡಗಳ ಎಲೆಗಳ ಮೇಲೆ ಅಣು ವಿಸರಣಗೊಂಡ ವಸ್ತುಗಳನ್ನು ಉಪಯೋಗಿಸಿ ಹಲವಾರು ಪ್ರಯೋಗಗಳನ್ನು ನಡೆಸಲಾಗುತ್ತಿದೆ. ಒಂದು ಪ್ರಯೋಗದಲ್ಲಿ ಅಣುವಿಸರಣಗೊಂಡ ವಸ್ತುವೊಂದನ್ನು (25 millionths of a gram) ಒಂದು ಎಲೆಗೆ ಉಪಯೋಗಿಸಲಾಯಿತು. ಮುಂದೆ ೩-೪ ದಿನಗಳಾದ ಮೇಲೆ ಆ ವಸ್ತು ಸಸ್ಯದ ಇತರ ಭಾಗಗಳಲ್ಲಿ ಹೀರಿಕೊಳ್ಳಲ್ಪಟ್ಟಿದ್ದುದು ಕಂಡು ಬಂದಿತು. ಹೀಗೆ ವಿಜ್ಞಾನಿಗಳು ಅಣುವಿಸರಣಗೊಳ್ಳುವ ವಸ್ತುಗಳನ್ನು ಸಸ್ಯ ಭಾಗಗಳಿಗೆ ಸೋಂಕಿಸಿ, ಆ ಸಸ್ಯಗಳ ಬೆಳವಣಿಗೆ ಆಹಾರ ತಯಾರಿಕೆ ಇತ್ಯಾದಿ ಅತ್ಯಂತ ಕ್ಲಿಷ್ಟ ಸಮಸ್ಯೆಗಳನ್ನು ಪರಿಶೀಲಿಸಲು ಮತ್ತು ಅವು ಹೊಂದುವ ವಿವಿಧಾವಸ್ಥೆಗಳನ್ನು ಗುರುತಿಸಲು ಬಳಸುತ್ತಿದ್ದಾರೆ.

## ಉದ್ದಿಮೆಯಲ್ಲಿ ಅಣುಶಕ್ತಿಯ ಬಳಕೆ

ಪ್ರತಿಯೊಂದು ರಾಷ್ಟ್ರವೂ ತನ್ನ ಪ್ರಜೆಗಳ ಜೀವನ ಮಟ್ಟವನ್ನು ಸುಧಾರಿಸುವಲ್ಲಿ ಆಸ್ಥೆ ತೋರುವುದೂ ಅದಕ್ಕೆ ಬೇಕಾದ ಎಲ್ಲ ವಿಶ್ವ ಪ್ರಯತ್ನಗಳನ್ನು ಮಾಡುವುದೂ ಸ್ವಾಭಾವಿಕವೇ.

ಅನಾರೋಗ್ಯಕರವಾದ ಮನೆಗಳು ಕೀಳು ತರಗತಿಯ ಅರಿವೆ ಅಂಚಡಿಗಳು ಕೆಲಸಕ್ಕೆ ಬಾರದ ಮತ್ತು ಅಸಮರ್ಪಕವಾದ ಕೈಗಾರಿಕೋದ್ಯಮೆಯ ವಿಧಾನಗಳು ಇತ್ಯಾದಿ ಒಂದು ಇಡೀ ರಾಷ್ಟ್ರದ ಪ್ರಗತಿಯನ್ನು ಕುಂಠಿತಗೊಳಿಸಬಲ್ಲವು ಆರೋಗ್ಯ ದೃಷ್ಟಿಯಿಂದ ಸಮರ್ಪಕವಾದ ಗೃಹನಿರ್ಮಾಣ ಮತ್ತು ಸುಧಾರಿಸಿದ ಜೀವನಕ್ರಮ ಮುಂತಾದುವನ್ನು ಒದಗಿಸಲು ಪ್ರತಿಯೊಂದು ರಾಷ್ಟ್ರವೂ ಉದ್ದಿಮೆಗಳನ್ನು ಹೊಂದಿರಲೇಬೇಕು. ಮೇಲಾಗಿ ಅಂತಹ ಉದ್ದಿಮೆಗಳು ಹೆಚ್ಚೆಚ್ಚು ಉತ್ಪಾದನ ದಾಯಕವೂ ಹಾಗೂ ಪ್ರಗತಿಪರವೂ ಇರುವುದು ಅವಶ್ಯವೆಂದು ಬೇರೆ ಹೇಳಬೇಕೇ?

ಈಗ ಅನೇಕ ಹಾಗೂ ವೈವಿಧ್ಯಪೂರ್ಣವಾದ ಉದ್ದಿಮೆಯ ರಂಗದಲ್ಲಿಯೂ ಅಣುವಿನ ಮಾಯಾ ಶಕ್ತಿ ಒಳ್ಳೆಯ ಪಾತ್ರವನ್ನು ನಿರ್ವಹಿಸುತ್ತಿದೆ. ಅಣುವಿಕರಣ ಹೊಂದಬಲ್ಲ ಅನೇಕ ವಸ್ತುಗಳನ್ನು ಕೈಗಾರಿಕೋದ್ಯಮಗಳಲ್ಲಿ ತಯಾರಾಗುವ ವಸ್ತುಗಳನ್ನು ಪರೀಕ್ಷಿಸುವುದಕ್ಕೂ ಸುಧಾರಿಸುವುದಕ್ಕೂ ಹೆಚ್ಚೆಚ್ಚು ಸುಲಭ ರೀತಿಯಲ್ಲಿ ಮತ್ತು ತೀವ್ರಗತಿಯಲ್ಲಿ ತಯಾರಿಸಲು ಉಪಯೋಗಿಸಲಾಗುತ್ತಿದೆ.

ಹೆಚ್ಚೆಚ್ಚು ನಿರುಪಾಯವಾದ ಔಷಧಿಗಳು ಮತ್ತು ತತ್ಸಂಬಂಧವಾದ ವಸ್ತುಗಳು, ಉತ್ತಮವಾದ ಮೋಟರ ಎಣ್ಣೆಗಳು, ಶ್ರೇಷ್ಠ ತರಗತಿಯ ಪ್ಲಾಸ್ಟಿಕ್ ವಸ್ತುಗಳು, ಸ್ವಯಂಚಾಲಿತ ವಾಹನಗಳಿಗೆ ಸುಧಾರಿಸಿದ ಟೈರುಗಳು ಇತ್ಯಾದಿ ಕೈಗಾರಿಕೋದ್ದಿಮೆಗಳ ಬೆಳವಣಿಗೆಯ ಪ್ರಗತಿಗೆ ಅಣುಶಕ್ತಿಯು ಒದಗಿಸಬಲ್ಲ ಹಲವಾರು ನಿದರ್ಶನಗಳಾಗಿವೆ.

ನೆನಪಿರಲಿ! ಇದು ಕೇವಲ ಪ್ರಾರಂಭವಷ್ಟೇ!

ಅತಿ ಪ್ರಾಚೀನ ಮಾನವ ಬೆಂಕಿಯನ್ನು ಕಂಡುಹಿಡಿದು ಕ್ರಮೇಣ ಅದರ ಶಕ್ತಿಯನ್ನು ತನ್ನ ಸೇವೆಗೆ ಒಗ್ಗುವಂತೆ ಮಾಡಿಕೊಂಡನೋ ಅಂತೆಯೇ ಇಂದಿನ ಅಣುಯುಗದಲ್ಲಿರುವ ಮಾನವನು ಕ್ರಮೇಣ ಈ ಅಣುವಿನ ಶಕ್ತಿಯನ್ನು ತನ್ನ ಸೇವೆಗೆ ಹೇಗೆ ಬಳಸಿಕೊಳ್ಳಬಹುದೆಂಬುದನ್ನು ಕಂಡುಕೊಳ್ಳುತ್ತಿದ್ದಾನೆ. ಉದ್ದಿಮೆಗಳಲ್ಲಿ ಅಣುವಿನ ಉಪಯುಕ್ತತೆ ವಿವಿಧ ದೇಶಗಳಲ್ಲಿರುವ ಅದರ ತಜ್ಞರು ಎಷ್ಟರಮಟ್ಟಿಗೆ ಹೊಸಹೊಸ ಸಂಶೋಧನೆಗಳನ್ನು ಅಳವಡಿಸಿಕೊಳ್ಳಬಲ್ಲರೆಂಬುದನ್ನೇ ಅವಲಂಬಿಸಿದೆ.

## ಅಣುಸಂಬಂಧದ ಪ್ರಯೋಗಗಳು

ಕೈಗಾರಿಕೋದ್ದಿಮೆಗಳಲ್ಲಿಯೂ ಅಣು ಸಂಬಂಧದ ವಿಷಯದಲ್ಲಿ ಹಲವಾರು ಪ್ರಯೋಗಗಳು ನಡೆದಿವೆ. ಮೋಟರು ಕಾರುಗಳ ಟೈರುಗಳು ಎಷ್ಟರಮಟ್ಟಿಗೆ ಸವೆದಿವೆಯೆಂಬದನ್ನು ರೇಡಿಯೋ ಐಸೋಟೋಪುಗಳನ್ನು ಟೈರುಗಳ ಹೊರಭಾಗಕ್ಕೆ ಸೋಂಕಿಸಿ ಪರೀಕ್ಷಿಸಲಾಗುತ್ತದೆ. ಇದಕ್ಕೆ ಗಿಗರ್ ಕೌಂಟರ್ (Gieger counter) ಎಂಬ ಉಪಕರಣವೊಂದನ್ನು ಬಳಸಲಾಗುತ್ತದೆ. ಅದರಿಂದ ಒಂದು ಸಣ್ಣ ಟೈರನ್ನು ಸವಕಳಿ ಹೊಂದಿದ ಮತ್ತು ಪರೀಕ್ಷಿಸಬೇಕಾದ ಟೈರ್‌ನೊಂದಿಗೆ ಜೋಡಿಸಿ ಆ ಟೈರ್ ಎಷ್ಟರ ಮಟ್ಟಿಗೆ ಸವಕಳಿ ಹೊಂದಿದೆಯೆಂಬುದನ್ನು ತಕ್ಷಣ ನಿರ್ಧಾರಮಾಡಲಾಗುತ್ತದೆ. ಇದೇ ರೀತಿ ಇನ್ನೂ ಕೆಲವು ವಿಧಾನಗಳಿಂದ ಅನೇಕ ಸ್ವಯಂಚಾಲಿತ ಯಾನಗಳ (Auto mobile) ಟೈರುಗಳ ಸವಕಳಿಯನ್ನು ತಪಾಸಣೆ ಮಾಡಿ, ಅವುಗಳ ಬಗ್ಗೆ ಅವಶ್ಯವಿದ್ದ ಮಾಹಿತಿಗಳನ್ನು ಕಲೆಹಾಕಬಹುದು. ಅಣುವಿಸರಣಗೊಳಿಸಿದ ಟೈರುಗಳು ಒಂದು ನಿರ್ದಿಷ್ಟ ಮಾರ್ಗದಲ್ಲಿ ಹಾದು ಹೋದಾಗ ಆ ರಸ್ತೆಯ ಮೇಲೆ ಬಿದ್ದ ಗುರುತುಗಳನ್ನು ಎಕ್ಸ್‌ರೇ ಕಿರಣಗಳ ಫಿಲ್ಮ್‌ಗಳಿಂದ ಹೆಚ್ಚೆಚ್ಚು ಪರೀಕ್ಷಿಸಲಾಗುತ್ತಿದೆ.

ದೂರ ದೂರ ಪ್ರದೇಶಗಳಿಗೆ ಒಯ್ಯುವ ಎಣ್ಣೆ ಕೊಳವೆಗಳನ್ನು ಬೇರ್ಪಡಿಸುವ ಹಾಗೂ ಗುರುತು ಹಚ್ಚುವ ಕೆಲವು ಕಾರ್ಯಗಳು—ಅಣುವಿಸರಣಗೊಂಡ ವಸ್ತುಗಳನ್ನು ವಿವಿಧ ಬಗೆಯ ಎಣ್ಣೆಯ ಕೊಳವೆಗಳಲ್ಲಿ ಸೋಂಕಿಸುವುದರಿಂದ—ಈಗ ಬಹುಮಟ್ಟಿಗೆ ಹಗುರಾಗುತ್ತಿದೆ. ಅಂತಹ ಬಗೆ ಬಗೆಯ ಎಣ್ಣೆಯ ಕೊಳವೆಗಳಲ್ಲಿ ಅಣುವಿಸರಣಗೊಂಡ ಕೆಲವು ವಸ್ತುಗಳನ್ನು ತೇಲಿಬಿಡುವುದರಿಂದ 'ಗಿಗರ್ ಕೌಂಟರ್' ಉಪಕರಣವನ್ನು ಸುಮ್ಮನೆ ಸೋಂಕಿಸಿದರೆ ಸಾಕು. ಆ ಕೊಳವೆಯಲ್ಲಿ ಹರಿಯುವ ನಿರ್ದಿಷ್ಟ ತರದ ಎಣ್ಣೆಯನ್ನು ಯಾವುದೇ ತರಹದ ದೀರ್ಘ ಪರಿಶೀಲನೆಗಳ ಅವಶ್ಯಕತೆಯಿಲ್ಲದೆಯೇ ಗಡಿಯಾರಗಳಂತೆ ಸುಲಭವಾಗಿ ಮತ್ತು ಸ್ಪಷ್ಟವಾಗಿ ತೋರಿಸುತ್ತವೆ.

ಹೀಗೆ ಕೆಲವು ಬಗೆಯ ಐಸೋಟೋಪುಗಳನ್ನು ಕೈಗಾರಿಕಾಸಂಶೋಧನೆಗಳಲ್ಲಿಯೂ ಹೊಸ ಹೊಸ ಮತ್ತು ಸುಧಾರಿಸಿದ ರೀತಿಯಲ್ಲಿ ಯಂತ್ರಗಳಿಗೆ ಎಣ್ಣೆ ಹಾಕುವುದರಲ್ಲಿಯೂ ಬಳಸಬಹುದಾಗಿದೆ.

ಎರಕಹೊಯ್ದ ವಸ್ತುಗಳಲ್ಲಿಯೂ ಮತ್ತು ಇನೂ ಕೆಲವು ಬಗೆಯ ಕೈಗಾರಿಕಾಸಾಮಗ್ರಿಗಳಲ್ಲಿಯೂ ಆಗಾಗ ಕಂಡುಬರುವ ಕೆಲವು ಲೋಪ-ದೋಷಗಳನ್ನೂ ರೇಡಿಯೋ ಐಸೋಟೋಪುಗಳ ಸಹಾಯದಿಂದ ಪತ್ತೆಹಚ್ಚಬೇಕಾಗಿದೆ, ಉದಾಹರಣೆಗೆ—ಎರಡು ವಸ್ತುಗಳನ್ನು ಕೂಡಿಸಿ ಬೆಸೆದಾಗ ಕೆಲವು ಜಾಗಗಳಲ್ಲಿ ಬೆಸಗೆ ಸರಿಯಾಗಿಲ್ಲದುದೂ ಅಥವಾ ಅವಶ್ಯವಿದ್ದುದಕ್ಕಿಂತ ಹೆಚ್ಚು ಬೆಸಗೆ ವಸ್ತು ಬಿದ್ದಿರುವುದೂ ಮುಂತಾದುವನ್ನು ತಕ್ಷಣ ಕಂಡುಹಿಡಿಯಬಹುದು. ಹೀಗೆಯೇ ದೊಡ್ಡ ದೊಡ್ಡ ಪ್ರಮಾಣ




ದಲ್ಲಿ ಸೀಲ್ ಮಾಡಿದ ಅಥವಾ ಪ್ಯಾಕ್ ಮಾಡಿದ ಸಾಮಾನಿನ ಪೆಟ್ಟಿಗೆಗಳನ್ನೂ ಅವುಗಳಲ್ಲಿರುವ ವಸ್ತುಗಳನ್ನೂ ನೋಡದೆಯೇ ಕ್ಷಣಾರ್ಧದಲ್ಲಿ ಪರೀಕ್ಷಿಸಬಹುದು. ಇದು 'ಕಸ್ಟಮ್ಸ್' ಮತ್ತು 'ಎಕ್ಸೈಜ' ಅಧಿಕಾರಿಗಳಿಗೆ ಒಂದು ವರಪ್ರದಾನವಾಗಿ ಪರಿಣಮಿಸಬಹುದು. ಅಂತೆಯೇ ಆಹಾರ ಪದಾರ್ಥಗಳು ಹಾಗೂ ಔಷಧದ ಸಾಮಾನುಗಳು ಕೆಡದಂತೆ ಅವನ್ನು 'ಕ್ರಿಮಿ ಶುದ್ಧೀಕರಣ' (ಸ್ಟರ್‌ಲೈಸ್) ಮಾಡುವುದಕ್ಕೂ (ಅಂದರೆ ಅವುಗಳ ಮೇಲೆ ದಾಳಿ ಮಾಡುವ ಕ್ರಿಮಿಕೀಟಕಗಳನ್ನು ನಾಶ ಮಾಡುವುದಕ್ಕೆ) ಮತ್ತು ಇನ್ನೂ ಅನೇಕ ಬಗೆಯ ಉತ್ಪಾದಿತ ವಸ್ತುಗಳನ್ನು ದೀರ್ಘಕಾಲ ಸುರಕ್ಷಿತವಾಗಿ ಇಡಲು ಈ ರೇಡಿಯೋ ಐಸೋಟೋಪುಗಳನ್ನು ಬಳಸಬಹುದಾಗಿದೆ.

ಹಾಳೆಯಂತಹ ದೀರ್ಘ ಉದ್ದ ಅಗಲಗಳುಳ್ಳ ರಬ್ಬರ್, ಪೇಪರ್ (ಹಾಳೆ) ಲೋಹಗಳು ಕಬ್ಬಿಣ, ತಾಮ್ರ, ಹಿತ್ತಾಳೆ, ಅಲ್ಯುಮಿನಿಯಂ, ಪಾತ್ರೆಗಳು, ಬಟ್ಟೆಗಳು ಇತ್ಯಾದಿಗಳ ದಪ್ಪವನ್ನು ರೇಡಿಯೋ ಐಸೋಟೋಪುಗಳನ್ನು ಉಪಯೋಗಿಸಿದ ಹಾಗೂ ಮಂದವನ್ನು ಅಳೆಯುವ ಉಪಕರಣಗಳ ಸಹಾಯದಿಂದ ಆಯಾ ವಸ್ತುಗಳ ಮಂದವನ್ನು ಅಳೆಯಲೂಬಹುದು; ಮತ್ತು ನಿಯಂತ್ರಿಸಲೂಬಹುದು.

ಅಂತಹ ಪ್ರಯತ್ನಗಳಲ್ಲಿ ಹಾಳೆಯ ಕೆಳಗೆ ರೇಡಿಯೋ ಐಸೋಟೋಪನ್ನು ಒಳಗೊಂಡ ವಸ್ತುವೊಂದನ್ನು ಇಟ್ಟು ಆ ಹಾಳೆಯ ಮೇಲೆ ಒಂದು ಸೂಚಕ ಅಥವಾ ದರ್ಶಕ (ಡಿಟೆಕ್ಟರ್) ವನ್ನು ಇಡಲಾಗುತ್ತದೆ. ಆಗ ಹಾಳೆಯ ಮಂದದಲ್ಲಿ ಅಣು ವಿಸರಣಗೊಂಡ ವಸ್ತು ಎಷ್ಟರ ಮಟ್ಟಿಗೆ ಭೇದಿಸಿ ಹೋಗಬಲ್ಲದು ಎಂಬುದನ್ನು ಅವಲಂಬಿಸಿ ದರ್ಶಕವು ಅಥವಾ ಸೂಚಕವು ಆಯಾ ಹಾಳೆಗಳ ಮಂದವನ್ನು ಸೂಚಿಸುತ್ತದೆ.

## ಶಕ್ತಿಯ ನಿರ್ಮಾಣ

ಎಲ್ಲ ರಾಷ್ಟ್ರಕ್ಕೂ ನಗರಗಳನ್ನು ಬೆಳಗಿಸುವುದಕ್ಕೆ ಉದ್ದಿಮೆಗಳಲ್ಲಿ ಯಂತ್ರಗಳನ್ನು ನಡೆಸುವುದಕ್ಕೆ ವಿಜ್ಞಾನ ಸಂಶೋಧನೆಗಳಿಗೆ ಬೇಕಾದ ಉಪಕರಣಗಳನ್ನು ಒದಗಿಸುವುದಕ್ಕೆ ಇತ್ಯಾದಿ ಹಲವಾರು ಕಾರಣಗಳಿಗೆ ಶಕ್ತಿ ಅಗತ್ಯ. ಈ ಶಕ್ತಿಯ ಅವಶ್ಯಕತೆ ದಿನದಿನಕ್ಕೂ ಹೆಚ್ಚುತ್ತಲೇ ಇದೆ.

ಮೇಲಾಗಿ ಜಗತ್ತಿನ ಅನೇಕ ಪ್ರದೇಶಗಳಲ್ಲಿ ಲಭ್ಯವಿದ್ದ ಉರುವಲುಶಕ್ತಿ ಈಗ ಮರ್ಯಾದಿತವಾಗುತ್ತ (ಕಡಿಮೆಯಾಗುತ್ತ) ಬಂದು, ಅದು ಇಂದು ಒಂದು ಕುತ್ತಿನ ಸಮಸ್ಯೆಯಾಗುತ್ತ ಬಂದಿದೆ.

ಇಟಲಿ, ಜಪಾನ್, ಮತ್ತು ಆಗ್ನೇಯ ಏಶಿಯಾದ ದೇಶಗಳಲ್ಲಿ ಉರುವಲುಶಕ್ತಿಯ ಅಭಾವ ಎದ್ದು ಕಾಣುತ್ತಿದೆ. ಬೆಲ್ಜಿಯಂದಲ್ಲಿ ಗಣಿಗಳಿಂದ ಕಲ್ಲಿದ್ದಲನ್ನು ತೆಗೆಯುವುದು ಬಹು ಖರ್ಚಿನ ಕಾರ್ಯವಾಗಿದೆ. ಬ್ರಿಟನ್ನಿನಲ್ಲಿಯೂ ಉರುವಲುಶಕ್ತಿಯ ದೊಡ್ಡ ಪ್ರಮಾಣದ ಅಭಾವ ಹಣಿಕಿ ಹಾಕುತ್ತಿದೆ. ಅಮೇರಿಕವನ್ನೇ ತೆಗೆದುಕೊಂಡರೂ ಕೆಲವು ಪ್ರದೇಶಗಳಲ್ಲಿ ಉರುವಲುಶಕ್ತಿಯ ಪೂರೈಕೆ ಸಮರ್ಪಕವಾಗಿಲ್ಲ ಎಂದು ತಿಳಿದುಬರುತ್ತದೆ. ಇನ್ನು ಕೆಲವು ಕಡೆ ಕಲ್ಲಿದ್ದಲು ಹೆಚ್ಚು ಸಂಗ್ರಹವಾಗಿರುವ ಹೊಸ ಪ್ರದೇಶಗಳನ್ನು ಬೆಳಕಿಗೆ ತಂದು ಅವುಗಳ ಉಪಯೋಗವನ್ನು ತೆಗೆದುಕೊಳ್ಳಬೇಕಾಗಿದೆ.

ಇಂತಹ ಸಮಸ್ಯೆಗಳಿಗೆ ಒಂದು ನಿರ್ದಿಷ್ಟ ಹಾಗೂ ಉತ್ತಮ ಪರಿಹಾರವೆಂದರೆ ಅಣುಶಕ್ತಿಯೇ. ಈ ಶಕ್ತಿಯು ಜಗತ್ತಿನ ನಾನಾಭಾಗಗಳಲ್ಲಿರುವ ಉರುವಲಿನ ಅಭಾವದ ಕುತ್ತನ್ನು ಬಹುದೂರ– ಭವಿಷ್ಯತ್ಕಾಲಕ್ಕೆ– ಮುಂದೂಡಬಲ್ಲದು. ಅಣುಗಳನ್ನು ಉರುವಲುಶಕ್ತಿಗೆ ರೂಪಾಂತರಿಸಬಹುದಾದ ಜಗತ್ತಿನಲ್ಲಿ-ರುವ ಯುರೇನಿಯಂನ ಸಂಗ್ರಹವನ್ನು ನೋಡಿದುದಾದರೆ ಅದು ಜಗತ್ತಿನಲ್ಲಿರುವ ಕಲ್ಲಿದ್ದಲು ಮತ್ತು ಎಣ್ಣೆ ಇವುಗಳಿಂದ ಉತ್ಪಾದನವಾಗಬಲ್ಲ ಶಕ್ತಿಯ ಸಹಸ್ರಾರು ಪಟ್ಟು ಇರುತ್ತದೆ. ಅಣುವಿನಿಂದಾದ ಉರುವಲುಶಕ್ತಿ ಹೆಚ್ಚು ಬಲವರ್ಧಿತವಾಗಿದ್ದಾಗ ಶಕ್ತಿಯ ಬಳಕೆಗೆ ಅತ್ಯಲ್ಪ ಪ್ರಮಾಣವಷ್ಟೇ ಸಾಕು. ಮೇಲಾಗಿ ಕೆಲವು ಅಣುಶಕ್ತಿಯ ಯಂತ್ರಗಳು ಪ್ರತ್ಯುತ್ಪತ್ತಿ ಮಾಡಬಲ್ಲವು; ಅಂದರೆ ಅವು ಕೆಲಸ ಮಾಡುತ್ತಿದ್ದಂತೆ ಪ್ರಕೃತಿದತ್ತವಾದ ಯುರೇನಿಯಂನ್ನು ರೂಪಾಂತರಿಸಿ ಬಳಕೆಗೆ ಯೋಗ್ಯವಾದ ಹೆಚ್ಚೆಚ್ಚು ಅಣುಶಕ್ತಿಯನ್ನಾಗಿ ಮಾರ್ಪಡಿಸುತ್ತದೆ.

ಇದರಿಂದ ಬೆಟ್ಟಗುಡ್ಡಗಳ ಕಣಿವೆಗಳಲ್ಲಿ ಹಾಗೂ ದೂರದೂರದ ಪ್ರದೇಶಗಳಲ್ಲಿರುವ ಹಳ್ಳಿಗಳಿಗೆ ಬೇಕಾದ ಬೆಳಕು ಮತ್ತು ಶಕ್ತಿಯನ್ನು ಒದಗಿಸಬಹುದು. ಬಂಜರು ಭೂಮಿಗಳಿಗೆ ನೀರನ್ನು ಒದಗಿಸಬಹುದು. ಅನುಕೂಲ ಸನ್ನಿವೇಶಗಳಿದ್ದಲ್ಲಿ ಲಾಭದಾಯಕವಾದ ಕಾರ್ಖಾನೆಗಳನ್ನು ನಿರ್ಮಿಸಬಹುದು.

ವಿಜ್ಞಾನಿಗಳನ್ನು ಕೇಳಿದರೆ ಇದೆಲ್ಲ ಇನ್ನೂ ಕೇವಲ ಪ್ರಾರಂಭವಷ್ಟೇ ಎಂದು ಹೇಳುತ್ತಾರೆ. ಅವರು ಅಣುಶಕ್ತಿಯ ಸಾಮುಗ್ರಿಗಳು ಇನ್ನೂ ಬರುವ ಕೆಲವು ವರ್ಷಗಳಲ್ಲಿ ಹತ್ತಾರು ನೂರಾರು ಪಟ್ಟು ಹೆಚ್ಚುವವೆಂದು ನಂಬಿದ್ದಾರೆ. ಜಗತ್ತಿನ ರಾಷ್ಟ್ರ ರಾಷ್ಟ್ರಗಳ ಜನರು ಒಂದಾಗಿ ತಮಗೆ ಲಭ್ಯವಿದ್ದ ಜ್ಞಾನ ಹಾಗೂ ಸಾಮಗ್ರಿಗಳನ್ನು ಒಂದುಗೂಡಿಸಿ ಅಣುವನ್ನು ಶಾಂತಿಯುತ ಕಾರ್ಯಗಳಿಗಾಗಿ ಉಪಯೋಗಿಸುವುದಾದರೆ, ಮಾನವನು ಎಲ್ಲಿಯವರೆಗೆ ಮತ್ತು ಎಷ್ಟರಮಟ್ಟಿಗೆ ಪ್ರಗತಿಯನ್ನು ಸಾಧಿಸಿಯಾನು ಎಂಬುದನ್ನು ಯಾರು ಊಹಿಸಬಲ್ಲರು?

## ಅಟಾಮಿಕ್ ರಿಯಾಕ್ಟರ

ಜಗತ್ತಿನಲ್ಲಿ ಇಂದು ಎಲ್ಲೆಲ್ಲೂ ಕ್ಷಣ ಕ್ಷಣಕ್ಕೂ ಹೆಚ್ಚುತ್ತಿರುವ ಶಕ್ತಿಯ ಬೇಡಿಕೆಗಳನ್ನು ಅಣುಶಕ್ತಿ ಯಂತ್ರಗಳೇ ಪೂರೈಸಬಲ್ಲವು ಎಂದು ವಿಜ್ಞಾನಿಗಳು ನಂಬಿದ್ದಾರೆ. ಬ್ರಿಟನ್, ಅಮೇರಿಕ ಮತ್ತು ಸೋವಿಯಟ್ ರಶಿಯ ಮುಂತಾದ ಮುಂದುವರಿದ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಇಂತಹ ಒಂದು ಕನಸು ಈಗ ನನಸಾಗಿದೆ.

"ಅಟಾಮಿಕ್ ರಿಯಾಕ್ಟರ್' ಎಂಬ ಈ ಅಣುಶಕ್ತಿಯ ಯಂತ್ರಗಳಲ್ಲಿ ಯುರೇನಿಯಂ ಅಥವಾ ಅಂತಹ ವಿಭಜನೆಗೊಳ್ಳುವ ಮತ್ತು ಅಪಾರ ಶಕ್ತಿಯನ್ನು ಬಿಡುಗಡೆ ಮಾಡಬಲ್ಲ ಸಾಮಗ್ರಿಗಳಿಂದ, ಒಂದು ಕ್ರಿಯೆಯ ಸರಪಳಿಯೇ ಉಂಟಾಗಿ ಅತ್ಯಧಿಕ ಶಕ್ತಿಯು ಉತ್ಪಾದಿತವಾಗುತ್ತದೆ. ಅಂತಹ ಯಂತ್ರವೊಂದನ್ನು (ರಿಯಾಕ್ಟರ್) ಒಂದು ದೊಡ್ಡ ಜಲಾಶಯದಲ್ಲಿ (ನೀರಿನಲ್ಲಿ) ಇಡಲಾಗುತ್ತದೆ. ಅದರ ಉದ್ದೇಶ ಇಷ್ಟೇ. ಗಂಡಾಂತರಕಾರಿಯಾದ ಅಣು ವಿಸರಣವು ಸುತ್ತಲೂ ಪ್ರಸರಿಸಬಾರದು. ಮತ್ತು ಅಲ್ಲಿ ಕೆಲಸ ಮಾಡುವ ತಂತ್ರಜ್ಞರಿಗೆ ಇದರಿಂದ ಅಪಾಯವಾಗಬಾರದೆಂಬುದೇ ಆಗಿರುತ್ತದೆ.

ಮುಂದೆ ಬರಬರುತ್ತ ಈ ಅಣುಶಕ್ತಿಯನ್ನು ಉತ್ಪಾದಿಸುವ ಕೇಂದ್ರಗಳನ್ನು ಆದಷ್ಟು ಕಡಿಮೆ ಖರ್ಚಿನಲ್ಲಿ ಸ್ಥಾಪಿಸಬೇಕೆಂತಲೂ ದೊಡ್ಡದೊಡ್ಡ ಸಾಗರಗಳಲ್ಲಿ ಚಲಿಸುವ ಹಡಗಗಳನ್ನು ಇಂತಹ ಅಣುಶಕ್ತಿಯ ಯಂತ್ರಗಳಿಂದಲೇ ನಡೆಸಬೇಕೆಂತಲೂ ವಿಮಾನಗಳಲ್ಲಿ ಕೂಡ ಇವನ್ನು ಬಳಸಿ ವಿಮಾನಯಾನವು ಹೆಚ್ಚು ಸುರಕ್ಷಿತವೂ ಹೆಚ್ಚು ಶೀಘ್ರಗತಿಯುಳ್ಳದ್ದೂ ಆಗಿ ಅಪಾರವಾದ ಗಗನ ಕ್ಷೇತ್ರವನ್ನು ಬಳಸಿಕೊಳ್ಳಬೇಕೆಂದೂ ಯೋಚಿಸಲಾಗುತ್ತಿದೆ.

# ಅಷ್ಟಗ್ರಹಯೋಗದ ಪರಿಣಾಮ

೧೯೬೨ರಲ್ಲಿ ಅಷ್ಟಗ್ರಹಗಳ ಸಂಯೋಗವು ಜರುಗಲಿದೆ. ಈ ಸಂಗಯೋಗದ ಪರಿಣಾಮಗಳೇನು? ಫಲಗಳೇನು? ಯಾವ ರಾಷ್ಟ್ರಗಳು ಇದಕ್ಕೆ ತುತ್ತಾಗುವುವು? ಜನರ ಮೇಲಾಗುವ ಪರಿಣಾಮವೇನೆಂಬುದನ್ನು ಲೇಖಕರು ಇಲ್ಲಿ ವಿವರಿಸಿದ್ದಾರೆ.


ಲೇಖಕರು :

**ಶ್ರೀ. ಎನ್. ಕೆ. ಜೋಗಳೇಕರ,**

ಜ್ಯೋತಿಷ್ಯ ಕಾರ್ಯಾಲಯ, ಧಾರವಾಡ


ಅಷ್ಟಗ್ರಹವೆಂದರೇನು ? ಈ ಯೋಗ ಎಂದು ಆಗುತ್ತದೆ? ಇದಕ್ಕೇಕೆ ಇಷ್ಟು ಮಹತ್ವ? ಎಂದು ಅನೇಕರು ಜಿಜ್ಞಾಸಾಬುದ್ಧಿಯಿಂದ ಕೇಳುತ್ತಿರುವರು. ಅವರು ಅಷ್ಟಗ್ರಹಯೋಗ ಮತ್ತು ಅದರ ಪರಿಣಾಮಗಳನ್ನು ಅರಿಯಲು ಸಾಕಷ್ಟು ಕುತೂಹಲಿಗಳಾಗಿರಲು ಸಾಕು.

ಎಂಟು ಗ್ರಹಗಳ ಸಂಯೋಗವು ಒಂದೇ ರಾಶಿಯಲ್ಲಾಗುವದರಿಂದ ಇದಕ್ಕೆ ಅಷ್ಟಗ್ರಹಯೋಗವೆಂದೆನ್ನುತ್ತಾರೆ. ಈ ಯೋಗವು ಬರುವ ಶಾಲಿವಾಹನ ಶಕೆ ಹದಿನೆಂಟನೂರಾ ಎಂಭತ್ತಮೂರನೆಯ ಪ್ಲವ ಸಂವತ್ಸರದ ಪೌಷ್ಯ ಬಹುಳ ಅಮಾವಾಸ್ಯೆಯ ರಾತ್ರಿ (ತಾ. ೫-೨-೧೯೬೨ ನೆಯ ಸೋಮವಾರ ಮುಂಜಾನೆ ೫-೩೦ ಕ್ಕೆ) ಆಗುತ್ತದೆ. ಈ ಅಮಾವಾಸ್ಯೆಯು (೪-೨-೧೯೬೨ ನೆಯ ರವಿವಾರ) ಶ್ರವಣಾಯುಕ್ತ ಧನಿಷ್ಠಾ ನಕ್ಷತ್ರದಿಂದ ಕೂಡಿರುತ್ತದೆ.

ಎರಡನೆಯದಾಗಿ ಅದೇ ದಿನ ಸೂರ್ಯಗ್ರಹಣವೂ ಇರುತ್ತದೆ. ಅಂದರೆ ಸೂರ್ಯಗ್ರಹಣಯುಕ್ತವಾಗಿರುವುದರಿಂದ ಈ ಯೋಗಕ್ಕೆ ಬಹಳ ಮಹತ್ವ ಬಂದಿದೆ.

ಆ ದಿನದ ಗ್ರಹಗಳ ಅಂಶ : ಸೂರ್ಯ—೨೩° ಚಂದ್ರ—೨೨° ಮಂಗಳ—೧೦° ಬುಧ—೨೫° ಗುರು—೨೬° ಶುಕ್ರ—೨೫° ಶನಿ—೧೧° ರಾಹು—೨೬° ಕೇತು—೨೬°

ಮಹತ್ವ— ಪಂಚಗ್ರಹಯೋಗ ಅಥವಾ ಶನಿ ಮಂಗಳ, ರವಿ; ಶನಿಯರ ಯೋಗ ಪ್ರತಿಯೋಗ ಮೊದಲಾದವುಗಳು ದೇಶವನ್ನೂ ಜನರನ್ನೂ ಅಲ್ಲೋಲಕಲ್ಲೋಲವನ್ನಾಗಿ ಮಾಡುತ್ತವೆ. ಅನೇಕ ಅಪಘಾತಗಳು, ಭೂಕಂಪ, ಜ್ವಾಲಾಮುಖಿಗಳಿಂದ ಹಾನಿ, ಬೆಂಕಿ ಹಾಗೂ ಯಂತ್ರಗಳಿಂದ ಹಾನಿ, ಅತಿವೃಷ್ಟಿ-ಅನಾವೃಷ್ಟಿಗಳಿಂದ ಬರಗಾಲದ ಭೀತಿ ಹೀಗೆ ದ್ರವ್ಯಹಾನಿ, ಪಶುಹಾನಿ, ಜನಹಾನಿ ತರುತ್ತವೆ. ಅಂದಬಳಿಕ ಈ ಎಂಟು ಗ್ರಹಗಳ ಸಂಯೋಗದಿಂದ ಹಾನಿ ಎಷ್ಟಾಗುವದು ಎಂಬುದನ್ನು ಊಹಿಸಬೇಕು. ಅಂತೆಯೇ ಇದಕ್ಕೆ ಕ್ರಾಂತಿಯ ಕಾಲವೆನ್ನಲಾಗುವದು.

ಹಿಂದಿನ ನಿದರ್ಶನ— ಇತಿಹಾಸದಲ್ಲಿ ಇಂಥ ಯೋಗದಿಂದಾಗಿರುವ ಪರಿಣಾಮವನ್ನು ನೋಡಲಾಗಿ ಯುದ್ಧದ ಭಯವನ್ನು ಸೂಚಿಸುತ್ತದೆ. ಪಾನಿಪತ್ತ ಕಾಳಗವಾಗಲಿ, ಪುರಾತನ ಕುರುಕ್ಷೇತ್ರ ಕಾಳಗವಾಗಲಿ, ಇಂಥ ಯೋಗಗಳಲ್ಲಿಯೇ ಆಗಿವೆ.




ನೈಸರ್ಗಿಕ ಪರಿಣಾಮ-ಪೃಥ್ವೀತತ್ತ್ವದ ಮಕರ ರಾಶಿಯಲ್ಲಿ ಕ್ರೂರಗ್ರಹಗಳಾದ ರವಿ, ಮಂಗಳ, ಶನಿ ಮತ್ತು ಕೇತು ಈ ನಾಲ್ಕು ಕ್ರೂರಶಕ್ತಿಗಳು ಒಂದೆಡೆ ನೆಲೆಸುವದರಿಂದ ಅದರಲ್ಲಿಯೂ ಶನಿ, ಮಂಗಳರ ಅಂಶಾತ್ಮಕ ಯೋಗವು ಇರುವುದರಿಂದ ಅಗ್ನಿಭಯ, ಚೋರಭಯ, ಕಲಹ ಯುದ್ಧಾದಿಗಳು, ಅಪಘಾತಗಳು, ಅತಿವೃಷ್ಟಿ ಅನಾವೃಷ್ಟಿ, ಭೂಕಂಪ--ಜ್ವಾಲಾಮುಖಿಗಳಿಂದ ಹಾನಿ ಭಯಂಕರ ಸಾಂಕ್ರಾಮಿಕ ರೋಗ, ದುರ್ಭಿಕ್ಷ ಬಿರುಗಾಳಿ ಮೊದಲಾದ ನೈಸರ್ಗಿಕ ಅಶುಭ ಘಟನೆಗಳು ಜರುಗುವವು. ಈ ಘಟನೆಗಳು ಸಾಮಾನ್ಯವಾಗಿ ಎರಡು ವರುಷಗಳ ವರೆಗೆ ಅಂದರೆ ಗುರುಮೀನ ರಾಶಿಯಲ್ಲಿ ರಾಹು-ಮಿಥುನ ರಾಶಿಯಲ್ಲಿ ಪ್ರವೇಶವಾಗುವ ಕಾಲದ ವರೆಗೆ ಅಂದರೆ ೧೯೬೨ ನೇ ಡಿಸೆಂಬರದ ವರೆಗೆ ನಡೆಯುತ್ತಲೇ ಇರುವವು.

## ದೇಶಗಳ ಮೇಲೆ ಆಗುವ ಪರಿಣಾಮ

ಈ ಯೋಗವು ಭಿನ್ನಭಿನ್ನ ದೇಶಗಳಿಗೆ ಯಾವ ರೀತಿಯಿಂದ ಪರಿಣಾಮಮಾಡುತ್ತದೆ ಎಂಬುದನ್ನು ತಿಳಿಯುವ ಮೊದಲು ಆ ಆ ದೇಶಗಳ ಪ್ರಾಂತಗಳ ಪಟ್ಟಣಗಳ ರಾಶಿಗಳಾವವು ಎಂಬುದನ್ನು ನೋಡೋಣ.

ಮೇಷ— ಇಂಗ್ಲಂಡ್, ಡೆನ್ಮಾರ್ಕ, ಜರ್ಮನಿ, ಪೋಲಂಡ್, ಜಪಾನ್, ಪಾಲಸ್ಟೈನ್, ಸಿರಿಯಾ, ಪಾಕಿಸ್ತಾನ.

ವೃಷಭ— ಐರ್‌ಲಂಡ್, ಇರಾಣ, ಏಷ್ಯಾ ಮೈನರ್, ಪೂರ್ವರಶಿಯಾ.
ಮಿಥುನ— ಅಮೇರಿಕಾ, ಬೆಲ್ಜಿಯಂ, ಇಜಿಪ್ತದ ಕೆಳಭಾಗ, ಉತ್ತರ ಆಫ್ರಿಕಾ, ಪಶ್ಚಿಮ ಇಂಗ್ಲಂಡ್.
ಕರ್ಕ— ಸ್ಕಾಟಲಂಡ್, ಹಾಲಂಡ್, ಪಶ್ಚಿಮ ಉತ್ತರ ಭಾಗದ ಆಫ್ರಿಕಾ, ಜನೇವಾ, ಕೆಂಪು ಚೀನಾ.
ಸಿಂಹ— ಫ್ರಾನ್ಸ್, ಇಟಲಿ.
ಕನ್ಯಾ— ತುರ್ಕಸ್ತಾನ, ಗ್ರೀಸ್.
ತುಲಾ— ತಿಬೇಟ, ಬ್ರಹ್ಮದೇಶ, ಉತ್ತರಇಜಿಪ್ತ ಮತ್ತು ಭಾರತಚೀನದ ಗಡಿಯ ಭಾಗ.
ವೃಶ್ಚಿಕ— ನಾರ್ವೆ, ಅಲ್ಜೀರಿಯಾ.
ಧನು— ಅರಬಸ್ತಾನ, ಆಸ್ಟ್ರೇಲಿಯಾ, ಹಂಗೇರಿ, ಸ್ಪೇನ್.
ಮಕರ— ಹಿಂದುಸ್ಥಾನ, ಅಫಗಾಣಿಸ್ಥಾನ.
ಕುಂಭ— ರಶಿಯಾ, ಸ್ವೀಡನ್, ಪರ್ಶಿಯಾ.
ಮೀನ— ಪೋರ್ತುಗಾಲ,

ಭಾರತದ ಪ್ರಾಂತಗಳ ರಾಶಿಗಳು.

ಮೈಸೂರ ಹಾಗೂ ಮದ್ರಾಸ್—ಮೇಷ
ಮಹಾರಾಷ್ಟ್ರ—ಧನು
ಪಂಜಾಬ—ಮೀನ
ಬಂಗಾಲ—ಮಕರ
ಕಾಠೇವಾಡ—ಧನು
ಓಡಿಸ್ಸಾ—ವೃಶ್ಚಿಕ
ಆಂಧ್ರ—ಕರ್ಕ

ಜಗತ್ತಿನಲ್ಲಿರುವ ಮುಖ್ಯ ಪಟ್ಟಣಗಳ ರಾಶಿಗಳು

ಮೇಷ— ಬರ್ಮಿಂಗಹ್ಯಾಮ್, ಲ್ಯಾಂಕಶಾಯರ, ಪ್ಯಾರಿಸ್, ಮೈಸೂರ, ಮದ್ರಾಸ, ಬಡೋದೆ.
ವೃಷಭ— ದಿಲ್ಲಿ, ಡಬ್ಲಿನ್.
ಮಿಥುನ— ಲಂಡನ್, ಪ್ಲಿಮೋಥ್.
ಕರ್ಕ— ನ್ಯೂಯಾರ್ಕ, ಕಾನಸ್ಟಂಟಿನೋಪಲ್ ಕಲ್ಕತ್ತಾ.
ಸಿಂಹ— ಚಿಕ್ಯಾಗೋ, ರೋಮ್.
ಕನ್ಯಾ— ಜೆರೂಸಲೇಮ್, ಪ್ಯಾರಿಸ್, ಸ್ಟೇಟ್ಸ ಬರ್ಗ, ಪೂನಾ, ನಾಗಪುರ.
ತುಲಾ— ನಾಟಿಂಗ್‌ಹ್ಯಾಮ, ಕೋಪನ್‌ಹೆಗ್, ಲಿಸ್ಬನ್, ಮುಂಬಯಿ.
ವೃಶ್ಚಿಕ— ವಾಶಿಂಗಟನ್, ನ್ಯೂಫೌಂಡಲಂಡ್; ಲಿವ್ಹರಪೂಲ್, ಸುರತ.
ಧನು— ಕೋಲ್ಹಾಪುರ
ಮಕರ— ಆಕ್ಸಫರ್ಡ್, ಪ್ರಯಾಗ
ಕುಂಭ— ಮಾಸ್ಕೋ, ಟೋಕಿಯೋ
ಮೀನ— ಕಾಶಿ

ಈ ಅಷ್ಟಗ್ರಹ ಯೋಗವು ಯಾವ ರಾಶಿಯ ದೇಶಕ್ಕೆ ಹೇಗಿದೆ ಎಂಬುದನ್ನು ಕೆಳಗೆ ಕೊಡಲಾಗಿರುವದು.

ಮೇಷ, ವೃಷಭ, ಸಿಂಹ, ಕನ್ಯಾ, ವೃಶ್ಚಿಕ ಮೀನ ಈ ರಾಶಿಗಳಿಗೆ ಶುಭದಾಯಕ ಇರುವದು.

ಕರ್ಕ, ಧನು, ಮಕರ ಈ ರಾಶಿಗಳಿಗೆ ಮಧ್ಯಮ ಕಾಲ ಇರುತ್ತದೆ.

ಮಿಥುನ, ತುಲಾ, ಕುಂಭ ರಾಶಿಗಳಿಗೆ ಅಶುಭ ಕಾಲ ಇರುತ್ತದೆ. ಹೀಗೆ ಮೇಲೆ ತೋರಿಸಿದ ಆಯಾ ದೇಶ. ಪ್ರಾಂತ, ಪಟ್ಟಣಗಳಿಗೆ ಯಾವ ರೀತಿಯ ಫಲವೆಂಬುದು ಗೊತ್ತಾಗುತ್ತದೆ. ವಿಶೇಷವಾಗಿ ಮಿಥುನ, ತುಲಾ, ಕುಂಭ ಈ ರಾಶಿಗಳ ದೇಶಗಳಿಗೆ ಹೆಚ್ಚು ತೊಂದರೆಗಳು ಉದ್ಭವಿಸುತ ವೆ.

ಪ್ರಳಯ ಆಗುವದೋ?— ಈ ಅಷ್ಟಗ್ರಹ ಯೋಗದಿಂದ ಪ್ರಳಯದ ಭೀತಿ ಏನಾದರೂ ಇದೆಯೋ ಎಂದು ಬಹುಜನ ಕೇಳುತ್ತಿದ್ದಾರೆ. ಈ ಎಂಟು ಗ್ರಹಗಳ ಯೋಗ ಜಲರಾಶಿಯಾದ ಮಕರದಲ್ಲಿ ಆಗುವುದೇನೋ ನಿಜ. ಆದರೆ ಈ ಗ್ರಹಗಳ ಯೋಗವು ಬಹು ದಿನಗಳ ವರೆಗೆ ಮಕರ ರಾಶಿಯಲ್ಲಿ ಇರುವುದಿಲ್ಲವಾದ್ದರಿಂದ ಪ್ರಳಯದ ಭೀತಿ ಇರುವದಿಲ್ಲ. ಅತಿವೃಷ್ಟಿಯಾಗಿ ಬಹಳಷ್ಟು ಹಾನಿಯಾಗುವ ಸಂಭವವಿದೆ. ಈ ಅತಿವೃಷ್ಟಿಯೋಗವು ೧೯೬೪ರ ವರೆಗೂ ಇರುತ್ತದೆ.

ವೈಜ್ಞಾನಿಕ ಹಾನಿ— ಈ ಅಷ್ಟಗ್ರಹಯೋಗದಿಂದ, ಯಂತ್ರಸಾಮಗ್ರಿಗಳಿಗೆ ವಿಶೇಷವಾಗಿ ಉಗಿಬಂಡಿ, ವಿಮಾನ, ಮೋಟಾರು ಕಾರು ಮೊದಲಾದವುಗಳಿಗೆ ಬೆಂಕಿಯಿಂದ ಅನಾಹುತ, ನೀರು, ಹವೆ, ಎಂಜಿ ಮೊದಲಾದವುಗಳ ಉಗಿಯಿಂದುಂಟಾಗುವ ಸ್ಫೋಟಗಳಿಂದ ಅನಾಹುತವಾಗುವ ಸಂಭವವಿದೆ.

ತೃತೀಯ ಯುದ್ಧವಾಗುವದೇ ?— ಈ ಅಷ್ಟಗ್ರಹಯೋಗಕ್ಕೂ ಯುದ್ಧಗಳಿಗೂ ಬಹಳ ಸಂಬಂಧವಿರುತ್ತದೆ. ಶನಿ, ಕೇತು, ಮಂಗಳ, ರವಿ ಈ ನಾಲ್ಕೂ ಕ್ರೂರಗ್ರಹಗಳ ಬಹುದಿನದ ಅವಧಿ, ಭೂತತ್ತ್ವದ ರಾಶಿಯಲ್ಲಿದೆ. ಅದರಲ್ಲಿಯೂ ಮಂಗಳ ಶನಿಗ್ರಹಗಳ ವಾಸ್ತವ್ಯ ಮಕರರಾಶಿಯಲ್ಲಿದೆ. ಮೇಲೆ ಅಮೇರಿಕಾ, ರಶಿಯಾ, ಚೀನ ಮೊದಲಾದ ಮಹಾರಾಷ್ಟ್ರಗಳಿಗೆ ಈ ಯೋಗ ಅಶುಭದಾಯಕವಿರುವದರಿಂದ ಈ ದೇಶಗಳಲ್ಲಿ ಯುದ್ಧವಾಗುವ ಸಂಭವವಿದೆ.

ವಿವಿಧ ದೇಶಗಳ ಮೇಲೆ ಈ ಅಷ್ಟಗ್ರಹ ಯೋಗದಿಂದಾಗುವ ಪರಿಣಾಮಗಳನ್ನು ಈ ರೀತಿಯಾಗಿ ಹೇಳಬಹುದು

ಅಮೇರಿಕಾ— ಮಿಥುನ ರಾಶಿಯಾದ ಅಮೇರಿಕಕ್ಕೆ ಈ ಯೋಗ ಅನಿಷ್ಟದಾಯಕವಿರುವುದರಿಂದ ಅಮೇರಿಕೆಯು ತನ್ನ ಆಂತರಿಕ ತೊಂದರೆಯನ್ನು ಅನುಭವಿಸಬೇಕಾಗುತ್ತದಲ್ಲದೆ ಪರರಾಷ್ಟ್ರಗಳಿಂದ ಮನಸ್ತಾಪವನ್ನು ಹೊಂದುವದು.

ರಶಿಯಾ— ಕುಂಭರಾಶಿಯ ರಶಿಯಾಕ್ಕೆ ಸಹ ಈ ಯೋಗ ಅನಿಷ್ಟದಾಯಕವಿರುವದರಿಂದ ಬಹಳ ರಾಷ್ಟ್ರಗಳನ್ನು ಎದುರು ಹಾಕಿಕೊಳ್ಳಬೇಕಾಗುತ್ತದೆ ಮತ್ತು ಯುಕ್ತರಾಷ್ಟ್ರ ಸಂಘದಲ್ಲಿ ಸಹ ಅಲ್ಪಮತವನ್ನು ಹೊಂದುತ್ತದೆ.

ಚೀನ— ಕರ್ಕ ಹಾಗೂ ತುಲಾ ರಾಶಿಯಿಂದ ಸಮಿಶ್ರಿತವಾದ ಚೀನಾದೇಶ ಆಂತರಿಕ ತೊಂದರೆಯನ್ನೂ, ಬಹು ರಾಷ್ಟ್ರಗಳಿಂದ ಅಪಾದನೆಯನ್ನೂ ಹೊಂದುತ್ತದೆ.

ಇಂಗ್ಲಂಡ್— ಈ ಯೋಗವು ಇಂಗ್ಲಂಡಕ್ಕೆ ಬಹಳ ಶುಭದಾಯಕವಿರುವುದರಿಂದ, ಇತ್ತೀಚೆಗೆ ಹಿಂದೆ ಬಿದ್ದಿರುವ ಇಂಗ್ಲಂಡ್ ಆರ್ಥಿಕ. ಸಾಮಾಜಿಕ, ಔದ್ಯೋಗಿಕರಂಗಗಳಲ್ಲಿ ಮತ್ತೆ ಚೇತರಿಸಿಕೊಳ್ಳುತ್ತದೆ.

ಭಾರತ-ಈ ಅಷ್ಟಗ್ರಹ ಯೋಗವು ಭಾರತಕ್ಕೆ ಬಹಳ ಅನುಕೂಲವಿರುತ್ತದೆ. ಪಂಚವಾರ್ಷಿಕ ಯೋಜನೆಯಲ್ಲಿ ಭಾರತವು ಯಶಸ್ಸು ಪಡೆಯುವುದು ಬಹಳ ದಿನಗಳಿಂದ ಇರುವ ಕಾಶ್ಮೀರ ಹಾಗೂ ಗೋವಾ ಸಮಸ್ಯೆಗಳು ಮುತ್ಸದ್ದಿತನದಿಂದ ಯಶಸ್ವಿಯಾಗಿ ಪರಿಹಾರವಾಗುವವು. ಭಾರತ ಪೋರ್ತುಗಾಲಗಳಲ್ಲಿ ಸ್ನೇಹ ಬೆಳೆಯುತ್ತದೆ. ಭಾರತವು ತನ್ನದೇ ಆದ ತಟಸ್ಥ ನೀತಿಯನ್ನು ಮುಂದುವರಿಸುವದು. ಆದರೆ ಭಾರತದ ಉತ್ತರ ಗಡಿಯಲ್ಲಿ ನಡೆಯುವ ಚೀನಿಯರ



ದಾಳಿ ಮತ್ತು ಘರ್ಷಣೆ ದುರ್ದೈವದಿಂದ ಹಾಗೇ ನಡೆಯುತ್ತಿರುತ್ತದೆ.

ಇನ್ನು ಭಾರತದಲ್ಲಿಯ ರಾಜಕೀಯ ಪಕ್ಷಗಳ ಬಗ್ಗೆ ಒಂದೆರಡು ಮಾತು.

ಕಾಂಗ್ರೆಸ್— ಈ ಅಪ್ಪುಗ್ರಹಯೋಗ ಆಗುವ ಕಾಲಕ್ಕೆ ಭಾರತದಲ್ಲಿ ಚುನಾವಣೆ ನಡೆಯುವುದರಿಂದ ಕಾಂಗ್ರೆಸ್ ಸಂಸ್ಥೆಯು ಇದರಲ್ಲಿ ಭಾರತದ ಎಲ್ಲ ಪ್ರಾಂತಗಳಲ್ಲಿ ಬಹುಮತದ ಪ್ರಚಂಡ ಯಶಸ್ಸನ್ನು ಹೊಂದಿ ಜನಾದರಗಳಿಗೆ ಪಾತ್ರವಾಗುತ್ತದೆ.

ಕಮ್ಯುನಿಸ್ಟ್— ಈ ಸಂಸ್ಥೆಯ ಪ್ರಮುಖ ರಾಷ್ಟ್ರಗಳಾದ ರಶಿಯಾ ಹಾಗೂ ಚೀನಗಳಿಗೆ ಈ ಯೋಗ ಅನಿಷ್ಟದಾಯಕವಿರುವದರಿಂದ ಕಮ್ಯುನಿಸ್ಟ ಸಂಸ್ಥೆಗೂ ಅನಿಷ್ಟದಾಯಕವಿರುತ್ತದೆ.

### ದ್ವಾದಶ ರಾಶಿಯ ಜನರಿಗೆ ಈ ಯೋಗದ ಪರಿಣಾಮ

ಮೀನ, ಮೇಷ, ವೃಷಭ, ಸಿಂಹ, ವೃಶ್ಚಿಕ ಈ ರಾಶಿಯ ಜನರಿಗೆ ಅತಿ ಉತ್ತಮ ಕಾಲವಿರುತ್ತದೆ. ಆರ್ಥಿಕ, ಮಾನಸಿಕ, ಔದ್ಯೋಗಿಕ, ಶೈಕ್ಷಣಿಕ ಮೊದಲಾದವುಗಳಿಗೆ ಉತ್ತಮವಿದ್ದು ಜನರಿಂದ ಮಾನ-ಸನ್ಮಾನ, ಕೀರ್ತಿ, ವಿದೇಶಪ್ರಯಾಣ, ರಾಜಪಟುತ್ವ, ಸಮಾಜ ಧುರೀಣತ್ವ, ಮೊದಲಾದ ಜೀವನದ ಎಲ್ಲ ಭಾಗದಲ್ಲಿಯೂ ಸುವರ್ಣಕಾಲ ವಿರುತ್ತದೆ.

ಕರ್ಕ, ಕನ್ಯಾ, ಧನು, ಮಕರ ಈ ರಾಶಿಯ ಜನರಿಗೆ ಮಧ್ಯಮ ಕಾಲವಿರುತ್ತದೆ. ಆಶೆ-ಆಕಾಂಕ್ಷೆಗಳು ಅರ್ಧ-ಮರ್ಧ ಪೂರೈಸುತ್ತವೆ.

ಮಿಥುನ, ತುಲಾ, ಕುಂಭ ಈ ರಾಶಿಯ ಜನರಿಗೆ ಆರ್ಥಿಕ, ಮಾನಸಿಕ, ಸಾಮಾಜಿಕ, ಔದ್ಯೋಗಿಕ, ಕೌಟುಂಬಿಕ, ಶೈಕ್ಷಣಿಕ ಮೊದಲಾದ ಜೀವನದ ಎಲ್ಲ ಭಾಗದಲ್ಲಿಯೂ ಹಾನಿಯಿದ್ದು ಅಗ್ನಿಭಯ, ಚೋರಭಯ, ಶತ್ರುಭಯ ಸಹ ಸಂಭವಿಸುವವು.

[ವಿ. ಸೂ. ಇದಲ್ಲದೆ ಮೂಲ ಕುಂಡಲಿಯಲ್ಲಿ (ಜಾತಕದಲ್ಲಿ) ಈ ಯೋಗವು ಯಾವ ಸ್ಥಾನದಲ್ಲಿ ಆಗುತ್ತದೆಯೋ ಆ ಸ್ಥಾನಗಳ ಭಾಗದಂತೆ ಕೂಡ ಪರಿಣಾಮ ಕೊಡುತ್ತದೆ. ಆದುದರಿಂದ ನಾವು ಇದಕ್ಕಾಗಿ ಪ್ರತ್ಯೇಕವಾದ ಪುಸ್ತಕವನ್ನು ಪ್ರಕಟಿಸುವವರಿದ್ದೇವೆ.]

ನಾವು ಒಬ್ಬನನ್ನು ಅವನಿಂದ ನಮಗಿರುವ ಭಯಕ್ಕೆ ಗೌರವಿಸುತ್ತೇವೆ; ಲಾಭಕ್ಕೆ ಆದರಿಸುತ್ತೇವೆ; ಅವನಲ್ಲಿರುವ ದೌರ್ಬಲ್ಯಗಳಿಗಾಗಿ ಪ್ರೀತಿಸುತ್ತೇವೆ.

—ಲಾಂಗುಲಾಚಾರ್ಯ

# ಆಧುನಿಕ ಸಮಾಜದಲ್ಲಿ ನೀತಿಯ ಪಾತ್ರ

ಲೇಖಕರು:— ಡಾ. ಪಿ. ನಾಗರಾಜರಾವ,
ಕರ್ನಾಟಕ ಕಾಲೇಜ, ಧಾರವಾಡ

ವಿಜ್ಞಾನ ತಾಂತ್ರಿಕಶಾಸ್ತ್ರ ಮತ್ತು ವಿಚಾರವಿಕಾಸಗಳ ಪ್ರಭಾವದಿಂದ ಸಂಕೀರ್ಣಗೊಂಡ ಆಧುನಿಕ ಸಮಾಜಕ್ಕೆ ಇಂದು ಜೀವನಮೌಲ್ಯಗಳ ಅರಿವು ಮಾಡಿಕೊಡುವುದು ಅಗತ್ಯವಾಗಿದೆ. ಈ ಕಾರ್ಯದಲ್ಲಿ ನೀತಿಶಾಸ್ತ್ರ ಮಹತ್ವದ ಪಾತ್ರವನ್ನು ನಿರ್ವಹಿಸುವುದು. ಅದೆಂತೆಂಬುದನ್ನೇ ಲೇಖಕರು ಇಲ್ಲಿ ನಿರೂಪಿಸಿರುವರು.

ಆಧುನಿಕ ಸಮಾಜವು ಬಹು ಸಂಕೀರ್ಣವಾದುದು. ಈ ಸಮಾಜವು ಮಾನವ ಸಂಸ್ಕೃತಿಯ ಇತಿಹಾಸದಲ್ಲಿಯ ಯಾವುದೊಂದು ಶಕ್ತಿಯ ಪರಿಣಾಮವಲ್ಲ. ಇದರ ಸ್ವರೂಪದಲ್ಲಿ ಮುಖ್ಯವಾಗಿ ವಿಜ್ಞಾನ, ತಾಂತ್ರಿಕಶಾಸ್ತ್ರ ಮತ್ತು ವಿಚಾರವಿಕಾಸ ಇವುಗಳ ಪ್ರಭಾವವು ಅಡಕವಾಗಿದೆ. ಇವುಗಳಲ್ಲಿ ವಿಜ್ಞಾನದ ಪ್ರಭಾವವೇ ವಿಶೇಷ ಪರಿಣಾಮಕಾರಿ. ನಮ್ಮದು ವಿಜ್ಞಾನಯುಗ. ನಮ್ಮ ಸಮಾಜವು ವೈಜ್ಞಾನಿಕ ದೃಷ್ಟಿಯುಳ್ಳದು. ವಿಜ್ಞಾನವು ಮಾನವನಿಗೆ ಇಂದು ಹಿಂದೆಂದೂ ಕಾಣದ ಅಪಾರವಾದ ಶಕ್ತಿಯನ್ನು ಒದವಿಸಿದೆ. ಈ ವೈಜ್ಞಾನಿಕ ಶಕ್ತಿಯನ್ನು ಬಳಸಿಕೊಂಡು ಮಾನವನು ಇಂದು ಅತ್ಯುಪಯುಕ್ತ, ಅತ್ಯದ್ಭುತ ಹಾಗೂ ವೈಭವಯುಕ್ತ ತಾಂತ್ರಿಕ ಜಗತ್ತನ್ನು ನಿರ್ಮಿಸಿದ್ದಾನೆ. ಮಾನವನು ಪರಮಾಣುವನ್ನು ವಿಶ್ಲೇಷಿಸಿದ್ದಾನೆ; ಗಗನವಿಹಾರಿಯಾಗಿದ್ದಾನೆ, ಸಾಗರಗಳನ್ನು ಹಲವಿಧದಲ್ಲಿ ಈಸಿ ಜಯಿಸಿದ್ದಾನೆ; ನಿಸರ್ಗ ಶಕ್ತಿಗಳನ್ನರಿತು, ಅವುಗಳ ಮೇಲೆ ತನ್ನ ಪ್ರಭುತ್ವವನ್ನಿರಿಸಿ ಉನ್ಮತ್ತತೆಯಿಂದ ಮೆರೆಯುತ್ತಿದ್ದಾನೆ. ಇಂದಿನ ವಿಜ್ಞಾನಿಯ ಪರಿಸ್ಥಿತಿ ಬಳಸಿಕೊಳ್ಳಲರಿಯದ ಕಡುಬಡವನಿಗೆ ಅಪಾರ ನಿಧಿ ಅಕಸ್ಮಾತ್ತಾಗಿ ದೊರೆತಂತಾಗಿದೆ. ವಿಜ್ಞಾನವು ನಮಗಿಂದು ಜ್ಞಾನವನ್ನೂ ಶಕ್ತಿಯನ್ನೂ ಕೊಟ್ಟಿದೆ. ಈ ಜ್ಞಾನ ಮತ್ತು ಶಕ್ತಿಗಳಿಗೆ ಜೀವನದ ಮೌಲ್ಯಗಳನ್ನು ನಿರ್ಧರಿಸುವ ಮತ್ತು ಅವುಗಳನ್ನು ನಮಗರುಹುವ ಸಾಮರ್ಥ್ಯವಿಲ್ಲ. ನಮಗೆ ಸ್ವೇಚ್ಛೆಯಿಂದ ಬೇಕೆನಿಸುವ ಗೊತ್ತು-ಗುರಿಗಳನ್ನು ಸಾಧಿಸಿಕೊಳ್ಳಲು ಅವು ಕೇವಲ ಉಪಕರಣಗಳಾಗಬಲ್ಲವು. ಸಮಾಜ ಜೀವನ ಮತ್ತು ವೈಯಕ್ತಿಕ ಮೌಲ್ಯಗಳನ್ನು ಪೂರ್ತಿಯಾಗಿ ಹದಗೆಡಿಸುವಂತೆ ಈ ಜ್ಞಾನ ಮತ್ತು ಶಕ್ತಿಗಳನ್ನು ದುರುಪಯೋಗಪಡಿಸಿಕೊಳ್ಳುವ ಪ್ರವೃತ್ತಿಗಳು ಇಂದು ಕಂಡುಬರುತ್ತಲಿವೆ.

ಈ ದುರುಪಯೋಗದ ಮೂಲವು ಮಾನವನ ಸಹಜಪ್ರವೃತ್ತಿ, ಭಾವನೆ, ಜೀವನದೃಷ್ಟಿ ಇವುಗಳಲ್ಲಿಯೇ ಇದೆ. ಇವುಗಳ ಶುದ್ಧೀಕರಣವಿಲ್ಲದೆ ನಿಸರ್ಗದಿಂದ ದೊರೆತ ಶಕ್ತಿ, ಜ್ಞಾನ ಮತ್ತು ಬುದ್ಧಿ ಸಾಮರ್ಥ್ಯಗಳ ಸದ್ವಿನಿಯೋಗವು ಸಾಧ್ಯವೇ ಇಲ್ಲ. ಇವುಗಳ ಸದ್ವಿನಿಯೋಗಕ್ಕೆ ಜೀವನ ಮೌಲ್ಯಗಳ ಅರಿವು ತೀರ ಆವಶ್ಯಕ.

## ಜೀವನಮೌಲ್ಯಗಳ ಅರಿವು

ಜೀವನ ಮೌಲ್ಯಗಳ ಅರಿವನ್ನೊದಗಿಸುವ ಏಕಮೇವ ಶಾಸ್ತ್ರವೇ ನೀತಿಶಾಸ್ತ್ರ. ಮಾನವನು ತನ್ನ ಅಭ್ಯುದಯವನ್ನೂ ನಿಃಶ್ರೇಯಸ್ಸನ್ನೂ ಸಾಧಿಸುವುದಕ್ಕೋಸುಗ ಜೀವನದ ನಾಲ್ಕು ಪುರುಷಾರ್ಥಗಳನ್ನು ಪಡೆಯಲೇಬೇಕು. ಈ ಪುರುಷಾರ್ಥಗಳಲ್ಲಿ ಅರ್ಥ–ಕಾಮಗಳು ಒಂದು ಜತೆಯಾದರೆ ಧರ್ಮ ಮೋಕ್ಷಗಳು ಇನ್ನೊಂದು ಜತೆ. ಮೊದಲನೆಯ ಜತೆ ಮಾನವ ಜೀವನದ ಮೂಲ ದ್ರವ್ಯ. ಕಾಮತೃಪ್ತಿ ಮನುಷ್ಯನ ಸಹಜಪ್ರವೃತ್ತಿ. ಕಾಮವೆಂಬ ಪುರುಷಾರ್ಥವು ಬಹು ವ್ಯಾಪಕಾರ್ಥದಲ್ಲಿದ್ದು ಅದು ಮಾನವನ ಸಕಲ ಆಶೆ – ಆಕಾಂಕ್ಷೆಗಳನ್ನೂ ಒಳಗೊಂಡಿದೆ. ಇದರ ತೃಪ್ತಿಗಾಗಿ ಮನುಷ್ಯನು ಬಹು ವಿಧ ಪ್ರಯತ್ನಗಳಿಂದ ಅರ್ಥವನ್ನು ಗಳಿಸುತ್ತಾನೆ. ಅರ್ಥ–ಕಾಮಗಳನ್ನು ಅಂತಿಮ ಗುರಿಗಳೆಂದೇ ಭಾವಿಸಿ ತನ್ನ ಜೀವನವನ್ನು ಸಾಗಿಸತೊಡಗಿದಲ್ಲಿ ನಿಸರ್ಗದತ್ತವಾದ ಶಕ್ತಿ, ಜ್ಞಾನ, ಬುದ್ಧಿ ಪ್ರಭಾವಗಳ ದುರುಪಯೋಗವಾಗುತ್ತದೆ.

ಅರ್ಥ–ಕಾಮಗಳನ್ನು ನಿಯಂತ್ರಿಸುವ ಪುರುಷಾರ್ಥ, ಧರ್ಮ. ಧರ್ಮದ ನಿಯಂತ್ರಣವಿಲ್ಲದ ಸಮಾಜಕ್ಕೂ ವ್ಯಕ್ತಿಗೂ ಅಧಃಪತನವೇ ಗತಿ. ಇಂದಿನ ಸಮಾಜದಲ್ಲಿ ಶಕ್ತಿಯಿದೆ, ಜ್ಞಾನವಿದೆ, ಮೇಧಾಬಲವಿದೆ; ತಾಂತ್ರಿಕ ಜ್ಞಾನೋತ್ಪನ್ನವಾದ ಅಪಾರ ಸಂಘಟನಾಕೌಶಲವಿದೆ. ಇವುಗಳ ಪರಿಣಾಮವಾಗಿ ಮಾನವನ ವ್ಯಕ್ತಿತ್ವವಳಿದಿದೆ; ಮಾನವೀಯತೆ ಸ್ವರೂಪಗೆಟ್ಟಿದೆ; ಸಮಾಜದ ಕಾರ್ಯಕಲಾಪಗಳು, ಸಂಸ್ಕೃತಿ, ಸ್ವರೂಪ—ಎಲ್ಲವೂ ಯಾಂತ್ರಿಕವಾಗಿವೆ. ಮಾನವನ ಸೃಜನಶಕ್ತಿ ಮತ್ತು ಸ್ವತಂತ್ರ ಕಾರ್ಯಪ್ರವೃತ್ತಿಗಳು ಪ್ರಗತಿಗೆ ಅತ್ಯಾವಶ್ಯಕವಾದ ಅಂಶಗಳು. ಇವು ಇಂದಿನ ಸಂಕೀರ್ಣ ಸಮಾಜದಲ್ಲಿ ಕುಂಠಿತವಾಗಿವೆ.

ಇಂದಿನ ಸಮಾಜದ ಮೂಲಭೂತ ಕೊರತೆಯೆಂದರೆ ಧರ್ಮದ ಆಡಳಿತವಿಲ್ಲದ ಜ್ಞಾನ-ಶಕ್ತಿಗಳ ಸ್ವಚ್ಛಂದ ವಿನಿಯೋಗ. ಈ ಜ್ಞಾನ-ಶಕ್ತಿಗಳ ಸದ್ವಿನಿಯೋಗ. ಕೇವಲ ಮಾನವೀಯ ಬುದ್ಧಿಮತ್ತೆಗೆ ನೀಗದ ವಿಷಯ. ಯಾಕೆಂದರೆ ಬುದ್ಧಿಬಲವೂ ಮಾನವನು ಆಯ್ದುಕೊಂಡ ಗೊತ್ತು-ಗುರಿಗಳಿಗೆ ಒಂದು ಉಪಕರಣವೇ. ಈ ಜ್ಞಾನ-ಶಕ್ತಿಗಳ ನಿಯಂತ್ರಣವು ಭಯ-ಬಲಾತ್ಕಾರಗಳಿಂದೊಡಗೂಡಿದ ಕಠೋರ ದಬ್ಬಾಳಿಕೆಯಿಂದ ಪೂರ್ತಿಯಾಗಿ ಮತ್ತು ಆತ್ಯಂತಿಕವಾಗಿ ಸಾಧ್ಯವಾಗದು.

## ವೈಯಕ್ತಿಕ-ಸಾಮಾಜಿಕ ಕಲ್ಯಾಣ

ಮನುಷ್ಯನು ಧರ್ಮದ ಮೌಲ್ಯವನ್ನು ಶ್ರದ್ಧೆಯಿಂದ ಅರಿಯಬೇಕು. ಧರ್ಮವು ವೈಯಕ್ತಿಕ ಹಾಗೂ ಸಾಮಾಜಿಕ ಕಲ್ಯಾಣಗಳೆರಡನ್ನೂ ಒಮ್ಮೆಲೇ ಒದಗಿಸಿಕೊಡುವ ಶಕ್ತಿಯಾಗಿದೆ. 'ಧಾರಣಾತ್ ಧರ್ಮ ಇತ್ಯಾಹುಃ'—ಸಮಾಜವನ್ನು ಉರುಳದ ಹಾಗೆ ಎತ್ತಿಹಿಡಿಯುವುದೇ ಧರ್ಮ. ಧರ್ಮವು ವೈಯಕ್ತಿಕ ಬೆಳವಣಿಗೆ ಹಾಗೂ ವಿಕಾಸಗಳನ್ನೊದಗಿಸುವ ಮೂಲ ನಿಯಮ. ಧರ್ಮಕ್ಕೆ ವಿರುದ್ಧವಲ್ಲದ ಅರ್ಥಸಂಚಯ ಮತ್ತು ಕಾಮತೃಪ್ತಿಗಳು ಅನುಚಿತವಲ್ಲವೆಂದು ಭಗವದ್ಗೀತೆ ಸಾರುತ್ತಿದೆ: 'ಧರ್ಮಾವಿರುದ್ಧೋ ಭೂತೇಷು ಕಾಮೋಽಸ್ಮಿ, ಭರತರ್ಷಭ' (ಭ. ಗೀ. VII-II).

ಭಾರತದ ಅತ್ಯುತ್ತಮ ನೈತಿಕ ಭಾಂಡಾರಗಳಾಗಿರುವ ರಾಮಾಯಣ-ಮಹಾಭಾರತಾದಿಗಳು ಧರ್ಮದ ಮಹತಿಯನ್ನು ಮುಕ್ತಕಂಠದಿಂದ ಘೋಷಿಸುತ್ತಿವೆ. ಮಹಾಭಾರತದ ಕೊನೆಯಲ್ಲಿ ವ್ಯಾಸ ಮಹರ್ಷಿಗಳು ಹೀಗೆಂದು ಉಗ್ಗಡಿಸಿದ್ದಾರೆ: " ಊರ್ಧ್ವ ಬಾಹುರ್ವಿರೌಮ್ಯೇಷಃ ನ ಹಿ ಕಶ್ಚಿತ್ ಶೃಣೋತಿ ಮಾಂ। ಧರ್ಮಾದರ್ಥಶ್ಚ ಕಾಮಾಶ್ಚ ಸ ಕಿಮರ್ಥಂ ನ ಸೇವ್ಯತೆ ? ॥—' ಕೈಯೆತ್ತಿ ಸಾರುತ್ತಿರುವೆ; ಯಾರೂ ಕೇಳುವದಿಲ್ಲವಲ್ಲ? ಧರ್ಮದಿಂದಲೇ ಅರ್ಥ-ಕಾಮಗಳ ಪ್ರಾಪ್ತಿ. ಧರ್ಮವನ್ನೇಕೆ ಸೇವಿಸುವುದಿಲ್ಲ?' ಧರ್ಮವು ಕೇವಲ ಮೋಕ್ಷ ಸಾಧಕವಲ್ಲ; ಅದು ಮಾನವನಿಗೆ ಯುಕ್ತವಾದ ಐಹಿಕ ಸುಖಪ್ರಾಪ್ತಿಗೆ 'ಏಕಾಂತ' ಸಾಧನವಾಗಿದೆ. ಧರ್ಮವಿರುದ್ಧವಾದ ಜೀವನದಿಂದ ಜಗತ್ತಿಗೆ ಕಲ್ಯಾಣವೆಂದಿಗೂ ಇಲ್ಲ. 'ಧರ್ಮೋ ರಕ್ಷತಿ ರಕ್ಷಿತಃ ಹತೋ ಹಂತಿ'— 'ಧರ್ಮಪಾಲನ ಮಾಡುವವನನ್ನು ಧರ್ಮವು ರಕ್ಷಿಸುವುದು, ಧರ್ಮಹತಿ ಆತ್ಮಹತಿಗೆ ಕಾರಣ.'

ಮಹಾಭಾರತವು ವಿಶದವಾಗಿ ವಿಸ್ತರಿಸಿ ಅರುಹಿದ ಧರ್ಮಸ್ವರೂಪವನ್ನು ರಾಮಾಯಣದಲ್ಲಿ ಆದಿಕವಿ ವಾಲ್ಮೀಕಿ ಶ್ರೀರಾಮಚಂದ್ರನ ಚಾರಿತ್ರ್ಯ ನಿರೂಪಣೆಯಿಂದ ಅತ್ಯಂತ ಹೃದಯಸ್ಪರ್ಶಿಯಾಗಿ ಬಣ್ಣಿಸಿದ್ದಾನೆ: ಶ್ರೀರಾಮಚಂದ್ರನು ಸೀತಾಲಕ್ಷ್ಮಣರೊಂದಿಗೆ ವನವಾಸಕ್ಕೆ ತೆರಳುವಾಗ ಕ್ರೋಧಾವಿಷ್ಟನಾಗಿದ್ದ ಲಕ್ಷ್ಮಣನನ್ನು ಸಮಾಧಾನಪಡಿಸುತ್ತ ಧರ್ಮದ ಔನ್ನತ್ಯವನ್ನು ಚಿರಸ್ಮರಣೀಯ ವಚನಗಳಿಂದ ವಿವರಿಸಿದ್ದಾನೆ: 'ಧರ್ಮದ ಫಲಗಳೇ ಅರ್ಥ-ಕಾಮಗಳು. ಬಗೆದು ನೋಡಿದಲ್ಲಿ, ವಿಧೇಯಳೂ ಸಾಧ್ವಿಯೂ ಆಗಿರುವ ಸತಿಯಿಂದ ಸತ್ಪುತ್ರಪ್ರಾಪ್ತಿಯೇ ಮೊದಲಾದ ಸಕಲ ಸುಖಗಳೂ ದೊರೆಯುವಂತೆ ಧರ್ಮದಿಂದ ನಿಸ್ಸಂದೇಹವಾಗಿ ಅವು ದೊರೆಯುವವು. ಕೇವಲ ಅರ್ಥಪರಾಯಣನು ಅಸಹ್ಯಪುರುಷ, ಕೇವಲ ಕಾಮಪರಾಯಣನೂ ಶ್ಲಾಘ್ಯನಲ್ಲ." ( ಅಯೋಧ್ಯಾಕಾಂಡ ಸರ್ಗ: XXI :— 57-58 ).

## ಧರ್ಮದ ನಿಜಸ್ವರೂಪ

ಧರ್ಮದ ನಿಜಸ್ವರೂಪವು ಬಹು ಗುಹ್ಯವಾದುದು. ಜೀವನದ ವಿಶ್ವತೋಮುಖ ಸನ್ನಿವೇಶಗಳಲ್ಲಿ ಧರ್ಮದ ಸ್ವರೂಪವು ಮರೆಯಾಗಿರುವುದಲ್ಲದೆ ಕೆಲಸಲ ವಿಕೃತ ಸ್ವರೂಪದಲ್ಲಿ ಕಂಡುಬರುವುದು ಸಹಜ. ಆಧುನಿಕ ಸಮಾಜದಲ್ಲಿ ಧರ್ಮದ ವಿಕೃತ ಸ್ವರೂಪವನ್ನೇ ಧರ್ಮವೆಂದು ಭ್ರಮಿಸಿ ಸಮಾಜ ಪುನರ್ನಿರ್ಮಾಣವನ್ನು ಮುಂದುವರಿಸಿದ್ದಾರೆ. ಮಾನವನ ಆಧ್ಯಾತ್ಮದ ನಿಲುವು, ಧರ್ಮದ ನಿಜಸ್ವರೂಪ— ಇವುಗಳ ಅಜ್ಞಾನದಿಂದ ಇಂದು ಅಪೂರ್ಣವಾದ ರಾಜಕೀಯ, ಹಾಗೂ ಸಾಮಾಜಿಕ ಸಿದ್ಧಾಂತಗಳಾಗಿರುವ ಸಮಾಜವಾದ ( communism ), ಜಾತ್ಯತೀತ ಸಾಂಪತ್ತಿಕ ಪ್ರಜಾಪ್ರಭುತ್ವ (Secular Parliamentary Democracy), ವೈಜ್ಞಾನಿಕ ಭೌತಿಕವಾದ ( Scientific materialism ), ವೈಜ್ಞಾನಿಕ ಮಾನವತಾವಾದ ( Scientific Humanism ), ಮತ್ತು ಸರ್ವಾಧಿಕಾರಿತ್ವ (Fascism or Totalitarianism )— ಇವೇ ಮೊದಲಾದವು ಪ್ರಚುರಗೊಂಡಿವೆ.

'ಸಮಾಜಸ್ವಾಸ್ಥ್ಯವೂ ಸಮಾಜಕಲ್ಯಾಣವೂ ಘಟನಾತ್ಮಕ ಕಾಯ್ದೆ-ಕಾನೂನುಗಳಿಂದ ತೃಪ್ತಿಕರವಾಗಿ ಸಿದ್ಧಿಸದು. ಜನ ಬದುಕುವುದು ಶಾಸಕನ ಕ್ರೂರ ದಂಡನೆಯಿಂದಲ್ಲ, ಪರಸ್ಪರ ಧಾರ್ಮಿಕ ಸಹಾನುಭೂತಿಯಿಂದ— ಎಂದು ಮಹಾಭಾರತವು ಉದ್ಘೋಷಿಸುತ್ತಿದೆ:

ನೈವ ರಾಜ್ಯಂ ನರಾದಾಸೀತ್ ನ
ದಂಡೋ ನ ಚ ದಂಡಿಕಾಃ
ಧರ್ಮೇಣೈವ ಪ್ರಜಾಃ ಸರ್ವಾಃ
ರಕ್ಷಂತಿ ಸ್ಮ ಪರಸ್ಪರಂ ॥ (ಶಾಂತಿಪರ್ವ)

ಧರ್ಮವು ಐಹಿಕ ಸೌಖ್ಯವನ್ನು ಒದಗಿಸಿ ನೈತಿಕ ಜೀವನವನ್ನು ಸಮಾಜದಲ್ಲಿ ನಿರ್ಮಿಸುತ್ತದೆ. ನಮ್ಮ ಅರ್ಥ-ಕಾಮಗಳು ಧರ್ಮದ ನಿಯಂತ್ರಣಕ್ಕೆ ಒಳಪಡುವ ವರೆಗೆ ನಾವು ನಮ್ಮ ಸುತ್ತುಮುತ್ತಣ ಜನತೆಯ ಸುಖದುಃಖಗಳ ಬಗೆಗೆ ತಟಸ್ಥರಾಗಿಯೂ ಕೇವಲ ಸ್ವಾರ್ಥಪರಾಯಣರಾಗಿಯೂ ಉಳಿಯುತ್ತೇವೆ. ಪ್ರೀತಿ ದಯೆ, ಪರೋಪಕಾರ, ದಾನಗುಣ— ಇವೇ ಮೊದಲಾದ ಮಾನವೀಯ ಭಾವನೆಗಳ ಅಭಿವ್ಯಕ್ತಿಗೂ ವೃದ್ಧಿಗೂ ಧರ್ಮವೇ ಮೂಲಕಾರಣ. ನೈತಿಕ ಜೀವನವೇ ಧರ್ಮದ ಗುರಿ. ನೈತಿಕ ಜೀವನವೇ ಇಂದಿನ ಸಮಾಜಕ್ಕೆ ಅತ್ಯಾವಶ್ಯಕವಾದುದು. ಅಶ್ವಘೋಷನು ತನ್ನ 'ಬುದ್ಧಚರಿತೆ'ಯಲ್ಲಿ ಹೀಗೆ ಸಾರುತ್ತಾನೆ:

' ಪ್ರಸಾರಯ ಧರ್ಮಧ್ವಜಂ
ಪ್ರಪೂರಯ ಧರ್ಮಶಂಖಂ
ಪ್ರತಾಡಯ ಧರ್ಮದುಂದುಭಿಂ
ಧರ್ಮಂಕುರು, ಧರ್ಮಂಕುರು,
ಧರ್ಮಂಕುರು ॥ '

ಧರ್ಮಧ್ವಜವನ್ನು ಎಲ್ಲೆಡೆ ಹಾರಿಸು
ಧರ್ಮಶಂಖವನ್ನೂದು.
ಧರ್ಮದುಂದುಭಿಯ ಬಾರಿಸು ಬಾರಿಸು
ಧರ್ಮವ ಪಾಲಿಸು, ಧರ್ಮವ ಪಾಲಿಸು
ಧರ್ಮವ ನೀ ಪರಿಪಾಲಿಸು



# ಪ್ರಜಾಪ್ರಭುತ್ವದಲ್ಲಿ ಗ್ರಾಮ ಪಂಚಾಯತಿಗಳು ಹಾಗೂ ಲೋಕಲ್ ಬೋರ್ಡುಗಳ ಸ್ಥಾನಮಾನ

ಲೇಖಕರು :
**ಶ್ರೀ. ನೆಗಳೂರ ರಂಗನಾಥ,**
ಎಂ. ಎ. ಎಲ್. ಎಲ್. ಬಿ.
ಸಾಧನಕೆರೆ, ಧಾರವಾಡ

● ಹಿಂದೆ ಎಂದೂ ಇರದಷ್ಟು ರೀತಿಯಲ್ಲಿ ಪ್ರಜಾಪ್ರಭುತ್ವಶಬ್ದ ಇಂದು ಬಳಕೆಯಲ್ಲಿ ಬಂದಿದೆ. ಇದರಲ್ಲಿ ಪ್ರಜೆಯೇ ಪ್ರಭು. ಆಡಳಿತಕ್ಕೆ ಮಾರ್ಗದರ್ಶಿಯಾದ ಶಾಸನಾಧಿಕಾರವುಳ್ಳ ಶಾಸನಸಭೆ ಪರಮಾವಧಿ ಅಧಿಕಾರವುಳ್ಳದ್ದಾಗಿದೆ. ವಿಕೇಂದ್ರೀಕರಣ ಇದರ ಪರಿಣಾಮವಾಗಿ ನಡೆದಿದೆ. ಗ್ರಾಮಪಂಚಾಯತಿಗಳಿಗೆ, ಲೋಕಲ್ ಬೋರ್ಡುಗಳಿಗೆ ಹೆಚ್ಚೆಚ್ಚು ಅಧಿಕಾರ ಕೊಡಲಾಗುತ್ತಿದೆ. ಆದರೆ ತಕ್ಕ ಶಿಕ್ಷಣವಿಲ್ಲದ ಜನ ಆರಿಸಿ ಬರುವುದರಿಂದ ಈ ಪ್ರಯೋಗ ಫಲಕಾರಿಯಾಗುತ್ತಿದೆಯೇ ಎಂಬುದು ಸಂದೇಹಾಸ್ಪದವೆಂದು ಲೇಖಕರಿಲ್ಲಿ ಹೇಳಿರುವರು.

ಪ್ರಜಾಪ್ರಭುತ್ವ ಎಂಬ ಶಬ್ದವು ಈಗ ಬಳಕೆಯಲ್ಲಿ ಬಂದಿರುವಷ್ಟು ಹಿಂದೆ ಎಂದೂ ಬಳಕೆಯಲ್ಲಿ ಬಂದಿರಲಿಲ್ಲವೆಂದು ಹೇಳಬಹುದು ಆದರೆ ಬಳಕೆ ಬಹಳ ಆಗಿದೆಯೆಂದು ಅದರ ಬಗ್ಗೆ ತಿಳಿವಳಿಕೆ ಉಂಟಾಗಿದೆಯೆಂದು ಹೇಳಲುಬಾರದು. ಹಾಗೆ ನೋಡಿದರೆ ಆ ಶಬ್ದದ ಸರಿಯಾದ ಅರ್ಥವು ಬಹುಸಂಖ್ಯಾಕರಿಗೆ ಆಗಿಲ್ಲವೆಂದು ಹೇಳಿದರೆ ತಪ್ಪಾಗದು. ಸಾಮಾನ್ಯವಾಗಿ ಮಾತನಾಡುವವರು ತಿಳಿದವರ ಹಾಗೆಯೆ ಮಾತನಾಡುವರು. ಆದರೆ, ಅವರ ಮಾತನ್ನಾಗಲಿ ಕೃತಿಯನ್ನಾಗಲಿ ವಿಂಗಡಿಸಿ ನೋಡಿದರೆ, ಅವರಿಗೆ ಅದರ ಅರ್ಥವಾಗಿಲ್ಲವೆಂದು ತಿಳಿದುಬರುವುದು. ಹಾಗೆ 'ಅರ್ಥವಾಗಿಲ್ಲ' ಎಂದು ಯಾರೂ ಯಾರ ಎದುರಿಗೂ ಹೇಳುವ ಧೈರ್ಯ ಮಾಡುವುದಿಲ್ಲ. ಕಾರಣವೆಂದರೆ ಪ್ರಜಾಪ್ರಭುತ್ವದ ದಿವಸಗಳಿವು.

ಹಾಗಾದರೆ ಯಾರಿಗೂ ತಿಳಿಯದ ಒಂದು ಒಗಟವಾಗಿ ಪರಿಣಮಿಸಿದೆಯೆ ಈ ಪ್ರಜಾಪ್ರಭುತ್ವ? ಹಾಗೇನಿಲ್ಲ. ಒಂದೊಂದು ದೇಶದಲ್ಲಿ ಒಂದೊಂದು ಕಾಲದಲ್ಲಿ ಒಂದೊಂದು ಅರ್ಥವಿಶೇಷವನ್ನು ಕಟ್ಟಿಕೊಂಡು ಅದು ಬೆಳೆದಿದೆ. ಪ್ರಜಾಪ್ರಭುತ್ವವನ್ನು ನಾವು ಆಚರಣೆಯಲ್ಲಿ ನೋಡಬೇಕೆ ಹೊರತು ಅದರ ಅರ್ಥ – ಇಲ್ಲವೆ ವ್ಯಾಖ್ಯೆಯ ಕಡೆಗೆ ಅಷ್ಟು ಗಮನ ಕೊಡಬೇಕಾಗಿಲ್ಲ. ಏಕೆಂದರೆ ನಿಘಂಟಿನಲ್ಲಿಯ ಅರ್ಥ – ರಾಜ್ಯಶಾಸ್ತ್ರದಲ್ಲಿಯ ಅದರ ವ್ಯಾಖ್ಯೆ ಸಾಮಾನ್ಯವಾಗಿ ಎಲ್ಲ ದೇಶ ಕಾಲದಲ್ಲಿಯೂ ಒಂದೇ ಆಗಿದೆ. ಆಚರಣೆಯ ಪ್ರಶ್ನೆ ಬಂದಾಗ ಅದರ ವಿಶಿಷ್ಟ ಸ್ವರೂಪವನ್ನು ತಿಳಿಯಬೇಕಾಗುವುದು. ಭಾರತೀಯ ವೇಳೆ ಎಂಬುದು ಇಂಡಿಯನ್ ಸ್ಟ್ಯಾಂಡರ್ಡ ಟಾಯಿಮ ಎಂಬ ಅರ್ಥವನ್ನು ಕೊಟ್ಟರೂ ವ್ಯಂಗ್ಯವಾಗಿ ಭಾರತೀಯ ವೇಳೆ ಎಂದು ಉಚ್ಚರಿಸಿದಾಗ,ಹೇಳಿದ ವೇಳೆಗೆ ನಡೆಯದೆ ವಿಲಂಬವಾಗಿ ನಡೆಯುವ ಹಾಗೆ ಸೂಚಿಸಿದ ವೇಳೆ ಎಂದು ಎಲ್ಲರಿಗೂ ತಿಳಿದ ಹಾಗೆ ಪರಿಸ್ಥಿತಿ ನಮ್ಮ ದೇಶದಲ್ಲಿ ಉಂಟಾಗಿದೆ. ಇದಕ್ಕೆ ನಮ್ಮ ನೆಲದ ಗುಣವೇ ಕಾರಣ ; ಜನದ ಭಾವನೆಯೇ ಕಾರಣ. ಹಾಗೆಯೇ ಈ ಪ್ರಜಾಪ್ರಭುತ್ವದ ಪರಿಸ್ಥಿತಿ.

## ಪ್ರಜೆಯೇ ಪ್ರಭು

ಪ್ರಜಾಪ್ರಭುತ್ವದಲ್ಲಿ ಪ್ರಜೆಯೇ ಪ್ರಭುವು. ಪ್ರಭು ರಾಜನು—ಒಬ್ಬ ವ್ಯಕ್ತಿಯಾಗಿದ್ದಾಗ ರಾಜ್ಯದ ಆಡಳಿತವೆಲ್ಲ ಒಂದು ವ್ಯಕ್ತಿಯ ಅಧೀನವಾಗಿದ್ದಿತು. ರಾಜನು ಪ್ರಜೆಗಳನ್ನು ಪರಿಪಾಲಿಸುತ್ತಿದ್ದನು. ಅವನು ಏನಾದರೂ ಪ್ರಜೆಗಳಿಗೆ ಕೊಟ್ಟರೂ ಅದನ್ನು ಅವನು ದಯಪಾಲಿಸಿದನು ಎಂಬ ಭಾವನೆ ಇರುತ್ತಿತ್ತು. ರಾಜನ ಅಧಿಕಾರವು ಪರಂಪರೆಯ ಮೂಲಕವಾಗಿ ತಂದೆಯಿಂದ ಮಗನಿಗೆ ಬರುತ್ತಿತ್ತು. ಜನ್ಮವೇ ಅಧಿಕಾರಮೂಲವಾಗಿರುವುದು ರಾಜಸತ್ತೆ. ಒಂದು ವ್ಯಕ್ತಿಯ ಅಧೀನವಾಗಿರುವ ಅಧಿಕಾರವು ಪ್ರಜೆಗಳೆಂದು ಕರೆಯಲ್ಪಡುವ ಜಾತಿಯ ಕೈಗೆ ಬಂದಿತು. ಆಗ ಪ್ರಜೆಯು ಪ್ರಭುವಾದನು. ಇಲ್ಲಿ ಪರಂಪರೆಯ ಮಾರ್ಗವಿರದೆ ಪ್ರಾತಿನಿಧಿತ್ವದ ದಾರಿಯಿದೆ. ಪ್ರಜೆಗಳೆಂಬುವವರು ತಮ್ಮ ಪ್ರತಿನಿಧಿಗಳನ್ನು ಚುನಾವಣೆ ಮಾಡಿ, ಅವರ ಕೈಯಲ್ಲಿ ಅಧಿಕಾರ ಕೊಟ್ಟು ತಾವು ಆ ಅಧಿಕಾರಕ್ಕೆ ಒಳಗಾಗಿ ಜೀವನವು ಸಕಲರಿಗೂ ಸುಖಮಯವಾಗುವಂತೆ ನೋಡಿಕೊಳ್ಳುವ ಪದ್ಧತಿಯು ಪ್ರಜಾಪ್ರಭುತ್ವ. ಒಂದು ಕೈಯಲ್ಲಿಯ ಅಧಿಕಾರವು ಹಂಚಿಹೋಗಿ ಎಲ್ಲರಕೈಗೆ ಅಧಿಕಾರಬಂದು ಎಲ್ಲರೂ ಕೂಡಿ ಕೆಲವು ಪ್ರತಿನಿಧಿಗಳನ್ನು ಆರಿಸಿ ತಮ್ಮಲ್ಲಿಯ ಅಧಿಕಾರವನ್ನು ಅವರಿಗೆ ಕೊಡುವುದು. ಅವರು ರಾಜ್ಯಶಾಸನ ಮಾಡುವವರು ಎಂದು ಒಪ್ಪಿಕೊಂಡು ವಿಧೇಯರಾಗಿ ನಡೆಯುವ ರೀತಿಯು ಪ್ರಜಾಪ್ರಭುತ್ವದಲ್ಲಿದೆ. ರಾಜ್ಯದ ಆಡಳಿತದ ಅಧಿಕಾರವನ್ನು ಜನತೆಯ ಪರವಾಗಿ ನಡೆಯಿಸುವವರು ಜನತೆಯ ಪ್ರತಿನಿಧಿಗಳು ; ಅವರು ಚುನಾಯಿತರಾದ ಶಾಸಕರು. ಇಲ್ಲಿ ಪರಂಪರೆಯ ಮಾತಿಲ್ಲ ; ಜನ್ಮಾಧಿಕಾರದ ಪ್ರಶ್ನೆಯಿಲ್ಲ. ಜನತೆಯ ವಿಶ್ವಾಸಕ್ಕೆ ಪಾತ್ರರಾಗಿರುವ ವ್ಯಕ್ತಿತ್ವವನ್ನೂ ಸೇವಾಬುದ್ಧಿಯನ್ನೂ ಪ್ರತಿನಿಧಿ – ಶಾಸಕನು ಪಡೆದಿರಬೇಕಾದ ಪರಿಸ್ಥಿತಿ ಪ್ರಸಂಗ ಮಾತ್ರ ಇರುವುದು.

ನಮ್ಮ ದೇಶದಲ್ಲಿ ಪ್ರಜಾಸತ್ತೆಯು ಇದೆಯೆಂದು ಸಾರಲಾಗಿದೆ. ನಮ್ಮ ದೇಶದ ರಾಜ್ಯ ಘಟನೆಯು ಕೂಡ ಪ್ರಜಾಸತ್ತಾತ್ಮಕ ಸ್ವರೂಪದ್ದು ಇದೆ. ಸಂವಿಧಾನವು ಪ್ರಜಾಪ್ರಭುತ್ವವನ್ನೇ ಸಾರಿಹೇಳುವುದು. ಅದನ್ನು, ಆಚರಣೆಯಲ್ಲಿಯೂ ತರಲ್ಪಡುವ ಪ್ರಯತ್ನಗಳೂ ಅವ್ಯಾಹತವಾಗಿ ನಡೆದಿರುವುವು. ಅದು ಭಾರತೀಯ ಪ್ರಜಾಪ್ರಭುತ್ವವೆಂಬ ರೂಪದಲ್ಲಿ ಬೆಳೆಯುತ್ತಿರುವುದು. ಭಾರತೀಯ ಮುದ್ರೆಯುಳ್ಳ ಪ್ರಜಾಪ್ರಭುತ್ವವು ಇತರ ಮುದ್ರೆಗಳನ್ನು ಪಡೆದ ಪ್ರಜಾಪ್ರಭುತ್ವಗಳಕ್ಕಿಂತ ಬೇರೆಯಾಗಿರುವುದೆಂದು ಹೇಳಬೇಕಾಗಿಲ್ಲ. ಮೂಲ ವಿಚಾರದ ಛಾಯೆಯು ಸಾರ್ವತ್ರಿಕವಾಗಿ ಎಲ್ಲ ದೇಶಗಳಲ್ಲಿ ಕಂಡರೂ ಆಚಾರದಲ್ಲಿ ಭೇದವಿದೆ. ಅದಕ್ಕೆ ಕಾರಣವೂ ಇದೆ.

## ಶಾಸನವೇ ಪರಮಾಧಿಕಾರ

ಪ್ರಜಾಪ್ರಭುತ್ವದಲ್ಲಿ ಶಾಸನವೇ ಪರಮಾಧಿಕಾರವುಳ್ಳದ್ದು. ಆ ಶಾಸನದ ಎದುರು ಎಲ್ಲರೂ ಸಮಾ

ನರು. ಆ ಶಾಸನವನ್ನು ಒಪ್ಪಿಕೊಳ್ಳಬೇಕಾದಂತಹ ವಿಧೇಯತೆಯು ಬೇಕಾಗುವುದು. ಶಾಸನಕ್ಕೆ ವಿಧೇಯವಾಗಿರಬೇಕಾದರೆ ಜೀವನದ ಬಗ್ಗೆ - ವಸ್ತುನಿಷ್ಠವಾದ ತಿಳಿವಳಿಕೆ ಬೇಕು. ಹಾಗೆ ತಿಳಿವಳಿಕೆ ಬೆಳೆಯಿಸಿಕೊಂಡ ಜನ ಭಾರತದಲ್ಲಿ ಇನ್ನೂ ಕಡಿಮೆ ಪ್ರಮಾಣದಲ್ಲಿ ಇದೆ. ಈ ಪ್ರಮಾಣ ಹೆಚ್ಚಿದಂತೆಲ್ಲ ನಿಜವಾದ ಪ್ರಜಾಪ್ರಭುತ್ವದ ಗುರಿಯ ಕಡೆಗೆ ನಡೆದಂತಾಗುವುದು. ಈ ಪ್ರಮಾಣ ಕಡಿಮೆಯಾಗಿಯೆ ಉಳಿದರೆ ಆಗ ಹೆಸರಿಗೆ ಮಾತ್ರ ಪ್ರಜಾಪ್ರಭುತ್ವವಿದ್ದು ಪ್ರತ್ಯಕ್ಷವಾಗಿ ಯಾವುದೋ ರೂಪ ತಳೆದ ಶಾಸನಪದ್ಧತಿಯು ರೂಢಿಯಲ್ಲಿ ಬಂದುಬಿಡುವುದು.

ವಿಕೇಂದ್ರೀಕರಣವು ಪ್ರಜಾಪ್ರಭುತ್ವದ ಅಸ್ತಿವಾರವೆಂದು ಹೇಳಲಾಗುತ್ತಿದೆ. ಅಧಿಕಾರವು ಒಂದೆಡೆಗೆ ಕೇಂದ್ರೀಕೃವಾಗಿರದೆ ಹಂತಗಳಲ್ಲಿ ಹಂಚಿಹೋಗಿ, ಅಷ್ಟುಮಟ್ಟಿಗೆ ಆಯಾ ಹಂತಗಳಲ್ಲಿ ಸತ್ತಾ-ಸ್ವಾತಂತ್ರ್ಯವುಂಟಾಗುವುದು. ಇದಕ್ಕೆ ಸ್ಥಾನಿಕ ಅಧಿಕಾರವೆಂದು ಕರೆಯಲಾಗಿದೆ. ಸ್ಥಾನಿಕ ಅಧಿಕಾರದ ವ್ಯಾಪ್ತಿಯು "ಸ್ಥಾನಿಕ" ಎಂಬ ಶಬ್ದದ ಪ್ರಾದೇಶಕ ವ್ಯಾಪ್ತಿಯನ್ನು ಅವಲಂಬಿಸಿದೆ. ನಮ್ಮ ದೇಶದಲ್ಲಿ ಪ್ರಾಥಮಿಕ ಸ್ಥಾನಿಕ ಅಧಿಕಾರವೆಂದರೆ ಇತ್ತೀಚಿನ ಶಾಸನಗಳಿಂದ ಉಂಟಾದ ಗ್ರಾಮ ಪಂಚಾಯತ. ಇದು ಮೂಲ ಘಟಕ. ಇದು ಪ್ರಜಾಸತ್ತೆಯ ಪ್ರಾಥಮಿಕ ಅವಸ್ಥೆ ಎಂದು ಹೇಳಬಹುದು. ೧೫೦೦ ಜನಸಂಖ್ಯೆ ಇರುವ ಪ್ರದೇಶದಿಂದ ೫,೦೦೦ದ ವರೆಗೆ ಇರುವ ಜನಸಂಖ್ಯೆಯ ಪ್ರದೇಶವು ಗ್ರಾಮಪಂಚಾಯತ. ೫,೦೦೦ ಜನಸಂಖ್ಯೆ ಆಗಿ ಆ ಪ್ರದೇಶದಿಂದ ೧೦,೦೦೦ ರೂಪಾಯಿ ಉತ್ಪನ್ನ ಬರುವಂತಾದಾಗ ಅದು ಪಟ್ಟಣಪಂಚಾಯತವೆಂದಾಗುವುದು. ಇದೂ ಸ್ಥಾನಿಕ ಅಧಿಕಾರವೆ. ಬೇರೆ ಬೇರೆ ಹೆಸರಿನಿಂದ ಇರುವ ಸ್ಥಾನಿಕ ಅಧಿಕಾರಿಗಳು— ಸ್ಯಾನಿಟರಿ ಕಮಿಟಿ, ಮುನಸಿಪಲ್ ಕೌನಿಸಿಲ್, ಮುನಸಿಪಾಲಟಿ, ಮುನಸಿಪಲ್ ಬರೋ, ಮುನಸಿಪಲ್ ಕಾರ್ಪೊರೇಶನ್, ತಾಲೂಕ ಅಭಿವೃದ್ಧಿ ಬೋರ್ಡ, ಜಿಲ್ಲಾ ಅಭಿವೃದ್ಧಿ ಬೋರ್ಡ. ಇವೆಲ್ಲವೂ ಪ್ರಾದೇಶಿಕವಾಗಿ ಅಧಿಕಾರವನ್ನು ಪಡೆದ ಸ್ಥಾನಿಕ ಅಧಿಕಾರಗಳು. ಒಂದು ಪ್ರದೇಶದಲ್ಲಿಯ ಅಧಿಕಾರದಲ್ಲಿ ಇನ್ನೊಂದು ಪ್ರದೇಶದ ಅಧಿಕಾರವು ಕೈಹಾಕಿರಬಾರದು ಎಂಬ ಹಾಗೆ ಅವುಗಳಿಗೆ ಸ್ವತಂತ್ರ ಸ್ವಾಯತ್ತವಾದ ವ್ಯವಸ್ಥೆ ಮಾಡಲಾಗಿದೆ.

## ವಿಕೇಂದ್ರೀಕರಣ

ಭಾರತವು ಅನೇಕ ರಾಜ್ಯಗಳಾಗಿ ವಿಭಾಗಿತವಾಗಿದೆ. ಭಾರತ ಸರಕಾರವು ಇಡೀ ದೇಶಕ್ಕೆ ಇರುವ ಕೇಂದ್ರ ಸರಕಾರವೆಂದು ಆಗಿದ್ದರೂ ಅದು ರಾಜ್ಯಗಳ ಒಕ್ಕೂಟವಾಗಿರುವುದರಿಂದ ಅಧಿಕಾರಗಳಲ್ಲಿ ವಿಭಾಗವಾಗಿ, ಕೇಂದ್ರದ ಅಧಿಕಾರ ಹಾಗೂ ರಾಜ್ಯಗಳ ಅಧಿಕಾರ ಎಂದು ಆಗಿದೆ. ರಾಜ್ಯಗಳ ಅಧಿಕಾರವೆಂದು ಸ್ವಾತಂತ್ರ್ಯ—ಸ್ವಾಯತ್ತತೆಯನ್ನೂ ಕೊಡಲಾಗಿರುವ ವಿಷಯಗಳಲ್ಲಿ ಸಾಮಾನ್ಯವಾಗಿ ಕೇಂದ್ರವು ಕೈಹಾಕತಕ್ಕದ್ದಲ್ಲ. ದೇಶದ ಐಕ್ಯ ಹಾಗೂ ಭದ್ರತೆಯ ಪ್ರಶ್ನೆ ಬಂದ ಹೊರತು, ರಾಜ್ಯಶಾಸನದಲ್ಲಿ ಕೇಂದ್ರವು ಕೈಹಾಕತಕ್ಕದ್ದಲ್ಲ. ಇದು ರಾಜ್ಯಗಳಿಗೆ ಕೊಡಲಾದ ಸ್ವಾಯತ್ತತೆಯು, ಇದು ಮೊದಲ ಹಂತದ ವಿಕೇಂದ್ರೀಕರಣ.

ರಾಜ್ಯವು ಜಿಲ್ಲೆಗಳಲ್ಲಿ ವಿಭಾಗಿತವಾಗಿರುವುದು. ಜಿಲ್ಲೆಗಳು ತಾಲೂಕುಗಳೆಂದು ವಿಭಾಗಿತವಾಗಿರುವುವು. ತಾಲೂಕುಗಳಲ್ಲಿ ಗ್ರಾಮಗಳು ಇರುವವು. ಜಿಲ್ಲೆಯು ಒಂದು ಪ್ರಾದೇಶಿಕ ವಿಭಾಗ; ತಾಲೂಕು ಜಿಲ್ಲೆಯಲ್ಲಿಯ ಪ್ರಾದೇಶಿಕ ವಿಭಾಗ. ಗ್ರಾಮಗಳು ರಾಜ್ಯದಲ್ಲಿಯ ಪ್ರಾದೇಶಿಕ ಮೂಲಘಟಕಗಳು. ಸ್ಥಾನಿಕ ಅಧಿಕಾರದ ದೃಷ್ಟಿಯಿಂದ ಗ್ರಾಮಪಂಚಾಯತ, ತಾಲೂಕು ಬೋರ್ಡು-ಜಿಲ್ಲಾ ಅಭಿವೃದ್ಧಿ ಮಂಡಳ, ರಾಜ್ಯಶಾಸನಸಭೆ, ಇವು ಪ್ರಾಥಮಿಕ ಘಟ್ಟದಿಂದ ಮೇಲಕ್ಕೆ ಏರುವ ಅಧಿಕಾರಪ್ರಾಪ್ತಿ ಹೆಚ್ಚಾಗುತ್ತ ಹೋಗುವ ಸ್ಥಾನಿಕ ಅಧಿಕಾರಗಳು. ಇವುಗಳಲ್ಲದೆ, ಸ್ವತಂತ್ರ-ಸ್ವಾಯತ್ತ ಸ್ಥಾನಿಕ ಅಧಿಕಾರಗಳು: ಮುನಸಿಪಾಲಿಟಿಗಳು, ಕಾರ್ಪೊರೇಶನಗಳು.

ರಾಜ್ಯಕ್ಕೆ ಹಂಚಿಕೊಟ್ಟ ಅಧಿಕಾರದಲ್ಲಿ ಕೇಂದ್ರವು ಸಾಮಾನ್ಯವಾಗಿ ಕೈ ಹಾಕದು ಎಂಬಂತೆ; ಜಿಲ್ಲೆಗೆ ಕೊಡಲಾದ ಅಧಿಕಾರದಲ್ಲಿ ರಾಜ್ಯಸರಕಾರವು ಸಾಮಾನ್ಯವಾಗಿ ಕೈಹಾಕದು; ತಾಲೂಕಿಗೆ ಕೊಡಲಾದ ಅಧಿಕಾರದಲ್ಲಿ ಜಿಲ್ಲೆಯೂ ಕೈಹಾಕದು; ಗ್ರಾಮಕ್ಕೆ ಕೊಡಲಾದ ಅಧಿಕಾರದಲ್ಲಿ ತಾಲೂಕು ಕೈಹಾಕದು. ಈ ರೀತಿಯಾಗಿ ಮುನಸಿಪಾಲಟಿಗಳಿಗೆ ಹಾಗೂ ಕಾರ್ಪೊರೇಶನುಗಳಿಗೆ ಕೊಡಲಾದ ಅಧಿಕಾರದಲ್ಲಿ ರಾಜ್ಯಸರಕಾರವಾಗಲಿ, ಜಿಲ್ಲಾ ತಾಲೂಕ ಗ್ರಾಮಗಳ ಅಧಿಕಾರವಾಗಲಿ, ಕೈಹಾಕುವಂತೆ ಇಲ್ಲ. ಹಾಗೆ ಅಧಿಕಾರಹಂಚಿಕೆಯು ಪ್ರಾದೇಶಿಕವಾಗಿ ಆಗಿರುವುದೇ ಪ್ರಜಾಪ್ರಭುತ್ವದಲ್ಲಿ ಹೇಳಲಾಗುವ ವಿಕೇಂದ್ರೀಕರಣ.

## ಸ್ವಾಯತ್ತಾಧಿಕಾರದ ಸಂಸ್ಥೆಗಳು

ಆಯಾ ಪ್ರಾದೇಶಿಕ ವಿಭಾಗಗಳಿಗೆ ಸ್ವಾಯತ್ತಾಧಿಕಾರವನ್ನು ನಡೆಸುವ ಸಂಸ್ಥೆಗಳು—ಗ್ರಾಮಪಂಚಾಯತ—ತಾಲೂಕುಬೋರ್ಡ, ಮುನಸಿಪಾಲಟಿ, ಮುನಸಿಪಲ್ ಬರೋ—ಮುನಸಿಪಲ್ ಕಾರ್ಪೊರೇಶನ್ ಎಂಬವು. ಮುನಸಿಪಲ್ ಆಡಳಿತವು ಒಂದು ವಿಶಿಷ್ಟ ಮಾದರಿಯದು ಇರುವುದರಿಂದ ಅದು ಸ್ವಾಯತ್ತಾಧಿಕಾರವಾದರೂ ಇಲ್ಲಿ ಅದಕ್ಕೆ ಪ್ರತ್ಯೇಕವಾಗಿ ಗಮನ ಕೊಡಲಾಗಿಲ್ಲ. ಉಳಿದ ಸ್ಥಾನಿಕ ಅಧಿಕಾರಗಳಿಗೆ ಹೇಳಿದ ಮಾತು ಅವುಗಳಿಗೂ ಅನ್ವಯಿಸುವುದು.

ಈ ಎಲ್ಲ ಸ್ಥಾನಿಕ ಅಧಿಕಾರಗಳು ಪ್ರಜಾಸತ್ತೆಯ ಲಕ್ಷಣವುಳ್ಳವು. ಇಲ್ಲಿ ಸತ್ತಾಧಿಕಾರವನ್ನು ಪ್ರಜೆಗಳೇ ನಡಿಸುವವರು; ಪ್ರಜೆಗಳು ತಮ್ಮ ಪ್ರತಿನಿಧಿಗಳನ್ನು ಚುನಾಯಿಸಿ, ಅವರ ಕೈಗೆ ಅಧಿಕಾರ ಕೊಟ್ಟು ಸತ್ತಾಧಿಕಾರವನ್ನು ನಡೆಸುವರು. ಚುನಾವಣೆಯು ಪ್ರತಿನಿಧಿಗಳನ್ನು ಆರಿಸುವ ಮುಖ್ಯ ಹಾಗೂ ಮಹತ್ವದ ವಿಧಾನ. ಚುನಾವಣೆಗಳ ಸ್ವಭಾವಗುಣ—ಪರಿಣಾಮಗಳ ಮೇಲೆ ಆ ಚುನಾಯಿತ ಸಂಸ್ಥೆಗಳ ಚಾರಿತ್ರ್ಯವು ಅವಲಂಬಿಸಿರುವುದು.

ಪ್ರಜಾಪ್ರಭುತ್ವದಲ್ಲಿ ಗ್ರಾಮಪಂಚಾಯತ ಹಾಗೂ ಲೋಕಲ್‌ಬೋರ್ಡುಗಳ ಸ್ಥಾನಮಾನವನ್ನು ತಿಳಿಯಬೇಕಾದರೆ, ಇವುಗಳಿಗಾಗಿ ನಡೆಯುವ ಚುನಾವಣೆಗಳನ್ನು ಚುನಾವಣೆಗಳಿಂದ ಆರಿಸಿ ಬರುವ ಪ್ರತಿನಿಧಿಗಳ ಚಾರಿತ್ರ್ಯ—ಸಾಮರ್ಥ್ಯಗಳನ್ನು ತಿಳಿಯಬೇಕು. ಚುನಾವಣೆಗಳು ಮತದಾನ ಪದ್ಧತಿಯಿಂದ ನಡೆಯುವುವು. ಮತದಾನವು ಸ್ವತಂತ್ರಬುದ್ಧಿಯಿಂದ, ಯಾವ ಭಿಡೆ ಮುರವತ್ತುಗಳಿಲ್ಲದೆ, ಯಾವ ಪ್ರಭಾವ ಹೆದರಿಕೆ ಇಲ್ಲದೆ, ವೈಯಕ್ತಿಕ ಹಿತಸಂಬಂಧಗಳನ್ನು

ಲಕ್ಷಿಸದೆ ಸಾರ್ವಜನಿಕ ಹಿತದ ದೃಷ್ಟಿಯಿಂದ ನಡೆಯಬೇಕೆಂದು ಕಾಯದೆ, ಕಾನೂನು—ನಿಯಮಗಳ ನೀತಿಯು ಸಾರಿಹೇಳುವುದು. ಇದು ಆದರ್ಶ. ಕಾಯದೆ ಪುಸ್ತಕಗಳಲ್ಲಿರುವ ಆದರ್ಶ. ಪುಸ್ತಕಗಳಲ್ಲಿ ಬರೆದುದನ್ನು ಓದಿನೋಡಿ ಪರಿಸ್ಥಿತಿಯು ಹೇಗಿರಬಹುದೆಂದು ತೂಗಿ ನೋಡಿದರೆ ಅದು ಅತ್ಯುತ್ತಮವಾಗಿದೆಯೆಂದು ಎದೆತಟ್ಟಿ ಹೇಳಬಹುದು. ಆದರೆ ಯಾವುದೊಂದು ಸಂಸ್ಥೆಯ ಸ್ಥಾನಮಾನವನ್ನು ಅಳೆಯಬೇಕಾದರೆ ವಸ್ತುಸ್ಥಿತಿಯ ವಿಮರ್ಶೆ ಮಾಡುವುದು ಅವಶ್ಯವಾಗುವುದು. ವಸ್ತುಸ್ಥಿತಿಯ ವಿಮರ್ಶೆಯಿಂದ ಗ್ರಾಮಪಂಚಾಯತ ಹಾಗೂ ತಾಲೂಕ ಲೋಕಲ್‌ಬೋರ್ಡುಗಳ ಸ್ಥಾನಮಾನವು ಏನಿದೆ; ಹೇಗಿದೆ? ಎಂಬುದನ್ನು ತಿಳಿದು ಭವಿಷ್ಯತ್ ಜೀವನದ ಮೇಲೆ ಈ ಸಂಸ್ಥೆಗಳಿಂದ ಯಾವ ಪರಿಣಾಮವಾಗುವುದು ಎಂಬುದನ್ನು ನೋಡಬೇಕಾಗಿದೆ.

ಪ್ರಜಾಪ್ರಭುತ್ವದ ಯಶಸ್ಸು ಮತದಾರನ ನಿರ್ಣಾಯಕ ಬುದ್ಧಿಯನ್ನು ಅವಲಂಬಿಸಿದೆ. ಸಾರಾಸಾರ ವಿಚಾರಮಾಡಿ ಸದಸತ್-ವಿವೇಕ ಬುದ್ಧಿಗೆ ಅನುಸಾರವಾಗಿ ಮತದಾನ ಮಾಡುವ ಸಾಮರ್ಥ್ಯವಿದ್ದವನನ್ನು ಲಕ್ಷ್ಯವಾಗಿ ಇಟ್ಟುಕೊಂಡಿರುವುದು ಈ ಪ್ರಜಾಪ್ರಭುತ್ವದ ಪದ್ಧತಿ. ಮೂಕ ಕುರಿಯಂತೆ ಹೋಗಿ, ಕಣ್ಣು ಮುಚ್ಚಿ, ಕೈಯಲ್ಲಿಯ ಮತವನ್ನು ಡಬ್ಬಿಗೆ ಹಾಕುವ ಪದ್ಧತಿಯು ಎಲ್ಲಿಯ ವರೆಗೆ ನಡೆಯುವುದೋ ಅಲ್ಲಿಯ ವರೆಗೆ, ಪ್ರಜಾಪ್ರಭುತ್ವವು ಸೋಗಿನಲ್ಲಿ ಇರುವುದೇ ಹೊರತು ಸತ್ವದಲ್ಲಿ ಬರಲಾರದು. ಇಂದಿನ ಪ್ರಜಾಪ್ರಭುತ್ವವು ಪ್ರಪಂಚದಲ್ಲಿ ಪಕ್ಷಪಂಗಡಗಳ ರಾಜಕಾರಣದಲ್ಲಿ ಬೆಳೆದುದು ಆಗಿದೆ. ಅದುದರಿಂದ ಚುನಾವಣೆಯಲ್ಲಿ ತನಗೆ ಬೇಕಾದ ಪ್ರತಿನಿಧಿಯನ್ನು ಆರಿಸುವ ಸ್ವಾತಂತ್ರ್ಯವು ಮತದಾರನ ಎದುರು ಇರದೆ, ಯಾವ ಪಕ್ಷವನ್ನು ಇಲ್ಲವೆ ಯಾವ ಪಂಗಡವನ್ನು ಆರಿಸಿ ತರುವುದು ಇದೆ ಎಂಬುದು ಮುಖ್ಯವಾಗಿರುವುದು. ದೇಶವ್ಯಾಪ್ತಿಯುಳ್ಳ ಪಕ್ಷವು ಸುವ್ಯವಸ್ಥಿತವಾಗಿ ರಚಿತವಾಗಿ ರೂಪುಗೊಂಡು ಬೆಳೆಯುತ್ತಿದ್ದರೆ. ಆ ಪಕ್ಷದಲ್ಲಿ ಬಹುಸಂಖ್ಯಾಕರು ಸಮರ್ಥರೂ ಮೇಧಾವಿಗಳೂ ಸಾರ್ವಜನಿಕ ಹಿತಬುದ್ಧಿಯುಳ್ಳವರೂ ಕಾರ್ಯಕ್ಷಮರೂ ಬರುವುದು ಸಾಧ್ಯವಾಗುವುದು. ಇದಲ್ಲದೆ ಭಾವನಾತ್ಮಕವಾಗಿ ಪಡೆದ ಬೆಂಬಲದಿಂದ ಯಾವುದೊಂದು ಪಕ್ಷವು ಬಹುಮತವನ್ನು ಪಡೆದರೆ, ಬಹುಮತದ ಬೆಂಬಲವುಳ್ಳವರು ಅಧಿಕಾರಾರೂಢರಾಗುವರೇ ಹೊರತು ಕಾರ್ಯಕ್ಷಮ—ಸಮರ್ಥ'— ಹಾಗೂ ಸತ್ತಾಧಿಕಾರ ನಡೆಸುವ ಯೋಗ್ಯತೆಯುಳ್ಳವರು ಬಂದಾರೆಂಬ ಆಶ್ವಾಸನ ದೊರೆಯದು.

## ಮತದಾನ – ಮತದಾರ

ಪ್ರಜಾಪ್ರಭುತ್ವದಲ್ಲಿ ಮತದಾನವು ನಿರ್ಣಾಯಕ ಶಕ್ತಿಯು. ಬಹುಮತವು ಅದರ ಬಲ. ಆದರೆ ಕೇವಲ ಬಹುಮತದಿಂದ ಯಾವಾಗಲೂ ಒಳ್ಳೆಯ ಪರಿಣಾಮವಾಗುವುದಿಲ್ಲ. ಬಹುಮತವು ಒಳ್ಳೆಯ ಪರಿಣಾಮಕಾರಿಯಾಗಬೇಕಾದರೆ ಮತದಾರನು ತಿಳಿವಳಿಕೆಯುಳ್ಳವನಿದು, ತನ್ನ ತಿಳಿವಿನ ಮೂಲಕ ಸ್ವತಂತ್ರವಾಗಿ ಮತದಾನ ಮಾಡುವ ಎದೆಗಾರಿಕೆಯುಳ್ಳವನು ಇರಬೇಕು. ಇದಲ್ಲದೆ ಬಹುಮತವು ಬೆದರಿಕೆಯಿಂದ ಪಡೆದ ಬಹುಮತವು. ಅದು ಪ್ರಜಾಪ್ರಭುತ್ವದ ಜೀವವನ್ನು ಹಿಸುಕಿ ಬಿಡುವುದು. ನಿರ್ಭಯ ವೃತ್ತಿಯಿಂದ ಮತದಾನ ಮಾಡಬೇಕೆಂದು ಚುನಾವಣೆ ಕಾಲದಲ್ಲಿಯ ವ್ಯವಸ್ಥೆ ಇರಬೇಕೆಂದು ಕಾಯದೆ ಕಾನೂನು ಸಾರಿ ಹೇಳಿದರೂ ಆ ಬಗ್ಗೆ ಜೀವನದಲ್ಲಿ ಸಂಬಂಧಿಕರಲ್ಲಿ ಅಭಯ ಇಲ್ಲದಿರುವಾಗ ಮತದಾನವು ಮತದಾನವೇ ಅಲ್ಲ. ಆದ್ದರಿಂದ ಅದು ಪ್ರಜಾಪ್ರಭುತ್ವವಲ್ಲ. ಪ್ರಜಾಪ್ರಭುತ್ವಕ್ಕೆ ಮೂಲತಃ ಬೇಕಾದುದು ತಿಳಿವಳಿಕೆ ಹಾಗೂ ನಿರ್ಭಯ ವೃತ್ತಿ. ಇವೆರಡೂ ನಮ್ಮ ದೇಶದಲ್ಲಿ ಇನ್ನೂ ಉಂಟಾಗಿಲ್ಲ. ಆದ್ದರಿಂದ ನಮ್ಮಲ್ಲಿ ಪ್ರಜಾಪ್ರಭುತ್ವವು ಹೆಸರಿನಲ್ಲಿದೆ; ಪುಸ್ತಕಗಳಲ್ಲಿದೆ. ನಿಯಮದಲ್ಲಿದೆ. ನೀತಿಯಲ್ಲಿಲ್ಲ; ಕಾರ್ಯಾಚರಣೆಯಲ್ಲಿಲ್ಲವೆಂದು ಹೇಳಬಹುದಾಗಿದೆ.

ತಿಳಿದವರ ಕೈಯಲ್ಲಿ ಅಧಿಕಾರ ಕೊಡಬೇಕೆ ಹೊರತು, ಮೂಢನ ಕೈಯಲ್ಲಿ ಅಧಿಕಾರ ಕೊಡಬಾರದು. ತಿಳಿದವರು ಎಂದರೆ, ಕಲಿತವರು ಎಂಬ ಅರ್ಥವಲ್ಲ. ತಿಳಿದವರು ಎಂದರೆ ಸಾರ್ವಜನಿಕ ಹಿತವನ್ನು ತಿಳಿದವರು. ಸ್ವಂತದ ಆಸೆ ಆಮಿಷಗಳನ್ನು ಬದಿಗೆ ಸರಿಸಿ ಇಡಬೇಕೆಂದು ತಿಳಿದವರು. ಆಡಳಿತಾಧಿಕಾರವನ್ನು ಪಡೆಯಬೇಕೆನ್ನುವವರು ಸ್ವಾರ್ಥಿಗಳೂ ಅದರ ಜತೆಗೆ ಮೂಢರೂ ಆದರೆ, ಆ ಪ್ರಜಾಸತ್ತೆಯಲ್ಲಿಯ ಪ್ರಜೆಗೆ ದೇವರೇ ಗತಿ. ಸ್ವಾರ್ಥವು ಸಾರ್ವಜನಿಕ ಹಿತವನ್ನು ಹತ್ತಿಕ್ಕುವುದಿಲ್ಲ;° ಮೌಢ್ಯವು ವ್ಯರ್ಥ ಆಢ್ಯತೆಯನ್ನು ಬೆಳೆಸುವದು. ಅಧಿಕಾರ ನಡೆಸುವ ಬದಲು ದರ್ಪವು ತಲೆದೋರುವುದು. ಅಧಿಕಾರವು ಆದರವನ್ನು ಹುಟ್ಟಿಸುವುದು. ದರ್ಪವು ದ್ವೇಷವನ್ನು ತರುವುದು. ಆಡಳಿತ ನಡೆಸುವವರ ಬಗ್ಗೆ ಗೌರವಾದರ ಬರಬೇಕೇ ಹೊರತು ದ್ವೇಷವಲ್ಲ; ಆದರದ ಮೂಲಕ ಬಾಗಬೇಕೇ ಹೊರತು ಭೀತಿಯ ಮೂಲಕ ಬಾಗಬಾರದು. ಆದರವಿದ್ದರೆ, ಗೌರವವಿದ್ದರೆ ವಿಧೇಯತೆಯು ಬೆನ್ನಿಗೆ ಬಿದ್ದ ನೆಳಲಿನಂತೆ ಬರುವುದು. ಭೀತಿ - ದ್ವೇಷಗಳಿದ್ದರೆ ಬೆನ್ನು ಬಾಗಿರುವುದೇ ಹೊರತು, ವಿಧೇಯತೆ ಇರುವುದಿಲ್ಲ. ವಿಧೇಯತೆ ಇಲ್ಲದಿದ್ದರೆ ಆಡಳಿತ ನಡೆಯದು- ಜನ್ಮದ ನಿಮಿತ್ತ ರಾಜನಾಗಿರುವವನಲ್ಲಿ ಗೌರವಾದರಗಳಿಗೆ ಬೇಕಾಗುವ ಗುಣಗಳು ಕಡಿಮೆ ಆದುವೆಂದೇ ರಾಜಸತ್ತೆ ಮಣ್ಣುಪಾಲಾಯಿತು. ಯಾವ ಕುಲದ ಜನ್ಮವಾದರೇನು, ಯೋಗ್ಯತೆಯಿದ್ದವನು ಮುಂದೆ ಬರಬೇಕು. ಯೋಗ್ಯತೆಗೆ ಮನ್ನಣೆಯೆ ಹೊರತು ಜನ್ಮಾಧಿಕಾರಕ್ಕಲ್ಲ ಎಂಬ ತತ್ತ್ವವೇ ರಾಜಸತ್ತೆಯ ಪತನಕ್ಕೆ ಕಾರಣವಾಯಿತು. ಅದೇ ಪ್ರಜಾಪ್ರಭುತ್ವ ತತ್ತ್ವಕ್ಕೆ ಅಸ್ತಿವಾರವಾಯಿತು. ಹೀಗಿದ್ದೂ ಯೋಗ್ಯತೆಯು ಮತ್ತೆ ಮಣ್ಣು ಮುಕ್ಕಿದರೆ ಯಾವ ಸತ್ತೆಯೇನು? ಇಷ್ಟೇ ಜನ್ಮಾಧಿಕಾರ ಪರಂಪರೆಯಿಂದ ಅಧಿಕಾರಕ್ಕೆ ಅಂಟಿಕೊಂಡಿರುವ ಹಂಬಲಕ್ಕೆ ಬೆಲೆಯಿಲ್ಲ; ಬೇಡಾದವನನ್ನು ದೂಡಿ ದೂರ ಮಾಡಲು ಬರುವುದೆಂಬ ಅವಕಾಶ ಪ್ರಜಾಪ್ರಭುತ್ವದಲ್ಲಿದೆ ಎಂಬುದೆ ಅದರಲ್ಲಿಯ ಒಳ್ಳೆಯ ಗುಣ. ಆದರೆ, ಸಮುದ್ರದಲ್ಲಿ ಮುತ್ತುಗಳು ದೊರೆಯುವುವು ಎಂಬುದರಿಂದಲೇ ಸಮಾಧಾನ ಪಟ್ಟುಕೊಂಡರೆ ಆಗದು. ಮುತ್ತುಗಳನ್ನು ಹುಡುಕಿ ತೆಗೆಯಬೇಕು. ಈ ಪ್ರಯತ್ನ ಇಲ್ಲದಿದ್ದರೆ, ಸಮುದ್ರದಲ್ಲಿ ಮುತ್ತು ದೊರೆತರೇನು? ಮಣ್ಣು ದೊರೆತರೇನು?



## ಇಂದಿನ ಪರಿಸ್ಥಿತಿ

ಪರಿಣಾಮಕಾರಿಯಾದ ಫಲಕಾರಿಯಾದ ಪ್ರಜಾಪ್ರಭುತ್ವ ನಮ್ಮ ದೇಶದಲ್ಲಿ ಬಂದಿಲ್ಲ. ಹೀಗಿದ್ದಾಗ ವಿಕೇಂದ್ರೀಕರಣವು ಜಾಣತನವೆ? ಎಂಬುದು ಒಂದು ಪ್ರಶ್ನೆ. ಅಧಿಕಾರ—ಆಡಳಿತ ನಡೆಸುವುದು ತರಬೇತಿಯ ಹಾಗೂ ಶಿಕ್ಷಣದ ಮೂಲಕ ಬರುವುದು. ತರಬೇತಿ ಶಿಕ್ಷಣ ಕೊಡಬೇಕಾದರೆ ಅಂತಹ ಸಂಸ್ಥೆಗಳು ಬೇಕಲ್ಲ. ಈಸು ಕಲಿಯಬೇಕಾದರೆ ನೀರಲ್ಲಿ ಬೀಳಲೇಬೇಕು. ಪುಸ್ತಕ ಓದಿ ಈಸು ಕಲಿತು ಬಾವಿಯಲ್ಲಿ ಹಾರಿಕೊಂಡರೆ, ನೀರಿನ ತಳವೇ ಗತಿ ಎಂಬಂತೆ ಆಗುವುದು.

ಈ ಎರಡೂ ಪ್ರಶ್ನೆಗಳು ಅಷ್ಟೇ ಮಹತ್ವದ್ದೂ ಅವೆ. ಆದರೆ ದೇಶದ ದುರ್ದೈವದಿಂದ ಮೊದಲನೆಯ ಪ್ರಶ್ನೆಗೆ ಮಹತ್ವವು ಕಡಿಮೆಯಾಗಿ ರೂಢಿಯಿಂದ ತಿಳಿವಳಿಕೆ ಬರುವುದು ಎಂಬ ತತ್ವಕ್ಕೆ ಅಂಟಿಕೊಂಡು ಅಧಿಕಾರದ ವಿಕೇಂದ್ರೀಕರಣವು ನಡೆದಿದೆ. ಇದರಿಂದ ಪ್ರಾರಂಭಿಕ ಅವಸ್ಥೆಗಳಲ್ಲಿ ಲಾಭದಕ್ಕಿಂತ ಹಾನಿಯೇ ಹೆಚ್ಚಾಗುವುದು. ಒಬ್ಬ ವ್ಯಕ್ತಿಯ ಶಿಕ್ಷಣವೇ ಒಂದು ಜಟಿಲ ಸಮಸ್ಯೆ ಆಗಿರುವಾಗ ಸಾರ್ವಜನಿಕ ಶಿಕ್ಷಣವು-ಸಮಾಜ ಶಿಕ್ಷಣವು ತಲೆತಲಾಂತರದಲ್ಲಿ ನಡೆಯಬೇಕಾದ

ಪ್ರಮೇಯವು. ಸ್ವಾತಂತ್ರ್ಯೋತ್ತರದಲ್ಲಿ ನಮ್ಮ ದೇಶದ ಶಿಕ್ಷಣರಂಗದಲ್ಲಿ ಅನೇಕ ಪ್ರಯೋಗಗಳು ನಡೆಯುತ್ತಿವೆ. ಅದರಿಂದ ಶಿಕ್ಷಣವು ಸಾರ್ವತ್ರಿಕವಾಗಿದೆ. ಆ ಕಾರಣದ ಮೂಲಕವೇ ಶೈಕ್ಷಣಿಕ ಮಟ್ಟವು ಕೆಳಗೆ ಇಳಿದಿದೆ. ಸಾಮಾಜಿಕ ಶಿಕ್ಷಣವು ಹೆಚ್ಚು ಹೆಚ್ಚು ಪ್ರಸಾರವಾಗಿ, ಸಾರ್ವತ್ರಿಕವಾಗಿ ಬೆಳೆದಾಗ ಸಾಮಾನ್ಯ ನಾಗರಿಕನಿಗೂ ಪ್ರಪಂಚದ ಬಗ್ಗೆ ಹೆಚ್ಚಿನ ತಿಳಿವಳಿಕೆ ಉಂಟಾಗುವುದು.

### ಪಾಶ್ಚಾತ್ಯ ಮಾದರಿ

ಇಂದಿನ ಪ್ರಜಾಪ್ರಭುತ್ವವು ಪಾಶ್ಚಾತ್ಯ ಮಾದರಿಯದು ಇದೆ. ಅಲ್ಲಿಯ ವರ್ಣಭೇದವು ನಮ್ಮ ದೇಶದಲ್ಲಿಯಂತೆ ವರ್ಣಭೇದದ ಹಾಗೆ ಇಲ್ಲ. ನಮ್ಮ ವರ್ಣವ್ಯವಸ್ಥೆಯು ಮೂಲಸ್ವರೂಪವನ್ನು ಕಳೆದುಕೊಂಡರೂ ಜಿಡ್ಡಿನಂತೆ ಅಂಟಿಕೊಂಡಿದೆ. ಅದರಿಂದ ಹೊರಗೆ ಬರಲು ಧೈರ್ಯವಿಲ್ಲ; ಅದರಂತೆ ಬಾಳುವ ಮನಸ್ಸಿಲ್ಲ. ಈ ಹೊಯ್ದಾಟದಲ್ಲಿ ಸಮಾಜದ ವ್ಯವಸ್ಥೆ ಇರುವಾಗ ರಾಜಕೀಯವಾಗಿ ಎಲ್ಲ ವರ್ಣಗಳು—ಎಲ್ಲ ಜಾತಿ ಜನಾಂಗಗಳು ಸುಧಾರಿಸಬೇಕೆಂಬ ಪ್ರಯತ್ನ ನಡೆದಿದೆ. ಇದಕ್ಕೆ ಬೇಕಾಗುವ ಶಿಕ್ಷಣ ಮಾತ್ರ ದೊರಕುತ್ತಿಲ್ಲ. ಹೀಗೆ ಆವಶ್ಯಕವಾದ ಸಮಾಜ ಶಿಕ್ಷಣವು ದೊರೆಯದೆ ವ್ಯಾಪಕವಾದ ತಿಳಿವಳಿಕೆಯ ಮೇಲೆ, ಸಾಮಾಜಿಕ ಜೀವನವನ್ನು ನಡೆಸುವುದು ಕಷ್ಟವಾಗುತ್ತದೆ. ಇಂತಹ ಪರಿಸ್ಥಿತಿಯು ಇರುವಾಗ ವಿಕೇಂದ್ರೀಕರಣವು ಒಂದು ದೇಶಕ್ಕೆ ಗಂಡಾಂತರಕಾರಿಯಾದ ಪ್ರಯೋಗವೆಂದು ಹೇಳಬೇಕಾಗುವುದು.

ಕಾಯಿದೆಯಿಂದ ಗ್ರಾಮಪಂಚಾಯತಿ ಹಾಗೂ ಲೋಕಲ್‌ಬೋರ್ಡುಗಳಿಗೆ ಆಯಾ ಪ್ರದೇಶಗಳಿಗೆ ಸ್ವಾಯತ್ತತೆಯನ್ನು ಕೊಡಲಾಗಿದೆ. ಶಾಸನಗಳನ್ನು ಮಾಡುವ ಅಧಿಕಾರವೊಂದನ್ನು ಬಿಟ್ಟು, ಪೋಲೀಸು ಸುವ್ಯವಸ್ಥೆಯನ್ನು ಬಿಟ್ಟು, ಉಳಿದ ಸಾಮಾಜಿಕ ಜೀವನವನ್ನು ಪ್ರಗತಿಪರವಾಗಿ ಮಾಡಲು ನಾಗರಿಕ ಜೀವನವನ್ನು ನಡೆಸಲು ಬೇಕಾಗುವ ವ್ಯವಸ್ಥೆಯನ್ನು ಮಾಡಲು ಅನುಕೂಲತೆ ಒದಗಿಸಲಾಗಿದೆ. ಸರಕಾರದ ಪರವಾಗಿ ಭೂಕಂದಾಯದ ವಸೂಲಿ ಕೂಡ ಮಾಡಲು ಕಾರ್ಯ ನಿರ್ವಹಿಸಿಕೊಡುವ ವ್ಯವಸ್ಥೆಯು ಇದೆ. ರಾಜ್ಯದ ಭೂಕಂದಾಯದಲ್ಲಿಯ ಪ್ರತಿಶತ ೨೫-೩೦ ರಷ್ಟು ಆದಾಯವನ್ನು ಲೋಕಲ್ ಬೋರ್ಡು ಹಾಗೂ ಗ್ರಾಮಪಂಚಾಯತಿಗಳಿಗೆ ಕೊಡಬೇಕೆಂದು ಇವಲ್ಲದೆ ಕರ-ತೆರಿಗೆಗಳನ್ನು ಹಾಕಿ ಲಾಯಿಸೆನ್ಸ—ಪರವಾನಗಿ ಕೊಟ್ಟು ಫೀ ವಸೂಲಿ ಮಾಡಿ ಗ್ರಾಮಪಂಚಾಯತಿಗಳ ಹಾಗೂ ಲೋಕಲ್‌ಬೋರ್ಡುಗಳ ಆರ್ಥಿಕ ಸ್ಥಿತಿಯನ್ನು ಉತ್ತಮಗೊಳಿಸಲಾಗಿದೆ. ಆದರೆ ಇಷ್ಟು ಸಾರ್ವಜನಿಕರ ಹಣವನ್ನು ಸದುಪಯೋಗ ಮಾಡಲು ಬೇಕಾದ ಶಿಕ್ಷಣ ಹಾಗೂ ತರಬೇತಿ ಮತ್ತು ತಿಳಿವಳಿಕೆಗಳು ಮತ್ತು ಗ್ರಾಮಪಂಚಾಯತಿಗಳು ಹಾಗೂ ತಾಲೂಕ ಲೋಕಲ್ ಬೋರ್ಡುಗಳನ್ನು ನಡೆಸುವ ಪ್ರತಿನಿಧಿಗಳಿಗೆ ಇಲ್ಲ.

### ಅಧಿಕಾರಿಗಳ ಮೇಲ್ವಿಚಾರಣೆ

ಆದ್ದರಿಂದ ಅಧಿಕಾರಿಗಳ ಮೇಲ್ವಿಚಾರಣೆಯು ಹೆಚ್ಚು ಹೆಚ್ಚಾಗಬೇಕಾಗುವುದು. ಕುಶಲ-ಬುದ್ಧಿವಂತ ಚಾಣಾಕ್ಷ ಸೆಕ್ರೆಟರಿ ಇದ್ದರೆ ಗ್ರಾಮಪಂಚಾಯತಿ ವ್ಯವಹಾರವನ್ನು ಅವನು ಒಬ್ಬನೇ ಮಾಡುತ್ತಾನೆನ್ನುವ ಪರಿಸ್ಥಿತಿಯು ಇಂದು ಆರಿಸಿ ಬಂದ ಪ್ರತಿನಿಧಿಗಳ ತಿಳಿವಳಿಕೆ ತರಬೇತಿಯನ್ನು ನೋಡಿದರೆ ತಿಳಿವುದು. ಹೀಗೆ ಆದ ಸಂದರ್ಭದಲ್ಲಿ ಹೆಸರಿಗೆ ಪ್ರಜಾಸತ್ತೆ; ಆಚರಣೆಯಲ್ಲಿ ಯಾವ ಒಬ್ಬ ಇಲ್ಲವೆ ಕೆಲವೆ ಜನರ ಕೈಯಲ್ಲಿ ಅಧಿಕಾರವು ಕೇಂದ್ರೀಕೃತವಾಗುವುದು. ವಿಕೇಂದ್ರೀಕರಣ ಕಾರ್ಯಾಚರಣೆಯಲ್ಲಿ ಬರುವುದಿಲ್ಲ.

ಯೋಗ್ಯತಾವಂತರು—ಸಮಾಜಸೇವಾ ಬುದ್ಧಿಯವರು ನಿಃಸ್ವಾರ್ಥಿಗಳು ನಿಃಸ್ಪೃಹಿಗಳು ಆರಿಸಿಬರುವಂತೆ ವ್ಯವಸ್ಥೆ ಇಲ್ಲ. ಪಕ್ಷಪಂಗಡಗಳ ರಾಜಕಾರಣಗಳ ಮೂಲಕ ತಮಗೆ ಬೇಕಾದ ವ್ಯಕ್ತಿಗಳಿಗೆ ಆಸ್ಪದ ದೊರೆಯುವುದೇ ಹೊರತು ಯೋಗ್ಯತಾವಂತರಿಗೆ ಆಸ್ಪದವಿಲ್ಲ. ಯೋಗ್ಯತೆಯನ್ನು ಹತ್ತಿಕ್ಕಿ ಅಯೋಗ್ಯರು ಮುಂದೆ ಬಂದರೆ, ಪ್ರಜಾಸತ್ತೆಯ ತಂತ್ರವೇ ಸತ್ತಂತೆ. ಯೋಗ್ಯತೆ ಇದ್ದ ಯಾವ ವ್ಯಕ್ತಿಗೂ ಸಮಾಜಕ್ಕೆ ಸೇವೆ ಸಲ್ಲಿಸುವ ಅನುಕೂಲತೆ ಒದಗಿಸಬೇಕೆಂಬುದೇ ಪ್ರಾತಿನಿಧಿಕರೂಪಿಯಾದ ಪ್ರಜಾಸತ್ತೆಯ ಉದ್ದೇಶವು. ಅದು ಎಲ್ಲಿಯ ವರೆಗೆ ಉಂಟಾಗುವುದಿಲ್ಲವೊ ಅಲ್ಲಿಯ ವರೆಗೆ ಪ್ರಜಾಸತ್ತೆಯು ಒಂದು ಫಾರ್ಸು. ಈಗಿದ್ದ ಸಂದರ್ಭದಲ್ಲಿ ಯೋಗ್ಯತಾವಂತರಿಗೆ ಉಸಿರುಗಟ್ಟಿದಂತೆ ಆಗುತ್ತದೆ. ಇದನ್ನು ಹೋಗಲಾಡಿಸಲು ಮತದಾರನು ಯೋಗ್ಯ ಜನರನ್ನು ಆರಿಸುವ ತಿಳಿವುಳ್ಳವನೂ ಧೈರ್ಯ ಇದ್ದವನೂ ಬೇಕು.

ಸಾಮಾನ್ಯ ನಾಗರಿಕನು ಹೆಚ್ಚು ಪ್ರಾಮಾಣಿಕನು ಆಗಬೇಕಾಗಿದೆ; ತನ್ನ ಹಿತವನ್ನು ಮುಂದೆ ಮಾಡಿಕೊಂಡು ಸಮಾಜದ ಶೋಷಣೆ ಮಾಡುವುದು ನಿಲ್ಲಬೇಕು. ಸಮಾಜ ಸೇವೆಯ ಸೋಗಿನಲ್ಲಿ ಸ್ವಂತ ಲಾಭ ಮಾಡಿಕೊಳ್ಳುವುದು ನಿಲ್ಲಬೇಕು. ಸಮಾಜದ ಹಣವನ್ನು ಸಮಾಜಕ್ಕೆ ಉಪಯೋಗ ಮಾಡಬೇಕೆಂಬ ನೀತಿ ಉಂಟಾಗಬೇಕು. ಇದು ಸಾಧ್ಯವಾಗಬೇಕಾದರೆ ಇಂದಿನ ಪರಂಪರೆಯ ಜಾಡ್ಯದಲ್ಲಿ ಕೊಳೆಯುತ್ತಿರುವ ಸಮಾಜಕ್ಕೆ ವಿಶಿಷ್ಟವಾದ ಶಿಕ್ಷಣವು ದೊರೆಯಬೇಕು. ಆಗ ವಿಕೇಂದ್ರೀಕರಣದಿಂದ ಅಧಿಕಾರವು ಹಂಚಿ ಜನತೆಯ ಕೈಗೆ ಬರಬೇಕು ಎಂಬ ಉದ್ದೇಶದ ಸಾಫಲ್ಯವಾಗುವುದು. ಅದು ಆಗುವತನಕ ವಿಕೇಂದ್ರೀಕರಣವು ಗಂಡಾಂತರಕಾರಿ.

### ಸ್ಥಾನಿಕ ಸ್ವರಾಜ್ಯದ ಇಂದಿನ ಸ್ಥಿತಿಗತಿ

ಅಲ್ಲಿಯ ವರೆಗೆ ಪ್ರಯೋಗ ಮಾಡದೆ ಸುಮ್ಮನಿರಬೇಕೆ? ಹಾಗೆಂದು ಅನ್ನುವುದಿಲ್ಲ. ಎರಡನೆಯ ದೇಶದಲ್ಲಿ ಪ್ರಜಾಸತ್ತೆಯು ಇದೆ, ಅದಕ್ಕೆ ನಮ್ಮ ದೇಶದಲ್ಲಿಯೂ ಬೇಕು ಎಂದು ಹೇಳುವ ವಾದವು ತಪ್ಪು. ಪ್ರಜಾಸತ್ತೆಯು ಇಂದು ಪ್ರಪಂಚದಲ್ಲಿ ಮನ್ನಣೆ ಪಡೆದ ರಾಜ್ಯವ್ಯವಸ್ಥೆಯ ಸ್ವರೂಪ. ಆದರೆ ಆ ದೇಶಗಳಲ್ಲಿ ಅದು ನೆಲದಿಂದ ಬೆಳೆದು ಬಂದುದಾಗಿದೆ. ನಮ್ಮ ದೇಶದಲ್ಲಿ ಅದು ಆಗಂತುಕಿಯಾಗಿದೆ. ಉಳಿದ ದೇಶಗಳಲ್ಲಿ ಅದಕ್ಕೆ ತಕ್ಕ ಶಿಕ್ಷಣವು, ಸಾಮಾನ್ಯ ಹಾಗೂ ಸಾಮಾಜಿಕ ಶಿಕ್ಷಣವು ದೊರೆವುದು. ನಮ್ಮ ದೇಶದಲ್ಲಿ ಅದು ಇಲ್ಲ. ಉಳಿದ ದೇಶಗಳಲ್ಲಿ ನಮ್ಮ ದೇಶದಂತೆ ಸಾಮಾಜಿಕ ಪರಂಪರೆಗಳ ಜಾಡ್ಯವು ಇಲ್ಲ. ಅವರಿಗೆ ಅದು ಅರಿವೆ ಬದಲಿಸಿದಂತೆ ಆಯಿತು; ನಮ್ಮ ದೇಶದಲ್ಲಿ ಅದು ರಕ್ತ

ಗತವಾಗಿ ಮನೋಭೂಮಿಕೆಯಲ್ಲಿ ಬಿತ್ತಿ ಬೆಳೆದಿದೆ. ಹೀಗೆ ಪರಿಸ್ಥಿತಿ ಇರುವುದರಿಂದ ಗ್ರಾಮಪಂಚಾಯತಿ ಹಾಗೂ ಲೋಕಲ್ ಬೋರ್ಡುಗಳಿಗೆ ನಮ್ಮ ಸಮಾಜ ವ್ಯವಸ್ಥೆಯಲ್ಲಿ-ರಾಜ್ಯದಾಡಳಿತ ವ್ಯವಸ್ಥೆಯಲ್ಲಿ ಸ್ಥಾನವಿದೆಯೇ ಹೊರತು ಮಾನವಿಲ್ಲ. ಮಾನವಿಲ್ಲದ ಸ್ಥಾನವು ಆಕ್ರಮಣಶೀಲವಾದುದು. ಮಾನವಿದ್ದ ಸ್ಥಾನವು ಗೌರವಯುಕ್ತವಾದುದು. ಮಾನಕ್ಕೆ ತಕ್ಕ ಸ್ಥಾನ; ಸ್ಥಾನಕ್ಕೆ ತಕ್ಕ ಮಾನ, ಇವು ಪ್ರಜಾಸತ್ತೆಯಲ್ಲಿ ಮೂಲಮಂತ್ರಗಳು. ಇದೇ ಇಲ್ಲದಂತಾಗಿದೆ. ಮಂತ್ರದಲ್ಲಿರುವ ಧ್ಯಾನಶಕ್ತಿ—ಕಾರ್ಯಶಕ್ತಿ—ಶ್ರದ್ಧೆಯು ಇಲ್ಲದಾಗಿದೆ. ಸಪ್ಪಳ ಮಾತ್ರ ಕೇಳಿ ಬರುವುದು. ಒಟಗುಟಿದರೆ ಬಾಯಿನೋವು; ಹೊರತು ಕಾರ್ಯಸಿದ್ಧಿಯಿಲ್ಲ. ಪ್ರಜಾಸತ್ತೆಯ ಆಡಂಬರ ಇವೆಲ್ಲವೂ ಇದೆ. ಆತ್ಮಶಕ್ತಿ ಇಲ್ಲ. ದೇವತಾವಿಗ್ರಹ ಇಲ್ಲದ ಭವ್ಯ ಗುಡಿಯಂತೆ ಆಗಿದೆ. ಗುಡಿ ಕಟ್ಟಬೇಕೆನ್ನುವವರು ಮೊದಲೇ ದೈವತದ ಬಗ್ಗೆ ವಿಚಾರ ಮಾಡಿರುವರು. ಆ ದೈವತಕ್ಕೆ ಹೊಂದುವ ಹಾಗೆ ಗುಡಿಯನ್ನು ಕಟ್ಟುವರು. ಆಗ ಗುಡಿಯು ಶ್ರದ್ಧಾ-ಸ್ಥಾನವಾಗುವುದು. ಈಗ ಗುಡಿಯನ್ನು ಮೊದಲು ಭವ್ಯವಾಗಿ ಕಟ್ಟಲಾಗಿದೆ. ಅಲ್ಲಿ ದೇವತಾಪ್ರತಿಷ್ಠಾ-ಪನೆಯ ವಿಚಾರ ಕೂಡ ಇಲ್ಲ. ಯಾವುದೊಂದು ದೈವತವನ್ನು ಅಲ್ಲಿ ಪ್ರತಿಷ್ಠಾಪನೆ ಮಾಡಿದರೆ—ಶ್ರದ್ಧೆಯು ಇಲ್ಲದಂತಾಗುವುದು. ಶ್ರದ್ಧಾವಿರಹಿತ ಜೀವನವು ಚುಕ್ಕಾಣಿ ಇಲ್ಲದ ಹಡಗದಂತೆ ಅಲೆಗಳ ಹೊಡತಕ್ಕೆ ಅಲೆಯುತ್ತ ಹೋಗುವುದು. ಹಾಗೆ ಹೊಯ್ದಾಡುತ್ತ ಹೋಗುವಾಗ ಅದು ದಂಡೆಗೂ ಬರಬಹುದಾಗಿದೆ. ಅದೂ ಒಂದು ದಿಕ್ಕು. ಆದರೆ ಹೋಗಬೇಕಾದ ದಿಕ್ಕು ಮಾತ್ರ ಅಲ್ಲ.

ಕಾಯದೆಯನ್ನು ಮಾಡಿ ಕಾಯದೆಯ ಬಗ್ಗೆ ಶ್ರದ್ಧೆ—ವಿಧೇಯತೆ ಇಲ್ಲದಿರುವ ಇಂದಿನ ಪರಿಸರವು ದೈವತವಿಲ್ಲದ ಭವ್ಯ ಮಂದಿರವಾಗಿದೆ. ಮಂದಿರಕ್ಕೆ ಬೆಲೆ ಇರುವುದು. ಒಳಗೆ ಇರುವ ದೈವತದಿಂದ—ಅದೇ ಇಲ್ಲದಾಗಿದೆ. ಪ್ರಜಾಸತ್ತೆಯ ತತ್ತ್ವದ ಮೂಲಕವಾಗಿರುವ ವಿಕೇಂದ್ರಿಕರಣವು ಹಾಳು ಗುಡಿಯಂತೆ ಆಗಿದೆ. ಅದು ಮಾನದಸ್ಥಾನವೂ ಅಲ್ಲ; ಸ್ಥಾನದ ಮಾನವೂ ಅದಕ್ಕೆ ಇಲ್ಲ.



## ಭದ್ರ ಜಗತ್ತು

ಮಕ್ಕಳ ಬಾಳುವೆಯು
ಹೆತ್ತವರಿಗೆ ಕುತ್ತು ;
ಗಾಳಿ, ನೀರು, ಬೆಂಕಿ,
ಮತ್ತೇನೇನೊ ವಿಪತ್ತು ;

ಎಂದು ಕೆಲರು ಮಗುಗೆ
ಜಗವ ಕೋಣೆಯುಷ್ಟೆ
ಭದ್ರಗೊಳಿಸೆ ಬಗೆದು
ಮಾಡುವರು ಜಗವ ಬರಿದು.

— ಲುಯಿ ಸ್ಟಿಂಸನ್
(ಅನುವಾದ : ಪಾವೆಂ)

# ಚಂಪೂ ಕೃತಿಗಳಲ್ಲಿ ಛಂದಸ್ಸುಗಳ ಪ್ರಯೋಗ

ಲೇಖಕರು:
**ಪ್ರೊ. ಎಸ್. ಆರ್. ಮಳಗಿ,** ಎಂ. ಎ. ಬಿ. ಟಿ.
ಕರ್ನಾಟಕ ಕಾಲೇಜ, ಧಾರವಾಡ

ಸುಮಾರು ಐದಾರುನೂರು ವರುಷಗಳ ಸುದೀರ್ಘ ಕಾವ್ಯಕೃಷಿಯ ಫಲವಾಗಿ ಚಂಪೂಕಾವ್ಯ ರೂಪುಗೊಂಡಿದೆ. ಇದೊಂದು ಅಪೂರ್ವವಾದ ಕಾವ್ಯಪದ್ಧತಿಯೆನಿಸಿದೆ. ಕಂದ ಮತ್ತು ಖ್ಯಾತ ಕಾರ್ನಾಟಕ ಛಂದಸ್ಸುಗಳನ್ನು ಕವಿಗಳು ಇಲ್ಲಿ ಹೆಚ್ಚಾಗಿ ಬಳಸಿದ್ದು ಈ ಪ್ರಯೋಗದಲ್ಲಿ ಅಡಕವಾದ ಸೊಗಸನ್ನು ಇಲ್ಲಿ ನಿರೂಪಿಸಲಾಗಿರುವುದು.

ಹಿನ್ನೆಲೆ :

ಕನ್ನಡ ನುಡಿ ಮೂಲ ದ್ರಾವಿಡ ಭಾಷೆಯಿಂದ ಕವಲೊಡೆದುದೆಂದು ಹೇಳುತ್ತಾರಷ್ಟೆ? ಹಾಗೆ ಕವಲೊಡೆದುದು ಯಾವಾಗ ಎಂಬುದು ನಿರ್ಧಾರಿತವಾಗಿ ತಿಳಿಯಲು ಸಾಧ್ಯವಿಲ್ಲ. ಇದೇನೆ ಇದ್ದರೂ ಕನ್ನಡ ನುಡಿ ಪ್ರತ್ಯೇಕ ಭಾಷೆಯಾಗಿ ಜನವ ನಾಲಗೆಯ ಮೇಲೆ ನಲಿದಾಡಹತ್ತಿದಂದಿನಿಂದಲೇ ಕನ್ನಡ ಜಾನಪದ ಸಾಹಿತ್ಯ ಕುದುರಹತ್ತಿತೆಂದು ಊಹಿಸಬಹುದಾಗಿದೆ. ಕನ್ನಡಜನ ಪದನರಿದು ನುಡಿಯಬಲ್ಲರು; ನುಡಿದುದನರಿದು ಆರಯ್ಯಬಲ್ಲರು; ಹುಟ್ಟಿನಿಂದಲೇ ಚದುರರು; ಕುರಿತು ಓದದೆಯೂ ಕಾವ್ಯಪ್ರಯೋಗ ಪರಿಣತಮತಿಗಳು— ಎಂದು ಮುಂತಾಗಿ ೯ನೆಯ ಶತಮಾನದ ನೃಪತುಂಗನು ಬಣ್ಣಿಸಿದ್ದಾನಷ್ಟೆ? ಈ ಬಣ್ಣನೆಯಲ್ಲಿ ಸತ್ಯಾಂಶವಿಲ್ಲದಿಲ್ಲ. ನೃಪತುಂಗ ಪೂರ್ವದ ಹಳಗನ್ನಡದಲ್ಲಿ ಅಚ್ಚಗನ್ನಡ ಪದ್ಧತಿಯ ಇಲ್ಲವೆ ದ್ರಾವಿಡ ಪದ್ಧತಿಯ ಕಾವ್ಯಮಾರ್ಗವೊಂದು ಹುಟ್ಟಿ ಬೆಳೆದಿರಬೇಕು. ನೃಪತುಂಗ, ನಾಗವರ್ಮರ ಮತದಂತೆ ಚತ್ತಾಣ, ಬೆದಂಡೆ, ಪದ, ಮೆಲ್ವಾಡು, ಬಾಜನೆಗಬ್ಬ, ಪಾಡು, ಪಾಡುಗಬ್ಬ—ಇವೇ ಮೊದಲಾದ ಕಾವ್ಯಪ್ರಕಾರಗಳು ಈ ಕಾಲದಲ್ಲಿ ರೂಢಿಗೆ ಬಂದಿದ್ದವೆಂದು ತಿಳಿಯಲವಕಾಶವಿದೆ. ಈ ಕಾವ್ಯಪ್ರಕಾರಗಳು ಹೆಚ್ಚಾಗಿ ಕಂದ ಪದ್ಯಗಳಿಂದ ರಚಿತವಾಗಿ ಅಲ್ಲಲ್ಲಿ ಅಕ್ಕರ, ಚವುಪದಿ, ಗೀತಿಕೆ, ತಿವದಿ ಮೊದಲಾದ ಅಚ್ಚಗನ್ನಡ ವೃತ್ತಗಳನ್ನೂ 'ಪೆಱತೊಂದಱಕೆಯ ವೃತ್ತಜಾತಿ'ಗಳನ್ನೂ ಒಳಗೊಂಡು ಚೆಲುವಾಗಿದ್ದುವೆಂದು ತಿಳಿದುಬರುತ್ತಿದೆ. ಅಲ್ಲದೆ ಇವು ತಾಳ—ಲಯ ಬದ್ಧವಾಗಿ ಹಾಡಲೂ ಯೋಗ್ಯವಾಗಿದ್ದುವೆಂದು ಕಂಡುಬರುವುದು. ಯಕ್ಷಗಾನ, ಲಾವಣಿಪದ, ಗೋವಿನ ಹಾಡು, ಜೋಗಿ- ಕೊರವಂಜಿಗಳ ತ್ಯಾಗಮಾನ ಪದ್ಧತಿಯ ಹಾಡು, ವಚನ, ರಗಳೆ, ಷಟ್ಪದಿ, ಸಾಂಗತ್ಯ,— ಮುಂತಾದವುಗಳಲ್ಲೆಲ್ಲ ಪ್ರಾಚೀನ ಕನ್ನಡ ಛಂದಸ್ಸಿನ ಮಟ್ಟುಗಳ ಸುಳಿವುಗಳನ್ನು ಕಾಣಬಹುದಾಗಿದೆ. ಚತ್ತಾಣ, ಬೆದಂಡೆಗಬ್ಬಗಳ ಸ್ವರೂಪವೆಂಥದಿತ್ತೊ— ಇಂದು ಅವು ನಮಗೆ ಕಾಣಸಿಗವು. ಆದರೆ ಅವುಗಳಲ್ಲಿಯ ಕಂದಪದ್ಯಗಳ ಪ್ರಾಬಲ್ಯವನ್ನು ಗಮನಿಸಿದಲ್ಲಿ ಆ ಕಾಲದ ಕನ್ನಡ ಜಾನಪದ ಸಾಹಿತ್ಯವು ಪ್ರಾಕೃತದ ಪ್ರಭಾವದಿಂದ ಪರಿಷ್ಕಾರಗೊಂಡು ಈ ಕಾವ್ಯ ಪ್ರಭೇದಗಳಾಗಿ ಪರಿಣಮಿಸಿರಬಹುದೆಂದು ಹೇಳಬಹುದಾಗಿದೆ. ಇದೇನೆ ಇರಲಿ, ಆನಂತರ ಎಂದರೆ ನೃಪತುಂಗನಿಗಿಂತ ಮುಂಚೆ ಒಂದೆರಡು ಶತಮಾನಗಳಿಂದ ನಿರ್ಮಿತವಾದ ಹಳಗನ್ನಡ ಕಾವ್ಯನಿರ್ಮಿತಿಗೆ ಸಂಸ್ಕೃತ ಸಾಹಿತ್ಯವೇ ಸ್ಫೂರ್ತಿಯ ಉಗಮವಾಗಿತ್ತೆಂಬುದು ಮಾತ್ರ ಸುಸ್ಪಷ್ಟವಿದೆ. ಸಂಸ್ಕೃತದೊಂದಿಗೆ ಕನ್ನಡದ ಕಸಿಮಾಡುವುದೇ ಆ ಕಾಲದ ಕನ್ನಡ ಸಾಹಿತ್ಯ ನಿರ್ಮಿತಿಯ ಒಂದು ಮುಖ್ಯ ಲಕ್ಷಣವಾಗಿತ್ತು. ಇದರ ಫಲವೇ ಚಂಪೂಕೃತಿಗಳ ಹುಟ್ಟು.

## ಚಂಪೂ ರೂಪದ ತಳಹದಿ

ಏಳನೆಯ ಶತಕದ ಸುಮಾರಿಗೆ ಸಂಸ್ಕೃತದಲ್ಲಿ ಸಕಲ ಲಕ್ಷಣ ಸಂಪನ್ನವಾದ ಸಾಹಿತ್ಯ ಸಿದ್ಧಿ ಶಿಖರಕ್ಕೆ ಮುಟ್ಟಿತ್ತು. ಭಾಸನಿಂದ ಬಾಣ ಕವಿಯ ವರೆಗೆ ಅನೇಕ ಶ್ರೇಷ್ಠ ಕವಿಗಳು ಉದ್ಭವಿಸಿ ಉತ್ತಮೋತ್ತಮ ಕೃತಿಗಳನ್ನು ಗದ್ಯ- ಪದ್ಯಗಳೆರಡರಲ್ಲೂ ನಿರ್ಮಿಸಿದ್ದರು. ಈ ಕಾಲದ ಕನ್ನಡಕವಿಗಳು ಸಂಸ್ಕೃತ ಕಾವ್ಯಾಭ್ಯಾಸವನ್ನು ಕೂಲಂಕಷವಾಗಿ ಮಾಡುತ್ತಿದ್ದರಲ್ಲದೆ ಅಂಥ ಕಾವ್ಯಶೈಲಿಯ ಮಟ್ಟವನ್ನು ಕನ್ನಡಕ್ಕೂ ತಂದುಕೊಡಬೇಕೆಂಬ ಹೆಬ್ಬಯಕೆ ಉಳ್ಳವರಾದುದು ಸಹಜ. ಹಳಗನ್ನಡ ಕಾಲವನ್ನು ಸ್ಥೂಲವಾಗಿ ಕ್ರಿ. ಶ. ೯ನೆಯ ಶತಕದಿಂದ ೧೩ನೆಯ ಶತಕದ ವರೆಗೆಂದು ಹೇಳಲಾಗುತ್ತಿದ್ದರೂ 'ಕವಿರಾಜ ಮಾರ್ಗ' ಮತ್ತು ಕನ್ನಡ ಶಾಸನಗಳ ಆಧಾರದಿಂದ ಈ ಕಾವ್ಯಕಾಲವು ನೃಪತುಂಗನಿಗಿಂತ ಕನಿಷ್ಠ ಎರಡು ಶತಮಾನಗಳ ಮೊದಲೆ ಆರಂಭವಾಗಿರಬೇಕೆಂದು ಊಹೆಮಾಡಬಹುದಾಗಿದೆ. ಅಂತೂ ಐದಾರು ನೂರು ವರುಷಗಳ ಸುದೀರ್ಘ ಕಾವ್ಯ ಕೃಷಿಯ ಫಲವೇ ಕನ್ನಡ ಚಂಪೂಕೃತಿಗಳ ಕಾವ್ಯ ಸಂಪತ್ತು. ಉಭಯ ಭಾಷಾವಿಶಾರದರೆಂದು ಬಿರುದಾಂಕಿತರಾಗಿದ್ದ ಅಂದಿನ ಹಳಗನ್ನಡ ಕವಿಗಳು ಸಂಸ್ಕೃತದ ಮಹಾಕಾವ್ಯಗಳಿಗೆ ಸರಿದೊರೆಯಾದ ಕೃತಿಗಳನ್ನು ಕನ್ನಡದಲ್ಲಿ ಗದ್ಯ-ಪದ್ಯಾತ್ಮಕವಾದ ಚಂಪೂರೂಪದಲ್ಲಿ ರಚಿಸತೊಡಗಿದರು. ಪದ, ಅರ್ಥ, ಭಾವ, ಅಲಂಕಾರ, ಕವಿಸಮಯ, ರಸ, ಧ್ವನಿ—ಇತ್ಯಾದಿ ಕಾವ್ಯಾಂಶಗಳಲ್ಲಿ ಕನ್ನಡ ಕವಿಗಳು ಬಹುಮಟ್ಟಿಗೆ ಸಂಸ್ಕೃತ ಕಾವ್ಯಮಾರ್ಗವನ್ನೇ ತುಳಿಯಹತ್ತಿದರಲ್ಲದೆ ಛಂದಸ್ಸಿನಲ್ಲೂ ಸಂಸ್ಕೃತದ ವೃತ್ತಗಳನ್ನೇ ಹೆಚ್ಚಾಗಿ ಅವಲಂಬಿಸತೊಡಗಿದರು. ದ್ರಾವಿಡಪದ್ಧತಿಯ ಬ್ರಹ್ಮ, ವಿಷ್ಣು, ರುದ್ರಗಣಘಟಿತವಾದ ಕನ್ನಡ ಮಟ್ಟುಗಳಲ್ಲಿ ಪಿರಿಯಕ್ಕರ, ರಗಳೆಗಳಂತಹ ಒಂದೆರಡು ವೃತ್ತಜಾತಿಗಳನ್ನು ವೈವಿಧ್ಯಕ್ಕಾಗಿ ಮಾತ್ರ ತಮ್ಮ ಚಂಪೂ ಕೃತಿಗಳಲ್ಲಿ ಅಲ್ಲಲ್ಲಿ ಬಳಸಿಕೊಂಡರು. ಒಟ್ಟಿನಲ್ಲಿ, ಕನ್ನಡದ ಆದಿಕವಿಯೆನಿಸಿದ ಆದಿಪಂಪನಿಂದ ಹರಿಹರನವರೆಗೆ ಎಲ್ಲ ಕವಿಗಳೂ ನಡೆದುಬಂದ ದಾರಿಯೆಂದರೆ ಕಂದ ಹಾಗೂ ಸಂಸ್ಕೃತ ವೃತ್ತಭೂಯಿಷ್ಠವಾದ ಚಂಪೂಕಾವ್ಯಮಾರ್ಗ. ಈ ಚಂಪೂಕಾವ್ಯಪರಂಪರೆ ೧೩ನೆಯ ಶತಕದಿಂದ ಕುಗ್ಗುತ್ತ ಬಂದಿತಾದರೂ ಅದರ ಪ್ರಭಾವವು ೧೭ನೆಯ ಶತಕದವರೆಗೆ ಹಬ್ಬಿರುವುದು ಅದರ ಸತ್ತ್ವ ವಿಶೇಷವನ್ನೆ ಎತ್ತಿತೋರುತ್ತದೆ.

## ಕಂದ

ಕಂದ ವೃತ್ತವು ಚಂಪೂಕೃತಿಗಳಲ್ಲಿ ವಿಶೇಷವಾಗಿ ಬಳಸಲ್ಪಟ್ಟಿರುವುದು ಗಮನಿಸತಕ್ಕ ಸಂಗತಿ. ಇದು ಸಂಸ್ಕೃತದ ಆರ್ಯಾ ಅಥವಾ ಗಾಥಾ ವೃತ್ತವು ಪ್ರಾಕೃತದಲ್ಲಿ ಆರ್ಯಗೀತ ಅಥವಾ ಸ್ಕಂಧಕ ಎಂಬ ೬೪ ಮಾತ್ರೆಗಳ ವೃತ್ತವಾಗಿದ್ದು ಕನ್ನಡ

ಮತ್ತು ತೆಲುಗು ಕಾವ್ಯಗಳಲ್ಲಿ ಕಂದವೆಂಬ ಹೆಸರಿನಿಂದ ಸುಪ್ರಸಿದ್ಧವಿದೆ. ಕನ್ನಡ ಚಂಪೂಕೃತಿಗಳಲ್ಲಿ ನಾಲ್ಕರಲ್ಲಿ ಮೂರುಪಾಲು ವೃತ್ತಗಳು ಕಂದ ಪದ್ಯಗಳೇ ಇರುವವು. ಸಂಸ್ಕೃತ ಮಹಾಕಾವ್ಯಗಳಲ್ಲಿ ತೀರ ಕ್ವಚಿತ್ತಾಗಿ ಕಂಡುಬರುವ ಈ ವೃತ್ತವು ಕನ್ನಡ ಕಾವ್ಯಗಳಲ್ಲಿ ಇಷ್ಟೊಂದು ಮನ್ನಣೆ ಪಡೆದುದಕ್ಕೆ ಇದು ಹಳಗನ್ನಡ ನುಡಿವಳಿಕೆಗೆ ಸರಿಯಾಗಿ ಒಗ್ಗುವಂತಿರುವುದೇ ಮೂಲಕಾರಣ. ಅಲ್ಲದೆ ಚಂಪೂಕೃತಿಗಳಲ್ಲಿಯ ಕಥಾನಕವನ್ನು ನೇರವಾಗಿಯೂ ಚುರುಕಾಗಿಯೂ ವಿವರಿಸಲು ಚಿಕ್ಕ ಚಿಕ್ಕ ಪಾದಗಳುಳ್ಳ ಈ ವೃತ್ತವು ಹೆಚ್ಚು ಪ್ರಯೋಜನಕಾರಿಯಾಗಿದೆ. ಹಳಗನ್ನಡ ಪದಗಳ ಪವಣಿಕೆಗೆ ಕಂದ ವೃತ್ತವು ಹೇಗೆ ಬಿಗುಹನ್ನು ಒದವಿಸಬಲ್ಲದೆಂಬುದಕ್ಕೆ ರನ್ನನ ಗದಾಯುದ್ಧದ ಈ ಕೆಲ ಪದ್ಯಗಳನ್ನು ಉದಾಹರಿಸಬಹುದು. ಕುರುಕ್ಷೇತ್ರದಲ್ಲಿ ಭೀಮನು ಗೆಯ್ದ ವೈರಿನಾಶದ ಚಿತ್ರವು ಇಲ್ಲಿ ಸ್ಫುಟವಾಗಿ ಮೂಡಿದೆ.

ಕೆಲರಂ ನುಣ್ಣನೆ ನೊಣೆದಂ।
ಕೆಲರಂ ಪಿಡಿದಡಸಿ ನುಂಗಿದಂ
ಕುರುಕುಲರಂ॥
ಕೆಲರಂ ಸೌಳನೆ ಸೀಳ್ದಂ।
ಕೆಲರಂ ಮಾರುತಿ ಜವಂಗೆ ಬಾಣ-
ಸುಗೆಯ್ದಂ॥
ಕೆಲರಂ ಕುರಿದರಿದರಿದಂ।
ಕೆಲಂಬರಂ ಸಂಧಿಸಂಧಿಯಂ ಪರಿಯೆಚ್ಚಂ॥
ಕೆಲರಂ ದೆಸೆವಲಿಗೆಯ್ದಂ।
ಕೆಲರಂ ಭುಜಬಲದಿನರೆದು
ಶಿಲೆಯೊಳ್ಪೊಯ್ದಂ॥
ಬಡಿಗೊಂಡು ಗೋಣೆಪಣ್ಣಂ।
ಬಡಿವಂತಿರೆ ಪವನಸೂನು
ಪೆಂಕುಳಿನಾಯಂ॥
ಬಡಿವಂತಿರೆ ಪಾಳುಡುವಂ।
ಬಡಿವಂತಿರೆ ಬಡಿದನನಿಬರಂ ಕೌರವರಂ॥

ಹಳಗನ್ನಡದಂತೆಯೆ ಸಂಸ್ಕೃತ ಪದಗಳೂ ಕಂದದಲ್ಲಿ ಬಲು ಅಚ್ಚುಕಟ್ಟಾಗಿ ಹೊಂದಿಕೊಳ್ಳುವವು. ರನ್ನನ ಈ ಇನ್ನೊಂದು ಪದ್ಯವನ್ನು ಗಮನಿಸಿರಿ. ದುಶ್ಶಾಸನನನ್ನು ಇನ್ನೂ ಕೊಲ್ಲದೆ ಇರುವ ಭೀಮನನ್ನು ಕುರಿತು ಪಾಂಚಾಲಿಯಾಡಿದ ಕ್ರೋಧದ ಕಿಡಿನುಡಿ ಈ ಕಂದದಲ್ಲಿ ಸಿಡಿದಿದೆ:

ಖಳದುಶ್ಶಾಸನ ವಕ್ಷ— ।
ಸ ಳೋಚ್ಚಳತ್ ಕೃಷ್ಣ ರಕ್ತಜಲದಿಂ
ಕೋಪಾ॥
ನಳನಂ ಮುನ್ನಿಸದಿನ್ನುಂ।
ಗಳಗಳಿತ ಸಕೋಪನಿರ್ಪ ತೆರದಿಂದಿರ್ದೆ॥

ಕನ್ನಡ ಹಾಗೂ ಸಂಸ್ಕೃತ ಪದಗಳ ಸರಿಸಮನಾದ ಹೊಂದಾವಣೆಯೂ ಕಂದದಲ್ಲಿ ಚೆಲುವಾಗಿ ಸಿದ್ಧಿಗೊಳ್ಳುವುದು. ಭೀಮನು ಪಾಂಚಾಲಿಯನ್ನು ಸಮಾಧಾನ ಪಡಿಸುವ ರನ್ನನ ಈ ಕಂದದ ರಚನಾವೈಖರಿಯನ್ನು ಕೇಳಿರಿ :—

ಊರುಗಳನುಡಿವೆನೊದೆವೆಂ।
ಕೌರವಪರಿವೃಢನ ಮಕುಟವಂ
ವೇಣೀಸಂ॥
ಹಾರಂ ಮಾಡುವೆನದರಿಂ
ಭಾರಮುದಿನಿತಲ್ಲದೆನ್ನ ಪರಿಭವ ಭಾವಂ॥
ಗಳಿಯಿಸುತಿರೆ ಕಬರಿಭರಂ।
ಗಳಿಯಿಸುತಿರೆ ನಯನವಾರಿ ನಿನ್ನಾನನದಿಂ॥
ನಳಿನಾನನೆ ನೀನಿರೆ ಕುರು।
ಕುಳಾಂತಕಂ ಗಳಿತಕೋಪನೇ
ಕಲಿಭೀಮಂ॥

ಒಂದು ಕಥಾಸನ್ನಿವೇಶವನ್ನು ಭಾವಪೂರ್ಣವಾಗಿಯೂ ಚಿತ್ರವತ್ತಾಗಿಯೂ ನಿರೂಪಿಸುವಲ್ಲಿ ಕಂದವೃತ್ತವು ಸಾಧಿಸುವ ಕವಿತ್ವಸಿದ್ಧಿ, ಹಿರಿದಾಗಿದೆ. ಆದರೆ ಕಂದವೃತ್ತವು ಶ್ರೇಷ್ಠ ಕವಿಯ ಪಳಗಿದ ಕೈಯಲ್ಲಿ ಮಾತ್ರ ಕಳೆಗೊಳ್ಳುವುದಲ್ಲದೆ ಇನ್ನುಳಿದವರ ಕೈಯಲ್ಲಿ ಸಪ್ಪೆ, ಸಪ್ಪೆ! ಅಲ್ಲದೆ ಹೊಸಗನ್ನಡ ನುಡಿಗೂ ಕಂದದ ಧಾಟಿಗೂ ಹೊಂದಿಕೆಯಾಗದು. ಅದಕ್ಕೆಂದೇ ಹಳಗನ್ನಡ ಕಾಲದ ನಂತರ ಅದನ್ನುಳಿಸಿಕೊಳ್ಳುವುದು ಕನ್ನಡ ಕವಿಗಳಿಗೆ ದುಸ್ತರವೆನಿಸಿತು.

## ಖ್ಯಾತಕರ್ಣಾಟಕ ವೃತ್ತಗಳು :

ಚಂಪೂ ಕೃತಿಗಳಲ್ಲಿ ಕಂದ ವೃತ್ತದ ತರುವಾಯದ ಸ್ಥಾನವು ಸಂಸ್ಕೃತದ ಅಕ್ಷರವೃತ್ತಗಳಿಗುಂಟು. ಅದರಲ್ಲೂ ಖ್ಯಾತಕರ್ಣಾಟಕವೆಂದು ಹೆಸರಾದ ಉತ್ಪಲ,ಶಾರ್ದೂಲ, ಸ್ರಗ್ಧರೆ, ಚಂಪಕ, ಮತ್ತೇಭ, ಮಹಾಸ್ರಗ್ಧರೆ–ಎಂಬೀ ಆರು ವೃತ್ತಗಳ ಸುಳಿದಾಟವೇ ಹೆಚ್ಚು. ಸಂಸ್ಕೃತವೃತ್ತಗಳು ಭಾವನಿರೂಪಣೆ, ರಸಪುಷ್ಟಿ, ಬಣ್ಣನೆಯ ಬೆಡಗುಗಳನ್ನು ಪ್ರಕಟಿಸುವಲ್ಲಿ ಅನ್ಯಾದೃಶವಾಗಿ ಪರಿಣಾಮಕಾರಿ.

ಖ್ಯಾತಕರ್ಣಾಟಕ ವೃತ್ತಗಳಲ್ಲಿ ಉತ್ಪಲ, ಶಾರ್ದೂಲ, ಸ್ರಗ್ಧರೆಗಳೇ ಮೂಲವೃತ್ತಗಳು. ಇವುಗಳ ಮೊದಲ ಗುರುವಿಗೆ ಪ್ರತಿಯಾಗಿ ಎರಡು ಲಘುಗಳನ್ನಿರಿಸಿ ಕ್ರಮವಾಗಿ ಚಂಪಕ, ಮತ್ತೇಭ, ಮಹಾಸ್ರಗ್ಧರೆಗಳನ್ನು ಹುಟ್ಟಿಸಿಕೊಳ್ಳಲಾಗಿದೆ. ಆದ್ದರಿಂದಲೇ ಉತ್ಪಲ-ಚಂಪಕ, ಶಾರ್ದೂಲ-ಮತ್ತೇಭ ಸ್ರಗ್ಧರೆ-ಮಹಾಸ್ರಗ್ಧರೆಯೆಂಬೀ ಮೂರು ಜತೆಯ ವೃತ್ತಗಳು ರಸ-ಭಾವಗಳ ಅಭಿವ್ಯಕ್ತಿಯಲ್ಲಿಯೂ ತಾಳಲಯಗಳ ಧಾಟಿಯಲ್ಲೂ ಒಂದನ್ನೊಂದು ಬಹುಮಟ್ಟಿಗೆ ಹೋಲುವವು. ಆದರೂ ಲಘು–ಗುರು ವಿನ್ಯಾಸದಲ್ಲಿರುವ ಸೂಕ್ಷ್ಮ ಭೇದಗಳಿಂದಾಗಿ ರಸ-ಭಾವಪ್ರತೀತಿಯಲ್ಲೂ ತಾಳ–ಲಯ ಶ್ರುತಿಗಳಲ್ಲೂ ಸೂಕ್ಷ್ಮ ವ್ಯತ್ಯಾಸಗಳನ್ನೂ ವೈವಿಧ್ಯವನ್ನೂ ಗುರುತಿಸಬಹುದಾಗಿದೆ.




## ವೃತ್ತ ಮತ್ತು ರಸಭಾವಪ್ರತೀತಿ

ಪದ್ಯದ ವೃತ್ತಕ್ಕೂ ರಸ-ಭಾವಪ್ರತೀತಿಗೂ ಸಂಬಂಧವುಂಟೆ? ಇದ್ದುದಾದರೆ ಈ ಸಂಬಂಧವನ್ನು ಗಮನಿಸಿ ನಮ್ಮ ಕವಿಗಳು ಕಾವ್ಯರಚನೆ ಮಾಡಿದ್ದಾರೆಯೆ?— ಈ ಪ್ರಶ್ನೆಗಳು ಛಂದಃಶಾಸ್ತ್ರದ ಅಭ್ಯಾಸಿಗಳಿಗೆ ಹುಟ್ಟುವುದು ಸ್ವಾಭಾವಿಕ. ಈ ದೃಷ್ಟಿಯಿಂದ ನಮ್ಮ ಚಂಪೂಕೃತಿಗಳನ್ನು ಅವಲೋಕಿಸಿದಲ್ಲಿ ಶಾರ್ದೂಲ—ಮತ್ತೇಭ ವಿಕ್ರೀಡಿತಗಳೂ ಸ್ರಗ್ಧರೆ–ಮಹಾಸ್ರಗ್ಧರೆಗಳೂ ವೀರ, ಅದ್ಭುತ, ರೌದ್ರ, ಕರುಣ, ಬೀಭತ್ಸ, ಭಯಾನಕ — ಮುಂತಾದ ಚಿತ್ತವಿಸ್ತಾರ, ಚಿತ್ತಕ್ಷೋಭ, ಚಿತ್ತವಿಕ್ಷೇಪಕಾರಿಗಳಾಗಿರುವ ರಸ-ಭಾವಗಳ ಪ್ರಕಟನೆಗೆ ತಕ್ಕವಾಗಿವೆಯೆಂದು ಕಂಡುಬರುವುದು. ಅದೇ, ಉತ್ಪಲಚಂಪಕಮಾಲೆಗಳು ಅವುಗಳ ಹೆಸರುಗಳೇ ಸೂಚಿಸುವಂತೆ ಚಿತ್ತವಿಕಾಸಕಾರಿಗಳಾಗಿರುವ

ಶೃಂಗಾರ-ಹಾಸ್ಯಗಳಂತಹ ಕೋಮಲ ರಸ-ಭಾವಗಳ ನಿರೂಪಣೆಗೆ ಯೋಗ್ಯವಾಗಿವೆ. ಹೀಗೆ ಹೇಳಿದ ಮಾತ್ರಕ್ಕೆ ಈ ವೃತ್ತಗಳು ಇತರ ರಸಭಾವಗಳ ನಿರೂಪಣೆಗೆ ವಾಹಕಗಳಾಗಿಲ್ಲವೆಂದಲ್ಲ. ಮೃದು ಪದಬಂಧದಿಂದ ಮತ್ತೇಭ-ಶಾರ್ದೂಲವಿಕ್ರೀಡಿತಗಳಲ್ಲೂ ಕೋಮಲ ರಸ-ಭಾವಗಳನ್ನು ಮೂಡಿಸುವ ಪ್ರಯತ್ನಗಳು ನಡೆಯದೆ ಇಲ್ಲ. ಹಾಗೆಯೆ ಓಜೋ-ವ್ಯಂಜಕ ವಚನ ರಚನೆಯಿಂದ ಉತ್ಪಲ-ಚಂಪಕಮಾಲೆಗಳಲ್ಲೂ ಕರ್ಕಶ ರಸ-ಭಾವಗಳ ಚಿತ್ರಣವನ್ನು ಕಾಣಬಹುದಾಗಿದೆ. ಆದರೆ ವೃತ್ತಗಳಲ್ಲಿಯ ನಿರ್ದಿಷ್ಟ ಗುರು-ಲಘುವಿನ್ಯಾಸದಿಂದುತ್ಪನ್ನವಾಗುವ ತಾಳ-ಲಯಗಳ ವೈಶಿಷ್ಟ್ಯದೊಂದಿಗೆ ಅಲ್ಲಿ ಹೆಣೆದ ಪದರಚನಾಕ್ರಮವೂ ಅಂದವಾಗಿ ಹೊಂದಿಕೊಳ್ಳುವುದಾದರೆ ಆಗ ಉಂಟಾಗುವ ರಸ-ಭಾವಸೌಷ್ಠವವು ಅತ್ಯುತ್ಕಟವೂ ಹೃದ್ಯವೂ ಎನಿಸುವದರಲ್ಲಿ ಸಂದೇಹವಿಲ್ಲ.

## ವಿಕ್ರಮಾರ್ಜುನವಿಜಯದಲ್ಲಿ

ಆದಿಪಂಪನು ತನ್ನ ವಿಕ್ರಮಾರ್ಜುನ ವಿಜಯದಲ್ಲಿ ಬನವಾಸಿಯ ನಿಸರ್ಗ ಸೌಂದರ್ಯವನ್ನು ಎದೆದುಂಬಿ ಬಣ್ಣಿಸಿದುದು ಉತ್ಪಲ-ಚಂಪಕಮಾಲೆಗಳಲ್ಲಿಯೇ. ಬನವಾಸಿಯ ಮಾಮರ, ಎಲೆವಳ್ಳಿ, ಪೂತ-ಜಾತಿ-ಸಂಪಗೆಗಳು, ಕುಕಿಲ್ವ ಕೋಗಿಲೆ, ಪಾಡುವ ತುಂಬಿ, ಕೂಡುವನಲ್ಲರು, ತ್ಯಾಗ-ಭೋಗಗಳಿಗಾಗರವಾದ ಮಾನಸರು, ತೆಂಕಣಗಾಳಿ, ಒಳ್ನುಡಿ, ಗೇಯ, ಬಿರಿದಮಲ್ಲಿಗೆ, ಪರಿಪಕ್ವವಾದ ಶೃಂಗಾರ, ಮಧುಮಹೋತ್ಸವಾದಿಗಳಿಗೆ ಪಂಪನ ಕಣ್ಮನಗಳು ಮಾರುಹೋಗಿವೆ; ಎದೆ ಸೋತಿದೆ. ಕವಿಯ ದೇಶಾಭಿಮಾನವೂ ಪ್ರಕೃತಿ ಪ್ರೇಮವೂ ರಸಿಕ ಹೃದಯಗಳಲ್ಲಿ ರಸವೊಸರುವಂತೆ ತಿರುಳ್ಗನ್ನಡದಲ್ಲಿ ತಿಳಿಪೊನಲಾಗಿ ಹರಿದ ಚೆಲುವನ್ನು ಗಮನಿಸಿರಿ:

ಚಂ॥ ಸೊಗಯಿಸಿ ಬಂದ ಮಾಮರನೆ
ತಳ್ತೆಲೆವಳ್ಳಿಯೆ ಪೂತಜಾತಿ ಸಂ।
ಪಗೆಯೆ ಕುಕಿಲ್ವಕೋಗಿಲೆಯೆ ಪಾಡುವ
ತುಂಬಿಯೆ ನಲ್ಲರೊಳ್ಮೊಗಂ॥
ನಗೆವೊಗದೊಳ್ ಪಳಂಚಲೆಯೆ ಕೂಡುವ
ನಲ್ಲರೆ ನೋಳ್ಪೊಡಾವ ಬೆ-।
ಟ್ಟುಗಳೊಳಮಾವ ನಂದನವನಂಗಳೊಳಂ
ಬನವಾಸಿ ದೇಶದೊಳ್॥

ಉ॥ ಚಾಗದ ಭೋಗದಕ್ಕರದ ಗೇಯದ
ಗೊಟ್ಟಿಯಲಂಪಿನಿಂಪುಗ-।
ಳ್ಗಾಗರಮಾದ ಮಾನಸರೆ ಮಾನಸರಂತವ-
ರಾಗಿ ಪುಟ್ಟಲೇ-॥
ನಾಗಿಯುಮೇನೊ ತೀರ್ದಪುದೆ ತೀರ-
ದೊಡಂ ಮರಿದುಂಬಿಯಾಗಿ ಮೇಣ್,
ಕೋಗಿಲೆಯಾಗಿ ಪುಟ್ಟುವುದು
ನಂದನದೊಳ್ ಬನವಾಸಿ ದೇಶದೊಳ್॥

ಉ॥ ತೆಂಕಣಗಾಳಿ ಸೋಂಕಿದೊಡಮೊಳ್ನುಡಿ
ಗೇಳ್ಪೊಡಮಿಂಪನಾಳ್ದ ಗೇ-।
ಯಂ ಕಿವಿವೊಕ್ಕೊಡಂ ಬಿರಿದ ಮಲ್ಲಿಗೆ-
ಗಂಡೊಡಮಾದ ಕೆಂದಲಂ॥
ಪಂ ಗಿಡೆಗೊಂಡೊಡಂ ಮಧುಮಹೋ-
ತ್ಸವ ಮಾದೊಡಮೇನನೆಂಬೆನಾ।
ರಂಕುಸವಿಟ್ಟೊಡಂ ನೆನೆವುದೆನ್ನ ಮನಂ
ಬನವಾಸಿದೇಶಮಂ॥

ರಾಜಶೇಖರ ವಿಳಾಸದಲ್ಲಿ ಉತ್ಪಲಮಾಲಾ ವೃತ್ತವನ್ನು ಶೃಂಗಾರ—ಹಾಸ್ಯ ರಸಗಳ ನಿರೂಪಣೆಗೆ ಬಳಸಿಕೊಂಡ ಷಡಕ್ಷರಕವಿಯ ಔಚಿತ್ಯಪ್ರಜ್ಞೆ ಶ್ಲಾಘ್ಯವಾದುದು. ಮೇರುಪರ್ವತದಲ್ಲಿ ವಾಸವಾಗಿದ್ದ ತಪೋಧನರ ಯಾಗಶಾಲೆಯೊಂದರಲ್ಲಿ ಒಂದು ಮಂಗವು ಹೋಮಕುಂಡದ ಹೊರಗೆ ಬಿದ್ದಿರುವ ಕೆಂಡವನ್ನು ಗೇರುಹಣ್ಣೆಂದು ಭ್ರಮಿಸಿ ಅದನ್ನು ಮುಟ್ಟಿ ಕೈಸುಟ್ಟುಕೊಂಡು ಊಪೆಂದು ಕೈಯೂದಿಕೊಳ್ಳುತ್ತ ಅಲ್ಲಿಯೇ ನಿಂತಿದ್ದ ಮುನಿಪುತ್ರರನ್ನು ಕಂಡು ಹುಬ್ಬೆಟ್ಟು ಹಲ್ಕಿರಿದು ನಗಿಸುತ್ತಿದ್ದುದರ ವಾಸ್ತವ ಚಿತ್ರದ ಸ್ವಾರಸ್ಯ ಇಲ್ಲಿದೆ.

ಉ॥ ಹೋಮದ ಕುಂಡದಿಂ ಕಡೆಸಿಡಿಲ್ದು
ಪೊದಲ್ದಿರೆ ಕಂಡು ಕೆಂಡಮಂ,
ಕಾಮಿಸಿ ಗೇರಹಣ್ಣೆನುತೆ ಪಣ್ಣನೆ ಪೊರ್ದಿ
ತುಡುಂಕೆ ಕೈಸುಡಲ್॥
ಭೂಮಿಗೆ ತಗ್ಗಿ ಕುಗ್ಗಿ ಮಿಗೆ ಪಲ್ದಿರೆ
ದುಃಪೆನುತೂದಿ ಪುರ್ಬಿದು।
ತ್ತಾಮುನಿಪುತ್ರರಂ ನಗಿಸಿ ಹರ್ರೆನುತೇಡಿಸಿ
ತೊಂದು ಕೋಡಗಂ॥

ಅರವಟ್ಟಿಗೆಯಲ್ಲಿ ಕುಡಿಯಲು ನೀರು ಹನಿಸುವ ಹರೆಯದ ನೀರೆಯರ ಅಂಗಾಂಗ ಸೌಂದರ್ಯವನ್ನು ಕಣ್ಣುಗಳಿಂದ ಹೀರುತ್ತ ಬೊಗಸೆಯ ನೀರನ್ನು ಕುಡಿಯದೆ ಬೆಚ್ಚು ಬೊಗದಿಂದ ಬಾಯ್ಬಿಟ್ಟು ನಿಂತಿದ್ದ ದಾರಿಕಾರನೊಬ್ಬನ ಚಿತ್ರದಲ್ಲಿ ಶೃಂಗಾರ ಹಾಸ್ಯಗಳೆರಡರ 'ಭಾವಶಬಲತೆ'ಯನ್ನು ಷಡಕ್ಷರ ಕವಿ ರಾಜಶೇಖರವಿಳಾಸದಲ್ಲಿ ಕಲ್ಪಿಸಿದ ಚಮತ್ಕಾರ ಇನ್ನೊಂದು ಉತ್ಪಲಮಾಲೆಯಲ್ಲಿದೆ.

ಉ॥ ನೀರೆರೆವಚ್ಚಜವ್ವನೆಯ ಮೇಲುದು
ಮೆಲ್ಲನೆ ಜಾರೆ ಗೌರರು-।
ಕ್ಚಾರು ಕುಚಂಗಳೆಂಬ ಕಳಶಂಗಳ ಕಾಂತಿ
ಪಯಃಪ್ರವಾಹಮಂ॥
ಪೀರುತೆ ಕಣ್ಗಳಿಂ ಮರೆದು ನಿರ್ಗುಡಿಮಂದ
ಮನಂದು ನಿಂದು ನಿ-।
ಸ್ಸಾರಮುಖಂ ಮನೋಭವನ ಬಾಣದ
ಬಾರಿಗೆ ಬಂದನಧ್ವಗಂ॥

ಉತ್ಪಲಚಂಪಕಮಾಲೆಗಳಲ್ಲಿ ಚಿತ್ತವಿಕಾಸಕಾರಿಗಳಾದ ಮೃದುಭಾವಗಳ ನಿರೂಪಣೆಯಿಂದ ಹೃದಯವನ್ನರಳಿಸುವ ಪಂಪನು ಮತ್ತೇಭ-ಮಹಾಸ್ರಗ್ಧರೆಗಳಲ್ಲಿ ಪ್ರಕಟಗೊಳಿಸುವ ಚಿತ್ತವಿಕ್ಷೇಪಕಾರಿಯಾದ ರೌದ್ರರಸಪುಷ್ಟಿಯನ್ನು ಈ ಕೆಳಗಿನ ಪದ್ಯಗಳಲ್ಲಿ ಅವಲೋಕಿಸಬಹುದು. ಸಭಾಮಧ್ಯದಲ್ಲಿ ದುಶ್ಯಾಸನನಿಂದ ಮಾನಭಂಗಗೊಂಡ ದ್ರೌಪದಿಯನ್ನು ಭೀಮಸೇನನು ಸಂತೈಸುತ್ತ ಕೈಕೊಳ್ಳುವ ಪ್ರತಿಜ್ಞೆಯ ರೌದ್ರಾಟೋಪವು ಇಲ್ಲಿ ಅಸದೃಶ-ವಾಗ್ವೈಖರಿಯಲ್ಲಿ ಮೂಡಿದೆ:

ಮ॥ಸ್ರ॥ ಕುಡಿವೆಂ ದುಶ್ಶಾಸನೋರಸ್ಥಳಮನ-
ಗಲೆಪೋಳ್ದಾರ್ದು ಕೆನ್ನೆತ್ತರಂ ಪೊ-।
ಕ್ಕುಡಿವೆಂ ಪಿಂಗಾಕ್ಷನೂರುದ್ವಯಮನುರು
ಗದಾಘಾತದಿಂ ನುಚ್ಚುನೂರಾ॥
ಗೊಡೆವೆಂ ತದ್ರತ್ನರಶ್ಮಿಪ್ರಕಟ
ಮಕುಟಮಂ ನಂಬು ನಂಬೆನ್ನ ಕಣ್ಣಿಂ।
ಕಿಡಿಯುಂ ಕೆಂಡಂಗಳುಂ ಸೂಸಿದ
ಪುವಹಿತರಂ ನೋಡಿ ಪಂಕೇಜವಕ್ತ್ರೇ॥



ಮ॥ ಸುರಸಿಂಧುಪ್ರಿಯಪುತ್ರ ಕೇಳ್
ಕಳಸಜಾ ನೀಂ ಕೇಳ್ ಕೃಪಾ ಕೇಳ ಮಂ-।
ದರದಿಂದಂಬುಧಿಯಂ ಕಲಂಕಿದಸುರ
ಪ್ರಧ್ವಂಸಿವೋಲ್ ಬಾಹು ಮಂ॥
ದರದಿಂ ವೈರಿ ಬಲಾಬ್ಧಿ ಘೂರ್ಣಿಸೆ
ಬಿಗುರ್ತೀ ಕೌರವರ್ ಕೂಡೆ ನೂ-।
ರ್ವರುಮಂ ಕೊಲ್ವೆನಿದೆನ್ನ ಪೂಣ್ಕೆ
ನುಡಿದೆಂ ನಿಮ್ಮೀ ಸಭಾಮಧ್ಯದೊಳ್॥

ಅಭಿನವಪಂಪನು ಮತ್ತೇಭವಿಕ್ರೀಡಿತದಲ್ಲಿ ಚಿತ್ತ ವಿಕ್ಷೇಪಕಾರಿಯಾಗಿರುವ ಕರುಣರಸದ ಹೊನಲನ್ನು ಹರಿಯಿಸಿದ ಕೌತುಕವು ರಾಮಚಂದ್ರ ಚರಿತ ಪುರಾಣ ದಲ್ಲಿಯ ಒಂದು ಪದ್ಯದಲ್ಲಿ ತೋರಿದೆ. ಸೀತೆಯನ್ನು ಕಳೆದುಕೊಂಡ ರಾಮಚಂದ್ರನ ಶೋಕಪ್ರವಾಹ ವಿದು. ಸಂಸ್ಕೃತದ ಮೃದುಪದಬಂಧವು ಭಾವ ದೊಡನೆ ತೇಲುತ್ತಿರುವಂತೆ ಭಾಸವಾಗುತ್ತಿದೆ:

ಮ॥ ಕಳಹಂಸಾಲಸಯಾನೆಯಂ ಮೃಗ
ಮದಾಮೋದಾಸ್ಯನಿಶ್ವಾಸೆಯಂ।
ತಳಿರೇ ತಾವರೆಯೋ ಮದಾಳಿಕುಳಮೋ
ಕನ್ನೈದಿಲೇ ಮತ್ತಕೋ-॥
ಕಿಳಮೋ ಕಂಡಿರೆ ಪಲ್ಲವಾಧರೆಯ
ನಂಭೋಜಾಸ್ಯೆಯಂ ಭೃಂಗ ಕುಂ-।
ತಳೆಯಂ ಕೈರವನೇತ್ರೆಯಂ ಪಿಕರವ
ಪ್ರಖ್ಯಾತೆಯಂ ಸೀತೆಯಂ॥

## ಭಕ್ತಿಯ ವೀರಾವೇಶಕ್ಕಾಗಿ ಶಾರ್ದೂಲ ವಿಕ್ರೀಡಿತ

ಗಿರಿಜಾ ಕಲ್ಯಾಣದಲ್ಲಿ ಹರಿಹರ ಕವಿ ಭಕ್ತಿಯ ವೀರಾವೇಶವನ್ನೂ ರಭಸವನ್ನೂ ಶಾರ್ದೂಲ ವಿಕ್ರೀಡಿತಗಳಲ್ಲಿ ಹೊಮ್ಮಿಸಿದ ಬಗೆ ಮಿಗಿಲಾದುದು. ಮಗುವಾಗಿದ್ದ ಗಿರಿಜೆಯನ್ನು ಕರೆದಪ್ಪಿ ಮುಂಡಾಡುವ ಗಿರಿರಾಜ-ಮೇನಾದೇವಿಯವರ ವಾತ್ಸಲ್ಯದ ಆವೇಗದಲ್ಲಿ ಹರಿಹರ ಕವಿ ತನ್ನ ಭವಾನೀಭಕ್ತಿಯ ಉದ್ರೇಕವನ್ನು ಚಿಮ್ಮಿಸಿದ್ದಾನೆ:

ಶಾ॥ ಬಾರೆನ್ನಾಯುಮೆ ಬಾರ ಪುಣ್ಯತತಿಯೇ
ಬಾರೆನ್ನ ಸೌಂದರ್ಯಮೇ।
ಬಾರೆನ್ನಾದಿಯೆ ಬಾರ ಶೈವನಿಧಿಯೇ
ಬಾರೆನ್ನಯ ಪ್ರಾಣವೇ॥
ಬಾರೆನ್ನೊಲ್ಮೆಯೆ ಬಾರತತ್ತ್ವಸುಖವೇ
ಬಾರೆನ್ನ ಮಾತಾಮಹೇ।
ಬಾರೆನ್ನಾಳ್ದಳೆನುತ್ತು ಮೊಲ್ದು ಕರೆದಂ
ಶರ್ವಾಣಿಯಂ ಶೈಳಪಂ॥
ಶಾ॥ ಏನೆನ್ನಾಯುಮೆ ಎನ್ನ ಪಾರಸುಖವೇ
ಏನೆನ್ನ ಪುಣ್ಯಾಬ್ಧಿಯೆ।
ಏನೆನ್ನುತ್ಸವಮೋ ವಿಳಾಸನಿಧಿಯೋ
ಏನೆನ್ನ ಸೌಂದರ್ಯಮೋ॥
ನಾನಾಪರ್ವತದೊಳ್ ವನಪ್ರಕರದೊಳ್
ಸಂಪೂರ್ಣಕಾಸಾರದೊಳ್।
ನೀನೇಕಿಂತಿರಲೇಕೆ ತಾಯೆ ಎನುತುಂ
ಬಂದಪ್ಪಿಕೊಂಡಪ್ಪಿದಳ್॥




ರಾಜಶೇಖರವಿಳಾಸದಲ್ಲಿ ಷಡಕ್ಷರದೇವನು ಸ್ರಗ್ಧರಾ ವೃತ್ತದಲ್ಲಿ ಹರನ ತಾಂಡವನೃತ್ಯವನ್ನು ಕಣ್ಣಿಗೆ ಕಟ್ಟುವಂತೆಯೂ ನೃತ್ಯದ ಪದಘಟ್ಟನೆಯ ಧ್ವನಿ ಕಿವಿಯಲ್ಲಿ ಗುಡುಗುವಂತೆಯೂ ಬಣ್ಣಿಸಿದ್ದಾನೆ. ಸಂಸ್ಕೃತಮಯವಾದ ಗಂಭೀರ ಶೈಲಿ ವೃತ್ತದ ಭಾವ ವ್ಯಂಜಕ ತಾಳ ಲಯಗಳಿಗೆ ಹೊಂದಿಕೊಂಡಿರುವುದರಿಂದ ಭಾವಪುಷ್ಟಿಗೆ ಕಳೆಯೇರಿದೆ.

ಸ್ರ॥ ಸ್ಫೂರ್ಜದ್ಗರ್ಜದ್ಘನಾಡಂಬರ ರವ ಡಮ
ರುಧ್ವಾನವಿಂಬಾಗೆ ಗಂಗಾ।
ವಾರ್ಜಂಗಳ್ ಸೀಕರಂಗಳ್ ಸುರಿಯೆ
ಮೊರೆಯೆ ಸರ್ಪಾಳಿ ಚಂಡೇಭ ಚರ್ಮಂ
ಪರ್ಜನ್ಯಾಭಂ ಕಟೀಮಂಡಳದೆ ಪೊಡರೆ
ಕಾಲಾನಲಾಕ್ಷಿಸ್ಫುರದ್ರೋ।
ಚಿರ್ಜಾಲಂ ಪೊಣ್ಮೆ ದಿಗ್ಭಿತ್ತಿಗಳೊಡಯೆ
ಹರಂ ತಾಂಡವಂ ಗೆಯ್ಯುತಿರ್ದಂ॥

ಚಂಪೂ ಕಾವ್ಯಗಳಲ್ಲಿ ಈ ವರೆಗೆ ವಿವರಿಸಿದ ಕಂದ ಹಾಗೂ ಉತ್ಪಲಮಾಲಾದಿ ಖ್ಯಾತ ಕರ್ಣಾಟಕ ವೃತ್ತಗಳಲ್ಲದೆ ಅಲ್ಲಲ್ಲಿ ಮಾಲಿನಿ, ಪೃಥ್ವಿ, ಶಿಖರಿಣಿ, ಮಂದಾಕ್ರಾಂತ, ಹರಿಣಿ, ಮಲ್ಲಿಕಾಮಾಲೆ, ತರಳ ವೃತ್ತ ಮುಂತಾದ ಇನ್ನಿತರ ಅಕ್ಷರ ವೃತ್ತಗಳೂ ಲಲಿತ, ಉತ್ಸಾಹ, ಅಕ್ಕರಿಕೆ, ಲಯಗ್ರಾಹಿ, ಲಯೋತ್ತರಗಳಂತಹ ಮಾತ್ರಾವೃತ್ತಗಳೂ ಮತ್ತು ದ್ರಾವಿಡ ಪದ್ಧತಿಯ ಪಿರಿಯಕ್ಕರ ರಗಳೆಗಳೂ ಕ್ವಚಿತ್ತಾಗಿಯಾದರೂ ಸಂದರ್ಭೋಚಿತವಾಗಿ ಬಳಸಲ್ಪಟ್ಟಿವೆ. ಉದಾಹರಣೆಗಾಗಿ ಕೆಲವನ್ನು ಮಾತ್ರ ಇಲ್ಲಿ ಎತ್ತಿ ತೋರಿಸಬಹುದು.

ಮಲ್ಲಿಕಾಮಾಲೆ ತರಳವೃತ್ತಗಳ ಗುರು ಲಘು ವಿನ್ಯಾಸವು ನರ್ತನೋಚಿತವಾದ ತಾಳ-ಲಯಗಳಿಗೆ ಹೊಂದಿಕೊಳ್ಳುವಂತಹದು. ಈ ವೃತ್ತದ ಪ್ರಯೋಜನವನ್ನು ರುದ್ರಭಟ್ಟಕವಿ ಭಕ್ತಿಪರವಶತೆಯಿಂದ ಮಾಡಿದ ಬಾಲಕೃಷ್ಣನ ಕೈಪರೆಯಾಟದ ಬಣ್ಣನೆಯಲ್ಲಿ ಕಾಣಬಹುದಾಗಿದೆ.

ಮ॥ ಮಾ॥ ಚಾರಿಮೆಟ್ಟುವ ಭಂಗಿ
ದೋರ್ವಲನಂ ಮನಂಗೊಳೆ ಮಂಜುಮಂ।
ಜೀರ ಕಂಕಣ ಕಿಂಕಿಣೀರುತಿ ಪೊಣ್ಮೆ
ವಕ್ರಿತಕಂಧರಂ॥
ಸ್ಮೇರ ವಕ್ತ್ರಸರೋರುಹಂ ಲಲಿತಾಯ-
ತೇಕ್ಷಣನಾಗಿ ಸಂ।
ಸಾರ ನಾಟಕ ಸೂತ್ರಧಾರಿ ಮುರಾರಿ
ಕೈಪರೆಗಾಡಿದಂ॥
ನೀರದೋತ್ಪಲ ವರ್ಣನಾಡಿದ ನಾಡಿದಂ
ಕಮಲೇಕ್ಷಣಂ।
ಚಾರುಹಾಸನಿವಾಸನಾಡಿದ ನಾಡಿದಂ
ಶುಭಗಂ ಶುಭಾ॥
ಕಾರನಾಡಿದನೆಂದು ಗೋಪಿಯರಾಡಿ-
ಸುತ್ತುಮಿರಲ್ಕೆ ಸಂ-।
ಸಾರನಾಟಕ ಸೂತ್ರಧಾರಿ ಮುರಾರಿ
ಕೈಪರೆಗಾಡಿದಂ॥

ಕ್ಷೀರಲಂಪಟನಾಡಿದಂ ನವನೀತಚೋರಕ
ನಾಡಿದಂ ।
ದಾರಕವ್ರಜವುಲ್ಲನಾಡಿದನಾಡಿದಂ ಹರಿ
ಗೋಕುಲಾ ॥
ಧಾರನಾಡಿದನೆಂದು ಗೋಪಿಯರಾಡಿ-
ಸುತ್ತು ವಿರಲ್ಕೆ ಸಂ ।
ಸಾರ ನಾಟಕ ಸೂತ್ರಧಾರಿ ಮುರಾರಿ
ಕೈಪರೆಗಾಡಿದಂ ॥
ದಾರುಣಾಕೃತಿ ಪೂತನಾಂತಕನಾಡಿದಂ
ಶಕಟ ಪ್ರಸಂ ।
ಹಾರ ನಾಡಿದನಾಡಿದಂ ಯುಮಳಾರ್ಜುನ
ದ್ರುಮ ಘಾತಿಯೆಂ ॥
ಬೀರವಂ ನೆಗಳಲ್ಕೆ ಗೋಪಿಯರಾಡಿಸುತ್ತ
ವಿರಲ್ಕೆ ಸಂ- ।
ಸಾರನಾಟಕ ಸೂತ್ರಧಾರಿ ಮುರಾರಿ ಕೈಪರೆ
ಗಾಡಿದಂ ॥
ವೀರದೈತ್ಯರನಿಕ್ಕಲಾಡಿಯೆ ಪುಟ್ಟಿದಂ
ಹರಿಯೆಂದು ಕೈ-
ವಾರದಿಂದವೆ ಮಾತನಾಡೆ ವಿರೋಧಿಗಳ್
ಯಮಲೋಕಮಂ ॥
ಸಾರಲಾಡೆ ಯಶೋದೆ ರಾಗರಸಾಬ್ಧಿ
ಯೋಳ್ ತುಳುಕಾಡೆ ಸಂ- ।
ಸಾರನಾಟಕ ಸೂತ್ರಧಾರಿ ಮುರಾರಿ
ಕೈಪರೆಗಾಡಿದಂ ॥

## ಮಾತ್ರಾವೃತ್ತಗಳ ಲಯೋತ್ತರ ಗಾಂಭೀರ್ಯ

ಮಾತ್ರಾವೃತ್ತಗಳಲ್ಲಿ ಬರುವ ಲಯೋತ್ತರ ನಡೆಯಲ್ಲಿ ಗಜಗತಿಯ ಗಾಂಭೀರ್ಯವಿದೆ. ಇದನ್ನರಿತ ನೇಮಿಚಂದ್ರಕವಿ ತನ್ನ 'ಲೀಲಾವತಿ ಪ್ರಬಂಧದಲ್ಲಿ ಈ ವೃತ್ತವನ್ನು ಗಜಗಮನೆಯರಾದ ವಿಲಾಸವತಿಯರು ಅಂಕದಾನೆಯೊಂದಿಗೆ ರಾಜಭವನವನ್ನು ಪ್ರವೇಶ ಮಾಡುವುದರ ವರ್ಣನೆಗಾಗಿ ಪ್ರಯೋಗಿಸಿದ್ದಾನೆ:

ತುರುಗೆ ತುಂಬಿಗುರುಳ ಬಂಬಲಿದೆ
ಕಪೋಲರಂಗದೊಳ್ ತುಳುಂಕೆ ಪೊಂಗ-
ರಂಗದೊಳ್ ಮಲಂಗೆ ವಿಜಯ
ಮಂಗದೊಳ್ ।
ಮಿರುಗೆ ಪಲ್ಲವವಿಗಳೊಳೆದು ನೆಲಸೆ ಚೆಲ್ವು
ಯಾನದೊಳ್ ಬೆಡಂಗು ಬಳೆಯೆ ಮಾನ-
ದೊಳ್ ಮನಂ ತೊಡಂಕೆ ದಾನದೊಳ್ ।
ನೆರೆಯೆ ನವಪಯೋಧರೋತ್ತ ಕುಂಭ
ಮಾಲಿಯೆ ಪಾದದೊಳ್ ।
ಚಲಾಂದುಕಂ ವಿನೋದದೊಳ್ ಕಡಂಗೆ
ಮಧುರ ಮೋದದೊಳ್ ।
ಮೆರೆದು ಪುಗುಗುಮಂಗನೆಯರು
ಮಂಕದಾನೆಯುಂ ನಮನ್ನಿಕಾಮ ನಿಖಿಲ
ಭುವನಮುಂ ತದೀಯರಾಜಭವನಮಂ ॥

ಆದಿಪಂಪನು ತನ್ನ ಭಾರತದಲ್ಲಿ ಉಪಯೋಗಿಸಿದ ಒಂದು ರಗಳೆಯ ಗತಿಯೂ ಹೀಗೆಯೇ ಇದೆ. ಇದು ಅಚ್ಚಗನ್ನಡದ ಮಟ್ಟು. ಆದರೆ ಅದರ ಪಾದವು ಲಯೋತ್ತರ ವೃತ್ತಕ್ಕಿಂತ ೧೨ ಮಾತ್ರೆಗಳಿಂದ ಚಿಕ್ಕದು. ಪುರದ ಬಹಿರುದ್ಯಾನದ ಚಿತ್ರವತ್ತಾದ ವರ್ಣನೆ ಅಲ್ಲಿದೆ. ಇಲ್ಲಿ ಕವಿಯ ಉತ್ಸಾಹಭಾವವು ತರಂಗಿತವಾಗಿ ಕುಣಿಯುತ್ತಿರುವಂತೆ ಭಾಸವಾಗುವದು :

ಅದರ ಪೊರವಳಂ ವಿಶಾಲ ಕನಕಕೃತಕ
ಗಿರಿಗಳಿಂ ಫಲಪ್ರಕೀರ್ಣತರುಗಳಿಂ ।
ನನೆಯ ಕೊನೆಯ ತಳಿರ ಮುಗುಳ
ವನಲತಾನಿಕುಂಜದಿಂ ಲಸತ್‌ಪ್ರಸೂನ
ಪುಂಜದಿಂ ।
ಗಗನತಲಮೆ ಪರಿದು ಬಿಳ್ದುದೆನಿಪ
ಬಹುತಟಾಕದಿಂ ಕುಕಿಲ್ದು ನಲಿವ
ಕೋಕದಿಂ ।
ತೆಗೆಯದಬ್ದ ಸಮಿತಿವೋಲೆ ಪರಿವ ಮದ-
ಗಜಂಗಳಿಂ ತರತ್ತರಂಗಮಂಗಳಿಂ ।
ಲವಣಜಲಧಿ ಬಳಸಿದಂತೆ ಬಳಸಿದಗಳ
ನೀಳದಿಂದುದಗ್ರ ಕನಕಸಾಳದಿಂ ।
ಕನಕಶೈಲಮೆನಿಸಿ ನೆಗಳ್ದ ಭೂಮಿಪಾಲ
ಭವನದಿಂ ಸಮಸ್ತವಸ್ತು ಭುವನದಿಂ ।

ಹೀಗೆ ಚಂಪೂಕೃತಿಗಳಲ್ಲಿ ನಮ್ಮ ಕವಿಗಳು ಕಂದ, ಖ್ಯಾತಕಾರ್ಣಾಟಕ ವೃತ್ತಗಳು, ಇನ್ನಿತರ ಅಕ್ಷರ ಹಾಗೂ ಮಾತ್ರಾವೃತ್ತಗಳು ಮತ್ತು ಅಪರೂಪವಾಗಿ ಕೆಲವು ಅಚ್ಚಗನ್ನಡದ ಮಟ್ಟುಗಳು— ಇತ್ಯಾದಿ ವಿವಿಧ ಛಂದಸ್ಸುಗಳನ್ನು ರಸಭಾವಗಳಿಗನುಗುಣವಾಗುವಂತೆ ಪ್ರಯೋಗಿಸಿದ್ದಾರೆ. ಸಂಸ್ಕೃತದ ಅಕ್ಷರ ಹಾಗೂ ಮಾತ್ರಾವೃತ್ತಗಳನ್ನು ಹಲಕಾಲ ಬಳಸುತ್ತ ಅವುಗಳಿಗೆ ಕನ್ನಡದ ಮುದ್ರೆಯೊತ್ತಿ ಮಾರ್ಪಡಿಸಿ ಅವನ್ನು ತಮ್ಮವಾಗಿಸಿಕೊಂಡರು. ಸಂಸ್ಕೃತ ಕವಿಗಳು ಹೆಚ್ಚಾಗಿ ಬಳಸದಂತಹ ಕಂದ ಮತ್ತು ಖ್ಯಾತಕಾರ್ಣಾಟಕ ವೃತ್ತಗಳು ಈ ಮಾತಿಗೆ ಸಾಕ್ಷಿ. ಸಂಸ್ಕೃತದ ಮೂಲ ಛಂದಸ್ಸಿನಲ್ಲಿಲ್ಲದ ದ್ವಿತೀಯಾಕ್ಷರ ಪ್ರಾಸದಿಂದಲೂ ಅಲ್ಲಿ ನಿಯತವಾಗಿರುವ ಯತಿಯ ಉಲ್ಲಂಘನೆಯಿಂದಲೂ ಸಂಸ್ಕೃತದ ಈ ವೃತ್ತಗಳ ಸ್ವರೂಪವು ಕೆಲಮಟ್ಟಿಗೆ ಮಾರ್ಪಟ್ಟಿದೆ. ಇವು ಹಳಗನ್ನಡ ಕಾವ್ಯರಸಾಯನದಲ್ಲಿ ಸಮರಸಗೊಂಡು ಹೊಸ ಒಪ್ಪವನ್ನೇ ತಳೆದಿವೆ. ೧೩ ನೆಯ ಶತಕದಲ್ಲಿ ಹಳಗನ್ನಡವು ನಡುಗನ್ನಡವಾದಾಗ ಕನ್ನಡ ಶಬ್ದಗಳು ಅಂತ್ಯವ್ಯಂಜನವನ್ನು ಕಳೆದುಕೊಂಡು ಸ್ವರಾಂತವಾದವು; ದ್ವಿತ್ವಗಳು ಶಿಥಿಲಾಕ್ಷರಗಳಾಗಿ ನಡುವೆ ಸ್ವರಾಗಮವನ್ನು ಪಡೆದವು. ಇದರಿಂದ ಕನ್ನಡನುಡಿ ಶಿಥಿಲಗೊಂಡಂತಾಗಲು ಕಂದ ಹಾಗೂ ಸಂಸ್ಕೃತವೃತ್ತಗಳು ಬಿಗುಹುಗುಂದಿದ ನುಡಿಗೆ ಒಗ್ಗದಂತಾದವು. ಇದರ ಪರಿಣಾಮವಾಗಿ ಬಿಗುಹಿನ ಚಂಪೂಮಾರ್ಗವು ಬರಬರುತ್ತ ಕುಂಠಿತವಾಗಲು ಸುಲಭಶೈಲಿಯ ಷಟ್ಪದೀ—ಸಾಂಗತ್ಯಗಳ ಕಾವ್ಯಮಾರ್ಗಕ್ಕೆ ದಾರಿಯುಂಟಾಯಿತು.



?....










# ಮೆಟ್ರಿಮೋನಿಯಲ್ ಕಾಲಮ್

**ಹರಟೆ**

ಲೇಖಕರು: ಶ್ರೀಹರಿ

ಇಂದಿನ ಕಾಲದಲ್ಲಿ ಸಾಧಾರಣವಾಗಿ ಪ್ರತಿಯೊಬ್ಬರೂ ಪೇಪರನ್ನು (ವರ್ತಮಾನಪತ್ರ) ಓದಿಯೇ ಓದುತ್ತಾರೆ ಎಂಬುದರಲ್ಲಿ ಆಶ್ಚರ್ಯವೇನಿಲ್ಲ. ಆದರೆ ಹಾಗೆಂದ ಮಾತ್ರಕ್ಕೆ, ಎಲ್ಲರೂ ಪೇಪರಿನಲ್ಲಿದ್ದ ವಿಷಯಗಳೆಲ್ಲವನ್ನೂ ಅಷ್ಟೇ ಆಸ್ಥೆಯಿಂದ ಓದುತ್ತಾರೆ ಎಂದು ಹೇಳಲಿಕ್ಕಾಗದು. ಬೇರೆ ಬೇರೆ ಜನರಿಗೆ ಬೇರೆ ಬೇರೆ ಅಭಿರುಚಿಗಳಿರುವದು ಸ್ವಾಭಾವಿಕ. ಅದರಿಂದ ಅವರು ತಮ್ಮ ತಮ್ಮ ಅಭಿರುಚಿಯ ವಿಷಯಗಳನ್ನು ಹುಡುಕುವದೂ ಸ್ವಾಭಾವಿಕವೇ. ನನ್ನ ಅನುಭವದ ಮಟ್ಟಿಗೆ ಹೇಳುವದಾದರೆ ಜನರು ಪೇಪರಿನ ತುಂಬೆಲ್ಲ 'ಕಣ್ಣು ಹಾಯಿಸು'ವದು ಸಾಮಾನ್ಯವಾದರೂ ಅದರಲ್ಲಿ ಅವರನ್ನಾಕರ್ಷಿಸುವದು ಅವರವರ ವಿಶೇಷ ಅಭಿರುಚಿಯೇ. ಈ ದೃಷ್ಟಿಯಿಂದ, ಕಾಲಿದಾಸ ಮಹಾಕವಿಯ ಕ್ಷಮೆ ಕೋರಿ ಪೇಪರಿನ ವಿಷಯಕ್ಕೆ ಈ "ಪೇಪರ್ ಭಿನ್ನ ರುಚೇರ್ಜನಸ್ಯ ಬಹುಧಾಪ್ಯೇಕಂ ಸಮಾರಾಧನಂ" ಎಂದು ಹೇಳಬಹುದು. ಬೇಕಾದರೆ, ಇಲ್ಲಿ ಒಂದೆರಡು ಉದಾಹರಣೆಗಳನ್ನೂ ಕೊಡುತ್ತೇನೆ.

ನನ್ನ ಸ್ನೇಹಿತರೊಬ್ಬರಿದ್ದಾರೆ. ಡಾಕ್ಟರ ಪದವೀಧರರು – ಪರದೇಶಗಳಲ್ಲೆಲ್ಲ ಅಭ್ಯಾಸಮಾಡಿ ಬಂದವರು. ಪೇಪರು ಬಂದ ತಕ್ಷಣ ಇವರು ನೋಡುವದು ಅದರ ಕೊನೆಯಿಂದ ಮೂರನೇ ಪುಟವನ್ನು— ಅಂದರೆ ಆಟ-ಪಾಟಗಳ ವಿಷಯವನ್ನು. ಕ್ರಿಕೆಟ್ ಮ್ಯಾಚ್ ಇದ್ದರಂತೂ—ಅದು ಜಗತ್ತಿನ ಯಾವದೇ ಮೂಲೆಯಲ್ಲಿರಲಿ — ತೀರಿತು, ಊಟವನ್ನಾದರೂ ಬಿಟ್ಟಾರು ಪೇಪರು ಬಿಡಲಾರರು. ಆದರಲ್ಲಿ ಕ್ರಿಕೆಟ್ಟಿನ ಬಗ್ಗೆ ಫಿಂಗಲ್ಟನ್ನನದೋ, ಇನ್ನಾರದೋ ಲೇಖನವಿದ್ದರಂತೂ ಮುಗಿಯಿತು. ಅಂದಿನ ಪೇಪರಿನ ಆ ಪುಟವನ್ನು ನನ್ನ ಪೇಪರಿನಿಂದ ಅವರಿಗೆ ಹರಿದು ಕೊಡಲೇಬೇಕು — ನಾನು ಓದಿರಲಿ ಬಿಟ್ಟಿರಲಿ!

ಇನ್ನೊಬ್ಬರಿದ್ದಾರೆ, ಸ್ನೇಹಿತರು. ಇವರ ಡಿಗ್ರಿಗಳನ್ನು ನೆನಪಿಡುವದೇ ಕಷ್ಟ. ತೆಲುಗಿನಲ್ಲಿ ಬಿ.ಏ., ಪ್ರಾಣಿಶಾಸ್ತ್ರದಲ್ಲಿ ಬಿ.ಎಸ್‌ಸಿ.! ಮೇಲೆ ಸಂಸ್ಕೃತದಲ್ಲಿ ಎಂ.ಏ.!! ಸಾಲದೋ ಎಂಬಂತೆ ಬಿ.ಇಡಿ. ಬೇರೆ!!! ಇತ್ತೀಚೆಗೆ ಶಾಸನಶಾಸ್ತ್ರ, (Epigraphy) ಇತಿಹಾಸಗಳಲ್ಲಿ ಪರಿಣತಿ ಹೊಂದಿದ್ದಾರೆ. ಹೀಗಾಗಿ ಮೀನುಗಾರಿಕೆಯ ಅಸಿಸ್ಟಂಟನಿಂದ ಹಿಡಿದು ಪ್ರಾಚೀನ ಇತಿಹಾಸದ ಪ್ರಾಧ್ಯಾಪಕನವರೆಗೆ ಯಾವದೇ ನೌಕರಿಯ ಬಗ್ಗೆ ಯಾವದೇ ಜಾಹೀರಾತು ಬಂದರೂ ಅದರಲ್ಲಿ ಕೇಳಲಾದ ಒಂದಿಲ್ಲ ಒಂದು ಅರ್ಹತೆ ಇವರಿಗೆ ಇದ್ದೇ ಇರುತ್ತದೆ! ಪರಿಣಾಮವಾಗಿ, ಇವರ ಆಸ್ಥೆ, ಪೇಪರಿನ ಎರಡನೇ ಪುಟದಲ್ಲಿ- ಅಂದರೆ ಜಾಹೀರಾತುಗಳ ಕಾಲಂಗಳಲ್ಲಿ! ಮೊದಲಿನಿಂದ ಕೊನೆಯವರೆಗೆ ಆ ಪುಟದ ಪಾರಾಯಣ ಆಗಲೇಬೇಕು ದಿನವೂ ಇವರಿಂದ. ಪ್ರತಿ ರವಿವಾರ ಇನ್ನಾವುದಾದರೂ ನಿತ್ಯ ಕರ್ಮವನ್ನು ತಪ್ಪಿಸಿಯಾರು, ಆದರೆ ಅಂದು ಪೇಪರು ನೋಡುವದನ್ನು ಮಾತ್ರ ತಪ್ಪಿಸುವದಿಲ್ಲ. ಅಂದಿನ ವಿಶೇಷ ಆಕರ್ಷಣೆ ಯೂನಿಯನ್ ಪಬ್ಲಿಕ್ ಸರ್ವೀಸ ಕಮೀಶನ್ನಿನ ಜಾಹೀರಾತುಗಳು. ಅಂದು ಆ ಕಾಲಂಗಳನ್ನು ಸಂಪೂರ್ಣವಾಗಿ ಜೀರ್ಣಿಸಿಕೊಳ್ಳುತ್ತಾರೆ. ನಾವಾರೂ ಅವನ್ನು ನೋಡುವದೇ ಇಲ್ಲ. ನಮ್ಮಲ್ಲಿ ಯಾರಿಗಾದರೂ ತಕ್ಕುದಾದ ಜಾಹೀರಾತು ಇದ್ದರೆ ಅವರೇ ಬಂದು ಹೇಳುತ್ತಾರೆ! ಇವರ ಈ ಅಭಿರುಚಿಯಲ್ಲಿ ಇನ್ನೊಂದು ವೈಶಿಷ್ಟ್ಯವಿದೆ. ಆ ಪುಟ ಬಿಟ್ಟು ಇನ್ನೊಂದು ಪುಟ ಇವರಿಗೆ ಪರಸ್ತ್ರೀಯಿದ್ದಂತೆ; ಕಣ್ಣೆತ್ತಿ ಕೂಡ ನೋಡರು! 'ಹೆಡ್‌ಲೈನ್ಸ್' ಆದರೂ ನೋಡಬೇಡವೇ? ಊಂ, ಹೂಂ, ಕೇಳಬೇಡಿರಿ! ಒಮ್ಮೆ ನಾನಿವರಿಗೆ ಹೇಳಿದೆ, 'ಇಲ್ಲಿ ನೋಡಿ ಸ್ವಾಮಿ, ಚೀನಿಯರು ಲಡಾಕಿಗೆ ಬಂದಿದ್ದಾರಂತೆ, ಸ್ವಲ್ಪ ಓದಿರಿ' ಎಂದು. ಸ್ಥಿತಪ್ರಜ್ಞನಂತೆ 'ಅಷ್ಟೇ ತಾನೆ, ಬಂದರೇನಂತೆ, ಊಟಿಗೆ ಬಂದಿಲ್ಲವಷ್ಟೆ?' ಎಂದುಕೊಂಡು ಹೊರಟೇ ಹೋದರು! ಪ್ರತಿ ರವಿವಾರ ನನ್ನ ಪೇಪರು ಬಂದೊಡನೆ ನಾನು ಓದುವ ಮೊದಲೇ ಅವರಿಗೆ ಕೊಡಬೇಕು. ಅವರಿಗೆ ಆ ಅಧಿಕಾರವಿದೆ; ನನಗೂ ಆ ಕಾಲಂ ನೋಡುವ ತೊಂದರೆ ತಪ್ಪುತ್ತದೆ!

> ಪತ್ರಿಕೆಗಳಲ್ಲಿ ಬರುವ ಜಾಹೀರಾತುಗಳಿಂದ ಜನರ ಪ್ರಭಾವ ಅರಿಯಬಹುದೆಂಬುದು ನಿಮಗೆ ಗೊತ್ತಿದೆಯೆ? ವ್ಯಕ್ತಿಗಳ ವ್ಯಕ್ತಿತ್ವದ ಪರಿಚಯವಾಗುವದೆಂಬುದು ತಿಳಿದಿದೆಯೆ? ಅದನ್ನೇ ಲೇಖಕರು ಇಲ್ಲಿ ಅನೇಕ ಉದಾಹರಣೆಗಳಿಂದ ತೋರಿಸಿಕೊಟ್ಟಿರುವರು.

ಇನ್ನೊಬ್ಬರು. ಹಾಟೆಲ್ ವ್ಯವಸಾಯದಲ್ಲಿದ್ದ ಇವರಿಗೆ ಬೇಸಗೆಯಲ್ಲಿ ಮಾತನಾಡಲು ವ್ಯವಧಾನವಿಲ್ಲದಿದ್ದರೂ ಚಳಿಗಾಲವೆಲ್ಲ ಸಂಪೂರ್ಣವಾಗಿ ಇವರದೇ! ಈ ಬಿಡುವಿನ ಕಾಲದಲ್ಲಿ ಇವರು ಪೇಪರಿನಲ್ಲಿ ಸಂಶೋಧನೆಯನ್ನೇ ನಡೆಸುತ್ತಾರೆ. ಪೇಪರ ಬಂದಾಕ್ಷಣ ಇವರು ಮೊಟ್ಟಮೊದಲಿಗೆ ಮೊದಲ ಪುಟವನ್ನು ಕ್ಷಣ ಮಾತ್ರ ನೋಡಿ ಕೂಡಲೇ ಕೊನೆಯ ಪುಟಕ್ಕೇ ಹೋಗುತ್ತಾರೆ. ಯಾಕೆಂದರೆ ಅಲ್ಲಿ ಪ್ರಕಟವಾದ ಫೋಟೋಗಳನ್ನು ನೋಡುವ ಕುತೂಹಲ ಇವರಿಗೆ. ಅವು ಎಂತಹ ಫೋಟೋಗಳಿರಬೇಕೆಂತೀರಿ. ಅಪಘಾತದವು! ಅಪಘಾತಗಳ ಚಿತ್ರ, ಅಪಘಾತಗಳ ಸುದ್ದಿ ಇವುಗಳಲ್ಲಿ ಇವರ ಆಸ್ಥೆ ಬಹಳ. ದಿನವೂ ಪೇಪರಿನಲ್ಲಿ ಅಂಥ ಸುದ್ದಿ ಬೇಕೇಬೇಕು ಇವರಿಗೆ. ಇಲ್ಲವಾದರೆ ಅಂದಿನ ಪೇಪರೆ ನೀರಸ. ಸುಲಭವಾಗಿ ಅಂಥ ಸುದ್ದಿ ದೊರೆಯದಿದ್ದರೆ ಪೇಪರನ್ನು ಮೊದಲಿನಿಂದ ತುದಿಯ ವರೆಗೆ ಕಣ್ಣಲ್ಲಿ ಕಣ್ಣಿಟ್ಟು ನೋಡಿ, ಕನಿಷ್ಠ ಯಾವನೊಬ್ಬ ಹುಡುಗ ಕಂಬಕ್ಕೆ ಸಾಯಕಲ್ ಹಾಯಿಸಿ ಉರುಳಿಬಿದ್ದ ಎಂಬ ಸುದ್ದಿಯನ್ನಾದರೂ ಹುಡುಕಿ ತೆಗೆಯುತ್ತಾರೆ! ಸ್ವಲ್ಪ ದೊಡ್ಡ ಪ್ರಮಾಣದ ಅಪಘಾತಗಳ ಬಗ್ಗೆ ದಿನಗಟ್ಟಲೆ, ವಾರಗಟ್ಟಲೆ ಮಾತನಾಡುತ್ತಾರೆ. ಕೆಲ ದಿನಗಳ ಹಿಂದೆ ನಡೆದ ಅಸನಸೋಲ ಘಟನೆಯನ್ನು ತಿಂಗಳುಗಟ್ಟಲೆ ಬಂದವರಿಗೆಲ್ಲ, ಹೋದವರಿಗೆಲ್ಲ ಹೇಳಿದ್ದೇ ಹೇಳಿದ್ದು!

ನನ್ನ ಇನ್ನೊಬ್ಬ ಸ್ನೇಹಿತರಿಗೆ ಭಾರತದ ವಿಷಯದಲ್ಲಿಯೇ ಆಸ್ಥೆ ಬಹಳ. ಅದೂ ಗಡಿಘಟನೆಗಳ ಬಗ್ಗೆ. ಇಷ್ಟು ದಿನ ಕಾಶ್ಮೀರ, ಆಸಾಮುಗಳಲ್ಲಿಯ ಘಟನೆಗಳನ್ನು ಮನಸ್ಸುಗೊಟ್ಟು ಓದುತ್ತಿದ್ದ ಇವರಿಗೆ, ಇತ್ತೀಚೆಗೆ ಹಿಮಾಲಯದಾಚೆ ಉದ್ಭೂತವಾದ ಪ್ರಸಂಗಗಳಿಂದಾಗಿ ಪೇಪರ ಓದುವದರಲ್ಲಿ ಹೆಚ್ಚು ವೇಳೆ ಕಳೆಯಬೇಕಾಗಿದೆ. ನಮ್ಮಲ್ಲಿ ಚೀನಾ-ಭಾರತಗಳ ಬಗ್ಗೆ ಅಪ್-ಟು-ಡೇಟ್ ಮಾಹಿತಿಯನ್ನು ಸಂಗ್ರಹಿಸಿದವರೆಂದರೆ ಇವರೇ!

ಇನ್ನೊಬ್ಬರು. ಇವರಿಗೆ ಇಂಥದೇ ವಿಷಯದಲ್ಲಿ ಆಸ್ಥೆ ಎಂಬುದಿಲ್ಲ. ಇನ್ನೊಬ್ಬರು ಪೇಪರ ಓದುತ್ತಿದ್ದಾಗ ಅದೇ ಆ ಹೊತ್ತಿಗೆ ತಾವೂ ಅದನ್ನೇ ಓದಬೇಕೆಂಬ ಚಾಪಲ್ಯ ಇವರಲ್ಲುಂಟಾಗುತ್ತದೆ! ನೀವು ಯಾವದೋ ಪೇಪರ ಓದುತ್ತ ಕುಳಿತಿದ್ದೀರಿ ಎಂದು ಭಾವಿಸಿರಿ. ಇವರು ಆಗ 'ಎನ್ನಾ ಶೊಲ್ರಾ ಪೇಪರಿಲೇ ಇನ್ನೀಕಿ' (ಏನಂತಾನ ಪೇಪರಿನಾಗ ಇವತ್ತs) ಎಂದವರೇ ನಿಮ್ಮ ಕೈಯ್ಯಲ್ಲಿಯ ಪೇಪರನ್ನು ಕಸಿದುಕೊಂಡು ಬಿಡುತ್ತಾರೆ. ತಾವಾದರೂ ಓದುತ್ತಾರೆ ಎನ್ನುತ್ತೀರಾ? ಅದೂ ಇಲ್ಲ; ಆಚೀಚೆ ಹೊರಳಿಸಿ ನೋಡಿ ಮಡಿಚಿಟ್ಟು ಬಿಡುತ್ತಾರೆ! ಓದುವದಕ್ಕಿಂತ ಹೆಚ್ಚಾಗಿ ಅದನ್ನು ಮುಚ್ಚಿಡುವದರಲ್ಲಿಯೇ ಆಸ್ಥೆ ಜಾಸ್ತಿ ಇವರಿಗೆ.

"ಹೌದು ಬೇರೆಯವರ ಕತೆಯಾಯಿತು, ನಿನ್ನ ವಿಷಯವೇನು?" ಎಂದು ನೀವಾರಾದರೂ ಕೇಳಬಹುದು. ಅದಕ್ಕೇ ಕೇಳುವ ಮೊದಲೇ ಹೇಳಿಬಿಡುತ್ತೇನೆ. ನಮ್ಮ ತೆಲಗು ಪಂಡಿತರಂತೆ ನಾನೂ

ಕೂಲಂಕಷವಾಗಿ ನೋಡುವದು ಪೇಪರಿನ ಎರಡನೆಯ ಪುಟವನ್ನೇ. ಅಂದರೆ ಜಾಹಿರಾತುಗಳನ್ನೇ ಎಂಬುದು ನಿಜವಾದರೂ ನೌಕರಿಯ ಜಾಹಿರಾತುಗಳನ್ನಲ್ಲ ನನ್ನ ಲಕ್ಷ್ಯವನ್ನಾಕರ್ಷಿಸುವ ಜಾಹೀರಾತುಗಳು – 'ಮ್ಯಾಟ್ರಿಮೋನಿಯಲ್ ಕಾಲಮ್ಸ್'ನಲ್ಲಿಯವು ಅಂದರೆ–'ವಧೂವರ ಬೇಕು ಎಂಬವುಗಳು.

'ಇದೇನು ಹುಚ್ಚು' ಎಂದೆನ್ನಬಹುದು ನೀವು. ಹಾಗೆ ಅಂದವರೂ ಇದ್ದಾರೆ. ಅಲ್ಲದೆ 'ಹುಡುಕುತ್ತಿದ್ದಾನೇನೋ' ಎಂದು ಕೆಲವರು ಟೀಕಿಸಿದ್ದರೆ 'ತಾನೂ ಒಂದು ಜಾಹೀರಾತು ಕೊಟ್ಟಿರಬಹುದು!' ಎಂದು ಆರೋಪಿಸಿದವರೂ ಕೆಲವರಿದ್ದಾರೆ! ನೀವೂ ಹಾಗೆ ಭಾವಿಸಿದರೆ ನನ್ನ ಆಕ್ಷೇಪಣೆಯೇನಿಲ್ಲ. ಆದರೆ ಅಂಥ ಭಾವನೆ ತಪ್ಪು ಎಂದಿಷ್ಟೇ ಹೇಳಬಯಸುತ್ತೇನೆ.

ಹಾಗಾದರೆ ಇವುಗಳನ್ನೋದುವದರಿಂದ ಪ್ರಯೋಜನವೇನು ಎಂಬ ಪ್ರಶ್ನೆಗೆ ಉತ್ತರವಿಷ್ಟೆ—ಇಲ್ಲಿ ಬೇರೆ ಬೇರೆ ಜನರ ಸ್ವಭಾವಪರಿಚಯ ನಮಗಾಗುತ್ತದೆ. ಈ ಜಾಹೀರಾತುಗಳ ಮುಖಾಂತರ ಅವುಗಳ ಹಿನ್ನೆಲೆಯಲ್ಲಿರುವ ವ್ಯಕ್ತಿಗಳ ವ್ಯಕ್ತಿತ್ವ, ಅವರವರ ಅಭಿರುಚಿಗಳು, ಆಶೆ- ಅಭಿಲಾಷೆಗಳು ಅವರವರ ಮಾನಸಿಕ ಸ್ಥಿತಿ ಇವೇ ಮುಂತಾದವುಗಳನ್ನೆಲ್ಲ ಅಭ್ಯಸಿಸಬಹುದು ನಾವು.—ಬೇರೆ ಯಾವ ಕಾರಣಕ್ಕಾಗಿಯಲ್ಲದಿದ್ದರೂ ಮನೋರಂಜನೆಗಾಗಿ! "ಹೇಗಾದರೂ ಸರಿ, ಮದುವೆಯಾದರೆ ಸಾಕು" ಎನ್ನುವ ಜನ ಕೆಲವರಿಲ್ಲಿ ನಮಗೆ ದೊರೆತರೆ - ತನ್ಮೂಲಕ ಹಣವನ್ನೋ, ನೌಕರಿಯನ್ನೋ ಗಿಟ್ಟಿಸಿಕೊಳ್ಳುವ ಹೊಂಚುಹಾಕಿದವರೂ ಕೆಲವರು ಕಾಣಸಿಗುತ್ತಾರೆ! ಇನ್ನು ಕೆಲವರಿಗೆ ತಮ್ಮ ಐಶ್ವರ್ಯ, ದೊಡ್ಡತನಗಳನ್ನು ಹೇಳಿಕೊಳ್ಳುವ ಸಾಧನಗಳು — ಈ ಜಾಹೀರಾತುಗಳು. ಹಾಗೆಯೇ ಇದ್ದ ಸ್ಥಿತಿಯನ್ನಿದ್ದಂತೆ ಬಣ್ಣಿಸಿ ಮದುವೆಯನ್ನಪೇಕ್ಷಿಸುವ ಸ್ಪಷ್ಟವಾದಿಗಳು ಕೆಲವರಿದ್ದರೆ ಇಲ್ಲದ್ದೆಲ್ಲವನ್ನೂ ಇದೆ ಎಂದು ಹೇಳುವ ಸುಳ್ಳುಗಾರರು ಇನ್ನು ಕೆಲವರು? ಮತ್ತೆ ಹಣದ್ದೋ ಅಥವಾ ನೌಕರಿಯದೋ ಆಮಿಷ ತೋರಿಸಿ ವರಗಳನ್ನು ಗಾಳಕ್ಕೆ ಸಿಕ್ಕಿಸಿಕೊಳ್ಳಲೆಳಸಿದ ಮೀನುಗಾರರೂ ಅನೇಕರು ಇಲ್ಲಿ! ಮತ್ತೆ ಕೆಲವರಿಗೆ ಇಂಥ ಜಾಹೀರಾತುಗಳನ್ನು ಕೊಡುವದು—ಬರಿ ಒಂದು hobby; ಇನ್ನು ಕೆಲರಿಗೆ ತನ್ಮುಖಾಂತರ ಫೋಟೊಗಳನ್ನು ಸಂಗ್ರಹಿಸುವ ಚಟ! ಹೀಗೆ ಈ 'ಮ್ಯಾಟ್ರಿಮೋನಿಯಲ್ ಕಾಲಂ'ದ ಮೂಲಕ ನಾನಾ ಸ್ವಭಾವಗಳ, ನಾನಾರೀತಿಗಳ ಜನಗಳ ಪರಿಚಯ ನಮಗಾಗುತ್ತದೆ—ಅಂತೆಯೇ ನಾನು ದಿನಾಲು ಬಿಟ್ಟದ್ದುಬಿಟ್ಟು ಆ ಕಾಲಮ್ಮನ್ನು ಓದುವದು!..................ಅಥವಾ ವೃಥಾ ಹರಟೆಯೇಕೆ ಮಾದರಿಗೆಂದು ಅಂಥ ನಾಲ್ಕಾರು ಉದಾಹರಣೆಗಳನ್ನು ಕೊಡುತ್ತೇನೆ. ಕೇಳಿರಿ—ಆಗ ನಿಮಗೇ ಮನದಟ್ಟಾಗುತ್ತದೆ— ಅವುಗಳ ಅಭ್ಯಾಸದಿಂದ ಎಂಥ ಪ್ರಯೋಜನವುಂಟು ಎಂದು!

ಈ ಜಾಹೀರಾತನ್ನು ನೋಡಿರಿ, ಇದರಿಂದ ಈತನಿಗೆ ಮದುವೆ ಅತ್ಯಗತ್ಯವಾಗಿದೆ ಎಂದು ಭಾಸವಾಗುವದು..

'೩೫ ವರ್ಷಗಳಿಗೂ ಮೇಲ್ಪಟ್ಟ, ತಿಂಗಳಿಗೆ ೧೭೫ ರೂಪಾಯಿ ಸಂಬಳವಿರುವ ಯುವಕನಿಗೆ ವಧು ಬೇಕಾಗಿದೆ. ಜಾತಿ, ಕುಲ, ಗೋತ್ರ ಇವು ಯಾವ ಎದ್ದರೂ ಅಭ್ಯಂತರವಿಲ್ಲ. ಮನೆಗೆಲಸ ಬರುತ್ತಿರಬೇಕು—ವರದಕ್ಷಿಣೆ ಅಗತ್ಯವಿಲ್ಲ. ಬೇಗನೆ ಮದುವೆಯಾಗಬೇಕು'

ಇನ್ನೊಂದು. ಇಲ್ಲಿ ವರನಿಗೆ ಮದುವೆ ಗೌಣವೇ. ಆದರೆ ಅದರಿಂದ ಮುಂದಿನ ಮಾರ್ಗ ಸುಲಭವಾದರೆ ಪರವಾಯಿಲ್ಲ ಎಂಬ ಧೋರಣೆ ಅವನದು:

'೨೫ ವರ್ಷದ, ಮೆಡಿಕಲ್ ಕಾಲೇಜಿನಲ್ಲಿ ಓದುತ್ತಿರುವ ಒಬ್ಬನಿಗೆ ವಧು ಬೇಕು. ಕಲಿತಿರಬೇಕು ಸುಂದರವಿರಬೇಕು. ಹಣಕಾಸಿನ ಸಹಾಯ ಅವಶ್ಯ!'

ಇನ್ನೊಬ್ಬ ಇದನ್ನೇ ಇನ್ನೂ ಸ್ಪಷ್ಟವಾಗಿ ಹೇಳಿದ್ದಾನೆ—'೨೫ ವರ್ಷದ ಬಿ. ಏ. ಕಲಿತ ಮಾಧ್ವ ಯುವಕನೊಬ್ಬನಿಗೆ ಕನ್ಯೆ ಬೇಕು. ವಧು ಮನೆತನದಿಂದ ನೆಟ್ಟಗಿರಬೇಕು. ವರದಕ್ಷಿಣೆ ಅಗತ್ಯ. ನೌಕರಿ ದೊರಕಿಸಲು ಸಹಾಯ ಮಾಡಬೇಕು.'

ಪಾಪ ನಿರುದ್ಯೋಗಿಯೇನೋ! ಮದುವೆಯಿಂದಾದರೂ ನೌಕರಿ ದೊರೆಯಲಿ ಎಂದು ಆಶೆ!!

ಇಂಥ ಸಹಾಯವನ್ನು ಮಾಡಲೆಳಸುವವರೂ ಎಷ್ಟೋ ಜನ. ಅದು ಇದರಲ್ಲಿ ಸೂಚಿತವಾಗಿದೆ:

'ಬಿ. ಎಸ್‌ಸಿ. ಓದುತ್ತಿರುವ, ೧೮ ವರ್ಷದ ಕನ್ಯೆಗೆ ಆತ್ರೇಯಗೋತ್ರದವನಲ್ಲದ ಸಭ್ಯ ಮನೆತನದ ಯುವಕನೊಬ್ಬನು ಬೇಕು. ವಧುವಿನ ತಂದೆಯ ವರಮಾನ ತಿಂಗಳಿಗೆ ಸಾವಿರ ರೂಪಾಯಿಗಳು!'

ಇಲ್ಲಿ ಮಾಸಿಕ ವರಮಾನವನ್ನು ಹೇಳಿದ ಉದ್ದೇಶ, ಹಣಕಾಸಿನ ಸಹಾಯ ಅಸಾಧ್ಯವೇನಲ್ಲ ಎಂದು ಸೂಚಿಸುತ್ತದೆ.

ಇನ್ನೊಬ್ಬ ಇದನ್ನೇ ಸ್ಪಷ್ಟವಾಗಿ ಹೇಳಿದ್ದಾನೆ—

'ನಿವೃತ್ತ ಅಧಿಕಾರಿಯೊಬ್ಬರ, ಎಸ್. ಎಸ್. ಎಲ್. ಸಿ. ಪಾಸಾದ ಮಗಳಿಗೆ ತೆಲಗು ಅಥವಾ ಕನ್ನಡ ಬ್ರಾಹ್ಮಣ ವರ ಬೇಕಾಗಿದೆ. ಉಚಿತ ವರದಕ್ಷಿಣೆ, ಹೆಚ್ಚಿನ ಅಭ್ಯಾಸಕ್ಕಾಗಿ ಹಣ ಸಹಾಯ ಅಥವಾ ಒಳ್ಳೆಯ ನೌಕರಿ ದೊರಕಿಸುವದರಲ್ಲಿ ಪ್ರಯತ್ನ ಇವುಗಳನ್ನೂ ವಿಚಾರಿಸಲಾಗುವದು ಕುಂಡಲಿಯೊಡನೆ ಉತ್ತರ ಬರೆಯಬೇಕು!'

ಕೆಳಗಿನ ಜಾಹೀರಾತಿನಲ್ಲಿ ಹಣದ ಆಮಿಷ ಇನ್ನೂ ಹೆಚ್ಚು:

ಎಂ. ಎಸ್‌ಸಿ. ಪಾಸಾದ ಮತ್ತು ಕೇಂದ್ರ ಸರಕಾರದ ಅಧಿಕಾರಿಗಳೊಬ್ಬರ ೨೦ ವರ್ಷದ ವಯಸ್ಸಿನ ಮಗಳಿಗೆ ವರಬೇಕು. ಸಂಗೀತ, ಮನೆಗೆಲಸ, ಹಿಂದಿಗಳಲ್ಲಿ ನಿಷ್ಣಾತಳು. ವಧುವಿನ ಹೆಸರಿನಲ್ಲಿ ಒಂದುಲಕ್ಷ ರೂಪಾಯಿ ಆಸ್ತಿ. ಕಾಯಂ ದೊಡ್ಡ ಹುದ್ದೆಯಲ್ಲಿದ್ದವರಿಗೆ ಪ್ರಾಶಸ್ತ್ಯ!

ಇನ್ನೊಂದು ಜಾಹೀರಾತನ್ನು ನೋಡಿರಿ ಇಲ್ಲಿ ಇವರಿಗೆ ತಮ್ಮ ಮಗಳಿಗೆ ಮದುವೆ ಮಾಡುವದು ಅಗತ್ಯವಿದೆ. ಆದರೆ ವರಗಳ ಅಭಾವದ ಈ ಕಾಲದಲ್ಲಿ ತಮ್ಮ ಮಗನೂ ಒಬ್ಬ ವರ ಎಂದು ಸಾರಿದರೆ ಪರಸ್ಪರ ಸಂಬಂಧ ಏರ್ಪಟ್ಟೀತೇನೋ ಎಂಬ ಹಂಬಲ ಇವರಿಗೆ!

'ಶಠಮರ್ಷಣಗೋತ್ರದ ತಮಿಳು ಶ್ರೀವೈಷ್ಣವ ಅಧಿಕಾರಿಗಳೊಬ್ಬರ ಮಗಳಿಗೆ ವರಬೇಕು. ವಧುವಿನ ವಯಸ್ಸು ೧೭ ಎರಡನೇ ವರ್ಷ ಬಿ.ಎಸ್‌ಸಿ. ಶಾಸ್ತ್ರೀಯ ಸಂಗೀತಬಲ್ಲಳು. ಆಸ್ತಿ ಅರ್ಧಲಕ್ಷ ಮತ್ತು ವಧುವಿನ ಅಣ್ಣನಿಗೆ ಕನ್ಯೆ ಬೇಕು. ವರನ ವಯಸ್ಸು ೨೩ ಎಂ.ಎಸ್‌ಸಿ. ರಿಸರ್ಚ ೧೯೬೦ರ ಕೊನೆಗೆ ಪಿ. ಎಚ್. ಡಿ. ಆಗುವ ಸಂಭವ. ಆಸ್ತಿ

ಲಕ್ಷ. ಮದುವೆ ೧೯೬೦ ಅಥವಾ, ೬೧ರಲ್ಲಿ ಆಗ
ೇಕು. ಆದರೆ ವರನ ತಂಗಿಯ ಮದುವೆ ಮೊದಲು.'

ಕೊನೆಯ ವಾಕ್ಯವನ್ನು ಗಮನಿಸಿರಿ. ಮಗನಿಗೆ ಧು ದೊರೆತು ಮಗಳು ಹಾಗೇ ಉಳಿದಾಳೆಂಬ ಂದೇಹ ಇವರಿಗೆ! ಅದಕ್ಕೇ ಹಾಗೆ ಸ್ಪಷ್ಟವಾಗಿ ೇಳಿದ್ದಾರೆ "ಮಗಳ ಮದುವೆ ಮೊದಲು" ಂದು!!

ಮತ್ತೊಬ್ಬ ಕನ್ಯಾಪಿತ, '. ಅದು ಬೇಕು, ಇದು-ೇಕು,' 'ಅದನ್ನು ಕೊಡು, ಇದನ್ನು ಕೊಡು' ಂಬ ಅಳಿಯಂದಿರ ಕಾಟದಿಂದ ರೋಸಿಹೋಗಿರ ೇಕು ಎಂತಲೇ ತಮ್ಮ ಜಾಹೀರಾತಿನಲ್ಲಿ ಹೀಗೆ ೇಳಿದ್ದಾರೆ.

'ಯಾವದೇ ತರದ ಬೇಡಿಕೆಯಿಲ್ಲದ ಸರಳ, ಾರ್ಮಿಕ ಮದುವೆಗೆ ಸಿದ್ಧವಿದ್ದ ವರಗಳ ತಂದೆ ುರಿಂದ ಪತ್ರ ವ್ಯವಹಾರವನ್ನು ಕೋರಲಾಗಿದೆ'

ಇದೇ ತರದ ಸ್ಪಷ್ಟನುಡಿ ಇದರಲ್ಲಿಯೂ ಇದೆ: ದೊಡ್ಡ ಮನೆಯೊಂದರ ಮಾಲಕಿಯುಳ್ಳ, ುರ್ಯಾದಸ್ಥ ಮನೆತನದ, ೨೮ ವರ್ಷದ, ಸರ ಾರೀ ನೌಕರಿಯಲ್ಲಿರುವ ಕನ್ಯೆಯೊಬ್ಬಳಿಗೆ ವರ ೇಕಾಗಿದೆ. ವರದಕ್ಷಿಣೆಯನ್ನಪೇಕ್ಷಿಸುವವರು ಬರೆಯುವ ಅಗತ್ಯವಿಲ್ಲ!!

ಮದುವೆಯ ಸಂಬಂಧದಲ್ಲಿ ವಧುವಿಗೆ ಇಂಥಿಂಥ ಅರ್ಹತೆಗಳಿರಬೇಕು. ಎಂದು ಕೇಳಿರುವದು ಕೆಲ ಸಲ ಮೋಜಿನದಿರುತ್ತದೆ: ಉದಾಹರಣೆಗಾಗಿ:

'೨೬ ವರ್ಷ ವಯಸ್ಸಿನ ಅಯ್ಯಂಗಾರ ಬ್ರಾಹ್ಮಣ ಯುವಕನಿಗೆ, ೨೧ ಅಥವಾ ಅದಕ್ಕೂ ಕಡಿಮೆ ವಯ ಸ್ಸಿನ ವಧು ಬೇಕು. ವರದಕ್ಷಿಣೆ ಗೌಣ ವಿಷಯ. ಬಿ. ಟಿ. ಪಾಸಾದ ಅಥವಾ ಬಿ. ಟಿ. ಟ್ರೇನಿಂಗ ಪಡೆ ಯುತ್ತಿರುವ ವಧುವಿಗೆ ಪ್ರಾಶಸ್ತ್ಯವಿದೆ.'

ಆಶ್ಚರ್ಯ! ಇಲ್ಲಿ ಅರ್ಜಿಗಳನ್ನು ಕರೆದದ್ದು ಮದುವೆಗಾಗಿಯೋ ಅಥವಾ ಮಾಸ್ತರಿಕೆಯ ನೌಕರಿ ಕೊಡಲಿಕ್ಕೋ ಎಂಬದೇ ತಿಳಿಯದು!

ಇಂತಹದೇ ಇನ್ನೊಂದು:

"ತರುಣ ಆಯ್. ಎ. ಎಸ್. ಅಧಿಕಾರಿಗೆ ಶ್ರೀವತ್ಸಗೋತ್ರದವಳಲ್ಲದ, ೨೦ ವರ್ಷದ ಕೆಳಗಿನ ವಯಸ್ಸಿನ, ಸಂಗೀತ ಮತ್ತು ಸಂಸ್ಕೃತಗಳನ್ನು ಬಲ್ಲ ವಧುಬೇಕಾಗಿದೆ'.

ಸಂಗೀತವೇನೋ ಸರಿಯೇ, ಆದರೆ ಮದುವೆಗೂ ಸಂಸ್ಕೃತಕ್ಕೂ ಏನು ಸಂಬಂಧವೋ!

ಇನ್ನೊಂದು ನಮೂನೆಯನ್ನು ನೋಡಿರಿ.

'ದೊಡ್ಡ ಹುದ್ದೆಯಿಂದ ನಿವೃತ್ತರಾದ ಅಧಿಕಾರಿ ಗಳೊಬ್ಬರ, ಎಮ್. ಎ. ಪಾಸಾದ ಒಬ್ಬಳೇ ಮಗಳಿಗೆ ವರ ಬೇಕು. ಸಂಗೀತ, ಹಿಂದಿ, ಚಿತ್ರಕಲೆ ಮತ್ತು ಮನೆಗೆಲಸಗಳನ್ನು ಬಲ್ಲವಳು. ಯೋಗ್ಯ-ತಾನುಸಾರ ವರದಕ್ಷಿಣೆ, ಉಚಿತವಾದ ರೀತಿಯಲ್ಲಿ ಲಗ್ನಸಮಾರಂಭ. ಆಯ. ಎ. ಎಸ್. ಅಥವಾ ತತ್-ಸಮಾನ ಹುದ್ದೆಯಲ್ಲಿದ್ದವರು ಮಾತ್ರ ವ್ಯವಹರಿಸ ಬೇಕು. ಜಾಹೀರಾತು ಆಯ್ಕೆಗಾಗಿ ಮಾತ್ರ.'

ಇವರಿಗೆ ತಮ್ಮ ಮಗಳ ಮದುವೆ ಅಗತ್ಯ. ಒಳ್ಳೆಯ ವರ ಬೇಕೆಂಬ ಅಭಿಲಾಷೆ ಬೇರೆ. ಆದರೆ ಕೊನೆಯ ವಾಕ್ಯವೇಕೋ ಏನೋ! 'ವರಗಳು ಬೇಕಾದಷ್ಟು ದ್ದಾರೆ. ಅತ್ಯುತ್ತಮವನ್ನು ಆರಿಸುವದಕ್ಕಾಗಿ ಮಾತ್ರ ಜಾಹೀರಾತು ಕೊಟ್ಟದ್ದು' ಎಂದು ಅರ್ಥವಲ್ಲವೇ? ಇದು ವರಜಾತಿಯ ಮೇಲಿನ ದಾಳಿಯಲ್ಲದೆ ಮತ್ತೇನು? ಇಂಥವರಿಗೆ ಒಂದು ಸೂಚನೆ ನನ್ನದು—ಜಾಹೀರಾ-ತಿನಿಂದೇನು ಪ್ರಯೋಜನ? ಹೇಗೂ ಆಯ್. ಎ. ಎಸ್. ಆದವರೇ ಬೇಕು. ಪ್ರತಿ ವರ್ಷ ಈ ಪರೀಕ್ಷೆ ನಡೆದೇ ನಡೆಯುವದು. ಅದರಲ್ಲಿ ಪಾಸಾದವರಿಗೆ ನೇರವಾಗಿ ಕಾಗದ ಬರೆದು ಸ್ವಯಂವರವನ್ನೇ ಏರ್ಪಡಿಸಬಹುದಲ್ಲ?

ಕೊನೆಯಲ್ಲಿ ಇನ್ನೂಂದೆರಡು ಮಾದರಿಗಳನ್ನು ನೋಡಿಬಿಡೋಣ. ಇವು ಮದುವೆಯ ಜಾಹೀರಾತು ಗಳಿಗಿಂತ ಹೆಚ್ಚಾಗಿ ನೌಕರಿಗಾಗಿ ಅರ್ಜಿಗಳನ್ನು ಕರೆದಿರುವಂತೆ ತೋರುತ್ತದೆ!

'ಬ್ರಿಟಿಶ್ ಫರ್ಮ ಒಂದರಲ್ಲಿ ದೊಡ್ಡ ಹುದ್ದೆ ಯಲ್ಲಿರುವ ತಿಂಗಳಿಗೆ ೩೦೦೦ ರೂಪಾಯಿಗಳ ವರ ಮಾನವಿರುವ ಮಲಬಾರ ಬ್ರಾಹ್ಮಣ ಯುವಕನೊಬ್ಬ ನಿಗೆ ಈ ಕೆಳಗಿನ ಅರ್ಹತೆಗಳುಳ್ಳ ವಧು ಬೇಕಾಗಿದೆ:

೧. ಸ್ಮಾರ್ತ ಬ್ರಾಹ್ಮಣಳಿರಬೇಕು; ಗೋತ್ರ ಕಾಶ್ಯಪವಿರಬಾರದು.

೨. ತೆಳ್ಳಗಿರಬೇಕು, ಬೆಳ್ಳಗಿರಬೇಕು.

೩. ಎತ್ತರ ೪ ಫೂಟು ೫ ಇಂಚುಗಳಿಗಿಂತ ಕಡಿಮೆಯಿರಬಾರದು, ೫ ಫೂಟ ಎರಡೂ ಮುಕ್ಕಾಲು ಇಂಚುಗಳಿಗಿಂತ ಹೆಚ್ಚಿಗಿರಬಾರದು.

೪. ವಯಸ್ಸು ೨೦ ರಿಂದ ೨೬ ರ ನಡುವೆ.

೫. ಕನ್ನಡಕ ಹಾಕಿಕೊಳ್ಳುತ್ತಿರಬಾರದು.

೬. ಗ್ರಾಜುಯೇಟ ಇರಬೇಕು.

೭. ಬಡತನ, ವರದಕ್ಷಿಣೆ, ಒಳಜಾತಿ, ಕುಂಡಲಿ ಇವೆಲ್ಲ ಗೌಣ.

೮. ಕನ್ಯೆಯ ರೂಪವೇ ಅತಿ ಮುಖ್ಯ.

ಸಂಪೂರ್ಣ ವಿವರಗಳೊಂದಿಗೆ ಮೊಹರಬಂದ ಕವರಿನಲ್ಲಿ ಉತ್ತರ ಬರೆಯಬೇಕು. ಅಪೂರ್ಣ ವಿವರಗಳುಳ್ಳ ಉತ್ತರಗಳನ್ನು ಗಮನಿಸಲಾಗುವ ದಿಲ್ಲ!

ಇದು ಇನ್ನೊಂದು ಬಗೆ:

ಅನುಕ್ರಮವಾಗಿ ೨೦, ೨೩, ೨೫ ವಯಸ್ಸಿನ, ಉಚ್ಚ ಶಿಕ್ಷಣ ಪಡೆದ, ಮನೆಗೆಲಸಗಳನ್ನು ಬಲ್ಲ, ಸುಂದರರಾದ, ಸುಸಂಸ್ಕೃತರಾದ, ಗೌರವಸ್ಥ ಕುಟುಂಬದ ಮೂವರು ತಂಗಿಯರಿಗೆ ವರಗಳು ಬೇಕು. ಅವರಿಗೆ ಈ ಕೆಳಗಿನ ಅರ್ಹತೆಗಳಿರ ಬೇಕು:

೧. ಒಂದನೇ ದರ್ಜೆಯ ಗೆಝೆಟೆಡ್ ಆಫೀಸರ ಅಥವಾ ತತ್ಸಮಾನ ಹುದ್ದೆಯಲ್ಲಿರಬೇಕು.

೨. ಆರೋಗ್ಯಯುತವಾದ, ಕಟ್ಟುಮಸ್ತಾದ ಒಳ್ಳೆಯ ದೇಹ ದಾರ್ಢ್ಯವಿರಬೇಕು.

೩. ೨೫ ರಿಂದ ೩೦ ವರುಷಗಳೊಳಗಿರಬೇಕು.

೪. ವರದಕ್ಷಿಣೆಯನ್ನು ಪಡೆಯದಿರಲು ಸಿದ್ಧರಿರ-ಬೇಕು.

೫. ಮದುವೆಯಲ್ಲಿ ನಿಜವಾಗಿಯೂ ಆಸಕ್ತಿಯುಳ್ಳ ವರಿರಬೇಕು.

೬. ಬೇಗನೆ ಮದುವೆ ಮಾಡಿಕೊಳ್ಳಲು ಸಿದ್ಧರಿರ ಬೇಕು.

ಹೀಗೆ ಇನ್ನೂ ಎಷ್ಟೋ ವಿಧವಾದ ಇಂಥ ಜಾಹೀ ರಾತುಗಳಿಂದ ಅದೆಷ್ಟೋ 'ಜನರ ಸ್ವಭಾವಗಳ ಪರಿ ಚಯ ನಮಗಾಗುವದು ಸಹಜ. ನನಗಂತೂ ಇವು ಗಳ ಅಭ್ಯಾಸ ಒಂದು ಮನೋರಂಜನೆಯ ಸಾಧನ. ಬೇಕಾದರೆ ನೀವೂ ಕೆಲವನ್ನು ಓದಿ ನೋಡಿರಿ!

[ಟಿಪ್ಪಣೆಗಳು:— (೧) ಪ್ರಾರಂಭದಲ್ಲಿ ಪೇಪರಿನ ಪುಟಗಳನ್ನು ಉಲ್ಲೇಖಿಸಲಾಗಿದೆ. ಅವು ಮದ್ರಾಸಿನ 'ಹಿಂದೂ' ಪತ್ರಿಕೆಗೆ ಸಂಬಂಧಿಸಿದವುಗಳು. (೨) ಇಲ್ಲಿ ಉದಾಹರಿಸಲಾದ ಜಾಹೀರಾತುಗಳು ಸ್ವಕಪೋಲ ಕಲ್ಪಿತವಲ್ಲ. ಆಗಾಗ ಪೇಪರು ಗಳಲ್ಲಿ ಬಂದವುಗಳನ್ನು ಕಲೆಹಾಕಿದ ನನ್ನ ಸಂಗ್ರಹದಲ್ಲಿಯವು. ಭಾಷಾಂತರ ನನ್ನದು. (೩) ಇದರ ಉದ್ದೇಶ ಯಾರನ್ನಾಗಲಿ ಟೀಕಿಸುವದಲ್ಲ. ಹರಟೆಗೊಂದು ವಿಷಯ — ಅಷ್ಟೇ.]

## ಹಿಜ್ ಮಾಸ್ಟರ್ಸ ವಾಯಿಸ್



ಲೇಖಕರು:
**ರಾಜಕುಮಾರ**
ಖ್ಯಾತ ಕನ್ನಡ ನಟ



# ನನ್ನ ಚಿತ್ರರಂಗದ ಸ್ಮೃತಿಗಳು

ಕನ್ನಡ ಮತ್ತು ತೆಲುಗು ಭಾಷೆಗಳ ಖ್ಯಾತ ನಟರಾಗಿರುವ ರಾಜಕುಮಾರ ಕಲಾವಿದರ ಕುಟುಂಬಕ್ಕೆ ಸೇರಿದವರು. ಇಂದು ಉನ್ನತ ಪಾತ್ರಗಳನ್ನು ಅವರು ನಿರ್ವಹಿಸುತ್ತಿದ್ದಾರೆ. ತಂದೆಯು ಹಾರೈಕೆ ಸಾರ್ಥಕವಾಗಿದೆ. ಚಿತ್ರರಂಗದ ಜೀವನ ಸಿಹಿ-ಕಹಿಗಳಿಂದ ಕೂಡಿದುದು. ಚಿತ್ರಜೀವನದಲ್ಲಿ ಬಂದ ಅನುಭವಗಳನ್ನು ರಾಜಕುಮಾರ ಅವರು ಇಲ್ಲಿ ರಸವತ್ತಾಗಿ ಹೇಳಿರುವರು.

"**YES** . . . ಮಾನೀಟರ್. . . . ಓಕೇ. . . . ಟಚಪ್. . . . ರೆಡೀ. . . . **Silence** !!. . . . . ಸ್ಟಾರ್ಟ್. . . . ಕ್ಲ್ಯಾಪ್. . . . ಕಟ್ !!!". . . . ಅರ್ಥವಾಗದ ಶಬ್ದಗಳು !. . . . ಇದೇ ನನ್ನ ಸಿನಿಮಾರಂಗದ ಸ್ವಾಗತಗೀತೆ, ನವಜೀವನದ ನಾಂದಿ !!

ರಂಗಭೂಮಿಯಿಂದ ಚಲನಚಿತ್ರಕ್ಕೆ ಬರಮಾಡಿಕೊಂಡ ಚಿತ್ರ "ಬೇಡರ ಕಣ್ಣಪ್ಪ".. ತಯಾರಕರ ತಂತಿ ತಲಪಿದೊಡನೆಯೇ ಹಿಂದಿನ ಸ್ಮೃತಿ ಚಿತ್ತಫಲಕದ ಮೇಲೆ ಹಾದು ಹೋಯಿತು. . . .

. . . . ನನಗಿನ್ನೂ ೧೨ ವರ್ಷ. . . . ನನ್ನ ಕೈ ಹಿಡಿದು ಕೊಂಡು ನಮ್ಮ ತಂದೆಯವರು ಮದರಾಸಿನ ಸೋಟಗಳ ಪರಿಚಯ ಮಾಡಿಕೊಡುತ್ತಿದ್ದರು. ಆಗ ಅವರು ಕನ್ನಡ ರಂಗಭೂಮಿಯ ಪ್ರಖ್ಯಾತ ನಟರಾಗಿದ್ದರು. ಮದರಾಸಿನ 'ಕಲ್ಯಾಣಿ ಫಿಲಂಸ್'ರವರ "ಪ್ರಲ್ಹಾದ" ಕನ್ನಡ ಚಿತ್ರದಲ್ಲಿ ನಟಿಸಲು ಬಂದಿದ್ದರು. ಪ್ರಮುಖ ಪಾತ್ರವನ್ನೇ ನಿರ್ವಹಿಸುವ ಎಲ್ಲ ಅರ್ಹತೆಗಳಿದ್ದೂ ಪುಟ್ಟ ಪಾತ್ರ ಒಂದರಿಂದ ತೃಪ್ತಿಪಟ್ಟುಕೊಳ್ಳಬೇಕಾಯಿತು. ತಮ್ಮ ಮಗನೂ ಉತ್ತಮ ನಟನಾಗಬೇಕು, ಅವನ ಬಾಳೂ ಹಸನಾಗಬೇಕೆಂದು ಅವರು ಕಂಡ ಕನಸು, ಅದನ್ನು ನನಸಾಗಿಸಲು ಅವರು ಮಾಡಿದ ತ್ಯಾಗ, ಪರಿಶ್ರಮ, ಅನುಭವಿಸಿದ ಕಷ್ಟನಷ್ಟಗಳು ಅಷ್ಟಿಷ್ಟಲ್ಲ. ಮತ್ತೆ ಮದರಾಸಿಗೆ ನನ್ನೊಡನೆ ಬಂದು, ಮೇಯಪ್ಪನ್ (AVM)ರವರ ಬಳಿ, "ಕರುಣೆಯಿಟ್ಟು ನನ್ನ ಮಗನಿಗೆ ನಿಮ್ಮ ಯಾವುದೊಂದು ಚಿತ್ರದಲ್ಲಾದರೂ ನಟಿಸಲು ಅವಕಾಶ ಕೊಡಿ," ಎಂದು ಅಂಗಲಾಚಿದರು. ಅವರು ಕೈಯಾಡಿಸಿದಾಗ ನಮ್ಮ ತಂದೆಯವರ ಕಣ್ಣಂಚಿನಲ್ಲಿ ನೀರು ತುಂಬಿತ್ತು. . . .

ತಯಾರಕರ ತಂತಿ ಓದುತ್ತಿದ್ದಂತೆಯೇ ನನ್ನ ಕಣ್ಣಂಚಿನಲ್ಲಿ ನೀರು ತುಂಬಿತ್ತು. ನಮ್ಮ "ಅಪ್ಪಾಜಿ"ಯವರ ಹಿರಿಯಾಸೆ ಕೈಗೂಡುವ ಕಾಲಕ್ಕೆ ನನ್ನನ್ನು ಮನತುಂಬ ಆಶೀರ್ವದಿಸಲು ಅವರಿಲ್ಲವಾಗಿದ್ದರು. ನನ್ನ ಈ "ವೃತ್ತಿ"ಗೆ ಬೇಕಾದ ಉಚ್ಚಶಿಕ್ಷಣ ಕೊಟ್ಟು ಕಣ್ಮುಚ್ಚಿದ್ದರು. ಇಂದು ನನ್ನದೆಂಬುದು ಏನೇ ಇದ್ದರೂ ಅದು ಅವರದೇ !. . . .

ಮೇಲಿನ "ಸ್ಮೃತಿ" ನನ್ನ ಜೀವನದ ಅಚ್ಚಳಿಯದ 'ಸ್ಮೃತಿ'. ಅಂತೂ 'ಕಣ್ಣಪ್ಪ'ನಾಗಲು ಮದರಾಸಿಗೆ ಬಂದೆ. ಕಣ್ಣಪ್ಪ ದೈವಭಕ್ತಿಗೆ ಎಷ್ಟು ಹೊಸಬನಾಗಿದ್ದನೋ, ಚಿತ್ರರಂಗಕ್ಕೆ ನಾನೂ ಅಷ್ಟೇ ಹೊಸಬ !

ಬೆಳಗಿನ ಝಾವ ೪ ಘಂಟೆಗೆ 'ಅಲಾರಾಂ'ನ ಆಲಾಪನೆ. ೫ರ ಹೊತ್ತಿಗೆ ಹೊರಗೆ ಕಾರಿನ ಕೂಗು !.. ಅದರಲ್ಲಿ ಕುಳಿತು ಇತರ ಸಹನಟರು, ಪಾರಿಭಾಷಿಕ ವರ್ಗದವರ ಮನೆಗಳ ಮುಂದಿನ 'ಮಂಟಪೋತ್ಸವ' ಮುಗಿಸಿ ಸ್ಟುಡಿಯೋ ಸೇರುವಿಕೆ. ಮತ್ತೊಮ್ಮೆ ಮುಖ ತೊಳೆದು ಅಲ್ಲಿಯ "ಬ್ರಹ" (Make-up Man)ನ ಮುಂದೆ ಮಂಡಿಸಿದರೆ ಮೇಲೇಳುವುದು ಮೂರು ಘಂಟೆಗಳ ಮೇಲೆಯೆ !..'ಮಿರರ್' ನೋಡುತ್ತಿದ್ದಂತೆಯೇ ಮುಖ ಮಾರ್ಪಾಡಾಗಿರುತ್ತದೆ. ನುಣುಪಾದ ಮುಖದ ಮೇಲೆ ಮಾರುದ್ದ ಗಡ್ಡ!..'ಮುಖವೇಷ'ವಾದ ಮೇಲೆ 'ಮೈ-ವೇಷ' ಎರಡೂ ಆದಮೇಲೆ 'ನೆಲ' (Floor)ಕ್ಕೆ ಪ್ರವೇಶ, ಕಟುಕನ ಮನೆಗೆ ಹೋಗುವ ಕುರಿಯಂತೆ ! 'ಕ್ಯಾಮರಾ' 'ಮೈಕ'ಗಳ ಮೊದಲ ದರ್ಶನ ನಡುಕ ಹುಟ್ಟಿಸಿತು. ಹುಟ್ಟು ನಾಟಕದವನಾದ್ದರಿಂದ ಬರೆದುಕೊಟ್ಟದ್ದ ಸಂಭಾಷಣೆಯನ್ನು ಬೆದರದೆ ಒದರಿದೆ, 'ಸ್ಟೇಜ'ನಮೇಲೆ ಉಸಿರುವಂತೆಯೇ!.. ಅಷ್ಟರಲ್ಲಿ ಶಬ್ದಗ್ರಾಹಕರ ಕೂಗು. "ಅಷ್ಟು ಜೋರಾಗಿ ಹೇಳದಿರಿ!" ಎಂದು. ಅದನ್ನೇ

ಹೆದರುತ್ತಾ ಮೆಲ್ಲಗೆ ಹೇಳಿದೆ, ಆಗ ದಿಗ್ದರ್ಶಕರ ಕೊರಗು, "Force ಸಾಲದು!" ಅಂತ. ಎರಡೂ ಏಕೆಂದು ಮಧ್ಯಮ ಮೀಟಿದೆ. ಕೃತಿಕರ್ತರು ಕಣ್ಣೀರಿಡುತ್ತಾ ಕೇಳಿಕ್ಕೊಂಡರು. ಮಾತಿನಲ್ಲಿ Life (ಲೈಫ್) ಸೇರಿಸಿ ಅಂತ. ಅಂತೂ ಎಲ್ಲರ ಮನಮೆಚ್ಚುವಂತೆ ಮಾತಾಡಿ ಮುಗಿಸಿದರೆ, ಛಾಯಾಗ್ರಾಹಕನ ಎಚ್ಚರಿಕೆ, "ಕೈ ಅಲ್ಲಾಡಿಸಬೇಡಿ!.. ಮುಖ ಇಷ್ಟು ತಿರುಗಿಸಬೇಡಿ!!"....ಇಷ್ಟೆಲ್ಲಾ ಕಷ್ಟಗಳನ್ನು ಅನುಭವಿಸಿ 'ಸೈ' ಎನಿಸಿಕೊಳ್ಳುವಷ್ಟರಲ್ಲಿ ಸಾಕುಸಾಕಾಗುತ್ತಿತ್ತು. ಎಲ್ಲವನ್ನೂ ಮುಗಿಸಿ ಮರಳಿ 'ಮೇಕಪ್' ತೆಗೆಯುವಷ್ಟರಲ್ಲಿ ಅಂಟಸಿದ ಗಡ್ಡ ಕೈಗೆ ಬಂದು ನಿಜವಾದ ಗಡ ಅಷ್ಟೇ ಉದ್ದಕ್ಕೆ ಅಲ್ಲಿ ಜೇಡು ಬಿಟ್ಟಿರುತ್ತಿತ್ತು!...... ಕಾಲಕ್ರಮೇಣ ಇವೆಲ್ಲಾ ಅಭ್ಯಾಸವಾಗಿ ಈಗ 'ಸವಿನೆನಪು'ಗಳಾಗಿ ಮಾತ್ರ ಉಳಿದಿವೆ. ಇದಲ್ಲದೆ ಕೆಲವು 'ಕಹಿಯಾದ ಸವಿನೆನಪುಗಳೂ' ಇವೆ! 'ಕಣ್ಣಪ್ಪ' ನನ್ನು ಮರಕ್ಕೆ ಕಟ್ಟಿ ಹೊಡೆಯುವ ದೃಶ್ಯ. ಬೆಳಗ್ಗೆ ೬ಕ್ಕೆ ನನ್ನನ್ನು ಮರಕ್ಕೆ ಕಟ್ಟಿದರು. ಮತ್ತೆ ಕಟ್ಟು ಬಿಚ್ಚಿದಾಗ ಸಂಜೆ ೬. ಹನ್ನೆರಡು ಘಂಟೆಗಳ ಸತತ ಬಿಗಿತದ ಪರಿಣಾಮವಾಗಿ ರಕ್ತಚಲನೆ ನಿಂತು ದೇಹವು ಕಟ್ಟಿದ್ದ ಮರದೊಂದಿಗೆ ಮರವಾಗಿತ್ತು. ಕಟ್ಟು ಕಳಚಿದಾಗ ಕೆಳಕ್ಕುರುಳಿದೆ. ಮತ್ತೆ ಮನುಷ್ಯನಾದದ್ದು ಮೂರು ದಿನಗಳ ನಂತರವೇ!... ಇದು ಕನ್ನಡದ 'ಕಣ್ಣಪ್ಪ' ನಿಗಾದ ಗತಿ!... ತೆಲುಗು ಅವತರಣಿಕೆಯಲ್ಲಿ ತಯಾರಕರು ಇನ್ನೂ ಒಂದು ಹೆಜ್ಜೆ ಮುಂದಿಟ್ಟು ಮರಕ್ಕೆ ಕಟ್ಟಿದ್ದೂ ಅಲ್ಲದೆ ನನ್ನನ್ನು ಹೊಡೆಯಲು ಬರುವ ಸೇವಕರನ್ನು ಬೆಂಕಿ ತಡೆಯಲೆಂದು, ಮರದ ಸುತ್ತ ಪೆಟ್ರೋಲ್ ಸುರಿದರು!... ಆದರೆ? ... ಸೇವಕರೇನೋ ಬರಲಿಲ್ಲ. ಸರಿ! ಪೆಟ್ರೋಲ್ ಅಳತೆಮೀರಿ ಸುರಿದದ್ದರ ಪರಿಣಾಮವಾಗಿ ಬೆಂಕಿ ನನ್ನನ್ನಾವರಿಸಿತ್ತು. ಓಡಿ ಹೋಗಲು ನನ್ನನ್ನು ಮರಕ್ಕೆ ಕಟ್ಟಬಿಟ್ಟಿದ್ದಾರೆ. ಬೇರೆ ಯಾರೂ ಬೆಂಕಿಯನ್ನು ದಾಟಿ ಬಂದು ನನ್ನನ್ನು ಬಿಡಿಸುವಂತಿಲ್ಲ!!... ಮಧ್ಯೆ ನನ್ನ ಗತಿ?... ಬೆಂಕಿ ಆರಿದ ಮೇಲೆ ನನಗೆ ಜೇನುತುಪ್ಪದ ಸ್ನಾನ. ಏಳು ದಿನಗಳ ರಜಾ!!...

ಅದೇ ತಯಾರಕರ "ಭೂಕೈಲಾಸ"... ರಾವಣ ಜಲಪಾತದ ಒಂದು ತುದಿಯಿಂದ ಇನ್ನೊಂದು ತುದಿಗೆ ಭಕ್ತಿಗೀತೆಯೊಂದನ್ನು ಹಾಡುತ್ತಾ ಹೋಗುತ್ತಿರುತ್ತಾನೆ. ಸಿನಿಮಾ ಹಾಡೆಂದು ನೆನೆಯದೆ ಭಕ್ತಿಯಿಂದಲೇ ಹಾಡಿ ಬಂದೆನೋ ಏನೋ... ಬದುಕಿಬಂದೆ!!.. ಅಕಸ್ಮಾತ್ ಕಾಲುಜಾರಿದ್ದರೆ ೪೦-೫೦ ಅಡಿ ಕೆಳಕ್ಕೆ ಬಿದ್ದು ಆಗ ಧ್ಯಾನಿಸುತ್ತಿದ್ದ ಈಶ್ವರನ ಪಾದಾರವಿಂದಗಳನ್ನೇ ಸೇರಿಬಿಡುತ್ತಿದ್ದೆ!...

ಇನ್ನು ಪ್ರಾಣಿಗಳ ವಿಷಯಕ್ಕೆ ಬಂದರೆ, 'ಕಂಠೀರವ' ಚಿತ್ರ!... 'ಸುಲ್ತಾನ್,' ಕಲ್ಲೀಕೋಟೆಯ ಕಾಡಿನಲ್ಲಿ ಮರದ ದಿಮ್ಮಿಗಳನ್ನೂ ಸಾಗಿಸುವ ಆನೆ. 'ಕಂಠೀರವ'ನಾಗಿ ಅದರೊಂದಿಗೆ ನನ್ನ 'ಕುಸ್ತಿ'?.. ನನ್ನನೂ ಮರದ ದಿಮ್ಮಿ ಎಂದು ತಿಳಿದುಕೊಂಡಿತೋ ಏನೋ; ಕಣ್ಣು ಮುಚ್ಚಿಬಿಡುವಷ್ಟರಲ್ಲಿ ಎತ್ತಿ ಎಸೆದಿತ್ತು. 'ರಾಣಿ ಹೊನ್ನಮ್ಮ'ಕ್ಕಾಗಿ ಉಳಿದೆ!... ಆ ಚಿತ್ರಕ್ಕಾಗಿ ಕುದುರೆಯ ಮೇಲೆ ನಾಗಾಲೋಟ ಮಾಡುತ್ತಿದ್ದೆ. ಹತೋಟಿ ತಪ್ಪಿ, ಕುದುರೆ ನನ್ನನ್ನು 'ನಾಗಲೋಕ'ಕ್ಕೇ ಕಳಿಸಿದಂತಿತ್ತು. ಮತ್ತೆ ಎದ್ದಾಗ ಮನೆಯಲ್ಲಿ ಮಂಚದ ಮೇಲಿದ್ದೆ. ಮೈ-ಮೂಳೆಯೆಲ್ಲಾ ಮೈದಾಹಿಟ್ಟಾದಂತಿತ್ತು.

ಕಡೆಯದಾಗಿ ಧರ್ಮವಿಜಯ ಚಿತ್ರ!.... ತಿರುಪತಿಗೆ ಹೋಗುತ್ತಿದ್ದ ಯಾತ್ರಿಕರನ್ನು ಕಳ್ಳರು ಮುತ್ತುತ್ತಾರೆ. ನಾಯಕ ಕಳ್ಳರನ್ನು 'ಲಾಟೀವರಸೆ'ಯಿಂದ ಹೊಡೆದೋಡಿಸಿ ಯಾತ್ರಿಕರನ್ನು ಕಾಪಾಡುವ ದೃಶ್ಯ!.... 'ಕಳ್ಳ'ನೊಬ್ಬ ನಿಜವಾಗಿ ನನ್ನ ಬುರುಡೆಗೆ ಬಿಸಿನೀರು ಕಾಯಿಸಿದ! ... ಪುನಃ ಚೇತರಿಸಿಕೊಳ್ಳುವ ವರೆಗೆ ಚಿತ್ರೀಕರಣ ಬಂದ್!....

ಕನ್ನಡಮ್ಮನ ಕೃಪೆ, ಹಿರಿಯರ ಆಶೀರ್ವಾದ ಕನ್ನಡಿಗರೆಲ್ಲರ ಅಭಿಮಾನ ನನ್ನ ತಲೆಯನ್ನು ಇಲ್ಲಿನವರೆಗೆ ಕಾಯ್ದಂತೆಯೇ ನನ್ನ ಕಡೆಯುಸಿರ ವರೆಗೂ ಕಾಯಲಿ!...

ಎಲ್ಲರ ಮನೆ - ಮನಸ್ಸಿಗೂ ದೀಪಾವಳಿ ಮರೆಯಲಾಗದ ಆನಂದವನ್ನು ತುಂಬಿತರಲಿ. ಕನ್ನಡ ನಾಡು ಕಲಾದೇವಿಯ ತೌರಾಗಲಿ.



ಲೇಖಕರು:
ಶ್ರೀ ಎಚ್. ಕೆ. ವಿಜಯನಾರಸಿಂಹ, ಮದ್ರಾಸ

# ದಕ್ಷಿಣ ಭಾರತದ ಚಲಚ್ಚಿತ್ರೋದ್ಯಮ

ದಕ್ಷಿಣ ಭಾರತದ ಚಿತ್ರೋದ್ಯಮವು ಇಂದು ಹಿಂದೀ ಚಿತ್ರರಂಗದೊಂದಿಗೆ ಸ್ಪರ್ಧಿಸುತ್ತಿದೆ. ಅನೇಕ ತೊಡಕುಗಳನ್ನು ಎದುರಿಸಿಯೂ ಅದು ಪ್ರಗತಿ ಸಾಧಿಸುತ್ತಿದೆ. ಆದರೆ ನಾಟಕೀಯ ಅಂಶಗಳನ್ನಿನ್ನೂ ಅದು ಬಿಟ್ಟುಕೊಟ್ಟಿಲ್ಲ. ಈ ಚಿತ್ರೋದ್ಯಮದ ವಿಮರ್ಶಕನೋಟವನ್ನು ಇಲ್ಲಿ ಕಾಣಬಹುದು.

ದಕ್ಷಿಣ ಭಾರತದ ಚಿತ್ರೋದ್ಯಮವೆಂದರೆ ಮುಖ್ಯವಾಗಿ ಭಾಷೆಗಳಿಂದ ಉತ್ತರ ಭಾರತಕ್ಕೆ ದೂರವಾಗಿ ಕಾಣುವ ತಮಿಳು, ತೆಲುಗು, ಕನ್ನಡ, ಮಳೆಯಾಳ ಚಿತ್ರೋದ್ಯಮವೆಂದು ವಿಂಗಡಿಸಬಹುದು. ಸಮಗ್ರ ದೃಷ್ಟಿಯಿಂದ ಭಾರತದಲ್ಲಿ ಚಿತ್ರೋದ್ಯವೆಂದರೆ ಬೃಹತ್‌ಗ್ರಂಥವನ್ನೇ ಬರೆಯಬೇಕಾದೀತು! ದಕ್ಷಿಣ ಭಾರತ ಚಿತ್ರೋದ್ಯಮ ಕುರಿತಾಗಿ ಈ ಲೇಖನ ಕಿಂಚಿತ್ ಪರಿಚಯಾತ್ಮಕ ಅಷ್ಟೆ.

## ನಾಟಕ-ಸಿನಿಮಾ

ಸಿನಿಮಾಕ್ಕೆ ತಾಯಿ ನಾಟಕವೆನ್ನುವುದು ಲೋಕವಿದಿತವಾದ ವಿಷಯ. ನಾಟಕವನ್ನು ರಂಗಭೂಮಿಯಲ್ಲಿ ಪ್ರದರ್ಶಿಸುವಾಗ ಭರತ ಮುನಿ ನಿರ್ದೇಶಿಸಿರುವಂತೆ

"ಯಥಾ ಜೀವಸ್ಸ್ವಭಾವಸ್ವಂ ಪರಿತ್ಯಜ್ಯಾನ್ಯ ದೈಹಿಕಂ
ಪರಭಾವಂ ಪ್ರಕುರುತೆ ಪರದೇಹಮುಪಾಶ್ರಿತಃ
ಏವಂ ಬುಧಂ ಪರಂಭಾವಂ ಸೋಽಸ್ಮೀತಿ ಮನಸಾಸ್ಮರನ್
ವೇಷ ವಾಗಂಗಲೀಲಾಭಿಶ್ಚೇಷ್ಟಾಭಿಶ್ಚ ಸಮಾಚರೇತ್

ದೇಹದಿಂದ ದೇಹಕ್ಕೆ ಹೋಗುವ ಜೀವನು ಹೇಗೆ ಒಂದರಿಂದ ಮತ್ತೊಂದಕ್ಕೆ ಹೊಂದಿಕೊಂಡು ಆಯಾ ದೇಹದ ಗುಣಧರ್ಮ ಸ್ವಭಾವಗಳನ್ನು ಅನುಸರಿಸುತ್ತಾನೆಯೋ ಹಾಗೆ ನಟನು ತಾನು ಧರಿಸುವ ಪಾತ್ರದ ಸ್ವಭಾವಕ್ಕನುಗುಣವಾಗಿ ನಡೆನುಡಿಗಳನ್ನು ಉಡಿಗೆತೊಡಿಗೆಗಳನ್ನು ಮಾರ್ಪಡಿಸಿಕೊಂಡು. ಅಂದರೆ ಪಾತ್ರವೇ ತಾನಾಗಿ ಅಭಿನಯಿಸಬೇಕು. ನಾಟಕದಲ್ಲಿ ಇದಕ್ಕೆ ವಿಶೇಷ ಸ್ವಾತಂತ್ರ್ಯ ಉಂಟು. ಆದರೆ ಸಿನಿಮಾದಲ್ಲಿ ಸೀಮಿತವಾಗಿರಬೇಕು.

ನಾಟಕದಲ್ಲಿ ಸಾಧನ ಸಲಕರಣೆಗಳ ಅಭಾವದಿಂದ ಪಾತ್ರ ಸ್ವಭಾವಕ್ಕೆ ಅಸಹಜವಾದ ಕ್ರಿಯಾಸೂಚಕ ಸಂಭಾಷಣೆಗಳು, ಸ್ವಗತಗಳು ಅಗತ್ಯವಾಗಿ ತಲೆಹಾಕುತ್ತವೆ. ಸಿನಿಮಾದಲ್ಲಿ ಇವಕ್ಕೆ ಎಡೆ ಅಪರೂಪವಾಗಿರಬೇಕು.

ರಂಗಭೂಮಿಯ ದೃಷ್ಟಿಯಿಂದ 'ನಾಲ್ಕಾಣೆ ಪ್ರಭು'ಗಳ ಮೆಚ್ಚಿಕೆಗಾಗಿ ಕಿರಿಚಿ ಮಾತನಾಡುವ ಕಂಠಶೋಷಣೆ ಸಿನಿಮಾದಲ್ಲಿ ಅನಗತ್ಯವಾಗಿರುತ್ತದೆ. ರಂಗಭೂಮಿಯಲ್ಲಿ ಕೆಲವೊಮ್ಮೆ ನಟನೆಯಿಂದ ಸೂಚಿಸಬಹುದಾದ್ದನ್ನೂ ಸಂಭಾಷಣೆಗಳಿಂದಲೇ ತಿಳಿಯಪಡಿಸಬೇಕು. ಆದರೆ ಸಿನಿಮಾದಲ್ಲಿ ಛಾಯಾಗ್ರಹಣ ಮುಂದುವರಿದಂತೆಲ್ಲ ಛಾಯಾಗ್ರಾಹಕನ ಕೌಶಲ ನಟನ ಮುಖದ ರೇಖೆಗಳಿಂದ ಭಾವವನ್ನು ಸ್ಪಷ್ಟಪಡಿಸಬಲ್ಲದು. ಒಟ್ಟಿನಲ್ಲಿ ನಾಟಕದಲ್ಲಿ ಅಸಾಧ್ಯವಾದುದನ್ನು ಸಿನಿಮಾದಲ್ಲಿ ಸಾಧ್ಯವಾಗಿಸಬಹುದು. ಈ ಕಲೆ ದಕ್ಷಿಣ ಭಾರತದಲ್ಲಿ ಎಷ್ಟರ ಮಟ್ಟಿಗೆ ಪ್ರಗತಿಪಥದಲ್ಲಿ ಸಾಗಿದೆ. ಕೊಂಚ ವಿವೇಚಿಸೋಣ.



'ದೊಂಗಲ್ಲ ದೊರೆ' ಯಲ್ಲಿ ನಾಗೇಶ್ವರರಾವ ಮತ್ತು ಜಮುನಾ

## ವ್ಯಾಪಾರ ದೃಷ್ಟಿಕೋನ

ವ್ಯಾಪಾರ ದೃಷ್ಟಿಯಿಂದ ನೋಡಿದಾಗ ಸಿನಿಮಾರಂಗ ನಾಟಕರಂಗಕ್ಕಿಂತ ಬಹು ಆದಾಯಕರವೆಂಬ ವಿಷಯ ದಿನೇ ದಿನೇ ವರ್ಧಿಸುತ್ತಿರುವ ಚಿತ್ರರಂಗವೇ ಸಮರ್ಥಿಸಬಲ್ಲದು. ಆದರೆ ನಾಟಕರಂಗ, ಸಿನಿಮಾರಂಗಕ್ಕಿಂತಲೂ ಹೆಚ್ಚು ಕ್ಷೇಮಕರವೆಂಬ ಭಾವನೆ ಇದೀಗ ದೃಢವಾಗುವ ಪುನರಾವರ್ತನೆಯಾಗುತ್ತಿದೆ.

ಯೆಂದು ಸೂಚಿಸಲು ಅಭ್ಯುದಯದಲ್ಲಿರುವ ಕೆಲವು ನಾಟಕ ಸಂಸ್ಥೆಗಳು ಈಗ ಸಾಕ್ಷಿಯಾಗಿ ಚಿಗುರುತ್ತಿವೆ.

ವ್ಯಾಪಾರ ಮತ್ತು ಕಲೆ ಇವುಗಳಲ್ಲಿ ಕಲಾವಿದ ಕಲೆಗೇ ಶರಣಾಗುತ್ತಾನೆ. ನಾಟಕ ಕಲೆಗಾಗಿಯೇ ಮೀಸಲಾಗಿರುವಲ್ಲಿ ವ್ಯಾಪಾರವೇ ಪ್ರಧಾನವಾದ ಸಿನಿಮಾರಂಗ. ಕಲಾಪ್ರೇಮಿಗೆ ಕೀಳಾಗಿ ಕಾಣಬಹುದು. ಆದರೆ ಸಿನಿಮಾದಲ್ಲಿ ಕಲೆಗಾರಿಕೆ ಇಲ್ಲದಿದ್ದರೆ ಅದು ಭಿನ್ನರುಚಿಯ ಪ್ರೇಕ್ಷಕಸಮುದಾಯಕ್ಕೆ ಸಮಾರಾಧನವಾಗಲು ಸಾಧ್ಯವಾಗುತ್ತಿರಲಿಲ್ಲ.

ಸಿನಿಮಾ ನಾಟಕದಿಂದ ಮೈಗೊಂಡು ಬೆಳೆದ ಕಲೆಯ ಇನ್ನೊಂದು ಪ್ರಕಾರ. ಕಲೆಯ ಸರ್ವತೋಮುಖತೆಯನ್ನು ಪ್ರಕಟಿಸಲು ಸಿನಿಮಾ ಅತ್ಯಂತ ಪ್ರಭಾವಶಾಲಿ ಮಾಧ್ಯಮ.

ಒಂದು ಚಿತ್ರ ತಯಾರಿಕೆಯ ಹಿನ್ನೆಲೆಯಲ್ಲಿ ಅನೇಕ ಕಲಾಕುಶಲಿಗಳ ಸಮಷ್ಟಿ ಕೃಷಿ ಇರುತ್ತದೆ. ಸಾಹಿತ್ಯ (ಸಿನಿಮಾ ಭಾಷೆಯಲ್ಲಿ ತಯಾರಾದ ಶಬ್ದಸಮೂಹ) ಕಥೆ, ಜನಪ್ರಿಯತೆ, ಪಾಲ್ಗೊಳ್ಳುವ ನಟರ ಅನುಕೂಲತೆ ನಿರ್ಮಾಪಕನ ಅಭಿರುಚಿ, ನಿರ್ದೇಶಕನ ಚತುರತೆ, ತಾಂತ್ರಿಕ ಸಾಧ್ಯತೆ ಹಲವೊಮ್ಮೆ ಹಂಚಿಕೆದಾರರ ಸಲಹೆ ಮೊದಲಾದ ಎಲ್ಲ ದೃಷ್ಟಿಕೋನಗಳಿಗೂ ಹೊಂದುವಂತಿರಬೇಕಾಗುತ್ತದೆ.

ನಟನೆ ಸೂಕ್ಷ್ಮವಾಗಿ ವಿವೇಚಿಸಿದರೆ ಸಿನಿಮಾ ನಟನೆ ಯಾಂತ್ರಿಕವಾಗಿಯೇ ಕಾಣುತ್ತದೆ. ಛಾಯಾಗ್ರಾಹಕನ ಸೂಚನೆ, ನಿರ್ದೇಶಕನ ಕಟ್ಟಲೆ, ಸಾಹಿತಿಯ ಸಲಹೆ, ಶಬ್ದಗ್ರಾಹಕನ ಸವರಣೆ, ಮೇಲಾಗಿ ಪ್ರೇಕ್ಷಕರ ಆದರಗಳಿಸುವ ಅಭಿನಯದ ಲಕ್ಷ್ಯ (ಪರೋಕ್ಷದಲ್ಲಿ) ನಟನಿಗೆ ಇರುತ್ತದೆ.

ಶ್ರಾವ್ಯ ಹಾಗೂ ದೃಶ್ಯ ಪ್ರಯೋಗವಾದ ಸಿನಿಮಾಕಲೆಯ ಹಿನ್ನೆಲೆಯಲ್ಲಿ ಪ್ರಧಾನ ಪಾತ್ರ ವಹಿಸುವ ನಿರ್ದೇಶಕ, ಸಹಾಯಕ ನಿರ್ದೇಶಕ, ಛಾಯಾಗ್ರಾಹಕ, ಸಂಕಲನ ತಜ್ಞ ಮೊದಲಾದ ಕುಶಲಿಗಳಲ್ಲಿ ಪ್ರತಿಯೊಬ್ಬನ ಪ್ರತಿಭೆಯೂ ಹೊರಹೊಮ್ಮುತ್ತದೆ.

ಆದರೆ ಸ್ಥೂಲವಾಗಿ ನೋಡಿದಾಗ ಸಾಮಾನ್ಯ ಪ್ರೇಕ್ಷಕ ಕಥೆ ಹಾಗೂ ನಟನೆಯನ್ನು ಮಾತ್ರ ಗಮನಿಸುತ್ತಾನೆಂಬುದು ನಿರ್ವಿವಾದ. ಆದ್ದರಿಂದಲೇ ಮುಖ್ಯವಾಗಿ ಕಥೆ ಮತ್ತು ಕಲಾವಿದರ ಆಯ್ಕೆಯ ಬಗ್ಗೆ ನಿರ್ಮಾಪಕರು ಹೆಚ್ಚು ಗಮನವೀಯಬೇಕು.

## ಐದು ಭಾಷೆಯ ಚಿತ್ರಗಳು

ದಕ್ಷಿಣ ಭಾರತದ ಚಿತ್ರೋದ್ಯಮದಲ್ಲಿ ಮೊದಲಸ್ಥಾನ ತಮಿಳು, ಎರಡನೆಯ ಸ್ಥಾನ ತೆಲುಗು, ಮೂರನೆಯ ಸ್ಥಾನ ಕನ್ನಡ, ನಾಲ್ಕನೆಯ ಸ್ಥಾನ ಮಳಯಾಳಿ, ಐದನೆಯ ಸ್ಥಾನ ಸಿಂಹಳಿ ಗಳಿಸಿವೆ.

ವಾಕ್ಚಿತ್ರ ಯುಗಾರಂಭ ೧೯೩೧ ರಿಂದ ಎಂತಲೇ ಹೇಳಬೇಕು. ದಕ್ಷಿಣ ಭಾರತದಲ್ಲಿ ತಮಿಳು, ತೆಲುಗು, ಕನ್ನಡ, ಮಳೆಯಾಳ, ಸಿಂಹಳಿ ಭಾಷೆಗಳೆಲ್ಲ ೧೯೩೧ ರಿಂದ ೧೯೫೯ ರ ವರೆಗೆ ೧೫೩೧ ಚಿತ್ರಗಳು ತಯಾರಾಗಿವೆ.

ಅಂದರೆ ತಮಿಳಿನಲ್ಲಿ ೮೮೫ ಚಿತ್ರಗಳು, ತೆಲುಗಿನಲ್ಲಿ ೪೩೯ ಚಿತ್ರಗಳು, ಕನ್ನಡದಲ್ಲಿ ೧೧೦ ಚಿತ್ರಗಳು, ಮಳಯಾಳದಲ್ಲಿ ೭೧, ಸಿಂಹಳಿಯಲ್ಲಿ ೨೬ ಚಿತ್ರಗಳು ತಯಾರಾಗಿವೆ.

ದ. ಭಾರತದಲ್ಲಿ ೧೯೬೦ ನೇ ಜನವರಿಯಿಂದೀಚೆಗೆ ತಯಾರಾಗಲು ಅಣಿಯಾಗಿರುವ ಚಿತ್ರಗಳ ಸಂಖ್ಯೆ ತಮಿಳು ೧೪೭, ತೆಲುಗು ೬೪, ಕನ್ನಡ ೧೩, ಮಳಯಾಳ ೬, ಸಿಂಹಳಿ ೨ ಹೀಗೆ ಮೊತ್ತದಲ್ಲಿ ೨೪೧ ಸಂಸ್ಥೆಗಳು ಚಿತ್ರತಯಾರಿಕೆಯಲ್ಲಿ ಕೈ ಹಾಕಿವೆ. ಇದರಲ್ಲಿ ಚಿತ್ರ ತಯಾರಾಗಿ ಬಿಡುಗಡೆಯಾಗುವ ಚಿತ್ರಗಳ ಸಂಖ್ಯೆಯನ್ನು ಈಗಲೇ ನಿರ್ಧರಿಸಲಾಗುವುದಿಲ್ಲ.

ಈ ಅಂಕಿ ಅಂಶಗಳಿಂದ ಸಿನಿಮಾ ರಂಗ ವರ್ಷೇವರ್ಷೇ ವರ್ಧಮಾನ ದಿಶೆಯಲ್ಲಿ ಸಾಗಿದೆ ಎಂಬುದು ಸ್ಪಷ್ಟವಾಗಿದೆ.

ಆದ್ದರಿಂದ ನಾಟಕರಂಗಕ್ಕಿಂತ ಸಿನಿಮಾ ರಂಗ ಔದ್ಯಮಿಕ ಯಶಸ್ಸು ಗಳಿಸಿದೆ ಎಂದರೆ ತಪ್ಪಾಗದು. ಆದರೂ ಸಿನಿಮಾ 'ಸೆಲ್ಯೂಲಾಯ್ಡ್ ನಾಟಕ'ವಾಗಿಯೇ ಉಳಿದಿದೆ ಎನ್ನಬಹುದು.

## ಹಾದಿ ಹೇಗೆ ಸಾಗಿದೆ?

ಮೇಲೆ ವಿವರಿಸಿದಂತೆ ನಾಟಕ - ಸಿನಿಮಾ ತಾಯಿ ಮಕ್ಕಳಂತೆ ಇದ್ದರೂ ಅವಳಿಮಕ್ಕಳಂತೆ ಸಾಗಿವೆ.

ವಾಕ್ಚಿತ್ರ ಯುಗಾರಂಭವಾದ ಮೇಲೆ ಅನೇಕ ಮಂದಿ ನಾಟಕ ಕಲಾವಿದರು ಮತ್ತು ಸಂಗೀತ ವಿದ್ವಾಂಸರೂ ಚಿತ್ರೋದ್ಯಮವನ್ನು ವೃತ್ತಿಯಾಗಿ ಅವಲಂಬಿಸಿದರು. ಈ ಕಲಾವಿದರಿಗೆ ನೆರಳು ನೀಡಲು ಕಲಾಭಿಮಾನಿ ಶ್ರೀಮಂತರನೇಕರು ಚಿತ್ರ ತಯಾರಿಕೆಯ ಉದ್ಯಮವನ್ನು ಕೈಗೊಂಡರು.

ಆದರೆ ಮೊದಲಲ್ಲಿ ಚಿತ್ರ ತಯಾರಿಕೆಗಾಗಿ ದಕ್ಷಿಣ ಭಾರತದವರು ಕೊಲ್ಹಾಪುರ, ಪೂನಾ, ಮುಂಬೈ ಇಲ್ಲವೆ ಕಲ್ಕತ್ತೆಯ ಸ್ಟುಡಿಯೋಗಳಿಗೇ ಹೋಗಬೇಕಾಗಿತ್ತು.

ಆ ದಿನಗಳಲ್ಲಿ ದಕ್ಷಿಣ ಭಾರತದ ಚಿತ್ರೋದ್ಯಮ ಕುಂಟುತ್ತಾ ಸಾಗಿ ೧೯೩೪ರ ನಂತರ ಸ್ವತಂತ್ರವಾಗಿ ಮುನ್ನಡೆಯಲು ಮದರಾಸಿನಲ್ಲೇ ಸಿದ್ಧವಾಯಿತು. ಅಂದರೆ ಮೊದಲ ಸಿನಿಮಾ ಸ್ಟುಡಿಯೊ ೧೯೩೪ರಲ್ಲಿ ಮದರಾಸಿನಲ್ಲಿ ಶ್ರೀ ಎ. ನಾರಾಯಣನ್‌ರವರಿಂದ ಸ್ಥಾಪಿತವಾಯಿತು. ಈಗ ೧೪ ಸ್ಟುಡಿಯೋಗಳಿವೆ.

ಈ ಪ್ರವರ್ಧಮಾನಕ್ಕೆ ಉದ್ಯಮದ ಮೇಲೆ ಸರ್ಕಾರದ ದೃಷ್ಟಿಬಿದ್ದು ಮೊದಲಬಾರಿಗೆ ೧೯೪೬-೪೭ರಲ್ಲಿ ಮನೋರಂಜನ ತೆರಿಗೆಯನ್ನು ಹೇರಿತು. ಯಾವ ಪ್ರತಿಭಟನೆಯೂ ಸರ್ಕಾರದ ಈ ನಿರ್ಧಾರವನ್ನು ಬದಲಿಸಲು ಶಕ್ತವಾಗಲಿಲ್ಲ ಆದರೂ, ಸಿನಿಮಾರಂಗ ಮುನ್ನಡದೇ ಇತ್ತು.

೧೯೪೮-೪೯ ರಲ್ಲಿ ಚಿತ್ರದ ಉದ್ಯವನ್ನು ಕತ್ತರಿಸಬೇಕಾಗಿಬಂತು. ಕಾರಣ ಕಚ್ಚಾ ಫಿಲಂನ ಅಭಾವ. ಇದೂ ಅಲ್ಲದೆ ಪ್ರದರ್ಶನ ತೆರಿಗೆಯನ್ನು ಆಗಲೇ ಜಾರಿಗೆ ತರಲಾಯಿತು.



'ಮಕ್ಕಳ ರಾಜ್ಯ' (ಕನ್ನಡ) ದಲ್ಲಿ [illegible] ನೃತ್ಯ.

೧೯೫೦-೫೧ರಲ್ಲಿ ಫಿಲಂ ಅಭಾವ ನೀಗಿ ಆಶಾದಾಯಕ ವಾತಾವರಣವೇರ್ಪಟ್ಟಿತು.

ವಾಕ್‌ಚಿತ್ರೋದ್ಯಮ ೧೯೫೬-೫೭ ರಲ್ಲಿ ತನ್ನ ಇಪ್ಪತ್ತೈದನೇ ವರ್ಷದ ಹುಟ್ಟು ಹಬ್ಬವನ್ನಾಚರಿಸಿತು. ಅಂದರೆ ವಾಕ್‌ಚಿತ್ರೋದ್ಯಮದ ರಜತೋತ್ಸವವನ್ನು ಫಿಲಂ ಛೇಂಬರ್ ಸಂಸ್ಥೆ ಆಚರಿಸಿತು.

ಮಾರನೇ ವರ್ಷವೇ (೧೯೫೭-೫೮) ಉದ್ಯಮದ ಉತ್ಸಾಹವನ್ನು ಕುಗ್ಗಿಸುವ ಕಚ್ಚಾ ಫಿಲಂ ನಿಯಂತ್ರಣ ಜಾರಿಯಲ್ಲಿ ಬಂದಿತು. ಇದರಿಂದಾಗಿ ಪ್ರಗತಿಯ ಹೆಜ್ಜೆ ಇಡುತ್ತಿದ್ದ ಉದ್ಯಮ ಮತ್ತೆ ದೊಡ್ಡ ಪ್ರತಿಬಂಧಕವನ್ನು ಎದುರಿಸಬೇಕಾಯಿತು. ಆದರೂ ದಕ್ಷಿಣ ಭಾರತದ ಚಿತ್ರೋದ್ಯಮ ತನ್ನ ವೇಗವನ್ನು ಕಮ್ಮಿಮಾಡಲಿಲ್ಲ. ೧೯೫೮ರಲ್ಲಿ ೧೨೦ ಚಿತ್ರಗಳು ತಯಾರಾಗಿ ಬಿಡುಗಡೆಯಾಗಿದ್ದರೆ ೧೯೫೯ರಲ್ಲಿ ೧೩೬ ಚಿತ್ರಗಳು ತಯಾರಾಗಿ ಬಿಡುಗಡೆಯಾಗಿವೆ.

ಅಲ್ಲದೆ ಈ ಬಿಡುಗಡೆಯಾದ ಚಿತ್ರಗಳಲ್ಲಿ ನಾಲ್ಕು ಬಗೆಯ ವಿಂಗಡಣೆ ಮಾಡಿದರೆ (೧) ಸಾಮಾಜಿಕ (೨) ಜಾನಪದ (೩) ಚಾರಿತ್ರಿಕ ಮತ್ತು (೪) ಪೌರಾಣಿಕ ಚಿತ್ರಗಳೆಂದು ಕಂಡುಬರುತ್ತವೆ.



'ರಾಣಿ ಹೊನ್ನಮ್ಮ' (ಕನ್ನಡ) ದಲ್ಲಿ ಒಂದು ಹೃದಯಂಗಮ ದೃಶ್ಯ.

---

೧೯೫೯ ರಲ್ಲಿ ೮೪ ಸಾಮಾಜಿಕ ಚಿತ್ರಗಳೂ ಚಿತ್ರಗಳೂ ೩ ಚಾರಿತ್ರಿಕ ಚಿತ್ರಗಳೂ
೨೬ ಜಾನಪದ ಚಿತ್ರಗಳೂ ೧೬ ಪೌರಾಣಿಕ ಇತರ ಬಗೆಯ ಚಿತ್ರಗಳೂ ತಯಾರಾಗಿವೆ.

---

'ಅಬ್ಬಾ ಆ ಹುಡುಗಿ' (ಕನ್ನಡ) ಯಲ್ಲಿ ಒಂದು ಹಾಸ್ಯ ಸನ್ನಿವೇಶ.

ಕನ್ನಡ ಚಿತ್ರಗಳು

ಭಾರತೀಯ ವಾಕ್‌ಚಿತ್ರ ಯುಗಾರಂಭ ೧೯೩೧ ರಲ್ಲಿ. ಆದರೆ ಕನ್ನಡ ವಾಕ್ಚಿತ್ರ ತಯಾರಿಕೆ ೧೯೩೪ ರಲ್ಲಿ ಎರಡು ಚಿತ್ರಗಳಿಂದ ಆರಂಭವಾಯಿತು. ೧೯೩೫ ಮತ್ತು ೩೬ ರಲ್ಲಿ ಒಂದೊಂದು ಚಿತ್ರಗಳನ್ನು ತಯಾರಿಸಿ ೩೭ ರಲ್ಲಿ ೩ ಚಿತ್ರಗಳನ್ನು ತೆಗೆದು ಸುಧಾರಿಸಿಕೊಳ್ಳಲು ೩ ವರ್ಷ ವಿಶ್ರಾಂತಿ ಪಡೆದು ನಂತರ ಎರಡೆರಡು ಚಿತ್ರಗಳಂತೆ ಎರಡು ವರ್ಷಗಳು ತಯಾರಿಸಿ ಮೂರನೇ ವರ್ಷದಲ್ಲಿ (೧೯೪೩) ೪ ಚಿತ್ರಗಳನ್ನು ತಯಾರಿಸಿ ಮತ್ತೆ ಒಂದುವರ್ಷ ವಿಶ್ರಾಂತಿ ತೆಗೆದುಕೊಂಡಿತು. ೧೯೪೫ ರಲ್ಲಿ ೧ ಚಿತ್ರವನ್ನು ಮತ್ತೆ ತಯಾರಿಸಿ ೧೯೪೬ ರಲ್ಲಿ ಮೌನವಾಗಿತ್ತು. ೧೯೪೭ ರಲ್ಲಿ ೫ ಚಿತ್ರಗಳನ್ನು ತಯಾರಿಸಿ ಅನಂತರ ತಯಾರಿಕೆಯಲ್ಲಿ ಶೂನ್ಯ ತೋರದೆ ಮುನ್ನಡೆದಿದೆ.

ನಾಳೆಯನ್ನು ನಂಬೋಣ

ದಕ್ಷಿಣ ಭಾರತದಲ್ಲಿ ತಯಾರಾಗುತ್ತಿರುವ ಚಿತ್ರಗಳು ಸಂಖ್ಯೆಯಲ್ಲಿ ಮುಂದುವರೆದಿರುವುದು ಸಂತೋಷಕರ. ಚಿತ್ರಗಳ ಯೋಗ್ಯತೆಯೂ ಪ್ರತಿವರ್ಷವೂ ಸುಧಾರಿಸುವ ಸುಚಿಹ್ನೆಗಳನ್ನು ತೋರಿಸಿವೆ. ತಮಿಳು, ತೆಲುಗು ಮತ್ತು ಕನ್ನಡ ಚಿತ್ರಗಳು ವಿದೇಶಗಳಲ್ಲಿ ಪ್ರದರ್ಶಿತವಾಗುವ ಹಾಗೂ ವಿಶೇಷ ಗೌರವ ಗಳಿಸುವ ಸಾಹಸ ಮಾಡಿವೆ.

'ವೀರಪಾಂಡ್ಯ ಕಟ್ಟ ಬೊಮ್ಮನ್' ಮತ್ತು 'ನಮ್ಮಿನ ಬಂಟು' ಜೊತೆಗೆ ಕನ್ನಡ 'ಪ್ರೇಮದ ಪುತ್ರಿ' ಕಡಲುದಾಟದ ಕೀರ್ತಿಗಳಿಸಿರುವುದು ನಿಜಕ್ಕೂ ಹೆಮ್ಮೆಯ ವಿಷಯ.

ಒಟ್ಟಿನಲ್ಲಿ ದಕ್ಷಿಣ ಭಾರತದ ಚಿತ್ರೋದ್ಯಮ ಪ್ರಗತಿಪಥದಲ್ಲಿರುವುದು ಖಂಡಿತ. ಆದರೆ ಚಿತ್ರಗಳಲ್ಲಿ (ಈ ಮೊದಲೇ ಸೂಚಿಸಿರುವ) ನಾಟಕಾಂಶಗಳು ಇದ್ದೇ ಇವೆ. ನಾಟಕ — ಸಿನಿಮಾ ಒಂದಕ್ಕೊಂದು ನೆರವಾಗಿ ಬೆಳೆಯಬೇಕಾದ ಯಮಳಕಲೆಗಳು. ಆದರೆ ಅನುಕೂಲತೆ ಮತ್ತು ಅವಶ್ಯಕತೆಗಳಿಂದ ಒಂದಕ್ಕೊಂದು ಬೇರೆಯಾಗಿವೆ ಎಂಬುದನ್ನು ಚಿತ್ರ ತಯಾರಕರು ಗಮನಿಸಬೇಕು.

ದ. ಭಾ. ದ ಸಿನಿಮಾ ಹೆಚ್ಚು ವ್ಯಾಪಾರಿ ದೃಷ್ಟಿಯುಳ್ಳ ಚಿತ್ರಗಳನ್ನು ತೆಗೆಯುವುದಕ್ಕಿಂತ ಕಲಾತ್ಮಕ ಚಿತ್ರಗಳನ್ನು ನಿರ್ಮಿಸುವಲ್ಲಿ ಶ್ರಮಿಸಿ ಈ ಉತ್ತಮ ಕಲಾಮಾಧ್ಯಮದಿಂದ ನಮ್ಮ ಸಂಸ್ಕೃತಿಯನ್ನು ಮೆರೆಸುವಂತಾಗಲಿ.



— ಸ ಹಾ ನು ಭೂ ತಿ —

ಗೋಡೆಯ ಬಿರುಕಿನೊಳಗಿಂದ ಒಂದು ಮಾಟಾದ ಹೆಸರಿಲ್ಲದ ಪುಷ್ಪ ಅರಳತೊಡಗಿತ್ತು. ಹೂವನದ ಎಲ್ಲ ಪುಷ್ಪಗಳು ಅದನ್ನು ಉಪೇಕ್ಷೆಯ ದೃಷ್ಟಿಯಿಂದ ನೋಡುತ್ತಿದ್ದವು. ಆದರೆ ಉದಿತ ಸೂರ್ಯನು ಅದಕ್ಕೆ ಕೇಳಿದನು: "ಕುಶಲದಿಂದಿರುವೆಯಾ ?"

— ರವೀಂದ್ರ

ಒಂದು ಸಂದರ್ಶನ

# ಸೌಂದರ್ಯವೇ ಮೈತಳೆದು ಬಂದ



# ತಾರೆ ಸಯಿರಾ

ಭಾರತೀಯ ಚಿತ್ರರಂಗದ 'ಸೌಂದರ್ಯರಾಣಿ' ಎನಿಸಿದ ನಾಸೀಮಳ ಮಗಳು ಹದಿನೇಳರ ಹರೆಯದ ಸಯಿರಾ ಈಗ ಚಿತ್ರರಂಗ ಪ್ರವೇಶಿಸಿದ್ದಾಳೆ. ಚಿತ್ರರಸಿಕರಿಗಾಗಿ ಅವಳ ವಿಶೇಷ ಸಂದರ್ಶನವನ್ನು ಇಲ್ಲಿ ಕೊಡಲಾಗಿದೆ. . . . . . . .

[ನಮ್ಮ ಮುಂಬಯಿ ಚಲಚ್ಚಿತ್ರ ಪ್ರತಿನಿಧಿಯಿಂದ]

ಭಾರತೀಯ ಚಿತ್ರರಂಗದಲ್ಲಿ ಮೂಕಚಿತ್ರಗಳ ಕಾಲದಲ್ಲಿ ಕಾಣಿಸಿಕೊಂಡ ಒಬ್ಬಳೇ ಒಬ್ಬಳು ಸುಂದರಿ ಸುಲೋಚನಾ. ಮುಂದೆ ಈ ಶತಮಾನದ ಮೂರನೇ ದಶಕದ ಕೊನೆ ಹಾಗೂ ನಾಲ್ಕನೇ ದಶಕದ ಪ್ರಾರಂಭದಲ್ಲಿ ಈ ಚಿತ್ರರಂಗದಲ್ಲಿ ರಾರಾಜಿಸಿದವಳು 'ಸೌಂದರ್ಯದ ರಾಣಿ' ಹೆಸರಾದ ನಾಸಿಮ್. ಮುಂದೆ ಬಹುಕಾಲದ ವರೆಗೆ ಈ ಸ್ಥಾನವನ್ನು ಯಾರೂ ತುಂಬಿಯೇ ಇರಲಿಲ್ಲ. ಆದರೆ ಈಗ ಈ ಚಿತ್ರರಂಗದ ಆಕಾಶದಲ್ಲಿ ಹೊಸ ತಾರೆಯೊಬ್ಬಳು ಮೂಡಿಬಂದಿದ್ದಾಳೆ. ಅವಳೇ ಸೌಂದರ್ಯದ ರಾಣಿಯೆಂದು ಹೆಸರು ಪಡೆದ ನಾಸೀಮಳ ಹದಿನೇಳರ ಹರೆಯದ ಸಯಿರಾ.



ನಾನು ಸಯಿರಾಳ ಸಂದರ್ಶನ ಪಡೆಯಲು ನಾಸೀಮಳ ಮನೆಗೆ ಹೋದಾಗ ಸೌಂದರ್ಯವೇ ಮೂರ್ತಿವೆತ್ತು ಬಂದಂತಿದ್ದ ನಾಸೀಮ ಮತ್ತು ಸಯಿರಾ ಮನೆಯಲ್ಲಿಯೇ ಇದ್ದರು. ಅವರನ್ನು ಕಂಡಕೂಡಲೇ ಸೌಂದರ್ಯದ ಖನಿಗಳೆನಿಸಿದ್ದ ಕ್ಲಿಯೋಪಾತ್ರಾ ಹಾಗೂ ಮಮ್ತಾಜರ ನೆನಪು ನನ್ನಲ್ಲಿ ಮೂಡಿತು. ಒಂದು ಕ್ಷಣ ನಾನು ದಿಙ್ಮೂಢನಾಗಿ ನಿಂತೆ. ಆದರೆ ಮತ್ತೆ ಎಚ್ಚೆತ್ತು ನಾನು ಬಂದಿರುವ ಉದ್ದೇಶವನ್ನು ತಿಳಿಯಪಡಿಸಿದೆ. ನನ್ನ ಸಂದರ್ಶನ ಕಾರ್ಯ ಹೀಗೆ ಪ್ರಾರಂಭವಾಯಿತು. ಈ ಹೊತ್ತಿಗೆ ಚಹ ಬಂತು. ಚಹವನ್ನು ಸವಿಯುತ್ತ ಮಧ್ಯದಲ್ಲಿ ಸಯಿರಾಳಿಗೆ ಜನ್ಮಸ್ಥಳದ ಬಗ್ಗೆ ವಿಚಾರಿಸಿದೆ. ಅವಳು ಕೇವಲ 'ಮಸೂರಿ' ಎಂದಿಷ್ಟೇ ಹೇಳಿ ತನ್ನ ಸಂಮೋಹನಾತ್ಮಕ ದೃಷ್ಟಿಯನ್ನು ಕೆಳಗೆ ಮಾಡಿದಳು. ನನ್ನ ಮೇಲೆ ಅದೊಂದು ಸಂಮೋಹಿನಿ ಪ್ರಯೋಗವಾದಂತೆ ನನಗೆನಿಸಿತು. ಕೆಲ ಸಮಯ ದಂಗುಬಡಿದವನಂತೆ ಕುಳಿತಿದ್ದು, "ಜನ್ಮದಿನವನ್ನು ಹೇಳಬಹುದೇ?" ಎಂದು ಕೇಳಿದೆ. ಸ್ತ್ರೀಯೊಬ್ಬಳಿಗೆ ಕೇಳಬೇಕಾದ ಪ್ರಶ್ನೆ ಇದಲ್ಲ. ಆದರೆ ಗೊಂದಲದಲ್ಲಿ ಬಿದ್ದ ನಾನು ಏನಾದರೂ ಪ್ರಶ್ನೆ ಕೇಳುವುದಕ್ಕೆಂದು ಕೇಳಿದೆ. ಆದರೆ ನಾಸೀಂ ನನ್ನ ಸಹಾಯಕ್ಕೆ ಬಂದಳು: "ನಿಮಗೆ ಅವಳ ಜನ್ಮದಿನ ತಿಳಿಯಬಹುದು. ಆದರೆ ವರುಷವಲ್ಲ. ಅವಳ ಜನ್ಮದಿನ ಅಗಸ್ಟ ೨೩."

ಈಗ ಉತ್ತೇಜಿತಳಾದ ಸಯಿರಾ ಮಾತನಾಡತೊಡಗಿದಳು. "ನಾನು ನನ್ನ ಬಾಲ್ಯವನ್ನು ಮಸೂರಿಯಲ್ಲಿ ಓದು—ಬರೆಹ—ಆಟಗಳಲ್ಲಿ ಕಳೆದೆ. ಆದರೆ ನಾನು ೧೧ ವರುಷದವಳಿರುವಾಗಲೇ ತಾಯಿ ನನ್ನನ್ನು ಲಂಡನ್ನಿಗೆ ಕರೆದೊಯ್ದಳು. ನಂತರ.." ನಾನು ಉತ್ಸಾಹಿತನಾಗಿ ಮಧ್ಯೆ ಬಾಯಿ ಹಾಕುತ್ತ "ಹೂಂ ಹೇಳಿರಿ. ಸಾಗಲಿ" ಎಂದೆ. ಸಯಿರಾ ಮತ್ತೆ ಹೇಳತೊಡಗಿದಳು: "ಅಲ್ಲಿ ನಾನು ಸಿನಿಯರ ಕೆಂಬ್ರಿಜ್ ಪರೀಕ್ಷೆಯಲ್ಲಿ ಪಾಸಾದೆ.;ಲಂಡನ್ನದಿಂದ ಕಳೆದ ಅಗಸ್ಟ (೧೯೫೯) ದಲ್ಲಿ ಮರಳಿಬಂದೆ."

'ಅಭ್ಯಾಸದ ನಂತರ ನೀವೇನು ಮಾಡಬೇಕೆಂದು ಯೋಚಿಸಿದ್ದಿರಿ?" ನಾನು ಕೇಳಿದೆ.

ಸಯಿರಾ ವಿನಯಶೀಲಳಾಗಿ ಹೇಳತೊಡಗಿದಳು: "ಬಾಲ್ಯದಿಂದಲೂ ನಾನು ನನ್ನ ತಾಯಿಯಂತೆ

ಖ್ಯಾತ ನಾಯಿಕಾಪಾತ್ರಧಾರಿಯಾಗಬೇಕೆಂದು ಹಂಬಲಿಸಿದವಳು. ಆದರೆ ನನ್ನ ತಾಯಿ ಇದಕ್ಕೆ ಅವಕಾಶಕೊಡುತ್ತಿರಲಿಲ್ಲವೆಂದರೆ ನಿಮಗೆ ಆಶ್ಚರ್ಯವಾಗಬಹುದು."

ನಾನು ಒಮ್ಮೆಲೇ ಕೇಳಿದೆ: "ಅದೇಕೆ?"

ಯಶಸ್ವಿತಾರೆಗೆ ಈ ಬಗೆಯ ಭಾವನೆಗಳೇಕೆಂದು ನನಗೆ ಅರ್ಥವಾಗಲಿಲ್ಲ. ಈಗ ನಾಸೀಮಳೇ ಪುನಃ ನನ್ನ ಸಹಾಯಕ್ಕೆ ಬಂದಳು: "ಇದು ನೋಡಿರಿ. ನಮ್ಮದು ಸಂಪ್ರದಾಯಸ್ಥರ ಕುಟುಂಬ. ನಾನು ಚಿತ್ರರಂಗವನ್ನು ಸೇರಿದಾಗ ನನ್ನ ಕುಟುಂಬದ ಪ್ರತಿಯೊಬ್ಬರೂ ನನ್ನನ್ನು ಬಲವಾಗಿ ವಿರೋಧಿಸಿದರು. ಕೊನೆಗೆ ಈ ವಿಶಾಲಜಗತ್ತಿನೊಂದಿಗೆ ಹೋರಾಡಲು ನನ್ನೊಬ್ಬಳನ್ನೇ ಬಿಟ್ಟು ಅವರೆಲ್ಲ ನನ್ನಿಂದ ದೂರಾದರು. ಈಗ ಸಯಿರಾ ನನ್ನ ಹಾದಿಯನ್ನೇ ತುಳಿಯಲು ನಿರ್ಧರಿಸಿದಾಗ ನನ್ನ ಪತಿಗೆ ಅವರ ಜೀವನಕಾಲದಲ್ಲಿಯೇ ಬಲವಾದ ಆಘಾತವೆನಿಸಿತು. ಕುಟುಂಬದಲ್ಲಿಯ ಈ ತಿಕ್ಕಾಟವನ್ನು ತಡೆಯಲು ಸಯಿರಾ ಚಿತ್ರರಂಗ ಸೇರದಂತೆ ತಡೆಯಲು ನಾನು ನಿರ್ಧರಿಸಿದೆ. ಆದರೆ ಅನೇಕ ವಾರ, ತಿಂಗಳುಗಟ್ಲೆ ಈ ವಿವಾದ ನಡೆಯಿತು. ಈಗ ಸುಮಾರು ಒಂದು ವರ್ಷದಿಂದ ಇದು ನಡೆಧಿದೆ. ಸಯಿರಾ ಈಗ ತನ್ನ ಭವಿತವ್ಯವನ್ನು ತಾನೇ ನಿರ್ಧರಿಸಿಕೊಳ್ಳಬಲ್ಲಳಾದ್ದರಿಂದ ನಾನದಕ್ಕೆ ಕೊನೆಗೆ ಒಪ್ಪಬೇಕಾಯಿತು. ಅಲ್ಲದೆ ಈಗ ಚಿತ್ರರಂಗದ ಪರಿಸ್ಥಿತಿ ಬದಲಾಗಿದೆ. ಅನೇಕ ಸುಶಿಕ್ಷಿತರು ಅದರಲ್ಲಿ ಸೇರಲಿಚ್ಛಿಸುತ್ತಿದ್ದು ಮತ್ತು ಸೇರಿದ್ದು ಅವಳ ಇಚ್ಛೆಯನ್ನು ನಾನು ಒಪ್ಪಿಕೊಳ್ಳುವಂತೆ ಮಾಡಿತು."

ನಾಸೀಮಳ ಹೊಸವಿಚಾರ ಮತ್ತು ದೂರದೃಷ್ಟಿಯನ್ನು ಕಂಡು ನಮ್ಮಲ್ಲಿಯ ಬುದ್ಧಿವಂತ ಮಹಿಳೆಯರೊಂದಿಗೆ ಅವಳನ್ನು ಹೋಲಿಸಬೇಕೆಂದೆನಿಸಿತು.

ಕುತೂಹಲದಿಂದ ನಾನು ಕೇಳಿದೆ: "ಇಂತಹ ತಾಯನ್ನು ಪಡೆದ ನೀವೇ ಸುದೈವಿಗಳು. ಒಳ್ಳೇದು. ನಿಮ್ಮ ಮೊದಲ ಪಾತ್ರ ಹೇಗೆ ದೊರಕಿತೆಂಬುದನ್ನು ಹೇಳಬಲ್ಲಿರಾ?"

ಸಯಿರಾ ಆಗ ಮಾತುಗಾರಳಂತೆ ನನ್ನೊಂದಿಗೆ ಮಾತನಾಡಿದಳು. ಅವಳ ತಾಯಿಯ ಮಾತಿನ ರೀತಿಯಿಂದ ಅವಳು ಸ್ಫೂರ್ತಿಗೊಂಡಂತೆ ತೋರಿತು: "ನಮ್ಮ ಮನೆಗೆ ಬರುವ ಚಿತ್ರರಂಗದ ಜನರಲ್ಲಿ ಸುಬೋಧ ಮುಖರ್ಜಿಯವರೇ ಒಳ್ಳೇ ಬುದ್ಧಿವಂತರೆಂದು ನನಗೆನಿಸಿತು. ಅವರು ನನ್ನ ಚಿತ್ರರಂಗದ ಪ್ರವೇಶದ ಇಚ್ಛೆಯನ್ನು ಕೇಳಿದ ಕೂಡಲೇ ನನ್ನ ತಾಯಿಯೊಂದಿಗೆ ವಿಚಾರಿಸಿದರು. ಮುಖರ್ಜಿಯವರೊಂದಿಗೆ ನಾನು ಮಾತನಾಡಿದ ಏಳು ದಿನಗಳೊಳಗಾಗಿ ಅವರು ತಮ್ಮ ವರ್ಣಚಿತ್ರ 'ಜಂಗ್ಲಿ' ಯಲ್ಲಿ ನಾಯಕಿಯಾಗಿ ಅಭಿನಯಿಸಲು ನನ್ನೊಂದಿಗೆ ಕರಾರುಮಾಡಿಕೊಂಡರು."

"ನಿಮ್ಮ ದಿನದ ಕಾರ್ಯಕ್ರಮ ಹೇಗೆ?" ನಾನು ಕೇಳಿದೆ.

"ನಾನು ಫಿಲ್ಮಾಲಯದ ಅಭಿನಯಶಾಲೆ ಸೇರಿದ್ದು ಚಿತ್ರಗಳಲ್ಲಿಯ ಅಭಿನಯದ ಅನೇಕ ಮಹತ್ವದ ಅಂಶಗಳನ್ನು ಅಲ್ಲಿ ಕಲಿಯುತ್ತಿರುವೆ."

"ನಿಮಗೆ ನೃತ್ಯವೂ ಬರುತ್ತಿರಬೇಕು."

"ಅಹುದು. ರಾಕ್ ಎನ್ ರೋಲ್, ಬಾಲ್ ರೂಮ ನೃತ್ಯ. ಅಲ್ಲದೆ ಈಗ ಭರತನಾಟ್ಯವನ್ನು ಕಲಿಯುತ್ತಿದ್ದೇನೆ."

"ಲಂಡನದ ಹೊರತಾಗಿ ಬೇರಾವದೇ ಊರನ್ನು ನೋಡಿದ್ದೀರಾ?"

"ಹೌದು. ನನಗೆ ಬಿಡುವಿದ್ದಾಗ ಪ್ಯಾರಿಸ್ ನೋಡಿದ್ದೇನೆ. ಇಟಲಿ, ಫ್ರಾನ್ಸ, ಸ್ವಿಝರ್ಲಂಡ ಸಂದರ್ಶಿಸಿದ್ದೇನೆ."

"ಅಡಿಗೆ ಇತ್ಯಾದಿ ಮನೆಗೆಲಸವೇನಾದರೂ ಬಲ್ಲಿರಾ?"

ಅವಳು ಸ್ವಲ್ಪ ಮುಗುಳ್ನಗೆ ನಕ್ಕಳು. ನನ್ನ ಪ್ರಶ್ನೆಗೆ ಉತ್ತರಿಸುವ ಬದಲು ಮುಖಮರೆಸಿಕೊಂಡಳು. ಅವಳ ತಾಯಿ ಹೇಳಿದಳು: "ಅದರ ಬಗ್ಗೆ ಅವಳಿಗೇನೂ ಕೇಳದಿರುವುದೇ ಒಳಿತು. ಅವಳು ಬಟಾಟೆ ಮಾತ್ರ ಬೇಯಿಸಬಲ್ಲಳು. ಮತ್ತಾವ ಅಡುಗೆಯೂ ಬರುವದಿಲ್ಲ."

"ಬಿಡುವಿನ ಸಮಯ ಹೇಗೆ ಕಳೆಯುವಿರಿ?"

"ನಾನು ಕಾದಂಬರಿಗಳನ್ನು ಓದುತ್ತೇನೆ. ಮನೆಯಲ್ಲಿ ಕುಳಿತು ಓದುವುದು ಯಾವಾಗಲೂ ನನಗೆ ಸೇರುತ್ತದೆ."

"ನೀವು ಚಿತ್ರ ನೋಡಲು ಹೋಗುವಿರಾ?"

"ಹೌದು, ಆಗಾಗ"

"ನಿಮಗೆ ಮುಂಬಯಿ ಹೆಚ್ಚು ಸೇರುವದೋ? ಲಂಡನ್ನೋ?"

"ನನಗೆ ಮುಂಬಯಿ ಹೆಚ್ಚು ಸೇರುವುದು. ನಾನು ಲಂಡನದಲ್ಲಿದ್ದಾಗ ಪ್ರತಿ ಕ್ಷಣವೂ ಊರಿಗೆ ಹಾರಿ ಬರಬೇಕೆಂದೆನಿಸುತ್ತಿತ್ತು."

"ಸಮಾರಂಭಗಳಲ್ಲೂ ಭಾಗವಹಿಸುವ ಇಷ್ಟ ನಿಮಗಿರುವದಲ್ಲವೆ?"

"ಇದೆ. ಆದರೆ ಯಾವಾಗಲೂ ಅಲ್ಲ."

"ಭಾರತೀಯ ತಾರೆಯರಲ್ಲಿ ನಿಮ್ಮ ಮೆಚ್ಚಿನವರು ಯಾರು?"

"ದಿಲೀಪಕುಮಾರನೇ ಅತಿ ಮೆಚ್ಚಿನವನು. ನಾಯಿಕೆಯರಲ್ಲಿ ಮೀನಾಕುಮಾರಿಯನ್ನು ನಾನು ಹೆಚ್ಚು ಮೆಚ್ಚುತ್ತೇನೆ."

"ವಿದೇಶಿ ತಾರೆಯರ ಬಗ್ಗೆ ಏನು ಹೇಳುವಿರಿ?"

"ನಾನು ವಿದೇಶಿ ಚಿತ್ರಗಳನ್ನು ಹೆಚ್ಚು ನೋಡುವದಿಲ್ಲ. ಆದರೆ ಯುಲ್ ಬ್ರಾಯನರ. ಡಾನ್ ಹಡ್ಸನ್, ಜೀನ್ ಸಿಮೆನ್ಸರು ನನಗೆ ಹೆಚ್ಚು ಸೇರುತ್ತಾರೆ."

ಸಯಿರಾ ಎತ್ತರದ ನಿಲುವಿನವಳು. ೫ ಅಡಿ ೩ ಇಂಚು ಎತ್ತರವಾಗಿದ್ದಾಳೆ. ತನ್ನ ಆರೋಗ್ಯದ ಕಡೆಗೆ ಅವಳು ಹೆಚ್ಚು ಲಕ್ಷ್ಯ ಕೊಡುತ್ತಾಳೆ. ಮುಂಬೈಯ ಫ್ಯಾಶನೆಬಲ್ ಭಾಗವೊಂದರಲ್ಲಿ ಅವಳು ತನ್ನ ತಾಯಿ ತಮ್ಮಂದಿರೊಂದಿಗೆ ವಾಸಿಸುತ್ತಿದ್ದಾಳೆ.

ಅವಳ ವಿಳಾಸ:

ಸಯಿರಾಬಾನು

೧೨ ಸೀ ಬೆಲೆ ನೇಪಿಯನ್ ಸೀರೋಡ ಮುಂಬೈ ೨೬.



# ಬುಧವಾರ ಮಹಾತ್ಮೆ

ಇದೇನು ವಿಚಿತ್ರವಾಗಿದೆಯಲ್ಲ! ಬುಧವಾರದಂದು ಯಾವ ಮಹಾತ್ಮೆಯೆಂದು ನೀವು ಅಚ್ಚರಿಬಡುವಿರಲ್ಲವೆ? ಹೌದು. ಶಿವನೇ ಈ ಮಹಾತ್ಮೆಗೆ ಬಲಿಯಾದಾಗ ಮಾನವರ ಪಾಡೇನು ಅಲ್ಲವೆ? ಈ ಮಹಾತ್ಮೆಯನ್ನು ನೀವೂ ಅರಿಯಬೇಕು.

ಲೇಖಕರು: **ಪ್ರೊ. ಬಾಬು ಬೆಂಡಿಗೇರಿ,**
ಎಂ. ಎ., ಎಲ್‌ಎಲ್. ಬಿ.

ಆ ದಿನ ಕೈಲಾಸದಲ್ಲಿ ಗದ್ದಲವೇ ಗದ್ದಲ. ಇನ್ನೇನು, 'ಮಹಾಪ್ರಳಯ ಸಮೀಪಿಸಿತೆಂದು ಕೈಲಾಸದ ಪ್ರಜೆಗಳು ಹೌಹಾರಿ ನಡಗತೊಡಗಿದ್ದರು. ಕೈಲಾಸಪತಿ ಶಿವನು ಆ ದಿನ ಸಿಟ್ಟಿಗೆದ್ದಷ್ಟು ಬೇರೆ ಯಾವ ಕಾಲದಲ್ಲೂ ಸಿಟ್ಟಿಗೆದ್ದಿರಲಿಲ್ಲವೆಂದು ಕೈಲಾಸದ ಪ್ರಜೆಗಳು ಆಡಿಕೊಳ್ಳುತ್ತಿದ್ದರು.

ಶಿವನ ಮುಖವನ್ನು ನೋಡಿದರೆ ಅದೇ ಲಕ್ಷಣ ಕಂಡುಬರುತ್ತಿತ್ತು. ಆತನು ಎಲ್ಲ ಲೋಕಗಳನ್ನು ಸುಡಲು ಸಿದ್ಧನಾಗಿ ನಿಂತಿರುವಂತೆ ಕಂಡುಬರುತ್ತಿತ್ತು. ಆ ಸಿಟ್ಟು, ಮೊದಲು ಪಾರ್ವತಿಯ ಮೇಲೆ ಆರಂಭವಾಗಿ ಮುಂದೆ ಎಲ್ಲರ ಮೇಲೆ ಹೊರಳಿತ್ತು.

ಎಂದಿನಂತೆ ಸ್ವರ್ಗದಕಡೆಗೆ ವಾಯುವಿಹಾರಕ್ಕೆಂದು ಹೋಗಿದ್ದ ಪಾರ್ವತಿ ರಾತ್ರಿ ಎಂಟಾದರೂ ಹಿಂತಿರುಗಿಬರದಿದ್ದುದೇ ಶಿವನಿಗೆ ಕೋಪವನ್ನು ತಂದಿತ್ತು. ಹಿಂದೆ ಮೂರುಸಲ ಕೋರಂ ಇಲ್ಲದ್ದಕ್ಕಾಗಿ ಮುಂದುವರೆದಿದ್ದ ಬ್ರಹ್ಮ, ವಿಷ್ಣು, ಮಹೇಶ್ವರರ ವರಿಷ್ಠ ಸಭೆಗೆ ಆತನು ಅಧ್ಯಕ್ಷತೆಯನ್ನು ವಹಿಸಲು ಹೋಗಬೇಕಿತ್ತು. ಅಧ್ಯಕ್ಷತೆ ವಹಿಸಲು ಹೋಗುವ ವ್ಯಕ್ತಿ ಎಂದಿನಂತೆ ಹೋದರೆ ಹೇಗೆ?

ಮಾಸಿಹೋಗಿದ್ದ ಹುಲಿತೊಗಲನ್ನು ಬದಲಿಸಿ ಅದೇ ಆಗ ಇಸ್ತ್ರಿ ಆಗಿ ಬಂದಿದ್ದ ಬೇರೊಂದು ಹುಲಿತೊಗಲನ್ನು ಆತನು ಧರಿಸಬೇಕಾಗಿತ್ತು. ಕೊರಳಲ್ಲಿದ್ದ ಶವ ಶಿರೋಮಾಲೆಯೂ ಬದಲಾವಣೆಯನ್ನು ಬೇಡುತ್ತಿತ್ತು. ಭೂಲೋಕದಲ್ಲಿ ಗಂಗಾನದಿಯು ನೆರೆಹಾವಳಿಯನ್ನುಂಟು ಮಾಡಹತ್ತಿದ್ದರಿಂದ ಅದನ್ನು ಕೊಂಚ ಸರಿಸಬೇಕಾಗಿತ್ತು. ಕೊರಳಲ್ಲಿ ಧರಿಸಿದ್ದ ಹಾವಿಗೆ ಬಿಸಿ ಬಿಸಿ ಹಾಲನ್ನು ಕುಡಿಸಬೇಕಾಗಿತ್ತು. ತಲೆಯಲ್ಲಿ ಧರಿಸಿದ ಅರ್ಧಚಂದ್ರನ ಕಾಂತಿಯು ಮಂಕಾಗಿದ್ದರಿಂದ ಬೇರೊಂದು ಅರ್ಧಚಂದ್ರನನ್ನು ಧರಿಸಬೇಕಾಗಿತ್ತು. ಕೈಯಲ್ಲಿ ಹಿಡಿದುಕೊಳ್ಳುವ ನರಕಪಾಲವಂತೂ ಸ್ಥಾನಪಲ್ಲಟ ಹೊಂದಿತ್ತು. ಇಷ್ಟೆಲ್ಲವನ್ನು ಶಿವ ತಾನೇ ಹೇಗೆ ಮಾಡಬಲ್ಲ? ಯಾವ ವಸ್ತು ಎಲ್ಲಿದೆಯೆಂಬುದನ್ನು ತಿಳಿಸದೆ ಹೋದ ಪಾರ್ವತಿಯ ಮೇಲೆ ಶಿವನು ಕಿಡಿಕಿಡಿಯಾದ. "ಎರಡು ಮಕ್ಕಳಾದರೂ ಇನ್ನೂ ವಾಯು ವಿಹಾರದ ಸಂಭ್ರಮ ಹೋಗಿಲ್ಲ" ಎಂದು ಶಿವ ಮನಸ್ಸಿನಲ್ಲಿ ಪಾರ್ವತಿಯನ್ನು ಶಪಿಸಿದ.

ತನ್ನ ಮೂರನೆಯ ಕಣ್ಣಿನಿಂದ ಪಾರ್ವತಿಯನ್ನು ಭಸ್ಮಮಾಡಿಬಿಡಬೇಕೆಂಬ ವಿಚಾರವೂ ಶಿವನಿಗೆ ಬಂದಿತು. ಆದರೆ ಮನ್ಮಥನಿಗಾದ ಗತಿ ಪಾರ್ವತಿಗೂ ಆಗಬಹುದೆಂದು ಶಿವ ಹಾಗೆ ಮಾಡಲಿಲ್ಲ. ಹಿಂದೊಮ್ಮೆ ಆದ ಅನಾಹುತ ಸಾಕಲ್ಲವೇ? ಮನ್ಮಥ ದೇಹವಿಲ್ಲದವನಾಗಿ ಬಿಟ್ಟದ್ದ. ಅದೇ ಗತಿ ಪಾರ್ವತಿಗಾದರೆ? ಈ ವಿಚಾರ ಬಂದೇ ಶಿವ ಕೊಂಚ ತಾಳ್ಮೆಯನ್ನು ವಹಿಸಿದ. ಆದರೆ ಸಿಟ್ಟು ಮಾತ್ರ ಇಳಿಯುವಂತಿರಲಿಲ್ಲ.

ತ್ರಿಮೂರ್ತಿಗಳ ವರಿಷ್ಠ ಸಭೆಯನ್ನೂ ಆತನು ತಪ್ಪಿಸುವಂತಿರಲಿಲ್ಲ. ಯಾಕೆಂದರೆ ನಾಲ್ಕನೆಯ ಸಲವೂ ಸಭೆ ಮುಂದುವರೆದರೆ ದೇವಲೋಕದ ಘಟನೆಯಂತೆ ತ್ರಿಮೂರ್ತಿಗಳ ಸಮಿತಿಯೇ ವಿಸರ್ಜನೆಯನ್ನು ಹೊಂದಿ ಬೇರೊಂದು ಸಮಿತಿ ಅಸ್ತಿತ್ವದಲ್ಲಿ ಬರುತ್ತಿತ್ತು. ಆದುದರಿಂದ ಇದ್ದ ರೀತಿಯಲ್ಲಿಯೇ ಸಭೆಗೆ ಹೋಗಲು ಶಿವನು ನಿರ್ಧರಿಸಿದ.

ಶಿವನು ಹೊರಗೆ ಹೋಗಲು ನಿಶ್ಚಯಿಸಿದೊಡನೆಯೇ ನಂದಿ ಎದುರಿಗೆ ಬಂದು ನಿಲ್ಲುವ ಪರಿಪಾಠ ಅಲ್ಲಿಯವರೆಗಿತ್ತು. ಆದರೆ ಆ ದಿನ ನಂದಿಯ ಸುಳಿವೇ ಇರಲಿಲ್ಲ.

ಶಿವನಿಗೆ ಮತ್ತೆ ಸಿಟ್ಟು ಬಂದಿತು. ಎಲ್ಲವನ್ನು ದಹಿಸಿಬಿಡಬೇಕೆಂಬ ಬುದ್ಧಿ ಮತ್ತೊಮ್ಮೆ ಉತ್ಪನ್ನವಾಯಿತು. ಹಾಗೆ ಮಾಡಿದರೆ ತನಗೆ ವಾಹನವೇ ಇಲ್ಲದಂತಾಗುವುದೆಂದು ಶಿವನು ಮತ್ತೆ ತಾಳ್ಮೆವಹಿಸಿದ. ಬಹುಶಃ ಪಾರ್ವತಿ ನಂದಿಯನ್ನು ತನ್ನ ಜತೆಗೆ ಕರೆದುಕೊಂಡುಹೋಗಿರಬೇಕೆಂದು ಆತನು ತನ್ನನ್ನೇ ಸಂತೈಸಿಕೊಂಡ. ಅಲ್ಲಿದ್ದ ದ್ವಾರಪಾಲಕನೊಬ್ಬನನ್ನು ಒದರಿ ವಿಷ್ಣುವಿಗೆ ಫೋನು ಮಾಡಿ ಗರುಡನನ್ನು ಕಳಿಸಲು ಶಿವನು ತಿಳಿಸಿದನು. ವಿಷ್ಣುವಿನ ವಾಹನದ ಮೇಲೆ ಸವಾರಿ ಮಾಡುವ ಪ್ರಸಂಗ ಬಂದಿತಲ್ಲವೆಂದು ಶಿವನು ವಿಷಾದಪಡುತ್ತಿರುವಾಗ ದ್ವಾರಪಾಲಕನು ಬಂದು ಹೇಳಿದ: "ವಿಷ್ಣುದೇವರ ವೈಕುಂಠದಲ್ಲಿ ಏನೋ ಭಾರಿ ಗೊಂದಲ ನಡೆದಂತಿದೆ. ಅಲ್ಲಿಗೆ ಫೋನ್ ಸಂಪರ್ಕವೇ ದೊರಕುತ್ತಿಲ್ಲ."

"ಹಾಗಾದರೆ ಬ್ರಹ್ಮನ ಸತ್ಯಲೋಕಕ್ಕೆ ಫೋನ ಮಾಡಿ ಹಂಸವನ್ನು ಕಳಿಸುವಂತೆ ತಿಳಿಸು" ಎಂದು ಶಿವನು ಹೇಳಿದ. ಈ ಸಲ ದೊರೆತ ಉತ್ತರದಿಂದಲೂ ಶಿವನು ಅವಾಕ್ಕಾದ. ದ್ವಾರಪಾಲಕ ಹೇಳಿದ: "ಬ್ರಹ್ಮದೇವರ ಸತ್ಯಲೋಕಕ್ಕೂ ಫೋನ್ ಸಂಪರ್ಕ ದೊರೆಯುತ್ತಿಲ್ಲ."

ಶಿವನಿಗೆ ಆಶ್ಚರ್ಯದ ಮೇಲೆ ಆಶ್ಚರ್ಯ. ದೇವಲೋಕದ ಟೆಲಿಫೋನ್ ವ್ಯವಸ್ಥೆ ಅಂದಿನವರೆಗೆ ಒಂದು ಸಲವೂ ಕೆಟ್ಟಿರಲಿಲ್ಲ. ಒಮ್ಮೆಲೇ ಹೀಗೇಕಾಯಿತು?

ಕೊನೆಗೆ ವಾಯರಲೆಸ್ ಸಂಪರ್ಕ ಹಚ್ಚಬೇಕೆಂದು ಶಿವ ಅಜ್ಞೆಮಾಡಿದ. ಹತ್ತುನಿಮಿಷಗಳು ಗತಿಸಿದ ನೇಲೆ ವಾಯರಲೆಸ್ ಸುದ್ದಿ ಬಂದಿತು. "ವೈಕುಂಠದಲ್ಲಿ ಲಕ್ಷ್ಮೀ ಹಾಗೂ ಗರುಡರ, ಸತ್ಯಲೋಕದಲ್ಲಿ ಸರಸ್ವತಿ ಹಾಗೂ ಹಂಸರ ಸುಳಿವೇ ಇಲ್ಲ. ಅವರನ್ನು ಹುಡುಕಲು ವಿಷ್ಣು ಹಾಗೂ ಬ್ರಹ್ಮರು ಹೊರಟಿರುವುದರಿಂದ ವರಿಷ್ಠ ಸಭೆ ಮುಂದೆ ಬಿದ್ದಂತೆಯೇ."

ಈ ಸುದ್ದಿಯನ್ನು ಕೇಳಿದ ಶಿವನಿಗೆ ತನ್ನ ಸಮಸ್ಯೆಯ ಜ್ಞಾಪಕಬಂದಿತು. ಈ ಪಾರ್ವತಿ ಲಕ್ಷ್ಮೀ ಹಾಗೂ ಸರಸ್ವತಿಯರು ನಂದಿ, ಗರುಡ ಹಾಗೂ ಹಂಸರೊಂದಿಗೆ ವಾಯು ವಿಹಾರಕ್ಕೆ ಹೋಗಿರಬಹುದೇ? ಆದರೆ ಅವರು ಹಿಂತಿರುಗಿ ಬರುವ ಕಾಲ ಆಗಿ ಹೋಗಿತ್ತು. ಹಾಗಾದರೆ ಅವರು ಎಲ್ಲಿದ್ದಿರಬಹುದೆಂಬುದನ್ನು ಹುಡುಕಿ ತೆಗೆಯಬೇಕೆಂದು ಶಿವನು ನಿರ್ಧರಿಸಿ ಹೊರಟ.

ಅಲ್ಲಿಯವರೆಗೆ ಶಿವನು ಕಾಲ್ನಡಿಗೆಯಿಂದ ನಡೆದುದನ್ನು ದೇವಲೋಕದ ಯಾರೂ ನೋಡಿರಲಿಲ್ಲ. ಶಿವನನ್ನು ನೋಡಿದ ಎಲ್ಲರೂ ಹೆದರಿಕೆಯಿಂದ ದೂರ ಸರಿಯುತ್ತಿದ್ದರು.

ಇಂದು ಯಾವುದೋ ರಾಕ್ಷಸನ ಅವಸಾನ ಬಂದಿತೆಂದು ಅವರು ತಮ್ಮಷ್ಟಕ್ಕೆ ಹೇಳಿಕೊಳ್ಳುತ್ತಿದ್ದರು.

ಅಷ್ಟರಲ್ಲಿ ಶಿವನಿಗೆ ಯಮಲೋಕದ ಕರಾಳನ ಭೆಟ್ಟಿಯಾಯಿತು. ಅದೇ ಆಗ ಜೀಪ್ ಅಪಘಾತಿನಲ್ಲಿ ಮರಣಹೊಂದಿದ ಪಿ. ಡಬ್ಲ್ಯು. ಡಿ. ಎಂಜನೀಯರ ದಂಪತಿಗಳ ಪ್ರಾಣ ತೆಗೆದುಕೊಂಡು ಆತನು ಹೊರಟಿದ್ದ. ಶಿವದೇವರು ಕಾಲ್ನಡಿಗೆಯಲ್ಲಿ ಹೊರಟದ್ದನ್ನು ನೋಡಿ, "ಅಡ್ಡಬಿದ್ದೆ, ಸರ್, ಕಾಲ್ನಡಿಗೆಯಲ್ಲಿ ಹೊರಟಿದ್ದೀರಲ್ಲ" ಎಂದು ಕರಾಳ ಕೇಳಿಯೇ ಬಿಟ್ಟ.

"ಹೌದು, ಹೌದು. ನಂದಿ ಎಲ್ಲಿಯೋ ಹೋಗಿ ಬಿಟ್ಟಿದ್ದಾನೆ. ಅಲ್ಲದೆ ಬೇರೆ ಯಾವ ವಾಹನವೂ ದೊರೆಯಲಿಲ್ಲ."

"ಸರ್ ಭೂಲೋಕದಿಂದ ಜೀಪನ್ನು ತರಿಸಿಕೊಡಲೇ. ಇದೇ ಈಗ ಅಪಘಾತಕ್ಕೀಡಾದ ಜೀಪಿನ್ನೂ ಪೋಲೀಸರ ವಶದಲ್ಲಿದೆ" ಎಂದು ಕರಾಳ ಸೂಚನೆ ಮಾಡಿದ.

"ಸೂಚನೆಯೇನೋ ಚೆನ್ನಾಗಿದೆ. ಆದರೆ ಜೀಪನ್ನು ಹೊಡೆಯುವವರಾರು ?" ಎಂದು ಶಿವ ಕೇಳಿದ.

"ಅದಕ್ಕೇಕೆ ಚಿಂತೆ ಮಾಡತೀರಿ ಸರ್. ಇದೇ ಈಗ ಪ್ರಾಣಗಳನ್ನು ತೆಗೆದುಕೊಂಡು ಬಂದೆನಲ್ಲ, ಆ ಎಂಜನಿಯರರ ಡ್ರೈವರ್ ಸಾಯಲೋ ಬೇಡವೋ ಎಂದು ಇನ್ನೂ ಜೀವ ಹಿಡಿದಿದ್ದಾನೆ. ಆತನನ್ನು ಜೀಪಿನೊಂದಿಗೆ ತಮ್ಮ ಬಳಿಗೆ ರವಾನಿಸಿಬಿಡುತ್ತೇನೆ."

ಕರಾಳನ ಈ ಸೂಚನೆ ಶಿವನಿಗೆ ಸರಿಎನಿಸಿತು. ಮೌನದಿಂದಲೇ ಶಿವ ತನ್ನ ಸಮ್ಮತಿಯನ್ನು ಸೂಚಿಸಿದ. ಒಂದು ಕ್ಷಣದಲ್ಲಿಯೇ ಜೀಪು ಡ್ರೈವರನೊಂದಿಗೆ ಸಿದ್ಧವಾಗಿ ನಿಂತಿತ್ತು.

ಆ ಡ್ರೈವರನಿಗೆ ಕರಾಳ ಹೇಳಿದ: "ಇಲ್ಲಿ ನಿಂತಿದ್ದಾರಲ್ಲ ಈ ಸಾಹೇಬರು ನಮ್ಮ ಲೋಕಕ್ಕೇ ದೊಡ್ಡಸಾಹೇಬರು. ಅವರು ಎಲ್ಲಿಯೋ ಹೊರಟಂತಿದೆ. ಅವರು ಹೇಳಿದಲ್ಲಿಗೆ ಸುಸೂತ್ರವಾಗಿ ಮುಟ್ಟಿಸು" ಡ್ರೈವರ ಎಲ್ಲ ತಿಳಿದಂತೆ ದೊಡ್ಡ ನಗೆಯನ್ನು ನಕ್ಕ. ಈ ಡ್ರೈವರನಿಗೆ ಎಲ್ಲಿಗೆ ಹೋಗಬೇಕೆಂದು ಹೇಳುವುದೇ ಶಿವನಿಗೆ ತಿಳಿಯಲಿಲ್ಲ. .

ಡ್ರೈವರ್ ತನಗೆ ದಿಕ್ಕು ತೋಚಿದ ಕಡೆಗೆ ಜೀಪನ್ನು ಹೊಡೆಯಹತ್ತಿದ. ಶಿವನು ಆಲೋಚನೆಯಲ್ಲಿ ತಲ್ಲೀನನಾಗಿದ್ದ. ಈ ಪಾರ್ವತಿಯನ್ನು ಎಲ್ಲಿ ಎಂದು ಹುಡುಕಬೇಕು ? ಆಕೆ ಹೇಗೆ ಹೋದಳೆಂಬುದರ ಮೇಲೆ ಆಕೆ ಹೋದ ಸ್ಥಾನದ ಕುರುಹು ದೊರೆಯಲು ಸಾಧ್ಯವಿತ್ತು. ಸಿಟ್ಟಿಗೆದ್ದು ಹೋಗಿದ್ದರೆ ತವರು ಮನೆಯಲ್ಲಿ ದೊರೆಯಬಹುದು. ಬೇಸರ ಬಂದು ಹೋಗಿದ್ದರೆ ಮೈತ್ರಿಣಿಯರ ಮನೆಯಲ್ಲಿರಬಹುದು. ಪುತ್ರ ವಾತ್ಸಲ್ಯ ಹೆಚ್ಚಾಗಿದ್ದರೆ ಮಗನ ಮನೆಯಲ್ಲಿ ಇರಬಹುದು. ಆಕೆ ಹೋದುದಾದರೂ ಎಲ್ಲಿಗೆ ?

ಜೀಪು ತಗ್ಗು—ದಿನ್ನೆಗಳೆನ್ನದೆ ಓಡುತ್ತಿತ್ತು. ಶಿವ ಒಮ್ಮೆಲೆ ಮುಖವನ್ನೆತ್ತಿ ಹೇಳಿದ— "ಡ್ರೈವರ್ ಜೋಕೆ. ಎದುರಿಗೆ ಒಂದು ಆಳವಾದ ಕಂದಕವಿದೆ. ಅದನ್ನು ತಪ್ಪಿಸು."

ಡ್ರೈವರ್ ಆಶ್ಚರ್ಯದಿಂದ ಹೇಳಿದ: "ಇಲ್ಲ ಸರ್. ಇಲ್ಲಿ ಎದುರಿಗೆ ಒಂದು ದೊಡ್ಡ ಕಟ್ಟಡ ಇದೆ."

ಕಟ್ಟಡ ಎಂದು ಕೇಳಿದೊಡನೆಯೇ ಶಿವ ತಲೆಯೆತ್ತಿ ನೋಡಿದ. ನಿಜವಾಗಿಯೂ ಎದು-




ರಿಗೆ ಮೂರಂತಸ್ತಿನ ದೊಡ್ಡ ಕಟ್ಟಡವೊಂದು ನಿಂತಿತ್ತು. ಶಿವನಿಗೆ ತನ್ನ ಕಣ್ಣುಗಳನ್ನು ತನಗೇ ನಂಬಲಾಗಲಿಲ್ಲ. ಆತನಿಗೆ ಸಂಪೂರ್ಣ ಜ್ಞಾಪಕವಿತ್ತು. ಹಿಂದಿನ ದಿನವೇ ನಂದಿ ಆ ಕಂದಕವನ್ನು ಜಿಗಿದುಹೋಗಿದ್ದ. ಒಂದು ದಿನದಲ್ಲಿಯೇ ಈ ಕಟ್ಟಡ ಹೇಗೆ ಅಸ್ತಿತ್ವದಲ್ಲಿ ಬಂದಿತು ? ಅಲ್ಲದೆ ಎಲ್ಲದಕ್ಕೂ ತನ್ನ ಅನುಮತಿ ಅವಶ್ಯವಿರುವಾಗ ಈ ಕಟ್ಟಡ ತನಗೆ ಗೊತ್ತಾಗದೆ ಹೇಗೆ ರಚಿತವಾಯಿತು ? ಶಿವ ಕೆರಳಿದ.

ಜೀಪನ್ನು ನಿಲ್ಲಿಸಲು ಹೇಳಿ ಶಿವನು ಕೆಳಗಿಳಿದ. ಕಟ್ಟಡದ ಎದುರಿಗೆ ನಿಂತರೆ ಕಟ್ಟಡಕ್ಕೆ ಕೂಡಿಸಲಾಗಿದ್ದ ಮುತ್ತು, ರತ್ನಗಳ ಪ್ರಕಾಶದಿಂದ ಕಣ್ಣು ಕುಕ್ಕುತ್ತಿದ್ದವು. ಆ ರತ್ನಗಳ ಪ್ರಕಾಶದಲ್ಲಿ ಶಿವನು ಆ ಕಟ್ಟಡದ ಬೋರ್ಡನ್ನು ಓದಿದ. "ಶ್ರೀಲಕ್ಷ್ಮೀ ಪಾರ್ವತೀ ಪ್ರಸನ್ನ" "ವಿಷ್ಣು ಬ್ರಹ್ಮ ಮಹೇಶ್ವರ ಭವನ" "ಪ್ರೊಪ್ರಾಯಟರ್— ದೇಲಂಪಾಡಿ ಶೀನಪ್ಪ ಭಟ್ಟರು."

ಈ ಬೋರ್ಡನ್ನು ನೋಡಿ ಶಿವನಿಗೆ ಕೋಪವನ್ನು ತಾಳಿಕೊಳ್ಳುವುದಾಗಲಿಲ್ಲ. ತನ್ನ ಅನುಮತಿ ಇಲ್ಲದೆ ಕಟ್ಟಡವನ್ನು ಕಟ್ಟಿಸಿದ್ದಲ್ಲದೆ ತನ್ನ ಹೆಸರನ್ನೂ ಬಳಸಿದ ವ್ಯಕ್ತಿಯನು ಸುಟ್ಟುಬಿಡಬೇಕೆಂದು ಶಿವ ಯೋಚಿಸಿದ. ಆದರೆ ಮೊದಲು ವಿಚಾರಣೆ ನಡೆಸಬೇಕೆಂದು ನಿರ್ಧರಿಸಿ ಶಿವ ಡ್ರೈವರನ ಮೂಲಕ ದೇಲಂಪಾಡಿ ಶೀನಪ್ಪಭಟ್ಟರನ್ನು ಕರೆಯಲು ಕಳಿಸಿದ. ಆದರೆ ದೇಲಂಪಾಡಿ ಶೀನಪ್ಪಭಟ್ಟರು ಒಳಗೆ ಇದ್ದುದರಿಂದ ಗಲ್ಲೆಗೆ ಕುಳಿತ ವ್ಯಕ್ತಿ ಶಿವನ ಬಳಿಗೆ ಬಂದ.

ತಾನು ಕರೆಯಲು ಕಳಿಸಿದರೆ ಪ್ರೊಪ್ರಾಯಿಟರ್ ಬರದೆ ಮ್ಯಾನೇಜರನೊಬ್ಬನು ಬಂದುದನ್ನು ಕಂಡು ಶಿವ ಕಿಡಿಕಿಡಿಯಾದನು. ಆದರೆ

ಈ ಕಟ್ಟಡದ ರಹಸ್ಯವನ್ನಾದರೂ ತಿಳಿಯಬೇಕೆಂದು ಶಿವ ಶಾಂತಚಿತ್ತನಾಗಿ ಕೇಳಲು ಆರಂಭಿಸಿದ.

"ಏನಯ್ಯಾ, ಏನಿದು ಕಟ್ಟಡ ?"

"ಸ್ವಾಮೀ ಇದು ಕಟ್ಟಡವಲ್ಲ, ಭವನ. ಭೂಲೋಕದ ಭಾಷೆಯಲ್ಲಿ ಹೇಳಬೇಕೆಂದರೆ, ಟೀ ಕಾಫೀ ಕ್ಲಬ್."

ಮ್ಯಾನೇಜರನೇ ಇಷ್ಟು ಚುರುಕಾಗಿದ್ದರೆ ಮಾಲೀಕನೆಷ್ಟು ಚುರುಕಾಗಿರಬಹುದೆಂದು ಶಿವ ವಿಚಾರಮಾಡಹತ್ತಿದ.

"ಯಾರಯ್ಯ ಈತ ಶೀನಪ್ಪಭಟ್ಟ ?"

'ಅಯ್ಯೋ ಸ್ವಾಮಿ ಶೀನಪ್ಪ ಸಾಹುಕಾರರ ಹೆಸರು ನೀವು ಕೇಳಿಲ್ಲವೇ ? ಭೂಲೋಕದಲ್ಲಿ ಅವರ ನಾಲ್ಕು ಹೊಟೆಲ್ಲುಗಳಿದ್ದವು, ಎರಡು ಲಾಜಿಂಗ್ ಬೋರ್ಡಿಂಗ್‌ಗಳಿದ್ದವು. ಮೂರು ಕ್ಯಾಂಟೀನ್‌ಗಳಿದ್ದವು."

"ಭೂಲೋಕದಲ್ಲಾಯಿತು. ಇಲ್ಲೇನು ಮಾಡುತ್ತಿದ್ದ."

"ನಮ್ಮ ಸಾಹುಕಾರರು, ದೇವತೆಗಳು ಅಮೃತವನ್ನು ಕುಡಿಯಲು ಬರುತ್ತಿರುವ "ಅಮೃತಭವನ"ದಲ್ಲಿ ಮಾಣಿಗಳಾಗಿದ್ದರು."

"ಮಾಣಿ ಎಂದರೇನಯ್ಯ" ಎಂದು ಶಿವ ಕೇಳಿದ ತಲೆ ಕೆದರಿಕೊಳ್ಳುತ್ತ. "ಮಾಣಿ ಎಂದರೆ ಸರ್ವರ್-ಪೇಯಗಳನ್ನು ತಂದು ಕೊಡುವವ"

"ಅಂದರೆ ಸೇವಕ ತಾನೇ ?"

ಇಷ್ಟು ತಿಳಿದುಕೊಳ್ಳಲು ಎಷ್ಟು ಕಷ್ಟಪಟ್ಟೆ ತಲ್ಲ ಈ ವ್ಯಕ್ತಿ, ಎನ್ನುವ ರೀತಿಯಲ್ಲಿ ಆ ಮ್ಯಾನೇಜರ ಶಿವನನ್ನು ನೋಡಿದ.

"ಹಾಗಾದರೆ ನಿಮ್ಮ ಸಾಹುಕಾರರು, ಮಾಣಿಯಾಗಿದ್ದವರು ಮಾಲಿಕರಾದರೇ ?"

"ಅಯ್ಯೋ. ಅದರಲ್ಲಿ ಅವರು ಎತ್ತಿದ ಕೈ. ಭೂಲೋಕದಲ್ಲಿಯೂ ಅವರು ಇದೇ ರೀತಿಯಲ್ಲಿ ತಮ್ಮ ಜೀವನ ಆರಂಭಿಸಿದ್ದರು."

"ಅಲ್ಲಯ್ಯ. ಈ ಕಟ್ಟಡ ಒಂದು ದಿನದಲ್ಲಿ ಹೇಗೆ ನಿರ್ಮಾಣವಾಯಿತು ?"

"ಅದನ್ನೇನ ಕೇಳುತ್ತೀರಿ ಸ್ವಾಮಿ. ಭೂಲೋಕದಲ್ಲಿ ನಮ್ಮ ಸಾಹುಕಾರರಿಗೆ ಗೊತ್ತಿರದ ವ್ಯಕ್ತಿಯೇ ಇದ್ದಿರಲಿಲ್ಲ. ಅಲ್ಲಿಯೂ ಅವರು ದಿನಬೆಳಗಾಗುವುದರಲ್ಲಿ ದೊಡ್ಡದೊಡ್ಡ ಕಟ್ಟಡಗಳನ್ನು ನಿರ್ಮಿಸುತ್ತಿದ್ದರು. ಇಲ್ಲಿಯೇ ಅವರ ಯೋಜನೆಗಳು ಕಾರ್ಯಕಾರಿಯಾಗಲು ಕೊಂಚ ತಡವಾಯಿತು."

"ಹಾಗಾದರೆ ಈ ಕಟ್ಟಡವನ್ನು ರಾತ್ರಿ ಕರಗುವುದರಲ್ಲಿಯೇ ಯಾರು ಕಟ್ಟಿಕೊಟ್ಟರು ?

"ಪ್ರಸಿದ್ಧ ಜಕ್ಕಣಾಚಾರಿಗಳಿಲ್ಲವೇ. ಅವರೇ ಕಟ್ಟಿಕೊಟ್ಟವರು. ಬೆಳಕು ಹರಿಯುವುದರೊಳಗೇ ಕಟ್ಟಡ ಕಟ್ಟುವ ಕಲೆಯನ್ನು ಸಾಧಿಸಿದ ಅವರಿಂದಲೇ ನಮ್ಮ ಸಾಹುಕಾರರು ಈ ಭವನವನ್ನು ಕಟ್ಟಿಸಿದರು. ದೇವಲೋಕದ ಶಿಲ್ಪಿ ವಿಶ್ವಕರ್ಮರೇ ಈ ಭವನದ ಪ್ಲ್ಯಾನ್ ಹಾಕಿಕೊಟ್ಟರು."

"ಹೌದಯ್ಯ. ಆದರೆ ಅಷ್ಟು ಹಣ ಅವರಿಗೆಲ್ಲಿ ಸಿಕ್ಕಿತು ?" ಎಂದು ಶಿವ ಕೇಳಿದ.

"ಅಯ್ಯೋ ಅದು ದೊಡ್ಡ ಕತೆ. ನಮ್ಮ ಸಾಹುಕಾರರಿಗೆ ಹಣ ಒದಗಿಸಿದ ಕುಳ ಯಾರು ಗೊತ್ತೇ ? ಕುಬೇರರಾಯರು."

ಶಿವನ ಕುತೂಹಲ ಮತ್ತಿಷ್ಟು ಕೆರಳಿತು. "ಅಂತೂ ಎಲ್ಲಾ ದೊಡ್ಡ ಪ್ರಮಾಣದ ಮೇಲೆಯೇ ನಡೆದಿದೆ." ಎಂದು ಶಿವ ಹೇಳಿದ.

"ಹೌದು ಸ್ವಾಮಿ. ನಮ್ಮ ಹೊಟೆಲಿನ ಅಡಿಗೆಮನೆಯ ಜವಾಬ್ದಾರಿಯನ್ನು ನಳರಾಜರು ವಹಿಸಿದಾರೆ. ಅಂದಮೇಲೆ ಕೇಳಬೇಕೇ ?"

ತನ್ನ ಲೋಕದಲ್ಲಿ ತನಗೆ ಗೊತ್ತಾಗದಂತೆ ಇಷ್ಟೆಲ್ಲ ನಡೆಯಬಹುದೆಂದು ಶಿವ ಎಣಿಸಿರಲಿಲ್ಲ. ಅರ್ಧ ಕೋಪದಿಂದ ಶಿವ ಕೇಳಿಯೇ ಬಿಟ್ಟ— "ಈ ಲೋಕದಲ್ಲಿ ಈ ಭವನವನ್ನು ಆರಂಭಿಸಲು ಅನುಮತಿಯನ್ನು ಯಾರು ಕೊಟ್ಟರು."

ಮ್ಯಾನೇಜರ್ ಹೇಳಿದ— "ದೊಡ್ಡ ಸಾಹೇಬರು ಕೊಂಚ ವಿಚಿತ್ರ ವ್ಯಕ್ತಿಯಾಗಿದ್ದಾರಂತೆ. ಆದ್ದರಿಂದ ಸಣ್ಣ ಸಾಹೇಬರಿಂದ ಟೆಂಪೊರರಿ ಲೈಸೆನ್ಸ್‌ನ್ನು ನಮ್ಮ ಸಾಹುಕಾರರು ಪಡೆದಿದ್ದಾರೆ."

ಈ ಮಾತನ್ನು ಕೇಳಿದೊಡನೆಯೇ ಶಿವನಿಗೆ ಮತ್ತೆ ಕೋಪ ಬಂತು "ಯಾರಯ್ಯಾ ಆ ಸಣ್ಣ ಸಾಹೇಬರು. ಅನುಮತಿ ಕೊಡುವ ಅಧಿಕಾರ ಅವರಿಗೆಲ್ಲಿದೆಯಂತೆ ?"

"ಓ ಸಣ್ಣ ಸಾಹೇಬರೆಂದರೆ ಇಂದ್ರದೇವರು. ಯಾವುದೋ ಒಂದು ಕಾಯದೆಯನ್ವಯ ಹಾಗೆ ಮಾಡಲು ಬರುತ್ತದೆಂದು ಇಂದ್ರದೇವರಿಗೆ ನಮ್ಮ ಸಾಹುಕಾರರೇ ಸೂಚಿಸಿದರಂತೆ. ಇಂದ್ರದೇವರು ಅರ್ಧ ಹೆದರುತ್ತಲೇ ಲೈಸೆನ್ಸ್ ಕೊಟ್ಟಿದ್ದಾರಂತೆ".

ಶಿವನಿಗೆ ಮತ್ತೊಂದು ಪ್ರಶ್ನೆ ಕೇಳಬೇಕೆಂದೆನಿಸಿತು. ಶಿವ ಕೇಳಿದ "ಅಲ್ಲಯ್ಯ. ಹೊರಗೆ ಇದ್ದ ಬೋರ್ಡಿನಮೇಲೆ ಶ್ರೀಲಕ್ಷ್ಮೀ ಪಾರ್ವತೀ ಪ್ರಸನ್ನ ಎಂದು ಬರೆದಿದ್ದೀರಲ್ಲ. ಪಾಪ ಸರಸ್ವತಿಗೇಕೆ ಅನ್ಯಾಯ ಮಾಡಿದ್ದೀರಿ."

"ಅಯ್ಯೋ ಸ್ವಾಮಿ. ಲಕ್ಷ್ಮೀ ಸರಸ್ವತೀಯರ ಜಗಳ ನಿಮಗೆ ಗೊತ್ತಿಲ್ಲವೇ? ಸರಸ್ವತೀ ಇದ್ದರೆ ಲಕ್ಷ್ಮೀ ಇಲ್ಲ. ಲಕ್ಷ್ಮೀ ಇದ್ದರೆ ಸರಸ್ವತೀ ಇಲ್ಲ. ಸರಸ್ವತೀ ಪ್ರಸನ್ನ ಎಂದರೆ ಉದ್ರಿ. ಆದುದರಿಂದ ಸರಸ್ವತಿಯ ಹೆಸರನ್ನು ಹಾಕಿಲ್ಲ."

ಮ್ಯಾನೇಜರ್ ಇಷ್ಟು ಹೇಳುತ್ತಿರುವಾಗಲೇ ಒಬ್ಬ ವ್ಯಕ್ತಿ ಬಂದು ಶಿವನಿಗೆ ನಮಸ್ಕಾರ ಮಾಡಿದ. "ನಮಸ್ಕಾರ. ನಾನೇ ದೇಲಂಪಾಡಿ ಶೀನಪ್ಪಭಟ್ಟ. ಇಂದೇ ಈ ಹೊಟೆಲನ್ನು ಆರಂಭಮಾಡಿದ್ದೇನೆ. ಮುಂಜಾನೆ ನಿಮ್ಮ ಸೌಧಕ್ಕೆ ಬಂದಿದ್ದೆ. ಆದರೆ ನೀವು ಇದ್ದಿರಲಿಲ್ಲ. ಆದುದರಿಂದ ಪಾರ್ವತಮ್ಮನವರಿಗೆ ಹೇಳಿ ಬಂದಿದ್ದೆ. ಪಾರ್ವತಮ್ಮನವರೂ ಲಕ್ಷ್ಮಮ್ಮನವರೂ ಸರಸ್ವತಮ್ಮನವರೂ ಇಲ್ಲಿಯೇ ಬಂದಿದ್ದಾರೆ. ಲೇಡೀಜ ರೂಮಿನಲ್ಲಿ ಕುಳಿತಿದ್ದಾರೆ. ಬನ್ನಿ. ಬನ್ನಿ. ನೀವು ಹೋಟೆಲನ್ನು ನೋಡಬನ್ನಿ" ಎಂದು ಶೀನಪ್ಪಭಟ್ಟರು ಹೇಳುತ್ತಿದ್ದಾಗಲೇ ಪಾರ್ವತೀ, ಲಕ್ಷ್ಮೀ ಹಾಗೂ ಸರಸ್ವತೀದೇವಿಯವರು ಏನೋ ಗುನುಗುನು ಮಾಡುತ್ತ ಹೊಟೆಲಿನಿಂದ ಹೊರಟದ್ದರು.

ಶಿವನನ್ನು ಕಂಡ ಪಾರ್ವತಿ ಮುಗುಳುನಗೆ ಬೀರಿ ಅವನೆಡೆಗೆ ಬಂದಾಗ ಶಿವನ ಕೋಪವೆಲ್ಲ ಆರಿ ತಣ್ಣಗಾಗಿ ಹೋಗಿತ್ತು. "ಇಲ್ಲಿಗೆ ಬರುತ್ತೇನೆಂದಿದ್ದರೆ ನಾನೂ ಬರುತ್ತಿದೆನಲ್ಲ. ಇಬ್ಬರೂ ಕೂಡಿ ಅಡ್ಡಾಡದೆ ಬಹಳ ದಿನವಾಗಿತ್ತು" ಶಿವ ಪಾರ್ವತಿಯನ್ನು ಒಲಿಸಿಕೊಳ್ಳುವ ದನಿಯಲ್ಲಿ ಮಾತನಾಡಿದ. ಮರಿಷ್ಠ ಪರಿಷತ್ತಿನ ವಿಚಾರ ತಪ್ಪಿ ಕೂಡ ಮನದಲ್ಲಿ ಸುಳಿಯಲಿಲ್ಲ.

"ಬುಧವಾರದ ಬಿನಾಕಾ ಗೀತಮಾಲೆ ಕೇಳಲು ನಾವಿಲ್ಲಿಗೆ ಬಂದೆವು. ದೇವಲೋಕದ ಗಾನಸುಧೆಗಿಂತ ಅದು ಎಷ್ಟು ಇಂಪಾಗಿದೆಯನ್ನುತ್ತೀರಿ. ಅದನ್ನು ಕೇಳುತ್ತ ಕುಳಿತಾಗ ಯಾವುದರ ಅದೇಕೆ ನಿಮ್ಮ ಪರಿವೆಯೂ ನನಗೆ ಇದ್ದಿರಲಿಲ್ಲವೆಂದು ಪಾರ್ವತೀ ಹೇಳಿದಾಗ ದಂಗುಬಡಿದ ನಿಂತ ಶಿವನಿಂದ ಈ ಬುಧವಾರ ಮಹಾತ್ಮೆಯಿಂದ ನನ್ನ ಗತಿಯೇ ಹೀಗಾದಾಗ ನನ್ನ ಭಕ್ತಕೋಟಿಯ ಗತಿಯೇನೆಂಬ ಉದ್ಗಾರ ಅವನಿಗರಿವಿಲ್ಲದಂತೆಯೇ ಹೊರಬಂತು.



ದೀಪಾವಳಿಯ ಹಾರ್ದಿಕ ಅಭಿನಂದನೆಗಳು

## ಮೈಸೂರು ರಾಜ್ಯದಲ್ಲಿ ಪ್ರಪ್ರಥಮ ತಯಾರಕರು.



ಮೈಸೂರು ರಾಜ್ಯದಲ್ಲಿಯೇ ನಾವು ಪೊಲಿಥೆನ್ ತಯಾರಿಕೆಯಲ್ಲಿ ಪ್ರಪ್ರಥಮ ಹಾಗೂ ಅಪ್ರತಿಮರೆಂದು ಪ್ರಕಟಿಸಲು ಸಂತೋಷವಾಗುತ್ತದೆ. ಹಾಗೂ ಈ ಕೆಳಗಿನ ವಿವಿಧ ಆಕಾರಗಳಲ್ಲಿ ಹಾಗೂ ಗೇಜುಗಳಲ್ಲಿ ನಾವು ತಯಾರಿಸುತ್ತೇವೆ

**ಪೋಲಿಥೆನ್ ಟ್ಯೂಬುಗಳು ಹಾಗೂ ಚೀಲಗಳು**

೫" ಅಗಲದಿಂದ ೩೬" ವರೆಗೆ ಹಾಗೂ ೭೫ ಗೇಜಗಳಿಂದ ೭೦೦ ಗೇ.



**ಪೋಲಿಥೆನ್ ಶೀಟುಗಳು ವಿವಿಧ ವರ್ಣಗಳಲ್ಲಿ**

೧೦" ಅಗಲದಿಂದ ೬೨" ವರೆಗೆ ೭೫ ಗೇಜಗಳಿಂದ ೭೦೦ ಗೇ.

ಪೋಲಿಥೆನ್ ಪಾರದರ್ಶಕ ಹಾಗೂ ನವರಂಗ ವರ್ಣ ಚೀಲಗಳು—ಗ್ರಾಹಕರ ನಿರ್ದೇಶನಗಳ ಪ್ರಕಾರ ಆರ್ಡರಕೊಟ್ಟಂತೆ ಪೂರೈಸಲಾಗುತ್ತದೆ.

**ಪೋಲಿಥೆನ್ ರೇನ ಕೋಟುಗಳು, ಪಿಲೋಜ, ಹಾಗೂ ತಾಡಪತ್ರಿಗಳು— ದಪ್ಪ ಗೇಜಗಳಲ್ಲಿ. ಪೋಲಿಥಿನ್ ಚೀಲಗಳು** ೫" ಅಗಲದಿಂದ ೩೬" ವರೆಗೆ

●

ಇನ್ನಿತರ ವಿವರಗಳಿಗೆ ದಯವಿಟ್ಟು ಸಂಪರ್ಕಬೆಳಿಸಿರಿ :—

# ಮೆಸರ್ಸ ಮೆಟ್ರೊ ಪೋಲಿಥೆನ್ ಮ್ಯಾನುಫ್ಯಾಕ್ಚರರ್ಸ.

೩೫/೫, ಕಾಳಿಕಾದೇವಿ ರೋಡ, ಪೊ. ಬಾ. ನಂ. ೯೩, ದಾವಣಗೆರೆ ಸಿಟಿ

ಮೈಸೂರ ರಾಜ್ಯಕ್ಕೆ ಏಕೈಕ ಹಂಚಿಕೆಗಾರರು :—

# ದಿ ದಾವಣಗೆರೆ ಸಿಂಡಿಕೇಟ ಎಜನ್ಸೀ, ದಾವಣಗೆರೆ

# ಶ್ರೀ ಚಾಮುಂಡೇಶ್ವರಿ ಟೆಕ್ನಿಕಲ್ ಟ್ರೇನಿಂಗ್ ಕಾಲೇಜ್, ಬಳ್ಳಾರಿ




**ದೀಪಾವಳಿಯ ಶುಭಾಶಯಗಳು**

**ಮೈಸೂರು ರಾಜ್ಯದ ಎಲ್ಲಾ ಭಾಗಗಳಿಂದಲೂ ವಿದ್ಯಾರ್ಥಿಗಳನ್ನು ಆಕರ್ಷಿಸಿ ಅವರು ಭವಿಷ್ಯವನ್ನು ನಿರೂಪಿಸಿಕೊಳ್ಳುವುದರಲ್ಲಿ ನೆರವಾಗಲು ನಮಗೆ ಬಹಳ ಸಂತೋಷವಾಗುತ್ತದೆ.**

S. S. L. C., S. S. C., H. S. C., P. U. C. ಮತ್ತು ಇವಕ್ಕೆ ಸಮಾನವಾದ ಪರೀಕ್ಷೆಗಳಲ್ಲಿ ಪಾಸಾದವರೂ ಅಥವಾ ಫೇಲು ಆದವರು Higher grade ಮತ್ತು Lower grade ಓವರ್‌ಸಿಯರ್ ಮತ್ತು ಡ್ರಾಫ್ಟ್ಸ್‌ಮನ್ ಕೋರ್ಸಿನಲ್ಲಿ ಶಿಕ್ಷಣ ಹೊಂದಲು ನಮ್ಮ ಕಾಲೇಜಿನಲ್ಲಿ ಅವಕಾಶವಿದೆ.

ಇದಲ್ಲದೇ ಬಹು ಅಲ್ಪ ಸಮಯದಲ್ಲಿ ಟೆಲಿಗ್ರಾಫಿಕ್ ಕೋರ್ಸಿನಲ್ಲಿ ಶಿಕ್ಷಣ ಹೊಂದಲು ಅವಕಾಶವಿದೆ. ಅತ್ಯುತ್ತಮ ಸಲಕರಣೆಗಳೊಂದಿಗೆ ನುರಿತ ಉಪಾಧ್ಯಾಯರುಗಳಿಂದ ಉತ್ತಮ ಶಿಕ್ಷಣ ಕೊಡಲ್ಪಡುತ್ತೆ.

ಪ್ರೊಸ್ಪೆಕ್ಟಸ್ ಮತ್ತು ಅಪ್ಲಿಕೇಷನ್‌ಗಳಿಗೆ ಇಂದೇ **1=00** M. O. ಮಾಡಿರಿ.

## *Manager :* S. C. M. T. T. College, Bellary-2

Regd. by the Govt. of Mysore

Tel. Address : LEVELLING " Bellary

ಮಿಲಿಯಾಂತರ ಜನರ ಮೆಚ್ಚಿಗೆಯ ಆಯ್ಕೆ

ನಂಬರ್ **ಮೂರರ** ಬೀಡಿಗಳು




ಉತ್ಕೃಷ್ಟವಾದ ತಂಬಾಕಿನಿಂದ ತಯಾರಿಸಲ್ಪಟ್ಟಿದೆ.

ತಯಾರಕರು ;

**ಓರಿಜನಲ್ ಖಾದರ ಬೀಡಿ ಫ್ಯಾಕ್ಟರಿ**

**ತೀರ್ಥಹಳ್ಳಿ** ( ಶಿವಮೊಗ್ಗ ಜಿಲ್ಲಾ )

**ಫೋನ್ : 33**



ನಮ್ಮ ಗ್ರಾಹಕರಿಗೂ, ಹಿತಚಿಂತಕರಿಗೂ
ದೀಪಾವಳಿಯು ಸುಖ ಸಮೃದ್ಧಿಯನ್ನೀಯಲಿ !

**The Original Khadar Beedi Factory. TIRTHAHALLI. (Shimoga Dist).**

ದೀಪಾವಳಿಯ ಶುಭಾಶಯಗಳು

# ಶ್ರೀ ಸಂಗಮೇಶ್ವರ ಆಯಿಲ್ ಅ್ಯಂಡ ಫ್ಲೋರ ಮಿಲ್ಸ, ಹುಬ್ಬಳ್ಳಿ




ಇವರ ಉತ್ಕೃಷ್ಟ ಚಾವಿ ಛಾಪಿನ ಕಡ್ಲಿ ಹಿಟ್ಟನ್ನೇ ಯಾವಾಗಲೂ ಉಪಯೋಗಿಸಿರಿ

ಗ್ರಾಮ: ವಿಜಯ

ಫೋನ: ಆಫೀಸ: ೬೮ ; ಮನೆ: ೧೭

# ದಿ ಬೆಳಗಾವಿ ಹೋಜಿಯರಿ ಫ್ಯಾಕ್ಟರಿ

ಶಹಪೂರ, ಬೆಳಗಾವಿ




ಪ್ರೋ: ಮತ್ತಿಕಳ್ಳಿ ಬ್ರದರ್ಸ

ನಮ್ಮಲ್ಲಿ ಎಲ್ಲತರದ

- ಹೋಜಿಯರೀ,
- ಶ್ವೇಟರುಗಳು,
- ಬನಿಯನುಗಳು,
- ಮಫಲರಗಳು ಹಾಗೂ
- ಸ್ತ್ರೀಯರ ಸ್ವೇಟರುಗಳು, ಸ್ಪೇಷಲ್ ಜೋಳಿ
- ಮಕ್ಕಳ ಕೋಟುಗಳು ದೊರೆಯುತ್ತವೆ.



ನಮ್ಮ ಗ್ರಾಹಕ ವೃಂದಕ್ಕೆಲ್ಲ ದೀಪಾವಳಿಯು ಸುಖಸಂಪದಾಭಿವೃದ್ಧಿಯನ್ನೀಯಲಿ!

# ಶಂಕರ್ ಟಾಕೀಸ್, ಭದ್ರಾವತಿ



ಸಿನಿಮಾಸ್ಕೋಪ್ ಮತ್ತು ಸುಖಾಸನಗಳಿಂದ

- ವಿಶಾಲತೆರೆಗಳಿಂದ ಅಳವಡಿಸಿರುವ
- ಅತ್ಯಾಧುನಿಕ ಚಲನಚಿತ್ರ ಮಂದಿರ

ಭದ್ರಾವತಿಗೆ ಬಂದಾಗ ತಪ್ಪದೇ ಸಂದರ್ಶಿಸಿರಿ



ಆಲ್ ಇಂಡಿಯಾ ಪೇಟೆಂಟ ದೊರೆತಿದೆ
ಅಂದ—ಅಗ್ಗ ಮತ್ತು ದೀರ್ಘ ಬಾಳಿಕೆಯವ

# ಟಿನ್ ಎಂಬಾಸಿಂಗ ಮೋಟರ ನಂಬರ ಪ್ಲೇಟುಗಳು *

ನಿಮ್ಮ ಕಾರುಗಳಿಗೆ ನಮ್ಮ ಮುಖಾಂತರ ಮಾಡಿಸಿಕೊಳ್ಳಿರಿ.

ಇಂಗ್ಲೀಷದಲ್ಲಿ ಬರೆಯಿರಿ:

ಎಸ್. ಎನ್. ಮಠ, (ಪೇಂಟರ)

ಟಿನ್ ಎಂಬಾಸಿಂಗ ಮೋಟರ ನಂಬರ ಪ್ಲೇಟಗಳ ತಯಾರಕರು
೨೦೯ ಭವಾನಿ ಪೋಸ್ಟ ಅಫೀಸ ಹತ್ತರ, ಪುಣೆ ೨.




ದೀಪಾವಳಿಯು ಸುಖಪ್ರದವಾಗಲಿ

# ಪಾಟೀಲ ವೀವ್ಹಿಂಗ ಫ್ಯಾಕ್ಟರಿ

ಇಚಲಕರಂಜಿ (ಜಿ. ಕೊಲ್ಹಾಪುರ)

೪೦ × ೬೦ ಟಾಂಬರ,
ರಾಸ್ತಾ ಮತ್ತು ಟೌಳಗಳು
೯, ೭, ೫ ವಾರಗಳಲ್ಲಿ—
ನಮ್ಮ ಪ್ರಖ್ಯಾತ ಕೈಮಗ್ಗದ ಕಾರಖಾನೆಯಲ್ಲಿ ತಯಾರಾಗಿರುತ್ತವೆ.

ಬಂಣ ಇತ್ಯಾದಿ ಗ್ಯಾರಂಟಿ



ದೀಪಾವಳಿಯು ಈ ದೀಪೋತ್ಸವದ ಆನಂದದ ಪ್ರಸಂಗದಲ್ಲಿ ನಮ್ಮ ನಾಡಿನ ಮನೆಮನೆಗಳಲ್ಲಿ
ದೀಪಗಳು ಬೆಳಗಲೆಂದು ಹಾರೈಸುತ್ತೇವೆ.



ಕನ್ನಡನಾಡಿನ ಕೈಗಾರಿಕೆಯ ಕೈದೀವಿಗೆ

# ದರಬಾರ ಬೀಡಿಗಳು

ಎಂದಿನಿಂದಲೂ ನಿಮ್ಮ ಮೆಚ್ಚಿಗೆಯನ್ನು
ಪಡೆಯುತ್ತ ಬಂದಿವೆ.




ತಯಾರಕರು : **ಎಂ. ಎಲ್. ಖಡೇದ**

**ದರಬಾರ ಬೀಡಿ ಫ್ಯಾಕ್ಟರಿ. ನಿಪ್ಪಾಣಿ ( ಜಿ. ಬೆಳಗಾವಿ )**

ಶಾಖೆಗಳು : ಅಂಕಲಗಿ, ಹುದ್ಲಿ, ಧಾರವಾಡ, ಹುಬ್ಬಳ್ಳಿ, ದಾವಣಗೆರೆ, ಬಳ್ಳಾರಿ, ರಾಮದುರ್ಗ, ಶಿರಾ, ಸಾವಂತವಾಡಿ, ಮಾಲವಣ

---

— — ದೀಪಾವಳಿಯ — ಶುಭಾಶಯಗಳು — —

**ಮಹಾರಾಷ್ಟ್ರ ಮತ್ತು ಗುಜರಾತ**
ಸರಕಾರಗಳಿಂದ ತಗಾಯಿ ಮೇಲೆ ಮಂಜೂರಾದ




# ರೂಪಾ

ಆಯಿಲ್ ಎಂಜನಿಗಳು

೫½, ೬½ ಎಚ್.ಪಿ. ೫೫೦ ಆರ್.ಪಿ.ಎಂ.
೭-೯ ಎಚ್. ಪಿ. ೫೦೦ ಆರ್.ಪಿ.ಎಂ.
ಹಾರಿಝಾಂಟಲ್, ಕೋಲ್ಡ ಸ್ಟಾರ್ಟ



ಮಜಬೂತ ತಯಾರಕರು :
**ರೂಪಾ ಎಂಜನಿಯರಿಂಗ ಕಾರ್ಪೋರೇಶನ್**
೧೪, ಶಿವಾಜಿ ಉದ್ಯಮನಗರ ] [ ಕೊಲ್ಹಾಪುರ

ಏಕೈಕ ಹಂಚಿಕೆಗಾರರು :
**— ಭಾರತ ಇಂಡಸ್ಟ್ರೀಜ —**
೫೦೦, ಸ್ಟೇಶನ್‌ರೋಡ ಶಾಹುಪುರಿ, ಕೊಲ್ಹಾಪುರ

---



ನ್ಯಾಯವಾದ ಬೆಲೆಗೆ
— ಇಂದೇ —
ಸೈಕಲ್ ಕೊಳ್ಳಿರಿ !

**ರ್‍ಯಾಲಿ, ಫಾರ್‌ವರ್ಡ್, ರಾಬಿನ್‌ವುಡ, ಹರ್‍ಕ್ಯುಲಸ್**

ಇದು ವರೆಗೆ ತಯಾರಿಸಿರುವ ಸೈಕಲ್ಲುಗಳಲ್ಲಿ ಶ್ರೇಷ್ಠವಾದ

**ಸೈಕಲ್ಲುಗಳನ್ನೇ ಕೊಳ್ಳಿರಿ !**

ಖಾತ್ರಿಯಾದ ಸೈಕಲ್ ಮತ್ತು ಸೈಕಲ್ ಸಾಮಾನುಗಳಿಗೆ
ಚಿಲ್ಲರೆ ಮತ್ತು ಥೋಕ ಮೇಲೆ ಬೇಕಾದರೆ
ವಿಚಾರಿಸಿರಿ.

## ಸ್ವಾಮಿ ಸ್ಟೋರ್ಸ್

ಪ್ರೊ. ಎ. ಎಚ. ಸಿದ್ಧಲಿಂಗಸ್ವಾಮಿ
ಸೈಕಲ್, ಸೈಕಲ್ ಸಾಮಾನುಗಳ ವ್ಯಾಪಾರಿಗಳು
ಚಾಮರಾಜ ಪೇಟೆ [ ಸರಕಾರಿ ಆಸ್ಪತ್ರೆ ಹತ್ತರ ] ದಾವಣಗೆರೆ



ದೀಪಾವಳಿಯು ನಮ್ಮೆಲ್ಲ ಗ್ರಾಹಕವೃಂದಕ್ಕೆ
ಸುಖಪ್ರದವಾಗಲಿ !

## ಹೋಮಿಯೋಪಥಿಕ ಔಷಧಿಗಳು

ಡಾ. ವಿಲಿಮಾರ ಶಾಬ, ಜರ್ಮನಿ ಇವರ

ಬಾಯೋಕೆಮಿಕ್ ಮತ್ತು ಹೋಮಿಯೋಪಥಿಕ್ ಔಷಧಿಗಳು ಮತ್ತು ಇಂಜಕ್ಷನ್ನುಗಳು ಮತ್ತು ಬೋರಿಕ್ ಆ್ಯಂಡ್ ಟಫೆಲ್ ಮತ್ತು ಲ್ಯೂಟಿನ್ ಈ ಕಂಪನಿಗಳ ದಿವ್ಯೌಷಧಿಗಳ ಭರಪೂರ ಸಂಗ್ರಹ.

ಮುನಿಸಿಪಾಲಿಟಿ, ತಾಲೂಕಾ ಬೋರ್ಡ ಮತ್ತು ಜಿಲ್ಹಾ ಲೋಕಲ್ ಬೋರ್ಡಗಳ ದವಾಖಾನೆಗಳಿಗೆ ಔಷಧಿಗಳ ಪೂರೈಕೆಗಾರರು :

ವೈದ್ಯರ ಕೈಪಿಡಿಗಾಗಿ ೦.೫೦ ನ. ಪೈ. ಕಳಿಸಿರಿ

# ನ್ಯೂ ಈರಾ ಹೊಮಿಯೋಪಥಿ ಫಾರ್ಮಸಿ

ಮುಖ್ಯ ಕಚೇರಿ : ದಾದರ ಮುಂಬೈ

ಶಾಖೆ : ಮರಾಠಾಗಲ್ಲಿ ಹುಬ್ಬಳ್ಳಿ

---


ದೀಪಾವಳಿಯ ಶುಭಾಶಯಗಳು


# ಕಾಮತ ಹೋಟೆಲ್

ರಿಫ್ರೆಶ್‌ಮೆಂಟ ಬೋರ್ಡಿಂಗ ಆ್ಯಂಡ ಲಾಜಿಂಗ

## ಬ್ರಾಡವೇ—ಹುಬ್ಬಳ್ಳಿ

ಅತ್ಯಾಧುನಿಕ ಪದ್ಧತಿಯ ● ಅಚ್ಚುಕಟ್ಟಾದ ವ್ಯವಸ್ಥೆಯು—ರುಚಿ—ಶುಚಿಗೆ ಖ್ಯಾತಿವೆತ್ತ

ಊರಿಗೆ ಕೇಂದ್ರ ಸ್ಥಳದಲ್ಲಿದ್ದ ಏಕಮೇವ ಹಾಟೇಲಿಗೆ ಸಂದರ್ಶಿಸಿರಿ.

ಆರ್. ಪಿ. ಕಾಮತ
ಮಾಲಕರು

---

# ಭಾರತ ಆಯಿಲ ಇಂಜಿನುಗಳು



೫-೬, ೯-೧೦ ಎಚ್.ಪಿ. ಹಾರಿಝಂಟಲ್ ಸ್ಲೋ ಸ್ಪೀಡ, ಬಲಿಷ್ಠ ರಚನೆ ಅಲ್ಪಾವಧಿಯಲ್ಲಿಯೇ ಲೋಕಪ್ರಿಯವಾಗಿವೆ, ಇದಲ್ಲದೇ

- ● ಭಾರತ ಥಾಯರ ಥಾಯಟರ್ಸ,
- ● ಡಾಂಪಿಂಗ ಟ್ರೇಲರ್ಸ

ನೀರಾವರಿ ಬಗ್ಗೆ ಬೇಕಾಗುವ ಕಬ್ಬಿಣ ಮತ್ತು ಬೀಡದ ಸ್ಲೂಜ-ಗೇಟ್ಸ, ಸಾಕೆಟ್ ಗೇಟ್ಸ ಡಬಲ್ ಟಾಯರ ಗೇಟ್ಸ, ರೋಲಿಂಗ ಶಟರ್ಸ, ಗೇಟ್ಸ, ಗ್ರಿಲ್ಸ್,

ಕೈಚಿ ಮುಂತಾದ ಎಲ್ಲ ಪ್ರಕಾರದ ಕಬ್ಬಿಣ ಸಾಮಾನುಗಳ ತಯಾರಕರು: ಕೊಲ್ಹಾಪೂರದಲ್ಲಿಯ ಪ್ರಥಮ ಕಾರಖಾನೆ

## ಪಾಟೋಲೆ ಜಾಧವ ಆ್ಯಂಡ ಕಂಪನಿ

ಹೊಸ ಪೂಲಿನ ಹತ್ತರ,
ಲಕ್ಷ್ಮೀಪುರಿ, ಕೊಲ್ಹಾಪುರ



ನಮ್ಮ ಗ್ರಾಹಕರಿಗೆಲ್ಲ ದೀಪಾವಳಿಯು ಮಂಗಲಕರವಾಗಲಿ

---

ದೀಪಾವಳಿಯು



ಫೋನ ನಂ. ೯

# ಮನೋಹರ ಕೆಫೆ



ನೆಹರೂ ರಸ್ತೆ, ಶಿವಮೊಗ್ಗೆ

ಮಲೆನಾಡಿನ ಕೇಂದ್ರ "ಶಿವಮೊಗ್ಗೆ"ಯಲ್ಲಿ ಅಟ್ಯಾಚ್ಡ ಬಾತ್‌ರೂಂ ಮತ್ತು ಏರ್-ಕಂಡಿಷನ್ ವ್ಯವಸ್ಥೆಯ ಕೋಣೆಗಳನು ಹೊಂದಿರುವ ಏಕೈಕ ವಸತಿಗೃಹ ಮತ್ತು ಫಲಾಹಾರ ಮಂದಿರ.

ಮಾಲೀಕರು: ಪಿ. ಕೆ. ಜನಾರ್ದನ ಶೆಟ್ಟಿ & ಸನ್ಸ

ಶುಭದಾಯಕವಾಗಲಿ

---






ದೀಪಾವಳಿಯು ನಮ್ಮ ಗ್ರಾಹಕವೃಂದಕ್ಕೆಲ್ಲ ಸುಖಪ್ರದವಾಗಲಿ

**ನಮ್ಮ ಬೀಡಿಗಳು**— ಗೊಂದಿಯಾ ಎಲೆಗಳಿಂದಲೂ ಶುದ್ಧ ನಿಪ್ಪಾಣಿ ತಂಬಾಕು ಮೈಸೂರು ಮಂಡ್ಯಾದಿಂದ ತಯಾರು ಮಾಡುತ್ತೇವೆ. . . .

— ಯಾವಾಗಲೂ ಜಯದೇವ ಬೀಡಿಗಳನ್ನೇ ಉಪಯೋಗಿಸಿರಿ. —

# ಜಯದೇವ ಬೀಡಿಗಳು

ಪ್ರೊ : ಮೆಸರ್ಸ ಎಸ್. ಬಿ. ಹನಗೋಡಿಮಠ

ಜಯದೇವ ಬೀಡಿ ಫ್ಯಾಕ್ಟರಿ ಕಾಯಿಪೇಟೆ, ದಾವಣಗೆರೆ ಸಿಟಿ

## ದೀಪಾವಳಿಯ ಶುಭಾಶಯಗಳು




# ಎಚ್. ಎಂ. ದಾಸನಕೊಪ್ಪ ಆ್ಯಂಡ ಸನ್ಸ

ಧಾರವಾಡ




ನನ್ನ ಪತಿದೇವರು ಪೇಟೆಯಲ್ಲಿಯ ಎಲ್ಲ ಪ್ರಕಾರದ ಬೀಡಿಗಳ ರುಚಿ ನೋಡಿದರು. ಆದರೆ ಯಾವ ಮಾರ್ಕಿನ ಬೀಡಿಯಿಂದಲೂ ಅವರಿಗ ತೃಪ್ತಿಯಾಗಲಿಲ್ಲ. ಅವರು

# ಎ. ರಹಿಮಾನ

ಬೀಡಿಗಳನ್ನು ಉಪಯೋಗಿಸಿದಾಕ್ಷಣ ಆ ಎ. ರಹಿಮಾನ ಬೀಡಿಗಳಿಂದ ಮಾತ್ರ ಸಂಪೂರ್ಣ ತೃಪ್ತಿ ಸಮಾಧಾನಗಳನ್ನು ಹೊಂದಿದರು.

 ದೀಪಾವಳಿಯ ಶುಭಾಶಯಗಳು 

— ಬೆಳಗಾವಿಯಲ್ಲಿ ಮಿಶ್ರಣ ಗೊಬ್ಬರ ಕಾರಖಾನೆ —

ನಮ್ಮಲ್ಲಿ ಒಕ್ಕಲಿಗರಿಗೂ ಹಾಗೂ ತೋಟಗಾರರಿಗೂ ಬೇಕಾಗುವ ಎಲ್ಲ ಪ್ರಕಾರದ ಮಿಶ್ರಣ ಗೊಬ್ಬರವು ತಯಾರಾಗುತ್ತದೆ. ನಮ್ಮ ಅಗಬೋಟ ಛಾಪಿನ ಮಿಶ್ರಣ ಗೊಬ್ಬರಗಳನ್ನು ಉಪಯೋಗಿಸಿ ಹೆಚ್ಚಿಗೆ ಉತ್ಪಾದನೆ ಪಡೆಯಿರಿ. ಎಲ್ಲ ಬಗೆಯ ರಾಸಾಯನಿಕ ಗೊಬ್ಬರಗಳು ದೊರೆಯುವ ಏಕಮೇವ ಸ್ಥಳ:

ಸ್ಟಾಕಿಸ್ಟರನ್ನು ನಿಯಮಿಸುವದಿದೆ ವಿಚಾರಿಸಿರಿ :

**ಮೆ। ಭೂಪಾಲ ಜಯವಂತ ದೇಸಾಯಿ ಆ್ಯಂಡ ಸನ್ಸ**

ಫೋನ : ೧೫೧
ತಂತಿ : Manure

೯೯೪, ರವಿವಾರಪೇಟೆ, ಬೆಳಗಾವಿ.

ಶಾಖೆ :-

**ಮೆ। ಮಹಾವೀರ ಭೂಪಾಲ ದೇಸಾಯಿ ಆ್ಯಂಡ ಬ್ರದರ್ಸ**

ಫೋನ : ೩೫೭ ಶಾಹಪುರಿ, ಕೊಲ್ಹಾಪುರ.

# ಸಾಂಡೂ

ಒರಿಜಿನಲ

# ಬ್ರಾಹ್ಮೀ ತೈಲ

ಬೌಗರಣೀವ ಮಾನಸಿಕ ಶ್ರಮ ಮಾಡುವವರಿಗೆ ಅತ್ಯಂತ ಉಪಯೋಗಿ.






ದತ್ತಾತ್ರೇಯ ಕೃಷ್ಣ ಸಾಂಡೂ ಬ್ರದರ್ಸ
ಚೇಂಬೂರ ಪ್ರಾಯವ್ಹೇಟ ಲಿ.
ಚೇಂಬೂರ · ಮುಂಬಯಿ ೭೧.

# Metro Tyres

*Full Circle Retreaders*

# ಮೆಟ್ರೋ ಟೈಯರ್ಸ್

ಫುಲ್ ಸರ್ಕಲ್ ರಿಟ್ರೇಡರ್ಸ, ನೆಹರು ರೋಡ್, ಶಿವಮೊಗ್ಗೆ

**ಮೆಟ್ರೋ ಮೋಟಾರ್ ಟ್ರಾನ್ಸ್‌ಪೋರ್ಟ**

ಶಿವಮೊಗ್ಗ—ಮಾಸೂರು ಆಯನೂರು via
ಕುಂಸಿ—ಜೋರಡಿ—ಶಿಕಾರಿಪುರ

# ಶ್ರೀ ರಾಮತೀರ್ಥ ಯೋಗಾಶ್ರಮ (ಮುಂಬಯಿ ೧೪) ಪ್ರವೃತ್ತಿ



## ರಾಮತೀರ್ಥ ಬ್ರಾಹ್ಮಿತೈಲ

( ಸ್ಪೆಶಲ್ ನಂ. ೧ ) • ( ರಿಜಿಸ್ಟರ್ಡ್ )

**ರಾಮತೀರ್ಥ ಬ್ರಾಹ್ಮೀತೈಲ**ವನ್ನು ಅನೇಕ ವನಸ್ಪತಿ ಔಷಧಿಗಳಿಂದ ಶಾಸ್ತ್ರೀಯ ಪದ್ಧತಿಯಿಂದ ತಯಾರು ಮಾಡಲಾಗಿದೆ. ಕೂದಲು ಉದುರುವದು, ಸಣ್ಣ ಪ್ರಾಯದಲ್ಲಿ ಕೂದಲು ಬಿಳಿಯಾಗುವದು, ನಿದ್ದೆ ಸರಿಬರದಿರುವದು, ತಲೆ ಬಿಸಿ ಇರುವದು, ಕಣ್ಣಿನ ದೃಷ್ಟಿ ಕಡಿಮೆ ಇರುವದು ಮತ್ತು ಕೆಂಪು ಇರುವದು ಇದಕ್ಕೆಲ್ಲಾ ಗುಣ ಕೊಡಲಿಕ್ಕೆ ಅನುಕೂಲವಿದೆ. ಪ್ರತಿಯೊಬ್ಬ ಸ್ತ್ರೀ, ಪುರುಷರಿಗೆ ಪ್ರತಿಋತುವಿನಲ್ಲಿ ಅನುಕೂಲವಿದೆ. ಶರೀರಕ್ಕೆ ಪ್ರತಿ ದಿನ **ರಾಮತೀರ್ಥ ಬ್ರಾಹ್ಮಿತೈಲ**ದಿಂದ ತೈಲಾಭ್ಯಂದ ( ಮಾಲೀಶ್ ) ಮಾಡಿದರೆ ಸ್ಫೂರ್ತಿ, ರಕ್ತ ಶುದ್ಧ ಮತ್ತು ಚರ್ಮ ಮಿದುವಾಗಿ ತೇಜಸ್ವಿಯಾಗಿ ಇರಲಿಕ್ಕೆ ಅನುಕೂಲವಾಗುತ್ತದೆ. ಎಲ್ಲೆಡೆಯಲ್ಲಿಯೂ ದೊರೆಯುತ್ತಿವೆ.




## ಉಮೇಶಯೋಗ ದರ್ಶನ ( ಪ್ರಥಮ ಖಂಡ )

ಲೇಖಕರು: **ಯೋಗಿರಾಜ ಶ್ರೀ ಉಮೇಶಚಂದ್ರರು.** ಹಿಂದಿ, ಗುಜರಾತಿ, ಮರಾಠಿ ಮತ್ತು ಇಂಗ್ಲೀಷ ಭಾಷೆಯಲ್ಲಿದೆ. ಶರೀರದಲ್ಲಿದ್ದ ರೋಗ ಗುಣಮಾಡಲಿಕ್ಕೆ ಯೋಗಾಭ್ಯಾಸ, ಆಹಾರ, ನೀರಿನ ಚಿಕಿತ್ಸೆ, ಮಣ್ಣಿನ ಉಪಚಾರ, ಸೂರ್ಯಕಿರಣದ ಟ್ರೇಟ್‌ಮೆಂಟ್, ಮಾನಸಿಕ ಉಪಚಾರ ಮೊದಲಾದ ಮಹತ್ವದ ಅನೇಕ ಉಪಚಾರಗಳು ಇವೆ. **ನೀಲಿ, ದೋರಿ, ನವಲಿ** ಆಸನ ಮೊದಲಾದ ೧೦೪ ಕ್ಕಿಂತ ಹೆಚ್ಚಿಗೆ ಗ್ಲೇಜ ಆರ್ಟ ಪೇಪರಿನಲ್ಲಿ ಆಕರ್ಷಕವಾದ ಚಿತ್ರಗಳಿವೆ. ೪೦೦ ಪುಟ ಸಂಖ್ಯೆಗಳಿವೆ. ರೋಗ ಗುಣಾದವರ ಅಭಿಪ್ರಾಯಗಳಿವೆ.




## ಯೋಗಾಸನ ಚಾರ್ಟ್

ಶರೀರಾರೋಗ್ಯ, ದೇವರ ಧ್ಯಾನ ಮಾಡಲಿಕ್ಕೆ ಅನುಕೂಲವಾದ ಅನೇಕ ಆಸನಗಳಿವೆ. ರಂಗೀನ್ ಚಿತ್ರಪಟವಿದೆ. ನಿಮ್ಮ ಮನೆಯಲ್ಲಿ ಆಸನ ಮಾಡುವ ಹಾಗೆ ಉತ್ತಮವಾದ ಆಕರ್ಷಕ ಯೋಗಾಸನ ಚಿತ್ರಪಟವಿದೆ.

## "ರಾಮತೀರ್ಥ" ಹಿಂದಿ ಮಾಸಿಕ

ಸಂಪಾದಕರು : ಯೋಗಿರಾಜ ಶ್ರೀ ಉಮೇಶಚಂದ್ರರು

೨೫ ವರ್ಷದಿಂದಲೂ **ಶ್ರೀ ರಾಮತೀರ್ಥ ಯೋಗಾಶ್ರಮ**ದ ಚಟುವಟಿಕೆ, ಜನತಾ ಜನಾರ್ದನರ ಸೇವೆಗಳಿಂದ ಭಾರತ ಮತ್ತು ವಿದೇಶದ ಜನರಿಗೆ ಗೊತ್ತು ಇದೆ. ಎಷ್ಟೋವರ್ಷಗಳಿಂದ ಆಶ್ರಮದಿಂದ ಸಾಹಿತ್ಯದ ವಿಷಯದಲ್ಲಿ ಪ್ರಕಟಣೆ ಮಾಡಬೇಕೆಂದು ಸಾವಿರಾರು ಕಡೆಯಿಂದ **ಕೇಳಿಕೆ** ಆದನಂತರ **ರಾಮತೀರ್ಥ** ಮಾಸಿಕೆಯನ್ನು ಪ್ರಕಟಣೆಗೆ ಆರಂಭ ಮಾಡಲಿಕ್ಕೆ ಕಾರಣವಾಯಿತು. ಯೋಗ, ವೇದಾಂತ, ಗೀತೆ, ನಿಸರ್ಗ ಉಪಚಾರ ( ಮದ್ದಿಲ್ಲದ ಉಪಚಾರ )ಗಳಿಂದ ಯೋಗಾಭ್ಯಾಸದಿಂದ ಸ್ತ್ರೀ ಪುರುಷರ ರೋಗ ನಿವಾರಣೆ, ಆಶ್ರಮದಲ್ಲಿ ರೋಗಗುಣವಾದ ನಂತರ ಅಭಿಪ್ರಾಯ, ಆಹಾರ, ಆರೋಗ್ಯ, ಧಾರಾವಾಹೀ, ಉಪನ್ಯಾಸ, ಕಥಾಸಾಗರ, ಕವಿತೆ ಮುಂತಾದ ಅನೇಕ ಉತ್ಕೃಷ್ಟ ವಿಷಯಗಳಿಂದ ಸುಶೋಭಿತವಾದ **ರಾಮತೀರ್ಥ ಮಾಸಿಕ.** ಪುಟಗಳು ೧೩೦ಕ್ಕೆ ಮಿಗಿಲು. ಬಿಡಿಸಂಚಿಕೆ ೦.೨೫ ನ.ಪೈ. ವಾರ್ಷಿಕ ವರ್ಗಣಿ ರೂ. ೪.೦೦ ಇಂದೇ ಚಂದಾದಾರರಾಗಿರಿ.

## ಶ್ರೀ ರಾಮತೀರ್ಥ ಯೋಗಾಶ್ರಮ

ದಾದರ, **ಮುಂಬಯಿ-೧೪**

( Tele No. : 62899 ) ( Telegram : Pranayam )

**ದೀಪಾವಳಿಯು ನಮ ಗ್ರಾಹಕರಿಗೆಲ್ಲ ಸುಖಪ್ರದವಾಗಲಿ !**

